 ದೀಪಾವಳಿಯ ಹಾರ್ದಿಕ ಶುಭಾಶಯಗಳು 

# Gopika

## KASTURI DURBAR BATHI




# ಗೋಪಿಕಾ

## ಕಸ್ತೂರಿ ದರ್ಬಾರ್ ಬತ್ತಿ

**GOPIKA PERFUMERY WORKS, MYSORE-4.**
**PHONE: 23792 GRAMS: DINGDONG**

# ದಿ ಕರ್ನಾಟಕ ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕ ಲಿ.,

## ಧಾರವಾಡ.

TELEGRMS : "CLOCKBANK". DHARWAR.

ಫೋನ್ಸ : P. B. X. Lines : 80186, 80187, 80188, 80189, 80180.

ಮನೆಯ ಫೋನ್ ನಂಬರುಗಳು: ಅಧ್ಯಕ್ಷರು: 5964 ಹುಬ್ಬಳ್ಳಿ. ಆಡಳಿತಾಧಿಕಾರಿಗಳು: 8652: ಧಾರವಾಡ. ಮ್ಯಾನೇಜರ: 8682 ಧಾರವಾಡ

( *23–11–1916* ) ರಂದು ದಿವಂಗತ ದಿವಾನ್ ಬಹಾದ್ದೂರ್ ಎಸ್. ವಿ. ಮೆಣಸಿನಕಾಯಿಯವರಿಂದ ಸ್ಥಾಪಿಸಿದ, ಕರ್ನಾಟಕದಾದ್ಯಂತ ಹೆಸರುವಾಸಿಯಾದ ಪ್ರಥಮ ದರ್ಜೆಯ ಸುವರ್ಣ ಮಹೋತ್ಸವವನ್ನು ಆಚರಿಸಿದ ಜಿಲ್ಲಾ ಮಧ್ಯವರ್ತಿ ಸಹಕಾರಿ ಬ್ಯಾಂಕ

**10 ಶಾಖೆಗಳು ಹಾಗೂ 4 ಪೇ ಆಫೀಸುಗಳು**

| | | | |
|---|---|---|---|
| ಅಧಿಕೃತ ಶೇರು ಭಂಡವಾಳ | ರೂ. 160.00 ಲಕ್ಷ | ಠೇವಣಿಗಳು | ರೂ. 952.54 ಲಕ್ಷ |
| ಸಂದಾಯವಾದ ಶೇರು | ರೂ 107.05 ,, | ಸಂಘಗಳಿಗೆ ಕೊಟ್ಟ ಸಾಲ | ರೂ. 1154.18 ,, |
| ಕಾಯ್ದಿಟ್ಟ ಮತ್ತಿತರ ನಿಧಿಗಳು | ರೂ 75.61 ,, | ದುಡಿಯುವ ಭಂಡವಾಳ | ರೂ 1517.60 ,, |

ಈ ಬ್ಯಾಂಕಿನ ಯಾವತ್ತೂ ಆಫೀಸುಗಳಲ್ಲಿ ಚಾಲತಿ. ಸೇವಿಂಗ್ಸ-ಬ್ಯಾಂಕ ಥ್ರಿಫ್ಟ ಸ್ಪೇಶಲ್ ಕಂಮ್ಯುಲೇಟಿವ್, ಒಂದು ತಿಂಗಳಿಂದ ಹತ್ತು ವರ್ಷಗಳ ಮುಂದ್ದತಿ ಠೇವಣಿಗಳು ಮೂರು ವರ್ಷದ ಅವಧಿಯ ಗೋಲ್ಡನ್ ಜುಬಲಿ ಸರ್ಟಿಫಿಕೇಟುಗಳು ಸ್ವೀಕರಿಸಲ್ಪಡುವವು ಇದಲ್ಲದೆ ಆಕರ್ಷಣೀಯ $10\frac{1}{2}$ ರೂಪಾಯಿ ಬಡ್ಡಿದರದ ವಿಶೇಷ 5 ವರ್ಷದ ಮುಂದ್ದತಿ ಠೇವುಗಳಿಗಾಗಿ ಪ್ರತಿ ತಿಂಗಳು ಬಡಿ ಸಂಪಾದಿಸುವ "ಕಲ್ಯಾಣ ನಿಧಿ" ಠೇವುಗಳಿಗಾಗಿ. ಅತ್ಯಂತ ಹೆಚ್ಚಿಗೆ ಬಡ್ಡಿ ಗಳಿಸುವ ಹತ್ತು ವರ್ಷ ಅವಧಿಯ "ಶ್ರೀ ಲಕ್ಷ್ಮೀ" ಠೇವುಗಳಿಗಾಗಿ ವಿಚಾರಿಸಿರಿ ಹಾಗೂ ಪಿಗ್ಮಿ ಠೇವುಗಳನ್ನು ಶೇಖರಿಸಲಾಗುತ್ತದೆ ಮತ್ತು ಬೆಳ್ಳಿ ಬಂಗಾರ ದಾಗೀನುಗಳ ತಾರಣದ ಮೇಲೆ ಸಾಲ ಕೊಡಲಾಗುವದು.

ಧಾರವಾಡ ಹೆಡ್ ಆಫೀಸ, ಮಾಳಮಡ್ಡಿ ಪೇ ಆಫೀಸ ಮತ್ತು ಹುಬ್ಬಳ್ಳಿ ಬ್ರ್ಯಾಂಚ ಆಫೀಸುಗಳಲ್ಲಿ ಭದ್ರವಾಗಿಡಲು ಲಾಕರುಗಳು ಸಿಗುತ್ತವೆ. ಹೆಚ್ಚಿನ ಮಾಹಿತಿಗಾಗಿ ಆಫೀಸಿನಲ್ಲಿ ವಿಚಾರಿಸಬಹುದು.

ಎಫ್. ವಿ. ಹಿರೇಮಠ
ಉಪಾಧ್ಯಕ್ಷ

ಪಿ. ಎಲ್. ಪಾಟೀಲ
ಅಧ್ಯಕ್ಷ

---

*ESTD 1945*

# Kshatri art Studio

**Koppikar Road, HUBLI.**

**Phone : 2585**

*Artist, Photographers, Dealers and Prem Photographers.*

**Prop :**

**KRISHNA KSHATRI & SONS**

**For Lovely Photography**

# ONKAR studio

**Durgad Bail, HUBLI**

**Phone : 4460**



**wish you happy deepavali**



# ಬೆಲ್ಲದ ತಯಾರಿಕರಿಗೆ ಸಂತೋಷದ ಸುದ್ದಿ

ಉತ್ಕೃಷ್ಟ ಬೆಲ್ಲದ ತಯಾರಿಕೆಗೆ ಅವಶ್ಯವಾಗಿ ಬೇಕಾಗುವ

# ಬೆಲ್ಲದ ಪೌಡರ್

( ಸೋಡಿಯಂ ಹೈಡ್ರೋ ಸಲ್ಫೈಟ್ )

ವೈಜ್ಞಾನಿಕವಾಗಿ ತಯಾರಿಸುವುದರಲ್ಲಿ ವಿಶ್ವವಿಖ್ಯಾತಿ ಗಳಿಸಿರುವ

## ಜೆ. ಕೆ. ಕೆಮಿಕಲ್ಸ್ ಲಿಮಿಟೆಡ್ ಇವರು

ಮಂಡ್ಯ ನಗರದಲ್ಲಿ ತಮ್ಮ "ವಿಕ್ರಯ ಭಂಡಾರ್" [ಸೇಲ್ಸ್ ಡಿಪೊ] ಇದೀಗ ಪ್ರಾರಂಭಿಸಿದ್ದಾರೆ.

- ಕಂಪನಿಯಿಂದ ನೇರವಾಗಿ ಗ್ರಾಹಕರಿಗೆ ನಿಖರ ಬೆಲೆಯಲ್ಲಿ
- ಯಾವ ಕಲಬೆರಕೆಯೂ ಆಗದಂತೆ ಸೀಲ್ಡ್ ಟಿನ್‌ಗಳಲ್ಲಿ (ಅಪ್ಪಟ ಪೌಡರ್)
- ಉಪಯೋಗದ ಬಗ್ಗೆ ಕಂಪನಿಯ ತಜ್ಞರಿಂದ ಸಲಹೆ

ಈ ಮೂರು ಕಾರಣಗಳಿಂದ ಬೆಲ್ಲ ತಯಾರಕರು ತನಗೆ ಬೇಕಾದ "ಬೆಲ್ಲದ ಪೌಡರ್" ಅನ್ನು ನಮ್ಮಲ್ಲೇ ಪಡಯಿ಼ರಿ.




ಡೀಪೊ ವಿಳಾಸ :

## ಜೆ. ಕೆ. ಕೆಮಿಕಲ್ಸ್ ಲಿಮಿಟೆಡ್

ಕೇರಾಫ್ : ಶ್ರೀ ಜಯಲಕ್ಷ್ಮಿ, ಪ್ರಾವಿಷನ್ ಸ್ಟೋರ್ಸ್

ಗಾಯತ್ರಿ ಭ಼ನದ ಎದುರು, ಬಸ್‌ಸ್ಟ್ಯಾಂಡ್ ರಸ್ತೆ, ಮಂಡ್ಯ.



ದೀಪಾವಳಿಯು ಸರ್ವರಿಗೂ ಸುಖದಾಯಕವಾಗಲಿ!





# ದೈವಭಕ್ತಿ, ಮನೋಲ್ಲಾಸ ಇವೆರಡರ ಸುಗಂಧಿತ ಸಮ್ಮಿಳನ

# ಸಪ್ತಗಿರಿ

ಅಗರ್‌ಬತ್ತಿ

ಸುಪ್ರಸಿದ್ಧ ತುಳಸಿ ಬ್ರ್ಯಾಂಡ್ ಅಗರ್‌ಬತ್ತಿ ತಯಾರಕರಿಂದ ತಯಾರಾಗುವ **ಸಪ್ತಗಿರಿ** ಅಗರ್‌ಬತ್ತಿಯು ಮನಮೋಹಕ ಪರಿಮಳವನ್ನು ಬೀರುತ್ತದೆ.

**ಸಾರಥಿ** ಪರ್‌ಫ್ಯೂಮರಿ ವರ್ಕ್ಸ್

ಗಾಣಿಗರಪೇಟೆ, ಬೆಂಗಳೂರು - 560002




ತುಳಸಿ ತಯಾರಿಕೆ

Rachana SPW-1 Kan

# INDEX TO ADVERTISERS

# ಪರಿವಿಡಿ




# ಕರ್ಮವೀರ
ದೀಪಾವಳಿ ಸಂಚಿಕೆ ೧೯೭೬


## ನಮ್ಮ ನುಡಿ

ಭಾರತೀಯ ಪರಂಪರೆಯಲ್ಲಿ ದೀಪಾವಳಿ ಒಳ್ಳೇ ಸಡಗರದ, ಸಂಭ್ರಮದ ಹಬ್ಬ. ಎಲ್ಲರೂ ತುಂಬ ಹುರುಪು–ಹುಮ್ಮಸ್ಸುಗಳಿಂದ ಅದನ್ನು ಆಚರಿಸುವರು. ಸ್ವತಂತ್ರ ಭಾರತದ ಇತ್ತೀಚಿನ ವರುಷಗಳಲ್ಲಿ ಮೊದಲ ಬಾರಿಗೆ ಈ ಸಲ ಈ ಹಬ್ಬಕ್ಕೆ ಇನ್ನೂ ಹೊಸ ವಿಶೇಷತೆ ಪ್ರಾಪ್ತವಾಗಿದೆ. ದುಷ್ಟತನವನ್ನು ನೀಗಿ ಶಿಷ್ಟತನಕ್ಕೆ ನೆಮ್ಮದಿ ದೊರಕಿಸಿ ಕೊಡುವ ಸಂಕೇತವಾಗಿರುವದು ಈ ಹಬ್ಬ. ಆ ಪರಂಪರೆಯಲ್ಲಿ ಇನ್ನೂ ಮುಂದೆ ಸಾಗಿ ನಮ್ಮ ನೆಚ್ಚಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ನಾಡಿನಲ್ಲಿಯ ದುರ್ಬಲತೆ, ಬಡತನಗಳ ನಿವಾರಣೆಯಾಗಿ ಎಲ್ಲರಿಗೂ ಸುಖೀಜೀವನ ದೊರಕಬೇಕು; ನೆಮ್ಮದಿಯ ಬಾಳು ಒದಗಬೇಕು ಎಂದು ರೂಪಿಸಿದ ಹೊಸ ಆರ್ಥಿಕ ಕಾರ್ಯಕ್ರಮ ಬಹು ಭರದಿಂದ ಅನುಷ್ಠಿತವಾಗುತ್ತಿದೆ. ಜನಜೀವನದಲ್ಲಿ ಒಂದು ಬಗೆಯ ಚೈತನ್ಯವನ್ನು ಅದು ಈಗ ಮೂಡಿಸುತ್ತಿದೆ. ಜನರಲ್ಲಿ ಒಂದು ಬಗೆಯ ವಿಶ್ವಾಸ ಭರವಸೆಗಳು ಉಂಟಾಗುತ್ತಿವೆ. ನಾಡು ನವರೀತಿಯಲ್ಲಿ ರೂಪುಗೊಳ್ಳುತ್ತಿದೆ. ಸ್ವತಂತ್ರ ಭಾರತದ ಇತಿಹಾಸದಲ್ಲಿಯೇ ಇದೊಂದು ಅತ್ಯಂತ ಅಭಿಮಾನ ಪೂರ್ವಕವಾದ ಸಂದರ್ಭ. ಈ ಹಿನ್ನೆಲೆಯಲ್ಲಿ ದೀಪಾವಳಿ ನಮಗೆಲ್ಲರಿಗೂ ಇನ್ನೂ ಹೆಚ್ಚಿನ ಹರುಷದ್ದಾಗಿದೆ.

ಪ್ರಧಾನಿ ಅವರ ಈ ಕಾರ್ಯಕ್ರಮದಿಂದ ನಮ್ಮ ಗ್ರಾಮೀಣ ಭಾರತ ಜಾಗೃತವಾದ ಬಗೆಯನ್ನು, ಇಪ್ಪತ್ತು ಅಂಶಗಳ ಕಾರ್ಯಕ್ರಮ ಬಹು ಯಶಸ್ವಿಯಾಗಿ ಅನುಷ್ಠಾನಕ್ಕೆ ಬಂದುದನ್ನು ಇಲ್ಲಿ ನಮ್ಮ ಓದುಗರ ಗಮನಕ್ಕೆ ತರುತ್ತಿದ್ದೇವೆ. ಗ್ರಾಮೀಣ ಭಾರತದಲ್ಲಿ ವಿಲಕ್ಷಣ ಜಾಗೃತಿ ಮೂಡಿರುವುದು ನಾಡಿನ ಭಾಗ್ಯೋದಯದ ದೃಷ್ಟಿಯಿಂದ ಅತ್ಯಂತ ಶುಭಪ್ರದವಾಗಿರುವುದು. ದುರ್ಬಲ ವರ್ಗದವರಿಗೆ ದೊರೆಯಬೇಕೆಂದಿರುವ ಸೌಲಭ್ಯಗಳೂ ಅವರಿಗೆ ಲಭ್ಯವಾಗಿವೆ. ನಮಗೆಲ್ಲರಿಗೂ ಇದೂ ಕೂಡ ಅಭಿಮಾನದ ಸಂಗತಿಯಾಗಿದೆ. ನಾಡು ಈಗ ನವೋದಯದ ದಾರಿಯಲ್ಲಿ ಭರದಿಂದ ಮುನ್ನಡೆಯುತ್ತಿದೆ. ನಮ್ಮ ಹಲವಾರು ಸಮಸ್ಯೆಗಳನ್ನು ಎದುರಿಸಿಯೂ ನಾವು ಈ ಬಗೆಯಲ್ಲಿ ಪ್ರಗತಿ ಸಾಧಿಸಿರುವುದು ಒಂದು ಅಪೂರ್ವ ಸಾಧನೆ.

ನಾಡಿನ ಈ ಪ್ರಗತಿಯ ಚಿತ್ರಣದೊಂದಿಗೆ ನಮ್ಮ ಓದುಗರಿಗೆ ರಂಜನೀಯ ಸಾಹಿತ್ಯವನ್ನು ಈ ಸಂಚಿಕೆಯಲ್ಲಿ ನೀಡಿದ್ದೇವೆ. ಎಲ್ಲರನ್ನೂ ಈ ಸಾಹಿತ್ಯವು ತಣಿಸುವದು ಎಂಬ ಬಲವಾದ ನಂಬಿಕೆ ನಮಗೆ. ಅವರ ನಲಿವು–ಸಂತೋಷಗಳಲ್ಲಿ ನಾವೂ ಪಾಲ್ಗೊಳ್ಳುತ್ತೇವೆ. ಅದೇ ಕಾಲಕ್ಕೆ ಈ ದೀಪಾವಳಿ ಎಲ್ಲರ ಜೀವನದಲ್ಲಿ ಸುಖ ಸಮೃದ್ಧಿಗಳನ್ನುಂಟು ಮಾಡಲಿ; ನೆಮ್ಮದಿ ತರಲಿ; ಹರುಷದ ಹೊನಲು ಹರಿಯಲಿ ಎಂದೂ ಆಶಿಸುತ್ತೇವೆ.


ವ್ಯವಸ್ಥಾಪಕ ಸಂಪಾದಕರು :
ರಂಗನಾಥ ದಿವಾಕರ
ಪ್ರಧಾನ ಸಂಪಾದಕರು :
ಖಾದ್ರಿ ಶಾಮಣ್ಣ
ಸಂಪಾದಕರು :
ಎಸ್. ವಿ. ಪಾಟೀಲ
ಕಲಾವಿದರು :
ಕೆ. ಬಿ. ಕುಲಕರ್ಣಿ

ಬೆಳಗ್ಗೆ ಏಳುವುದರಲ್ಲಿ ಅಂತಹ ಸೊಗಸೇನಿದೆಯೋ?
ಆ ಕೋಗಿಲೆಯಂತೆ? ಇಂದಿನ ಬೀಟಲ್ ಸಂಗೀತ,
ಜಜ್ ಸಂಗೀತ, ಇಲೆಕ್ಟ್ರಿಕ್ ಗಿಟಾರ್ ಮುಂತಾದುವುಗಳ
ಮುಂದ ಕೋಗಿಲೆಯ ರಾಗ ಹೇಗೆ ನಿಂತೀತು ?
ಮುಂಜಾನೆಯ ಸೂರ್ಯನನ್ನು ಮರೆ ಮಾಚಿ
ಗೂರ್ಕೆ ಹೊಡೆಯುವುದರಲ್ಲಿ ಎಂಥಾ ಸುಖವಿದೆ !

ಲಾಂಗೂಲಾಚಾರ್ಯ

# ಬೆಳಗ್ಗೆ ಏಳುವುದು

ಬೊಂಬಾಯಿಗೆ ಹೋಗುವುದು ಅಂದರೆ ನನಗೆ ನಾಯೀನ ಒಯ್ದು ನೀರಿಗೆ ತಳ್ಳಿದ ಹಾಗಾಗುತ್ತದೆ. ಮದ್ರಾಸಿಗೆ ಕೂಡ. ನಾನು ಹುಟ್ಟಿದ್ದು ಕನ್ನಡ ಜಿಲ್ಲೆಯಲ್ಲಿಯೇ ಆದರೂ ನನ್ನ ಪ್ರಿಯವಾದ ಪಡುವ ಕಡಲಿನ ನಾಡಿಗೆ ಹೋಗುವುದು ಅಂದರೂ ನನಗೆ ಸ್ವಲ್ಪ ಜ್ವರ ಬರುತ್ತದೆ. ದೀಪಾವಳಿ ಹಬ್ಬ ಕೂಡ ನನಗೆ ಅಷ್ಟಕ್ಕಷ್ಟೇ. ತದ್ವಿರುದ್ಧವಾಗಿ ಶಿವಮೊಗ್ಗವೋ ಶಿರಸಿಯೋ ನನಗೆ ಹುಮ್ಮಸ್ಸ ತರುತ್ತದೆ. ಧಾರವಾಡ ಕೂಡ ಪರವಾಗಿಲ್ಲ.

ನೀವು ಬೊಂಬಾಯಿಗೆ ಹೋಗಿ ಯಾವುದಾದರೂ ಹೋಟೆಲ್ಲಿನಲ್ಲಿ ಬಿಡಾರ ಹೂಡಿ ನೋಡಿ. ಬೆಳಗಿನ ಜಾವದ ನಾಲ್ಕೂವರೆಗೇ ಕುಂಭಕರ್ಣನನ್ನು ಎಚ್ಚರಗೊಳಿಸುವಷ್ಟು ಸಪ್ಪಳ ಪ್ರಾರಂಭವಾಗುತ್ತದೆ. ಬಸ್ಸುಗಳು ಗುರುಗುರು ನಿಮ್ಮ ಕೋಣೆಗೋಡೆಗಳನ್ನು ನೀವು ಮಲಗಿದ ಮಂಚವನ್ನು ಕಲುಕುತ್ತವೆ. ಹಾರ್ನುಗಳು ಸಪ್ತಸ್ವರದಿಂದ ಅರಚುತ್ತವೆ. ಬೆಳಿಗ್ಗೆ ಆರು ಅನ್ನುವುದರೊಳಗೆ ಇಡೀ ಪಟ್ಟಣ ನರಕದಷ್ಟು ಚಟುವಟಿಕೆಯಲ್ಲಿ ತೊಡಗಿಬಿಡುತ್ತದೆ. ಆರಕ್ಕೆ ನೀವಿನ್ನೂ ಏಳದೆ ಇದ್ದರೆ. ಹೋಟೆಲ್ ಮಾಣಿ ನಿಮ್ಮ ಕೋಣೆಯ ಬಾಗಿಲ ಸಂದಿಯಿಂದ ಹಣಿಕಿ ನೀವು ಜಂತೆಯಿಂದ ತೂಗಾಡುತ್ತಿದ್ದೀರಾ, ಅಥವಾ ನಿದ್ರೆಯಲ್ಲಿ ಹೃದಯ ಸ್ತಂಭನವಾಗಿ ಮರಗಟ್ಟಿದ್ದೀರಾ. ಅಥವಾ ಯಾವುದಾದರೂ ರಹಸ್ಯಪೂರ್ಣ ರೀತಿಯಲ್ಲಿ ನಿಮ್ಮ ಕೊಲೆ ಆಗಿದೆಯಾ ಅಂತ ಪರೀಕ್ಷಿಸುತ್ತಾನೆ. ಮದ್ರಾಸು ಬೊಂಬಾಯಿಗಿಂತ ಬೇರೆ ಅಲ್ಲ. ಅಲ್ಲಿ ಬೊಂಬಾಯಿಗಿಂತ ನಾಲ್ಕೋ ಆರೋ ನಿಮಿಷ ಮುಂಚೆಯೇ ಸೂರ ಹುಟ್ಟುತ್ತಾನೆ- ಅಂತಷ್ಟೇ ಹೆಚ್ಚುಕಮ್ಮಿ—ಹೆಚ್ಚು ಕಮ್ಮಿ ಏನು ಹೆಚ್ಚೇ ಉಡುಪಿಗೋ ಕೋಟಕ್ಕೋ ಹೋದರೆ ಮನುಷ್ಯರು ನಿಮ್ಮನ್ನು ಎಬ್ಬಿಸದಿರಬಹುದು. ಆದರೆ ಕಾಗೆಗಳ ವೃಂದಗಾನಕ್ಕೆ ನೀವು ಸತ್ತಿದ್ದರೂ ಎಚ್ಚರಗೊಳ್ಳುತ್ತೀರಿ.

ಒಂದು ಮಾತಿನಲ್ಲಿ ಹೇಳಬೇಕಾದರೆ ನನಗೆ ಬೆಳಗ್ಗೆ ಬೇಗ ಏಳುವುದೆಂದರೆ ಆಗದು. ಅರಾವಳಿಯಲ್ಲೇ ಹುಟ್ಟಿದ್ದರೂ ನನಗೆ ಬೆಳಿಗ್ಗೆ ಏಳುವುದು ಯಾಕೆ ವಿರುದ್ಧ ಆಗಿದೆ ಅಂತ ನನಗೇ ಗೊತ್ತಿಲ್ಲ. ಬಹುಶಃ ಚಿಕ್ಕಂದಿನಲ್ಲಿ ನನ್ನ ಹಿರಿಯರು ನಾಲ್ಕೂವರೆ ಗಂಟೆಗೇ ನನ್ನ ಕಿವಿಹಿಡಿದು ಎಬ್ಬಿಸಿ. "ಬ್ರಾಹ್ಮೇ ಮುಹೂರ್ತೇ ಚೋತ್ತಾಯ" ಅಂತ ಶ್ಲೋಕ ಹೇಳಿ ಕೊಡಲು ಯತ್ನಿಸಿದರಿಂದ ನನ್ನ ಮನಸು ಬೆಳಗ್ಗೆ ಬೇಗ ಏಳುವುದರ ವಿರುದ್ಧ ಶಾಶ್ವತವಾಗಿ ಬಂಡಾಯ ಪ್ರವೃತ್ತಿಯನ್ನು ಬೆಳೆಸಿಕೊಂಡಿರಬೇಕು. ಬೆಳಗಿನ ಜಾವಕ್ಕೆ ಬ್ರಾಹ್ಮ ಮುಹೂರ್ತ ಅಂತ ಯಾವಾತ ಹೆಸರಿಟ್ಟಿದ್ದಾನೊ ಆದರಂಥ ಅಬ್ರಾಹ್ಮ ಮುಹೂರ್ತ ನಾನು ಕಾಣೆ.

ನನ್ನ ಬ್ರಹ್ಮ ಮುಹೂರ್ತ ಬಹಳ ಬೇಗ ಅಂದರೆ ಏಳು ಗಂಟೆಗೆ ಶುರುವಾಗುತ್ತದೆ. ಅಂದರೆ ಅಷ್ಟು ಹೊತ್ತಿಗೆ ನಾನು ಏಳುತ್ತೇನೆ ಅಂತಲ್ಲ. ಅಷ್ಟು ಹೊತ್ತಿಗೆ ನಾನು ಹಾಸಿಗೆಯಲ್ಲಿ ಸ್ವಲ್ಪ ಹೊರಳಾಡಲು ಆರಂಭಿಸುತ್ತೇನೆ. ಆಮೇಲೆ ಹೊದಿಕೆಯನ್ನು ಸ್ವಲ್ಪ ಗಟ್ಟಿಯಾಗಿ ಸೆಳೆದುಕೊಂಡು ಮಗ್ಗುಲು ಬದಲಿಸಿ ಮಲಗುತ್ತೇನೆ. ಇದು ನನ್ನ ದೇಹ ಸಾವಕಾಶವಾಗಿ ಏಳುವ ಎತ್ತುಗಡೆ ನಡೆಸುತ್ತಿರುವ ಲಕ್ಷಣ. ನನ್ನ ದೇಹ ಅಂದೆ ಆತ್ಮವಲ್ಲ. ನನ್ನ ಆತ್ಮ ಯಾವಾಗಲೂ ದೇಹಧರ್ಮದ ವಿರುದ್ಧ ಬಂಡಾಯವೇಳುತ್ತಲೇ ಇರುತ್ತದೆ. ಅದು ಇನ್ನೂ ಎಚ್ಚರಗೊಳ್ಳುವುದಕ್ಕೆ ಸಿದ್ಧವಿಲ್ಲ. ಹೆಚ್ಚು ವೇಳೆ ನನ್ನ ಆತ್ಮ ನನ್ನ ದೇಹದ ವಿರುದ್ಧ ಜಯ ಸಂಪಾದಿಸಿ ತನ್ನ ಮೂಲ ಸ್ಥಿತಿ—ಅಂದರೆ ಯೋಗ ನಿದ್ರಾವಸ್ಥೆಗೆ ಮರಳುತ್ತದೆ. ನನ್ನ ಮಿದುಳು ಹಗುರ ನಿದ್ರಾವಸ್ಥೆಯಿಂದ ಪುನಃ ಆಳಕ್ಕೆ—ಅಂದರೆ REM- Rapid Eye Movement ತೀವ್ರದೃಷ್ಟಿ ಚಲನಾ ನಿದ್ರೆಗೆ ಇಳಿಯುತ್ತದೆ. ಈ ಅವಸ್ಥೆಯಲ್ಲಿ ನಾವು ಕನಸು ಕಾಣುತ್ತಿರುತ್ತೇವೆ ಅಂತ ನಿದ್ರಾವಿಜ್ಞಾನಿಗಳು ಹೇಳುತ್ತಾರೆ ಈ ಹೊತ್ತಿನ ಕನಸುಗಳು ಸಾಮಾನ್ಯವಾಗಿ ಸವಿಯಾಗಿಯೇ ಇರುತ್ತವೆ. (ನನಗೆ ದುಃಸ್ವಪ್ನಗಳು ಬೀಳುವುದು ಹೆಚ್ಚಾಗಿ ಮಧ್ಯರಾತ್ರಿ ಕಳೆದ ಬಹಳ ನಂತರ) ಆಗ ನಲ್ಲಿಯಲ್ಲಿ ನೀರು ಬರುವ ಸಪ್ಪಳ ಅಡಿಗೆ ಮನೆಯಿಂದ ನನ್ನ ರೂಮಿನ ತನಕ ತಲುಪಿದರೆ, ನನ್ನ ಕನಸು ಅದನ್ನು ಚೌಡಯ್ಯನವರ ಪಿಟೀಲು ಕಚೇರಿಯನ್ನಾಗಿ ತನ್ನಲ್ಲಿ ಅಳವಡಿಸಿಕೊಂಡು ಬಿಡುತ್ತದೆ. ಒಳಗೆ ನನ್ನ ಹೆಂಡತಿಯ ಕೈಯಿಂದ ಜಾರಿ ಯಾವುದಾದರೂ ಪಾತ್ರೆ ಕೆಳಗೆ ಬಿದ್ದು ಠಂ ಠಂ ಸಪ್ಪಳವಾದರೆ ಅದು ಸಾಯೀಭಜನೆಯ ತಾಳವಾಗಿ ಮಾರ್ಪಡುತ್ತದೆ.

ಈ REM ನಿದ್ರಾವಸ್ಥೆ ಸುಮಾರಾಗಿ ಇಪ್ಪತ್ತು ನಿಮಿಷ ಸಾಗುತ್ತದೆಂದು -ನಿದ್ರಾ ವಿಜ್ಞಾನದ ಅಭಿಪ್ರಾಯ. ಅದರ ನಂತರ ನಾನು ಗಾಢ ಸ್ವಪ್ನರಹಿತ ನಿದ್ರೆಯ ಸ್ಥಿತಿಗೆ ಇಳಿಯುತ್ತೇನೆ- ಅಥವಾ ಇಳಿಯುತ್ತಿರಬೇಕು. ಯಾಕೆಂದರೆ ಆಗ ಬಾಹ್ಯ ಪ್ರಪಂಚದ ಚಿಲ್ಲರೆ ಸಪ್ಪಳಗಳು ಯಾವ ರೀತಿಯಲ್ಲೂ ನನ್ನ ಮೇಲೆ ಪ್ರಭಾವ ಬೀರುವುದಿಲ. ಈ ಸ್ಥಿತಿಗೆ ಅರ್ಧ ಗಂಟೆಯ ಗಡುವನ್ನು ವಿಜ್ಞಾನ ಗೊತ್ತುಮಾಡಿದೆ. ಆಮೇಲೆ ನನ್ನ ಮಿದುಳು, ಕಾಲುಗಳನ್ನು ಅರಳಿಸಿ ಹಗುರಾಗಿ ನಿದ್ರಾತಳದಿಂದ ಮೇಲೇರಿ ಹಗುರು ನಿದ್ರಾ ಸ್ಥಿತಿಗೆ ಬರುತ್ತದೆ. ನನ್ನ ಶರೀರದಲ್ಲಿ ಪುನಃ ಜೀವಂತತನದ ಲಕ್ಷಣಗಳು ತೋರಿಬರುತ್ತವೆಂದು ನನ್ನ ಹೆಂಡತಿ ಹೇಳುತ್ತಾಳೆ. ಸುಮಾರು ಎಂಟು ಗಂಟೆ ಹೊಡೆಯುವಾಗ ನನ್ನ ಆತ್ಮ ನನ್ನ ದೇಹಕ್ಕೆ ರಿಯಾಯತಿ ಕೊಡಲು ಸಿದ್ಧತೆಯನ್ನು ಪ್ರದರ್ಶಿಸುತ್ತದೆ. ಇಷ್ಟು ಹೊತ್ತಿಗೆ ಒಳಗಿಂದ, "ಏನು, ಏಳೋದಿಲ್ಲೇ ಈವೊತ್ತು ? ಕಾಫಿ ಆರುತ್ತಾ ಇದೆ !" ಅನ್ನುವ ದನಿ ಕೇಳಿಸಿದರೆ ನನ್ನ ಆತ್ಮ ಸ್ವಲ್ಪ ಚಂಚಲವಾಗುತ್ತದೆ. ನಾನು ಕಣ್ಣು ತೆರೆದು ಆಕಳಿಸಿ ಬಾಯಿಯ ಹತ್ತ ಚಿಟಿಕೆ ಹಾಕುತ್ತೇನೆ. "ಆಹ್ !" ಎನ್ನುತ್ತೇನೆ. ಆದರೆ ಇನ್ನೂ ಎದ್ದು ಕೂರುವುದಿಲ್ಲ. ಸೊಳ್ಳೆ ಪರದೆಯೊಳಗಿಂದ ತೋರುವ ಕಿಡಿಕಿಂಡಿಯಾದ ರೂಮಿನ ಬಾಹ್ಯ ಪ್ರಪಂಚವನ್ನು ಮಂಜುಗಣ್ಣುಗಳಿಂದ ನನ್ನೊಳಗೆ ಸ್ವೀಕರಿಸಲು ಪ್ರಾರಂಭಿಸುತ್ತೇನೆ. ಏಳಲೋ ಬೇಡವೋ ಎಂದು ನನ್ನ ಚಿತ್ತ ಡೋಲಾಯಮಾನವಾಗುತ್ತದೆ. ನನ್ನ ಹೆಂಡತಿ ಪುಳ್ಳು



ಹೇಳುತ್ತಿರುವ ಸಂಭವ ಇದ್ದೇ ಇದೆ. ಅಥವಾ ಅತಿಶಯೋಕ್ತಿ ಮಾಡುತ್ತಿರಬಹುದು. ಅವಳು ಸ್ಟೌ ಹಚ್ಚಿ ಇನ್ನೂ ಕಾಫಿಗೆ ಎಸರು ಇಟ್ಟಿರಬಹುದಷ್ಟೇ. ಪುಡಿಯ ಮೇಲೆ ನೀರು ಹೋಯ್ದಿದ್ದರೆ ಕಾಫಿಯ ಸುವಾಸನೆ ನನ್ನ ಮೂಗಿನವರೆಗೆ ಬಂದಿರುತ್ತಿತ್ತು. ಅವಳು ಕಾಫಿ ಆರುತ್ತಾ ಇದೆ ಅಂದಳೋ ಆಗುತ್ತಾ ಇದೆ ಅಂದಳೋ? ಸಂಶಯದ ಲಾಭ ತೆಗೆದುಕೊಂಡು ನಾನು ಮತ್ತೆ ಕಣ್ಣು ಮುಚ್ಚಿಕೊಂಡು ಧ್ಯಾನಾಸಕ್ತನಾಗುತ್ತೇನೆ. ಈವೊತ್ತು ಇಷ್ಟು ಬೇಗ ಏಳುವ ಅಗತ್ಯ ನಿಜವಾಗಿ ಉಂಟೇ ? ಯಾರಿಗಾದರೆ ಅಪಾಯಿಂಟ್‌ಮೆಂಟ್ ಕೊಟ್ಟಿದ್ದೇನೆಯೆ ? ಅಥವಾ ತೆಗೆದುಕೊಂಡಿದ್ದೇನೆಯೆ ? ಈವೊತ್ತು ಆದಿತ್ಯವಾರವಾಗಿರುವ ಸಂಭವ ಇದೆಯೆ? ಮಾರ್ಕೆಟ್ ರಜಾ ದಿನವಾಗಿರಬಹುದೆ ? ನನಗೆ ಜ್ವರ ಬಂದಿಲ್ಲವೇ ? ಎಂದು ಮೈ ಮುಟ್ಟಿಕೊಳ್ಳುತ್ತೇನೆ. ಜ್ವರ ಬಂದಿದ್ದರೆ ರಜಾ ಅರ್ಜಿ ಕಳಿಸಿಬಿಡಬಹುದು. ಆದರೆ ಇಲ್ಲ. ಸುಳ್ಳು ರಜಾ ಅರ್ಜಿ ಕಳಿಸುವುದು ಸರಿಯಲ್ಲ. ಸುಳ್ಳು ದಕ್ಕಿಸಿಕೊಳ್ಳುವ ಚಾಕಚಕ್ಯತೆ ನನಗೆ ಇಲ್ಲ. ಅಡಿಗೇ ಮನೆಯಿಂದ ಜಬರ್ದಸ್ತಾದ ಇನ್ನೊಂದು ಎಚ್ಚರಿಕೆ ಬಂದ ಮೇಲೆ. ಇನ್ನು ಮಲಗಿರುವುದಕ್ಕೆ ಯಾವುದೇ ನೆವ ಇಲ್ಲ ಎಂದು ಖಚಿತಪಟ್ಟ ನಂತರ. ನಾನು ಹದವಾಗಿ ಮೈ ಮುರಿದು ಎದ್ದು ಕೂರುತ್ತೇನೆ.

ದೀಪಾವಳಿ ಹಬ್ಬ ನನಗೆ ಇಷ್ಟವಾಗದಿರುವುದಕ್ಕೆ ಕಾರಣ, ನನ್ನ ಮೇಲ್ಕಾಣಿಸಿದ ಶೆಡ್ಯೂಲಿಗೆ ಅದು ವ್ಯತಿರಿಕ್ತವಾಗಿರುವುದು. ದೀಪಾವಳಿ ಶರತ್ಕಾಲದ ಉತ್ಸವವಂತೆ. ಶರತ್ಕಾಲದ್ದು ಅಂದರೆ ರಾತ್ರಿಯ ಉತ್ಸವ. ಅದಕ್ಕೇ ದೀಪಾವಳಿಯಲ್ಲಿ ದೀಪಗಳ ಗಲಾಟೆ. ಆದರೆ ಅದರ ಪ್ರಾರಂಭವನ್ನು ಚತುರ್ದಶೀ ದಿನ ಬೆಳಗಿನ ಜಾವಕ್ಕೆ ಮಾಡಬೇಕು ಅಂತ ಯಾವ ಮೂರ್ಖ ಕಟ್ಟಳೆ ಮಾಡಿದನೋ. ನಾಲ್ಕು ಗಂಟೆಗೆ ಎದ್ದು ಎಣ್ಣೆ ತೀಡಿಸಿಕೊಂಡು ಬಿಸಿ ನೀರು ಹಾಕಿಸಿಕೊಳ್ಳುವ ಪ್ರಥಮ ಚಳಿತ ಹಬ್ಬದ ಆನಂದವನ್ನೆಲ್ಲ ಕೆಡಿಸಿ ಬಿಡುತ್ತದೆ, ನನ್ನ ಪಾಲಿಗೆ. ದ್ವಾಪರ ಯುಗದ ಈ ಹಬ್ಬದಲ್ಲಿ ಈ ಯುಗಕ್ಕೆ ತಕ್ಕ ಅಮೆಂಡ್‌ಮೆಂಟುಗಳು ಆಗದಿದ್ದರೆ ನನ್ನಂಥವರಿಗೆ ಅಸಾಧ್ಯ ಹಿಂಸೆಯಾಗುತ್ತದೆ.

ದೇವರು ಹಗಲಿನಲ್ಲಿ ಸೂರ್ಯನನ್ನು ಮೂಡಿಸಿ ರಾತ್ರಿಯಲ್ಲಿ ಕತ್ತಲನ್ನು ಕೊಟ್ಟದ್ದರಿಂದ ಮನುಷ್ಯ ರಾತ್ರಿಯಲ್ಲಿ ಮಲಗಿ ಹಗಲಲ್ಲಿ ಎದ್ದು ಓಡಾಡುವ ಕಾರ್ಯಕ್ರಮ ಹಾಕಿಕೊಂಡ. ಆದರೆ ಕಾಲ ಇಂದು ಪೂರ್ಣ ಬದಲಾದರೂ ರಾತ್ರಿ ನಿದ್ದೆಮಾಡುವುದು ಒಂದು ಧಾರ್ಮಿಕ ಆಚಾರ ಅಂತ ಮನುಷ್ಯ ತಿಳಿದುಕೊಂಡಿದ್ದಾನೆ. ರಾತ್ರಿಯನ್ನು ಹಗಲು ಮಾಡುವಷ್ಟು ಬೆಳಕನ್ನು ಮನುಷ್ಯ ಸೃಷ್ಟಿಸಿರುವಾಗ ಮತ್ತು ಹಗಲನ್ನು ರಾತ್ರಿ ಮಾಡುವಷ್ಟು ಕತ್ತಲ ಕೋಣೆಗಳನ್ನು ಮಾಡಿಕೊಳ್ಳುವುದು ಸಾಧ್ಯವಿರುವಾಗ ಇನ್ನೂ ಓಬೀರಾಯನ ಕಾಲದ ವಿಧಾನಕ್ಕೆ ಅಂಟಿಕೊಂಡಿರುವುದು ಕಂದಾಚಾರ; ಪ್ರತಿಗಾಮಿತನ ಅಂದರೂ ತಪ್ಪಾಗದು. ಮನುಷ್ಯನಿಗೆ ನಿದ್ರಾಸ್ವಾತಂತ್ರ್ಯ ಇರಲೇಬೇಕು. ಅದು ಮೂಲಭೂತ ಹಕ್ಕುಗಳ ಅಧ್ಯಾಯದಲ್ಲಿ ಸೇರುವ ವರೆಗೆ ಮನುಷ್ಯ ನಿಜವಾಗಿ ಸ್ವತಂತ್ರ ಅನಿಸಲಾರ.

ನನ್ನ ಮಿತ್ರನೊಬ್ಬ ಉಷಃಕಾಲದಲ್ಲಿ ಏಳುವುದನ್ನು ತನ್ನ ನಿತ್ಯವಿಧಿಯಾಗಿ ಮಾಡಿಕೊಂಡಿದ್ದಾನೆ. ಅವನು ರಾತ್ರಿ ಒಂಬತ್ತೂವರೆಗಾಗಲೆ ಹಾಸಿಗೆಯ ಆಳವನ್ನು ಸೇರಿರುತ್ತಾನೆ. ಮತ್ತು ನಾಲ್ಕು ಹೊಡೆಯುತ್ತಲೇ ಎದ್ದು ಕುಳಿತು ಓದಲಾರಂಭಿಸುತ್ತಾನೆ. ಐದೂವರೆಗಂಟೆಗೆ ಎದ್ದು ನಿರ್ಜನ ರಸ್ತೆಗಳಲಿ ಭೂತದ ಹಾಗೆ ಸಂಚಾರ ಪ್ರಾರಂಭಿಸುತ್ತಾನೆ. ತನ್ನ ಈ ದುರಭ್ಯಾಸದ ಗುಣಗಾನ ಮಾಡಿದಷ್ಟೂ ಅವನಿಗೆ ತೃಪ್ತಿ ಇಲ್ಲ. ಉಷಃಕಾಲದ ಆಕಾಶದ ಸೌಂದರ್ಯವನ್ನು ನೀನೆಂದಾದರೂ ನೋಡಿದ್ದೀಯಾ? "ಮೂಡಲ ಮನೆಯಾ ಮುತ್ತಿನ ನೀರಿನ ಎರಕಾವ ಹೊಯ್ದಾ" ಅನ್ನುವ ಬೇಂದ್ರೆ ಮಾತಿನ ಪ್ರತ್ಯಕ್ಷಾನುಭವ ಆಗಬೇಕಾದರೆ ಅದನ್ನು ನೋಡಬೇಕು. ಅಂತ ಒಮ್ಮೆ ನನ್ನನ್ನು ಅಪಾರ ಪ್ರಯತ್ನದಿಂದ ಎಬ್ಬಿಸಿ ಎಳೆದುಕೊಂಡು ಹೋದ. ನಾಲ್ಕೂವರೆಯಿಂದ ಆರರ ವರೆಗೆ ನಾನು ಕೆಲ ಡಜನ್ ಆಕಳಿಕೆಗಳ ಸಂಗಡ ಬೇಂದ್ರೆ ಪ್ರಣೀತ ಮೂಡಲ ಮನೆಯನ್ನು ಅವಲೋಕಿಸಿದೆ. ಅವನು ಕಿವಿಯಲ್ಲಿ ಗಾಳಿ ಹೊಕ್ಕ ಎಳಗರುವಿನ ಹಾಗೆ ಕುಣಿದಾಡಿದ. ಕಡೆಗೆ ಹೇಗಿದೆಯೋ ಈ ಪ್ರಭಾತ ಸೌಂದರ್ಯ ?" ಎಂದು ಆಶಾಭರಿತವಾಗಿ ಕೇಳಿದ. ನಾನು "ಅಲ್ಲವೋ ಪಾಪಾ! ಇಷ್ಟಕ್ಕೋಸ್ಕರ ನನ್ನನ್ನ ಹಾಸಿಗೆಯಿಂದ ಎಳತಂದೆಯಾ? ಈ ಉಷಃಕಾಲ ಅನ್ನೋದು ಸಂಧ್ಯಾಕಾಲದ ರಿವರ್ಸ್ ಅಲ್ಲದೆ ಅದರಲ್ಲಿ ಮತ್ತೇನು ಮಹಾ ಇದೆ ಅಂತ ಇಷ್ಟು ಕುಣಿದಾಡುತ್ತಿ?" ಎಂದು ಪ್ರಶ್ನಿಸಿದೆ. ಅವನು ಕೋಗಿಲೆಯ ಹಾಡಿನ ವರ್ಣನೆ ಮಾಡಿ ನನ್ನಲ್ಲಿ ಪ್ರಲೋಭನ ಹುಟ್ಟಿಸುವುದಕ್ಕೆ ಯತ್ನಿಸಿದ. ನಾನು ಜಪ್ಪೆನ್ನಲಿಲ್ಲ. ಇಂದಿನ ಬೀಟಲ್ ಸಂಗೀತ, ಜಸ್ ಸಂಗೀತ, ಸ್ಯಾಕ್ಸಾಫೋನ್, ಇಲೆಕ್ಟ್ರಿಕ್ ಗಿಟಾರ್‌ಗಳ ಯುಗದಲಿ ಕೋಗಿಲೆಯ ಮೂರೋ ನಾಲ್ಕೋ ಬಹಳವಾದರೆ ಐದೋ ಶ್ರುತಿಯ ಪ್ರಿಮಿಟಿವ್ ಗಾನಕ್ಕೋಸ್ಕರ ಅಮಾನುಷ ಗಳಿಗೆಯಲ್ಲಿ ಏಳಲು ನಾನೇನು ಅನಾಗರಿಕ ಅಲ್ಲ ಅಂತ ಕಡಿ ಮುರಿದ ಹಾಗೆ ಅವನಿಗೆ ಹೇಳಿಬಿಟ್ಟೆ. ಬೆಳಗಿನ ಹೊತ್ತು ಅಮೃತ ಪ್ರಾಯವಾದ ಓಜೋನ್ ಗಾಳಿಯಲಿ ರುತ್ತೆ-ಅಂತ ಅವನು ನನಗೆ ಆಸೆತೋರಿಸಿದ. "ಎಲ್ಲಾ ಓಜೋನ್ ನೀನೇ ಸೇದಿಕೋ ಮಹಾರಾಯಾ," ಎಂದೆ. ಈಗ ವಾತಾವರಣ ಮಾಲಿನ್ಯದಿಂದ ಓಜೋನ್ ನಾಶವಾಗುತ್ತಿದೆ ಅಂತ ಆವರಣ ಶಾಸ್ತ್ರಿಗಳು ಎಚ್ಚರಿಕೆ ಕೊಡುತ್ತಿದ್ದಾರೆ. ಪೀಡೆ ಹೋಯಿತು! ಎಲ್ಲ ಓಜೋನ್ ನಿರ್ನಾಮವಾದರೆ ಬೆಳಗ್ಗೆ ಬೇಗ ಏಳುವುದಕ್ಕಿರುವ ಒಂದು ಪ್ರಲೋಭನ ಕಮ್ಮಿ ಆದೀತು-ಅಂತ ಮೊನ್ನೆ ನನ್ನ ಮಿತ್ರನಿಗೆ ಪತ್ರ ಬರೆದೆ.

ನಾನು ಬೆಳಗ್ಗೆ ಬೇಗ ಏಳುವುದಿಲ್ಲ ಅಂದಾಕ್ಷಣ ನನಗೆ ನಿದ್ರೆ ಹೆಚ್ಚು ಅಂತ ಮಾತ್ರ ತಿಳಿದುಕೊಳ್ಳಬೇಡಿ. ನನಗೆ ಬೆಳಗ್ಗೆ ಏಳುವುದಕ್ಕೆ ಎಷ್ಟು ಅನಿಚ್ಛೆಯೋ ಅಷ್ಟೇ ಅನಿಚ್ಛೆ ರಾತ್ರಿ ಮಲಗುವುದಕ್ಕೂ ಇದೆ. ನಿಮ್ಮೆಲ್ಲರ ಘನವಾದ ಗೊರಕೆ ಗರಗಸ ಪ್ರಾರಂಭವಾದ ನಂತರ ನನ್ನ ಮಿದುಳು ಚುರುಕಾಗುತ್ತದೆ. ನಾನು ಪುಸ್ತಕ ತೆಗೆದುಕೊಂಡು ಅದರಲ್ಲಿ ಮುಳುಗುತ್ತೇನೆ. ಅಥವಾ



ಎದ್ದು ಕರ್ಟನ್ ಸಿಕ್ಕಿಸಿಕೊಂಡು ಪಟ್ಟಣದ ದೃಶ್ಯ ಪ್ರಾರಂಭಿಸುತ್ತೇನೆ. ಬೆಳಗಿನ ಜಾವದ ಪ್ರಶಾಂತ ವಾತಾವರಣದ ಉತ್ಸಾಹಕರ ಗುಣವನ್ನು ನೀವು ಲಕ್ಷಿಸುತ್ತೀರಲ್ಲ; ನಾನು ಸಿನೆಮಾಗಳೆಲ್ಲ ಬಿಟ್ಟು ಬೀದಿಗಳೆಲ್ಲ ನಿರ್ಜನವಾದಾಗಿನ ಶಾಂತತೆಯಿಂದ ಉತ್ತೇಜಿತನಾಗುತ್ತೇನೆ. ಮನೆಗೆ ನಾನು ಮರಳುವಾಗ ಗಸ್ತು ಪೋಲಿಸನ ಸೀಟಿ, ಕಾವಲು ಗೂರ್ಖನ ಬಡಿಗೆ ಸಪ್ಪಳ ಮತ್ತು 'ಜಾಗ್‌ತೇ ರಹೋ!' ಕರೆಯ ಮೊದಲ ಸುತ್ತು ಪ್ರಾರಂಭವಾಗಿರುತ್ತದೆ. ಹೌದು. ಜಾಗ್ತೇ ರಹೋ! ಎಚ್ಚರವಾಗಿರಿ. ನನಗೆ ಭಗವದ್ಗೀತೆ ನೆನಪಾಗುತ್ತದೆ. "ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ." ಜಗತ್ತೆಲ್ಲ ನಿದ್ರಿಸಿದಾಗ ಯೋಗಿ ಎಚ್ಚರಗೊಳ್ಳುತ್ತಾನೆ. ನಾನು ಜಗತ್ತಿನ ಮೇಲೆ ಕಾವಲು ನಿಂತ ರಕ್ಷಕ ಅನಿಸುತ್ತದೆ.

ನಾನು ಹಾಸಿಗೆಯ ಮೇಲೆ ನನ್ನನ್ನು ಇಟ್ಟುಕೊಳ್ಳುತ್ತೇನೆ. ಸುತ್ತಲೂ ನಿಶ್ಚಿಂತೆಯಿಂದ ನಿದ್ರಿಸುವವರ ಲಯಬದ್ಧವಾದ ಗೊರಕೆಗಳನ್ನು ಆಲಿಸುತ್ತೇನೆ. ನನ್ನ ಹೆಂಡತಿ, ನನ್ನ ಮಕ್ಕಳು ಹೊಡೆಯುವ ಗೊರಕೆಗಳಲ್ಲಿ ಒಂದು ಸಮಶ್ರುತಿಯನ್ನು ಅರಸುತ್ತೇನೆ. ನನ್ನ ಹೆಂಡತಿ ಮಂದ್ರ "ಪ"ದಲ್ಲಿ ಗೊರೆಯುತ್ತಿದ್ದರೆ ನನ್ನ ಕೊನೆಯ ಮಗ ಮಧ್ಯ "ಷ"ದಲ್ಲಿ ಗೊರೆಯುತ್ತಾನೆ. ನನ್ನ ಎರಡನೇ ಮಗ [illegible] ಮಧ್ಯ ಸಪ್ತಕದ ಷಡ್ಜಕ್ಕೆ [illegible] ಸ್ವಲ್ಪ ಪಡ್ಜರಿ ಷಡ್ಜಗಳ ನಡುವೆ ಎಲ್ಲಿಯೂ ಅಲೆಯುತ್ತಿಲ್ಲವೆ? ಎಂದು ಕುಟುಂಬದ ಸದಸ್ಯರೆಲ್ಲರೂ ಒಂದೇ ಶ್ರುತಿಗೆ ಸಂವಾದಿಯಾಗಿ ಗೊರೆಯುತ್ತಿದ್ದರೆ ಆ ಕುಟುಂಬದಲ್ಲಿ ಐಕಮತ್ಯ ಇದೆಯೆಂದು ಅರ್ಥವಾಗುವುದಿಲ್ಲವೆ? ಎಂದು ಊಹಾಪೋಹ ಮಾಡುತ್ತೇನೆ. ಜಾತಕ ನೋಡಿ ಮದುವೆಯಾಗುವ ಬದಲು ಗೊರಕೆಗಳನ್ನು ಟೇಪ್ ರಿಕಾರ್ಡ್ ಮಾಡಿ ಸಂವಾದಿ ಸ್ವರಗಳಲ್ಲಿ ಗೊರೆಯುತ್ತಾರೆಂದು ಖಚಿತಪಟ್ಟ ವರ ವಧುವ ಕೂಡಿಸಿದರೆ ಅವರದು ಹಿತ ದಾಂಪತ್ಯವಾದೀತು, ಅಲ್ಲವೆ? ಈ ಧಾರೆಯಲ್ಲಿ ಸಂಶೋಧನ ಅಗತ್ಯ ಎಂದುಕೊಳ್ಳುತ್ತೇನೆ ಅಷ್ಟರಲ್ಲಿ ಆಕಳಿಕೆ ಬರುತ್ತದೆ. ನಾನು ಯಾವ ಕ್ಷಣ ನಿದ್ರಾಲೋಕಕ್ಕೆ ಟ್ರಾನ್ಸ್‌ಪೋರ್ಟ್ ಆಗುತ್ತೇನೋ ತಿಳಿಯುವುದಿಲ್ಲ.

ಚಳಿಗಾಲ ಅಂದರೆ ನಿಮಗೆಲ್ಲ ನಡುಕವಾದರೂ ಅದು ನನಗೆ ಪರಮ ಪ್ರಿಯವಾದ ಋತು. ಸೂರ್ಯ ತಡವಾಗಿ ಮೂಡಿ ನನಗೂ ತಡವಾಗಿ ಏಳುವುದಕ್ಕೆ ನೆವ ಒದಗಿಸುತ್ತಾನೆ. ಚಳಿಯ ಸುಬರ ಸೂರ್ಯ ನನ್ನನ್ನು ಒಳಗೆ ಬಿಡದಂತೆ ಕಿಡಕಿಯನ್ನು ಬಿಗಿಯಾಗಿ ಮುಚ್ಚುವುದಕ್ಕೆ ಅವಕಾಶ ಕೊಡುತ್ತದೆ. ನಿಮ್ಮ ಹತ್ತಿರ ಒಳ್ಳೇ ರಗ್ಗು ಮಪ್ಲರು ಇದ್ದರೆ ಚಳಿಗಾಲದ ಬೆಳಗಿನ ನಿದ್ದೆಯಷ್ಟು ಮಧುರವಾದದ್ದು ಇನ್ನೊಂದಿಲ್ಲ. ಆಗ ನಾನು ಒಂದು ಕಪ್ ಕಾಫಿ ಗುಟುಕರಿಸಿ ಮತ್ತೆ ಕೌದಿಯ ಮೊರೆ ಹೋಗುತ್ತೇನೆ.

ಶಿರಸಿಗೋ ಶಿವಮೊಗ್ಗೆಗೋ ಹೋದರೆ ನನಗೆ ಬಹಳ ಆನಂದ. ಅಲ್ಲಿ ಬೇಗ ಎದ್ದು ಏನೂ ಪ್ರಯೋಜನವೇ ಇಲ್ಲ. ಎದ್ದು ಹೊರಗೆ ಹಣಿಕಿದರೆ ಮಂಜಿನ ಕೌದಿ ಹೊದ್ದು ಇಡೀ ಜಗತ್ತು ನಿಮ್ಮಿಂದ ಮರೆಯಾಗಿದ್ದಂತೆ ಅನಿಸುತ್ತದೆ. ಪ್ರಪಂಚಕ್ಕೆ ನಿಮಗೆ ಮುಖ ತೋರಿಸುವುದು ಬೇಕಾಗಿರದಾಗ ನೀವು ಅದಕ್ಕೆ ಮುಖ ತೋರಿಸುವ ಹಟ ಮಾಡಬೇಕಾಗಿಲ್ಲ. ನನಗೆ ಅತ್ಯಂತ ಇಷ್ಟವಾದ ಪ್ರಭಾತದ ನೆನಪು ಶಿರಸಿ ತಾಲೂಕಿನ ಒಂದು ಹಳ್ಳಿಯದು. ಪೂರ್ವದಲ್ಲಿ ಎತ್ತರವಾದ ಗುಡ್ಡ, ಅದರ ಓರೆಯಲ್ಲಿ ಹಳ್ಳಿ. ಅಲ್ಲಿ ಬೆಳಗಾದ್ದು ಗೊತ್ತೇ ಆಗುವುದಿಲ್ಲ. ಎಂಟು ಗಂಟೆಗೆ ಹೇಗಾದರೂ ಮಾಡಿ ಎರಡು ಗುಡ್ಡ ಹತ್ತಿ ಸೂರ್ಯ ಮುಖ ತೋರಿಸಲು ಯತ್ನಿಸುತ್ತಾನೆ. ಯತ್ನಿಸುತ್ತಾನೆ, ಅಂದೆ. ಅವನು ಮಂಜಿನ ತೆರೆಯನ್ನು ಹರಿಯುವದಕ್ಕೆ ಇನ್ನು ಒಂದು ಗಂಟೆ ಶ್ರಮ ಪಡಬೇಕಾಗುತ್ತದೆ. ಪ್ರಾತಃಕಾಲ ಇದಕ್ಕಿಂತ ಆದರ್ಶವಾಗಿರುವುದು ಬೇರೆಲ್ಲಿ ಸಾಧ್ಯ?

ಹುಬ್ಬಳ್ಳಿ-ಧಾರವಾಡ ಪರವಾಗಿಲ್ಲ ಅಂತನಲ್ಲ ಮೊದಲಲ್ಲ. ಇಲ್ಲಿ ಕಾಗೆಗಳು ಕಮ್ಮಿ. ಇದ್ದ ಕಾಗೆಗಳೂ ನಿಮ್ಮನ್ನು ಐದು ಗಂಟೆಗೇ ಎಬ್ಬಿಸುವುದಿಲ್ಲ. ಕರಾವಳಿ ಕಾಗೆಗಳಿಗಿಂತ ಅವು ಹೆಚ್ಚು ಮಾನವೀಯವಾಗಿವೆ. ಮರಗಿಡಗಳು ಕಮ್ಮಿಯಾದ್ದರಿಂದ ಕೋಗಿಲೆಗಳ ಹಾವಳಿಯೂ ಇಲ್ಲ. ಧಾರವಾಡದಲ್ಲಂತೂ ಊರು ಒಂಬತ್ತು ಗಂಟೆಗೆ ಅಲುಗಾಡಲು ಪ್ರಾರಂಭಿಸುತ್ತದೆ. ಪೇಟೆ ಹತ್ತು ಗಂಟೆಗೆ ಆಕಳಿಸಿ ಮೈಮುರಿಯತೊಡಗುತ್ತದೆ. ಆದರೆ ಹುಬ್ಬಳ್ಳಿ ಭಾಗದ ಒಂದು ಚಾಳಿ ಮಾತ್ರ ನನಗೆ ಅಸ್ವಾಭಾವಿಕವಾಗಿದೆ. ಅಲ್ಲಿ ಶಾಲೆ, ಕಾಲೇಜುಗಳನ್ನು ಏಳೂವರೆ ಗಂಟೆಗೇ ಪ್ರಾರಂಭಿಸುತ್ತಾರೆ. ತೂಕಡಿಸುತ್ತ ಶಾಲೆಗೆ ಹೋಗುವ ಮಕ್ಕಳ ತಲೆಯಲ್ಲಿ ಎಷ್ಟು ಜ್ಞಾನ ಹೊಕ್ಕೀತು, ಆಕಳಿಸುತ್ತ ಪಾಠ ಮಾಡುವ ಮಾಸ್ತರ್ ಮಂದಿ ಏನು ಕಲಿಸಿಯಾರು, ನನಗೆ ಅರ್ಥವಾಗುವುದಿಲ್ಲ. ಶಾಲೆ ಪ್ರಾರಂಭಿಸುವುದಕ್ಕೆ ಅತಿ ಬೇಗ ಎಂದರೆ ಹತ್ತೂವರೆ ಗಂಟೆ ಸಹ್ಯ; ಮಧ್ಯಾಹ್ನದ ಒಂದು ಗಂಟೆ ಆದರ್ಶ ಗಂಟೆ ಎಂದು ನನ್ನ ಮತ.

ನಮ್ಮ ಅನೇಕ ಧಾರ್ಮಿಕ ವಿಧಿಗಳು ನಾವು ಬೆಳಗ್ಗೆ ಬೇಗ ಏಳಬೇಕೆಂದು ಹೇಳುತ್ತವೆ. ಆದರೆ ಕೋಳಿ ಕೂಗುವಾಗ ಏಳುವುದು ಎಷ್ಟು ಅಪಾಯಕಾರಿ ಎಂಬುದಕ್ಕೆ ರಾಮಾಯಣದಲ್ಲಿ ಪ್ರಮಾಣ ಸಿಗುತ್ತದೆ. ವಿಶೇಷವಾಗಿ ಗಂಡಸರಿಗೆ. ಅಹಲ್ಯೆಯ ಕಥೆ ನೀವು ಕೇಳಿಲ್ಲವೇ? ಗೌತಮ ಮಹರ್ಷಿ ಬ್ರಾಹ್ಮೀ ಮುಹೂರ್ತಕ್ಕೆ ಎದ್ದು ನದಿ ಕಡೆ ಹೋದ. ಆ ಸಮಯದಲ್ಲಿ ಇಂದ್ರ ಬಂದು ಅಹಲ್ಯೆಯ [illegible] ಮಾಡಿದ. ಮುಂದೆ ಏನೇನು ಅನಾಹುತ ಆಯಿತು. ನಮಗೆ ಗೊತ್ತು. ಗೌತಮ ನನ್ನ ಹಾಗೆ ಏಳುವವನಾಗಿದ್ದರೆ ಇಂದ್ರನಿಗೆ ಚಾನ್ಸೇ ಸಿಗುತ್ತಿರಲಿಲ್ಲ. ಗಂಡಂದಿರಿಗೆ ಇದು ಒಂದು ಜಾಗ್ರತೆ.

ಈಚೆಗೆ ನಾನು ಒಂದು ಬಾಡಿಗೆ ಮನೆ ಹಿಡಿದೆ. ಅದರಲ್ಲಿ ಬೆಡ್‌ರೂಮು ಪೂರ್ವದಿಕ್ಕಿಗಿದೆ. ಬೇಗ ಏಳುವ ಪುರಸೊತ್ತಿಲ್ಲ ಸೂರ್ಯ ಕಿಡಕಿಯಲ್ಲಿ ನುಗ್ಗುತ್ತಾನೆ. ಕಿಡಕಿಯ ಮೇಲ್ಭಾಗಕ್ಕೆ ಕನ್ನಡಿ ಹಾಕಿರುವುದರಿಂದ ಅವನ ವಿರುದ್ಧ ನನಗೆ ರಕ್ಷಣೆಯೇ ಇಲ್ಲದಂತಾಗಿದೆ. ಈ ವೊತ್ತು ಮುಂಜಾನೆ ಬಾಡಿಗೆ ವಸೂಲಿಗೆ ಬಂದಾಗ ಅವನಿಗೆ ಜಳಜಳ ಹೇಳಿ ಬಿಟ್ಟಿದ್ದೇನೆ. ಕಿಡಕಿಯ ಮೇಲ್ಭಾಗದ ಕನ್ನಡಿಗಳನ್ನು ತೆಗೆದು ಮರದ ಹಲಿಗೆ ಫಿಟ್ ಮಾಡಿಕೊಡುವವರೆಗೆ ಬಾಡಿಗೆ ಕೊಡುವುದಿಲ್ಲ; ಅಂತ. ●



# ಶರತ್‌ಚಂದ್ರ ಚಟರ್ಜಿ

ಡಾ|| ಹಾ. ಮಾ. ನಾಯಕ

**ಭಾರತೀಯ ಸಾಹಿತ್ಯದಲ್ಲಿ ಶರಚ್ಚಂದ್ರ ಚಟರ್ಜಿಯವರಿಗೆ ಅಗ್ರಸ್ಥಾನ. ಬದುಕಿನ ಬವಣೆಯನ್ನು ಕಂಡುಂಡ ಅವರ ಜೀವನ ಕಾದಂಬರಿಗಳಲ್ಲಿ ಪ್ರತಿಫಲಿಸಿ ಓದುಗನ ಹೃದಯವನ್ನು ನೇರವಾಗಿ ತಾಗುವಲ್ಲಿ ಯಶಸ್ವಿಯಾಗಿವೆ. ಅವರ ಶತಮಾನೋತ್ಸವದ ಸಂದರ್ಭದಲ್ಲಿ ಪ್ರಕಟವಾಗಲಿರುವ ಅವರ ಸಮಗ್ರ ಸಾಹಿತ್ಯ ಸಂಪುಟಕ್ಕೆ ಮುಂಗಡ ಚಂದಾದಾರರಾಗಲು, ಜನ ಸಾಲುಗಟ್ಟಿ ನಿಲ್ಲುತ್ತಿರುವದು, ಅವರ ಕೃತಿಗಳ ಜನಪ್ರಿಯತೆಗೆ ಸಾಕ್ಷಿ.**

ಆಧುನಿಕ ಭಾರತೀಯ ಸಾಹಿತ್ಯದ ಮಹಾ ಲೇಖಕರಲ್ಲಿ ಒಬ್ಬರಾದ ಶರತ್‌ಚಂದ್ರ ಚಟರ್ಜಿಯವರು ಜನ್ಮ ತಾಳಿ ನೂರು ವರ್ಷಗಳಾದವು. ಅವರು ಹುಟ್ಟಿದ್ದು ೧೮೭೬ರ ಸೆಪ್ಟೆಂಬರ್ ೧೫ರಂದು. ಭಾರತದಾದ್ಯಂತವೂ ಈಗ ಆಚರಿಸಲ್ಪಡುತ್ತಿರುವ ಅವರ ಶತಮಾನೋತ್ಸವ ಸಮಾರಂಭಗಳು ಅವರು ಕೇವಲ ಒಬ್ಬ ಬಂಗಾಳಿಯ ಲೇಖಕರಲ್ಲ ಎಂಬುದನ್ನು ದೃಢಪಡಿಸುತ್ತಿವೆ. ಅವರಷ್ಟು ವಿಪುಲವಾಗಿ ಭಾರತದ ಬೇರೆ ಬೇರೆ ಭಾಷೆಗಳಿಗೆ ಅನುವಾದಗೊಂಡ ಭಾರತೀಯ ಲೇಖಕರು ಮತ್ತೊಬ್ಬರಿಲ್ಲ ಎಂದರೆ ಉತ್ಪ್ರೇಕ್ಷೆಯಾಗುವುದಿಲ್ಲ. ಕನ್ನಡದ ಮಟ್ಟಿಗೆ ಹೇಳುವುದಾದರೆ ಅವರ ಮೂರು ನಾಲ್ಕು ಕೃತಿಗಳನ್ನು ಬಿಟ್ಟರೆ ಮಿಕ್ಕ ಎಲ್ಲವೂ ಕನ್ನಡಕ್ಕೆ ಬಂದಿವೆ. ಕೆಲವು ಕೃತಿಗಳನ್ನು ನಾಲ್ಕೈದು ಜನರು ಬೇರೆ ಬೇರೆಯಾಗಿ ಭಾಷಾಂತರಿಸಿದ್ದಾರೆ. ಕೆಲವು ಕೃತಿಗಳ ಪೂರ್ಣರೂಪದೊಡನೆ ಸಂಕ್ಷಿಪ್ತ ಆವೃತ್ತಿಗಳೂ ಪ್ರಕಟವಾಗಿವೆ. ಶರತ್‌ಚಂದ್ರರ ಸಾಹಿತ್ಯ ಸೂಚಿಯನ್ನು ಪರಿಶೀಲಿಸಿದರೆ ಕನ್ನಡದ ಈ ಚಿತ್ರ ಉಳಿದ ಭಾರತೀಯ ಭಾಷೆಗಳ ವಿಷಯದಲ್ಲಿಯೂ ನಿಜ ಎನ್ನುವುದು ಗೊತ್ತಾಗುತ್ತದೆ. ಬಂಕಿಮಚಂದ್ರ ಚಟರ್ಜಿ ರವೀಂದ್ರನಾಥ ಠಾಕೂರ್ ಅವರಂತೆ ಶರತ್‌ಚಂದ್ರರು ಬಂಗಾಳಿ ಸಾಹಿತ್ಯದ ಒಂದು ವಿನೂತನ ಮೈಲಿಗಲ್ಲು ಮಾತ್ರವಲ್ಲ, ಅವರಂತೆಯೇ ಭಾರತದ ವಿವಿಧ ಭಾಗಗಳಲ್ಲಿ ಏಕಪ್ರಕಾರವಾದ ಆದರಾಭಿಮಾನಗಳನ್ನು ಗಳಿಸಿಕೊಂಡು, ಎಲ್ಲಾ ಭಾಷೆಗಳ ಸಾಹಿತ್ಯದ ಮೇಲೆ ಪ್ರಭಾವವನ್ನೂ ಬೀರಿದರು. ಇಂಥ ಪರಿಸ್ಥಿತಿಯಲ್ಲಿ ನಮ್ಮ ಬೇರೆ ಬೇರೆ ಭಾಷೆಗಳ ಜನರೂ ಶರತ್‌ಚಂದ್ರರನ್ನು ಈ ಹೊತ್ತು ಸ್ಮರಿಸುತ್ತಿರುವದೂ ಕೃತಜ್ಞತೆಗಳನ್ನು ಸಲ್ಲಿಸುತ್ತಿರುವುದೂ ಅತ್ಯಂತ ಉಚಿತವಾಗಿದೆ.

ಕಲ್ಕತ್ತೆಯಿಂದ ಸುಮಾರು ಒಂದು ನೂರು ಮೈಲಿ ದೂರದ ಹಳ್ಳಿ ದೇವಾನಂದಪುರ. ಶರತ್‌ಚಂದ್ರರು ಹುಟ್ಟಿದ್ದು ಆ ಹಳ್ಳಿಯಲ್ಲಿ. ಅವರ ತಂದೆ ಮತಿಲಾಲ ಚಟರ್ಜಿ, ತಾಯಿ ಭುವನ ಮೋಹಿನಿದೇವಿ. ಮತಿಲಾಲರ ಒಂಬತ್ತು ಜನ ಮಕ್ಕಳಲ್ಲಿ ಎರಡನೆಯವರಾದ ಶರತ್‌ಚಂದ್ರರು. ಹಿರಿಯ ಮಗ. ತಂದೆ ಮತಿಲಾಲರು ಶ್ರೀಮಂತರೇನಲ್ಲ. ಹೆಚ್ಚಿನ ದುಡಿಮೆಗೆ ಅವರಲ್ಲಿ ಶಕ್ತಿಯಾಗಲಿ, ಆಸಕ್ತಿಯಾಗಲಿ ಇರಲಿಲ್ಲ. ಅವರಿಗೆ ಬರವಣಿಗೆಯಲ್ಲಿ ಮಾತ್ರ ತುಂಬ ಆಸೆ. ಕಾವ್ಯ ನಾಟಕ ಕಥೆ, ಕಾದಂಬರಿ –ಎಲ್ಲ ಸಾಹಿತ್ಯ ಪ್ರಕಾರದಲ್ಲಿಯೂ ಅವರು ಕೈ ಆಡಿಸಿದರು. ಆದರೆ ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಒಂದನ್ನೂ ಪೂರ್ಣಗೊಳಿಸಲಿಲ್ಲ. ತಂದೆಯ ಅಪೂರ್ಣ ಹಸ್ತಪ್ರತಿಗಳೇ ಶರತ್‌ಚಂದ್ರರಿಗೆ ಸ್ಫೂರ್ತಿಯೊದಗಿಸಿದವು. ತಾಯಿ ಭುವನ ಮೋಹಿನಿದೇವಿ ಕೋಮಲ ಸ್ವಭಾವದ ಆದರ್ಶ ಗೃಹಿಣಿ. ಕುಟುಂಬದ ಎಲ್ಲರ ಪ್ರೀತಿಯನ್ನೂ ಅವರು ಸಂಪಾದಿಸಿದ್ದರು. ಸ್ನೇಹ ಕರುಣೆಗಳು ಅವರಲ್ಲಿ ನೆಲೆಯಾಗಿದ್ದವು. ಅವರಿಗೆ ತುಂಬ ಧೈರ್ಯವಿತ್ತು. ತಮ್ಮ ಗಂಡನ ಅವ್ಯವಹಾರಿಕ ನಡವಳಿಕೆಗಳನ್ನು ಅವರು ಯಶಸ್ವಿಯಾಗಿ ಸಹಿಸಿಕೊಂಡು ಸಂಸಾರವನ್ನು ನಡೆಸುತ್ತಿದ್ದರು. ಎಷ್ಟೇ ಕಷ್ಟಗಳು ಎದುರಾದರೂ ಮಕ್ಕಳ ವಿದ್ಯಾಭ್ಯಾಸಕ್ಕೆ ಅವರು ಆದ್ಯ ಗಮನ ನೀಡಿದ್ದರು. ಶರತ್‌ಚಂದ್ರರಿಗೆ ತಂದೆಯ ಕಡೆಯಿಂದ ಹಣಕಾಸಿನ ವ್ಯವಹಾರಕ್ಕೆ ಸಂಬಂಧಿಸಿದ ಉಪೇಕ್ಷೆಯ ಗುಣವೂ ತಾಯಿಯ ಕಡೆಯಿಂದ ಉದಾರವಾದ ಹೃದಯವಂತಿಕೆಯೂ ಪ್ರಧಾನವಾಗಿ ಕೂಡಿ ಬಂದವು.

ಶರತ್‌ಚಂದ್ರರ ಎಳೆವೆಯ ಹಾಗೂ ಯೌವನದ ಆರಂಭದ ದಿನಗಳು ದೇವಾನಂದಪುರದಲ್ಲಿಯೂ ತಾಯಿಯ ತೌರುಮನೆ ಭಾಗಲಪುರದಲ್ಲಿಯೂ ಕಳೆದವು. ವಿದ್ಯಾಭ್ಯಾಸದಲ್ಲಿ ಶರತರು ಮಹತ್ವವಾದುದೇನನ್ನೂ ಸಾಧಿಸಲಿಲ್ಲ. ಪರಿಸ್ಥಿತಿ ಅವರಿಗೆ ವಿರುದ್ಧವಾಗಿತ್ತು. ಹಣದ ಕೊರತೆಯಿಂದ ಅವರಿಗೆ ಉಚ್ಚಶಿಕ್ಷಣ ಪಡೆಯುವದು ಸಾಧ್ಯವಾಗಲಿಲ್ಲ. ಎಫ್. ಎ. ಪರೀಕ್ಷೆಗೆ ಕಟ್ಟಲು ಸಹ ಅವರಿಗೆ ಹಣದೊರೆಯದೆ ಹೋಯಿತು. ಕಡು ಬಡತನ ಕಾಡುತ್ತಿದ್ದರೂ ಅವರು ಅಭಿಮಾನಧನರಾಗಿದ್ದರು. ತಾಯಿ ತೀರಿಹೋದಾಗ ಶರತ್‌ಚಂದ್ರರಿಗೆ ಹತ್ತೊಂಭತ್ತು ವರ್ಷ ತಂದೆಯ ಕಷ್ಟವನ್ನು ನೋಡಲಾರದೆ, ಅವರು ನೌಕರಿಯೊಂದನ್ನು ಹಿಡಿದರು; ಆದರೆ ಬಹಳಕಾಲ ಅಲ್ಲಿ ನಿಲ್ಲಲಿಲ್ಲ. ಆ ಸುಮಯದಲ್ಲಿ ತಂದೆಯ ಮಾತೊಂದನ್ನು ಸಹಿಸದೆ ಅವರು ಮನೆ ಬಿಟ್ಟು ಹೊರಟು ಕಾವಿ ಧರಿಸಿ ಸನ್ಯಾಸಿಯಾಗಿ ಎಲ್ಲೆಲ್ಲೊ ಅಲೆದಾಡಿದರು. ಜೀವನರಂಗವೇ ಅವರಿಗೆ ವಿಶ್ವವಿದ್ಯಾನಿಲಯವಾಯಿತು. ತಮ್ಮ ತಂದೆ ತೀರಿಹೋದಾಗ, ಶರತ್‌ಚಂದ್ರರು ತಮ್ಮ ಏಕಮಾತ್ರ ಆಸ್ತಿಯಾಗಿದ್ದ ಸೈಕಲ್ಲನ್ನು ೮೦ ರೂಪಾಯಿಗಳಿಗೆ ಮಾರಾಟಮಾಡಿ, ಶ್ರಾದ್ಧ ನಡೆಸಬೇಕಾಗಿ ಬಂತು. ಬಡತನ ಎಷ್ಟು ಉಲ್ಬಣವಾಗಿತ್ತೆಂದರೆ ಯುವಕ ಶರತ್ ಚಂದ್ರರು ತಮಗೆ ಜ್ವರಬರಲಿ ಎಂದು ಹಾರೈಸುತ್ತಿದ್ದರಂತೆ. ಏಕೆಂದರೆ ಜ್ವರ ಬಂದರೆ ಒಂದೆರಡು ದಿನವಾದರೂ ಊಟದ ಸಮಸ್ಯೆ ಇರುವದಿಲ್ಲವಲ್ಲಾ ಎಂಬುದು ಅವರ ಆಲೋಚನೆಯಾಗಿತ್ತು.

ತಮ್ಮ ಇಪ್ಪತ್ತೇಳನೆಯ ವಯಸ್ಸಿನಲ್ಲಿ ಕೈಯಲ್ಲಿ ಕಾಸಿಲ್ಲದೆ ಕೆಲಸವನ್ನು ಅರಸಿಕೊಂಡು ಶರತ್‌ಚಂದ್ರರು ಬರ್ಮಾಕ್ಕೆ ಹೋದರು. ಅಲ್ಲಿ ಆಧಾರವಾಗಬಹುದಾಗಿದ್ದ ತಾಯಿಯ ಕಡೆಯ ಬಂಧುವೊಬ್ಬರು ಅವರ ದುರದೃಷ್ಟವೋ ಎಂಬಂತೆ ತೀರಿಕೊಂಡರು. ಆದರೆ ಮತ್ತೊಬ್ಬ ಬಂಗಾಳಿ ಗೃಹಸ್ಥನ ನೆರವಿನಿಂದ ಒಂದು ಕೆಲಸ ದೊರೆಯಿತು. ಶರತ್‌ಚಂದ್ರರು ಬರ್ಮಾದಲ್ಲಿಯೂ ಬೇಕಾದಷ್ಟು ಸುತ್ತಾಡಿದರು. ತಮ್ಮ ಮೋಹಕ ಹಾಡುಗಾರಿಕೆಯಿಂದ ಅಲ್ಲಿನ ಬಂಗಾಳಿಗಳೆಲ್ಲರ ಪ್ರೀತಿಯನ್ನು ಗಳಿಸಿಕೊಂಡರು. ಸುಮಾರು ಹದಿನಾಲ್ಕು ವರ್ಷ ಅವರು ಅಲ್ಲಿದ್ದರು. ಆಮೇಲೆ ಬಂಗಾಲಕ್ಕೆ ಮರಳಿದರು. ಬರ್ಮಾದೇಶದ ಅನುಭವಗಳು ಅವರ ಬದುಕಿಗೆ ಕೆಲವು ಹೊಸ ಅಧ್ಯಾಯಗಳನ್ನು ಜೋಡಿಸಿದವು. ಅವರ ಸಾಹಿತ್ಯವನ್ನು ಅಭ್ಯಾಸ ಮಾಡುವವರಿಗೆ ಈ ಅಧ್ಯಾಯಗಳನ್ನು ಗುರುತಿಸುವದು ಕಷ್ಟವಾಗುವದಿಲ್ಲ.

ಶರತ್‌ಚಂದ್ರರು ಬೆಳೆಯಬೇಕಾಗಿ ಬಂದ ಬಡತನದ ಪರಿಸರದ ಪ್ರಭಾವವನ್ನು ಅವರ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಕಾಣಬಹುದು. ಬಡತನದಿಂದ ಅವರಿಗೆ ಬದುಕಿನ ತೀರ ಕೆಳಸ್ತರಗಳನ್ನು ಹತ್ತಿರದಿಂದ ನೋಡುವುದು ಸಾಧ್ಯವಾಯಿತು ಫಲವಾಗಿ ಅವರ ಸಾಹಿತ್ಯದಲ್ಲಿ ವಾಸ್ತವತೆಯ

ಸೊಗಡು ಆಕ್ರತಕವಾಗಿ ಕಾಣಿಸಿಕೊಳ್ಳುತ್ತದೆ. ದೀನ ದಲಿತರ ಶೋಷಣೆಗೆ ಒಳಗಾಗಿ ನುಡಿ ಶಕ್ತಿಯನ್ನು ಕಳೆದುಕೊಂಡವರ ಸಾಲುಸಾಲೇ ಶರತ್‌ಚಂದ್ರರ ಸಾಹಿತ್ಯದಲ್ಲಿ ಕಾಣಿಸುತ್ತದೆ. ಶರತ್‌ಚಂದ್ರರು ಕೂಡು ಕುಟುಂಬದಲ್ಲಿ ಬೆಳೆದವರು. ಅನೇಕ ಅಭಿರುಚಿಯ, ಬಹು ಬಗೆಯ ವ್ಯಕ್ತಿತ್ವದ ನಾನಾ ಮಂದಿಗಳು ಕೂಡಿದ ಮಹಾಸಂಸಾರ ಕೂಡುಕುಟುಂಬ. ಅಲ್ಲಿ ವ್ಯಕ್ತಿಯ ಆಯ್ಕೆ ಯಾವುದೂ ಇಲ್ಲ. ಎಲ್ಲವೂ ಸಮಷ್ಟಿಯ ಸುಖಕ್ಕಾಗಿ. ಈ ಕುಟುಂಬ ಜೀವನದ ವೈಶಿಷ್ಟ್ಯ, ವೈಪರೀತ್ಯಗಳು ಶರತ್‌ಚಂದ್ರರ ಸಾಹಿತ್ಯದ ಒಂದು ಬಹು ಮುಖ್ಯ ಮುಖ ಎನ್ನಿಸಿವೆ. ವಿವಿಧ ಸಾಮಾಜಿಕ ಸಮಸ್ಯೆಗಳು ದೊಡ್ಡ ಪ್ರಮಾಣದಲ್ಲಿ ಅವರ ಸಾಹಿತ್ಯದಲ್ಲಿ ತುಂಬಿಕೊಂಡಿವೆ. ಶರತ್‌ಚಂದ್ರರ ಕೃತಿಗಳಲ್ಲಿ ಎದ್ದು ಕಾಣುವ ಮತ್ತೊಂದು ಅಂಶ– ಮಹಿಳೆಯರ ಸಮಸ್ಯೆ. ಅವರಲ್ಲಿಯೂ ಮನೆ ಹಾಗೂ ಸಮಾಜಗಳು ಒಪ್ಪಿಗೆ ನೀಡದ ಪ್ರೇಮದ ಸುಳಿಗೆ ಸಿಕ್ಕಿದ ಹೆಂಗಸರ ಸುಖ ದುಃಖಗಳಲ್ಲಿ ನಡವಳಿಕೆಗಳಲ್ಲಿ ಅವರಿಗೆ ಹೆಚ್ಚಿನ ಆಸಕ್ತಿ. ಹೆಣ್ಣು ಹೃದಯದ ರಹಸ್ಯಗಳನ್ನು ಬಿಚ್ಚಿ ತೋರಿಸುವುದರಲ್ಲಿ ಶರತ್‌ಚಂದ್ರರು ಅದ್ವಿತೀಯರು.

ಹದಿನಾರು ಹದಿನೇಳರ ಎಳವೆಯಲ್ಲಿಯೇ ಶರತ್‌ಚಂದ್ರರು 'ವಾಸಾ' ಎಂಬ ಕಾದಂಬರಿಯನ್ನು ಬರೆದಿದ್ದರು. ಅದು ಅವನಿಗೆ ತೃಪ್ತಿ ನೀಡಲಿಲ್ಲ. ಆದ್ದರಿಂದ ಅದನ್ನು ಅವರು ಹರಿದು ಹಾಕಿದರು. ಅದೇ ಕಾಲದಲ್ಲಿ ಅವರು ಕೆಲವು ಇಂಗ್ಲಿಷ್ ಕೃತಿಗಳನ್ನು ಬಂಗಾಳಿಗೆ ಭಾಷಾಂತರಿಸಿದರು. ಆದರೆ ಪ್ರಕಟಿಸಲಿಲ್ಲ. ಅವರು ಸಾಹಿತ್ಯ ಕ್ಷೇತ್ರಕ್ಕೆ ಇಳಿದ ಕಾರಣ ಸ್ವಾರಸ್ಯವಾಗಿದೆ. ಕೆಲವು ಕಿರಿ ಸ್ನೇಹಿತರು ಒಂದು ಚಿಕ್ಕ ನಿಯತಕಾಲಿಕವನ್ನು ಪ್ರಕಟಿಸುತ್ತಿದ್ದರು. ಅದಕ್ಕೆ ಪ್ರಸಿದ್ಧರು ಬರೆಯುತ್ತಿರಲಿಲ್ಲ. ಪತ್ರಿಕೆಯ ಪುಟಗಳು ತುಂಬ ಬೇಕಾಗಿತ್ತು. ಈ ಪ್ರಕಾಶಕ ಮಿತ್ರರು ಶರತ್‌ಚಂದ್ರರಿಗೆ ಗಂಟು ಬಿದ್ದರು. ಶರತ್‌ಚಂದ್ರರಿಗೆ ಬೇರೆ ದಾರಿ ಇರಲಿಲ್ಲ. ಹಾಗಾಗಿ ಅವರ ಕಥೆಯೊಂದು ಮೊದಲಿಗೆ ಪ್ರಕಟವಾಗಿ ಓದುಗರ ಮೆಚ್ಚುಗೆ ಪಡೆಯಿತು. ಅವರ ಆರಂಭದ ಬರವಣಿಗೆಗಳು ಬೇರೆಯವರ ಹೆಸರಿನಲ್ಲಿ ಪ್ರಕಟವಾದದ್ದೂ, ಬೇರೆಯವರ ಹೆಸರಿನಲ್ಲಿ ಬಹುಮಾನ ಗಳಿಸಿದ್ದೂ, ಉಂಟು. ಬರವಣಿಗೆಗೆ ತಾವು ಒಲಿದ ಬಗೆಯನ್ನು ಹೇಳುತ್ತಾ ಶರತ್‌ಚಂದ್ರ ಹೇಳುತ್ತಾರೆ: "ತಂದೆಯವರ ಕೃತಿಗಳನ್ನು ಓದುತ್ತಿದ್ದೆ. ಅವರು ತಮ್ಮ ಕೃತಿಗಳನ್ನು ಏಕೆ ಪೂರ್ಣಗೊಳಿಸಲಿಲ್ಲವೋ ತಿಳಿಯದು. ಅವರು ತಮ್ಮ ಬರವಣಿಗೆಯಲ್ಲಿ ಉಳಿಸಿದ ಅಂಶಗಳು ಏನಿರಬಹುದು ಎಂಬುದನ್ನೇ ಯೋಚಿಸುತ್ತಾ ನಿದ್ದೆ ಹೋಗುತ್ತಿದ್ದೆ. ಬಹುಶಃ ಇದೇ ಕಾರಣದಿಂದಲೋ ಏನೋ ಹದಿನೇಳರ ಹರೆಯದಿಂದಲೇ ಕಥೆ ಬರೆಯಲು ಆರಂಭಿಸಿದೆ."

"ಭಾರತಿ" ಎಂಬ ಪತ್ರಿಕೆಯಲ್ಲಿ ಶರತ್‌ಚಂದ್ರರ ಕಥೆ 'ಬೂಡೋದಿದಿ' ಬರೆದವರ ಹೆಸರಿಲ್ಲದೆ ಪ್ರಕಟವಾದಾಗ ಬಂಗಾಳಿ ಜನತೆ ಅದನ್ನು ಠಾಕೂರರ ಕೃತಿ ಎಂದೇ ಭಾವಿಸಿತು. ಬರವಣಿಗೆಗೆ ತೊಡಗಿದಂದಿನಿಂದಲೇ ಅವರಿಗೆ ಜನಪ್ರಿಯತೆ ಲಭಿಸಿತು. ಸಾಹಿತ್ಯ ರಂಗದಲ್ಲಿ ಕಷ್ಟಪಡದ ಬಂಗಾಳಿ ಲೇಖಕ ತಾವೊಬ್ಬರೇ ಎಂದು ಶರತ್‌ಚಂದ್ರರೇ ಹೇಳಿಕೊಂಡಿದ್ದಾರೆ. ಬರವಣಿಗೆಯ ಸಂಭಾವನೆಯ ಮೇಲೇ ಜೀವಿಸಲು ತೊಡಗಿದ ಭಾರತೀಯ ಲೇಖಕರಲ್ಲಿ ಅವರು ಮೊದಲಿಗರೆಂದು ಹೇಳಿದರೆ ತಪ್ಪಾಗಲಾರದು. ಅವರು ಸುಮಾರು ನಲವತ್ತೈದು ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ೨೨ ಕಾದಂಬರಿಗಳು ಎಂಟು ಕಥಾಸಂಗ್ರಹಗಳು ೩೦ ಕಥೆಗಳನ್ನೊಳಗೊಂಡಿವೆ. ಅವರ ನಾಟಕಗಳು ಕಾದಂಬರಿಗಳ ರಂಗ ರೂಪಗಳು ಮಾತ್ರ. "ಹೆಣ್ಣಿನ ಸ್ಥಾನಮಾನ", ತರುಣರ ಬಂಡಾಯ" "ಸ್ವದೇಶ ಮತ್ತು ಸಾಹಿತ್ಯ" ಮೊದಲಾದವು ಪ್ರಬಂಧಗಳು.

ಶರತ್‌ಚಂದ್ರರ ಖ್ಯಾತಿಯೆಲ್ಲಾ ಕಥಾ ಸಾಹಿತ್ಯದ ನಿರ್ಮಾಪಕರು ಎಂದೇ. ಅವರ ಈ ಸಾಹಿತ್ಯವನ್ನು ಸ್ಥೂಲವಾಗಿ ಮೂರು ಭಾಗ ಮಾಡಬಹುದು. ಸಣ್ಣ ಕಥೆಗಳು, ನೀಳ್ಗತೆಗಳು, ಹಾಗೂ ಕಾದಂಬರಿಗಳು ಬಗೆ ಬಗೆಯ ಸಮಸ್ಯೆಗಳನ್ನೊಳಗೊಂಡ ವಿವಿಧ ದೃಷ್ಟಿಕೋನಗಳಿಂದ ಪರೀಕ್ಷೆಗೆ ಅರ್ಹವಾದ ಈ ಕೃತಿಗಳನ್ನು ಚಿಕ್ಕ ಅವಕಾಶದಲ್ಲಿ ಪರಿಚಯ ಮಾಡಿಕೊಡುವುದು ಅಸಾಧ್ಯ.

ಶರತ್‌ಚಂದ್ರರ ಪ್ರಖ್ಯಾತ ಕಾದಂಬರಿಗಳಲ್ಲಿ ಎದ್ದು ಕಾಣಿಸುವ ಪಾತ್ರ ನಿರ್ವಹಣೆಯ ಕೌಶಲ್ಯ ಹಾಗೂ ನಿರೂಪಣೆಯ ಆಕರ್ಷಣೆಗಳನ್ನ ಅವರ ಪ್ರತಿಯೊಂದು ಸಣ್ಣ ಕಥೆಯಲ್ಲಿಯೂ ಕಾಣಬಹುದು. ಸಂಭಾಷಣೆಯಲ್ಲಿ ವಿಶೇಷ ಸೊಗಸು ತುಂಬಿರುತ್ತದೆ. "ರಾಮೇರ್ ಸುಮತಿ", "ಸತಿ", "ಮಹೇಶ್", "ಮಾಮ್ಲೂರ್ ಫಲ", ಬಿಲಾಸಿ", "ಅಭಾಗೀರ್ ಸ್ವರ್ಗ" ಮೊದಲಾದವು ಅವರ ಪ್ರಖ್ಯಾತ ಕಥೆಗಳು. ಹೃದಯವಂತಿಕೆಯ ಮುಂದೆ ಸ್ವಾರ್ಥ ಲಾಲಸೆಗಳು ಮರೆಯಾಗುವುದರ ಸಮರ್ಥ ಚಿತ್ರಣ "ರಾಮೇರ್ ಸುಮತಿ" ಕೂಡು ಕುಟುಂಬದ ಒಂದು ಮುಖದ ವಿವೇಚನೆ ಇಲ್ಲಿದೆ. "ಮಹೇಶ" ಎಲ್ಲ ವಿಮರ್ಶಕರ ಅಭಿಪ್ರಾಯದಲ್ಲೂ ಶರತ್‌ಚಂದ್ರರ ಶ್ರೇಷ್ಠ ಕಥೆ. ಪ್ರಪಂಚದ ಒಂದು ಅತ್ಯುತ್ತಮ ಕಥೆ ಎನ್ನುವವರೂ ಇದ್ದಾರೆ. ಇದೊಂದು ಸರಳ ನೇರ ಕಥೆ. ಗಫೂರನೆಂಬ ಮುಸ್ಲಿಮನೊಬ್ಬ ಮಹೇಶನೆಂಬ ಎತ್ತನ್ನು ತನ್ನ ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸಿ ಸಾಕಿದ್ದಾನೆ. ಆದರೆ ಕಿತ್ತು ತಿನ್ನುವ ವರ್ಣನಾತೀತವಾದ ಬಡತನ ಅವನ ಕೈಯಿಂದಲೇ ಅದರ ಕೊಲೆ ಮಾಡಿಸುತ್ತದೆ. ನಕ್ಷತ್ರಗಳತ್ತ ಮುಖ ಮಾಡಿ ಗಫೂರ ಅಲ್ಲಾನಿಗೆ ಪ್ರಾರ್ಥನೆ ಸಲ್ಲಿಸುತ್ತಾನೆ. "ಓ ಅಲ್ಲಾ, ನನ್ನ ಮಹೇಶ ಹಸಿವು ಬಾಯಾರಿಕೆಗಳಿಂದ ಸತ್ತಿದ್ದಾನೆ. ಇದಕ್ಕಾಗಿ ನನಗೆ ಏನು ಶಿಕ್ಷೆಯನ್ನು ಬೇಕಾದರೂ ಕೊಡು. ಆದರೆ ನಿನ್ನ ಹುಲ್ಲನ್ನು ನಿನ್ನ ನೀರನ್ನು ಅವನಿಗೆ ಕೊಡದೆ ಜನರನ್ನು ಮಾತ್ರ ಶಿಕ್ಷಿಸದೆ ಬಿಡಬೇಡ." ಕಲೆಗಾರಿಕೆಯನ್ನು ತಳೆದೂ ಒಂದು ಕಥೆ ಇದಕ್ಕಿಂತ ಹೃದಯ ವಿದ್ರಾವಕವಾಗಿರುವುದು ವಿರಳ. "ಮಾಮ್ಲೂರ ಫಲ" ಕೆಲವು ಬಿದಿರ ಎಳೆಗಳಿಗಾಗಿ ಅಣ್ಣತಮ್ಮಂದಿರ ನಡುವಿನ ವ್ಯವಹಾರವನ್ನು ವರ್ಣಿಸುತ್ತದೆ. ಬಿಲಾಸಿ'ಯಲ್ಲಿ ಉಚ್ಚ ಜಾತಿಯ ಯುವಕನೊಬ್ಬ ಹಾವಾಡಿಗರ ಹುಡುಗಿಯನ್ನು ಕೈ ಹಿಡಿಯುವ ಕಥೆ ಇದೆ.

"ಬಡೋದೀದಿ" "ಬಾಮು ನೇರಮೆಯೆ", "ದೇವದಾಸ", "ದತ್ತಾ", "ಬಿರಾಜಬಹು" ಮೊದಲಾದವು ನೀಳ್ಗತೆಗಳು. "ಶ್ರೀಕಾಂತ", "ಚರಿತ್ರಹೀನ್", "ಗೃಹದಾಹ", "ಪಥೆರ್ ದಾಬ"; "ಶೇಷಪ್ರಶ್ನೆ" ಇವು ಶರತ್‌ಚಂದ್ರರ ಅತ್ಯಂತ ಪ್ರಖ್ಯಾತ ಕೃತಿಗಳು. "ಚರಿತ್ರಹೀನ್" ಹಾಗೂ "ಪಥೇರ್‌ದಾಬ" ತುಂಬ ವಿಶಿಷ್ಟವಾದ ಕೃತಿಗಳಾಗಿದ್ದು, ಶರತಚಂದ್ರರ ಸಾಮಾಜಿಕ ಆರ್ಥಿಕ ಹಾಗೂ ರಾಜಕೀಯ ಚಿಂತನೆಗಳು ಅವುಗಳಲ್ಲಿ ಕೆನೆಗಟ್ಟಿವೆ ಎಂದು ಹೇಳಬಹುದು.

"ಚರಿತ್ರ ಹೀನ್" ಪ್ರಕಟವಾದಾಗ ಅಶ್ಲೀಲತೆಯ ಅಪವಾದಕ್ಕೆ ಗುರಿಯಾಗಿದ್ದರೂ, ಅದೊಂದು ಅತ್ಯುತ್ತಮ ಕಲಾಕೃತಿ ಎಂಬುದು ಈಗ ಸ್ಥಾಪಿತವಾಗಿದೆ. ಈ ಕಾದಂಬರಿಯ ಸಾವಿತ್ರಿ ಮತ್ತು ಕಿರ...ಯ ಪಾತ್ರಗಳು ವಿಶೇಷ ಉಲ್ಲೇಖಕ್ಕೆ ಅರ್ಹರು. ಪಥೇರ್ ದಾಬ (ಹಾದಿಯ ಹಕ್ಕು) ಕಾದಂಬರಿ ಪ್ರಕಟವಾದಾಗ ಬಹಿಷ್ಕೃತವಾಯಿತು. ಬ್ರಿಟಿಷರ ಆಳ್ವಿಕೆಯ ವಿರುದ್ಧ ಬಂಡಾಯವೆದ್ದ ರಾಜಕೀಯ ಕಾದಂಬರಿ ಇದು. ಕ್ರಾಂತಿ ಮತ್ತು ಶಾಂತಿ ಈ ಎರಡು ವಿಭಿನ್ನ ದೃಷ್ಟಿಕೋನಗಳ ಸಂಘರ್ಷಣೆಯೇ ಕಾದಂಬರಿಯ ಕೇಂದ್ರ ಬಿಂದು. ಕಾದಂಬರಿಯ ನಾಯಕ ಒಂದೆಡೆ ಹೇಳುತ್ತಾನೆ: "ಸ್ವಾತಂತ್ರ್ಯ ಎನ್ನುವುದು ಕೇವಲ ರಾಜಕೀಯ ಬಿಡುಗಡೆ ಅಲ್ಲ. ಅದಕ್ಕಿಂತ ಹೆಚ್ಚಿನ ಮೌಲ್ಯಗಳಿವೆ–ಧರ್ಮ, ನೆಮ್ಮದಿ, ಕಾವ್ಯ ಸಂತೋಷ. ಈ ಮೌಲ್ಯಗಳನ್ನು ಬೆಳೆಸಿದರೆ ಮಾತ್ರ ಸ್ವಾತಂತ್ರ್ಯಕ್ಕೆ ಬೆಲೆ. ನಾಲ್ಕು ಭಾಗಗಳಲ್ಲಿ ಪ್ರಕಟವಾದ ಶ್ರೀಕಾಂತ, ಶರತ್‌ಚಂದ್ರರ ಅತ್ಯಂತ ದೊಡ್ಡ ಕಾದಂಬರಿ. ಹೆಚ್ಚಿನ ಖ್ಯಾತಿಯೂ ಅದಕ್ಕೆ. ವಿಭಿನ್ನ ಕಲಾ ಪ್ರಕಾರಗಳ ತಂತ್ರವನ್ನೊಳಗೊಂಡ ಈ ಕೃತಿ ಆತ್ಮಕಥನ ರೂಪದ್ದು. ಅದು ಆತ್ಮಕಥೆಯೇ ಎನ್ನುವವರೂ ಇದ್ದಾರೆ. ಇಲ್ಲಿನ ರಾಜಲಕ್ಷ್ಮಿ ಶರತ್‌ಚಂದ್ರರ ಬಾಲ್ಯ ಸಖಿ ಎಂದು ಸಾಕ್ಷಿ ಹೇಳುವ ಜೀವನ ಚರಿತ್ರಕಾರರಿದ್ದಾರೆ. ಹರವಿನಲ್ಲಿ ಈ ಕಾದಂಬರಿ ಮಹಾಕಾವ್ಯಕ್ಕೆ ಹತ್ತಿರವಾಗುತ್ತದೆ. ಇದರ ನಿರ್ವಹಣೆ ಲೇಖಕರ ಕುಶಲ ಕೈವಾಡವನ್ನು ಎತ್ತಿ ಹೇಳುತ್ತದೆ. "ಗೃಹದಾಹ" ಶರತ್‌ಚಂದ್ರರ ಶ್ರೇಷ್ಠತಮ ಕೃತಿ. ಅದೊಂದು ಪರಿಪೂರ್ಣ ಸಾಧನೆಯೂ ಹೌದು. ವಿಮರ್ಶಕರು ಬೇರೆ ಬೇರೆ ಕಾದಂಬರಿಗಳಲ್ಲಿ ಕಾಣುವ ಲೇಖಕರ ಕೊರತೆ ಯಾವುದನ್ನೂ ಈ ಕಾದಂಬರಿಯಲ್ಲಿ ಕಾಣುವುದಿಲ್ಲ. ಒಂದು ಹೆಣ್ಣು ಏಕಕಾಲದಲ್ಲಿ ಇಬ್ಬರನ್ನು ಪ್ರೀತಿಸಬಹುದೆ ಎಂಬ ಸಮಸ್ಯೆಯ ಸುತ್ತ ಕಾದಂಬರಿ ಬೆಳೆದುಕೊಂಡಿದೆ.

೧೯೩೮ರ ಜನವರಿ ೧೬ರಂದು ಶರತ್‌ಚಂದ್ರರು ಕಲ್ಕತ್ತೆಯಲ್ಲಿ ತೀರಿ ಹೋದರು. ಆಗ ಅವರಿಗೆ ೬೧ ವರ್ಷ ೪ ತಿಂಗಳು ವಯಸ್ಸಾಗಿತ್ತು. ಆ ವೇಳೆಗೆ ಅವರು ಕೀರ್ತಿ ಶಿಖರವನ್ನು ಮುಟ್ಟಿದ್ದರು. ಕಲ್ಕತ್ತೆ ವಿಶ್ವವಿದ್ಯಾನಿಲಯ ತನ್ನ ವಿಖ್ಯಾತವಾದ ಜಗತ್ತಾರಿಣಿ ಪದಕವನ್ನು ಅವರಿಗೆ ನೀಡಿತ್ತು. ಡಾಕಾ ವಿಶ್ವವಿದ್ಯಾನಿಲಯ ಗೌರವ ಡಾಕ್ಟರೇಟ್ ಪ್ರಶಸ್ತಿಯನ್ನು ಕೊಟ್ಟಿತ್ತು. ನೋಬೆಲ್ ಪಾರಿತೋಷಕಕ್ಕೂ ಅವರ ಹೆಸರು ಸೂಚಿತವಾಗಿತ್ತು. ಅವರದು ಯಕ್ಷಿಣಿ ಲೇಖನಿ ಎಂದು ಮಹರ್ಷಿ ಅರವಿಂದರು ಪ್ರಶಂಸಿಸಿದರು. ಶ್ರೀಕಾಂತ ಕಾದಂಬರಿಯ ಇಟಲಿಯನ್ ಭಾಷಾಂತರವನ್ನು ಓದಿ ರೊಮೆ ರೋಲಾ ಉದ್ಗರಿಸಿದರು. "ಅವರು ಜಗತ್ತಿನ ಗಣ್ಯ ಕಾದಂಬರಿಕಾರರಲ್ಲಿ ಒಬ್ಬರು." ಶರತ್‌ಚಂದ್ರರು ತೀರಿ ಹೋದಾಗ ರವೀಂದ್ರರು ತಮ್ಮ ನಾಲ್ಕು ಸಾಲಿನ ಶ್ರದ್ಧಾಂಜಲಿ ಗೀತದಲ್ಲಿ ಹೇಳಿದರು. "ಪ್ರೇಮ ಪೀಠದಲ್ಲಿ ಯಾರಿಗೆ ಸ್ಥಾನವಿದೆಯೋ ಅವರನ್ನು ನಾವು ಮರಣದಲ್ಲಿ ಕಳೆದುಕೊಳ್ಳುವುದಿಲ್ಲ."

ಶರತ್‌ಚಂದ್ರರ ಬತ್ತದಿರುವ ಜನಪ್ರಿಯತೆಗೆ ಈ ಶತಮಾನೋತ್ಸವ ಸಡಗರ ಒಂದು ಸಾಕ್ಷಿ. ಈ ಸಂದರ್ಭದಲ್ಲಿ ಪ್ರಕಟವಾಗುತ್ತಿರುವ ಅವರ ಸಮಗ್ರ ಸಾಹಿತ್ಯ ಸಂಪುಟಕ್ಕೆ ಮುಂಗಡ ಚಂದಾ ಸಲ್ಲಿಸುವುದಕ್ಕೆ ಕಲ್ಕತ್ತೆಯ ಬೀದಿಗಳಲ್ಲಿ ಜನ ಸಾಲುಗಟ್ಟಿ ನಿಂತಿದ್ದರೆಂದು ಒಂದು ವರದಿ ಹೇಳುತ್ತದೆ. ಕಲ್ಕತ್ತಾ ವಿಶ್ವವಿದ್ಯಾನಿಲಯ ನಡೆಸಿದ ಒಂದು ಸಮೀಕ್ಷೆಯಂತೆ ೧೯೭೫–೭೬ನೆಯ ವರ್ಷದಲ್ಲಿ ಅತ್ಯಂತ ಹೆಚ್ಚು ಜನ ಬಂಗಾಳಿಗಳು ಓದಿದ ಲೇಖಕರೆಂದರೆ ಶರತ್‌ಚಂದ್ರ ಚಟರ್ಜಿಯವರೇ. ●

# ಕಾವ್ಯ - ಕೆಲವು ಅನಿಸಿಕೆಗಳು

ದೇಶಪಾಂಡೆ ಸುಬ್ಬರಾಯ

**ಕಳೆದ ಎರಡು ದಶಕಗಳಲ್ಲಿ ಕಾವ್ಯಕ್ಷೇತ್ರ ವಿಸ್ತಾರವಾಗಿ ಬೆಳೆದಿದೆ. ಬದುಕಿನ ವಿವಿಧ ಮುಖಗಳನ್ನು ಕಾಣುವಲ್ಲಿ, ಕಾವ್ಯ ಕ್ಷೇತ್ರಕ್ಕೆ ಪ್ರತಿನಿಧಿಸುವಲ್ಲಿ ನಮ್ಮ ಕವಿಗಳು ಎಷ್ಟರ ಮಟ್ಟಿಗೆ ಯಶಸ್ವಿಯಾಗಿದ್ದಾರೆ? ಲೇಖಕ- ಸ್ವಯಂ ಸಂದರ್ಶನ.**

ಪ್ರಶ್ನೆ: ಕಾವ್ಯ ನಿಮ್ಮ ಅತ್ಯಂತ ಪ್ರೀತಿಯ ಮತ್ತು ಶಕ್ತ ಮಾಧ್ಯಮ. ಆದ್ದರಿಂದ ಕಾವ್ಯದಿಂದಲೇ ಪ್ರಶ್ನೋತ್ತರ ಆರಂಭಿಸೋಣವೆ?

ಉತ್ತರ: ಆ್ಯಸ್ ಯೂ ಪ್ಲೀಸ್.

ಪ್ರಶ್ನೆ: ಕವಿಗಳು ಯಾಕೆ ಕವಿತೆ ಬರೆಯುತ್ತಾರೆ?

ಉತ್ತರ: ಶಿವಬಲ್ಲ. ಆದರೂ ಹೇಳುತ್ತೇನೆ. ಹೇಳುವ ಮೊದಲು ಒಂದು ಮಾತು ನೆನಪಿಡಿ. ಕವಿಗಳಾದವರೆಲ್ಲ ಕವಿತೆ ಬರೆಯುವದಿಲ್ಲ; ಕವಿತೆ ಬರೆಯುವರೆಲ್ಲ ಕವಿಗಳಲ್ಲ. ಈಗ ಕೇಳಿ: ಹರಿಯುವ ಬದುಕನ್ನು ಹಿಡಿದೆತ್ತಿ, ಅನುಭವ ಅನಿಸಿಕೆ ಮೆತ್ತಿ ಒಂದು ರೂಪ ಕೆತ್ತಿ, ಅಕ್ಷರ ಶಿಲ್ಪ ನಿಲ್ಲಿಸುವ ಕಾವ್ಯ ನಿರ್ಮಾಣದ ಒಂದು ಅಪರೂಪದ ಕಸಬು. ಇದಂತೂ ಕ್ಷುಲ್ಲಕ ಅಸ್ತ್ರ, ಬೀದಿಗಿಳಿದ ಚಟ, ಅನಿವಾರ್ಯ ಧಂಧೆ, ಅನೇಕ ಮಂದಿಗೆ. ಸದ್ಯದ ಭಾರತದಲ್ಲಿ ರೈತಾಪಿ ವರ್ಗಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಹುಂಬ ಕೂಜನಗೈಯುತ್ತಿದೆ ಇಂಥ ಕವಿಗಡಣ. ಈ ಸಂತೆಯ ಮಧ್ಯದಲ್ಲೂ, 'ಬಡಿದಿಷ್ಟದೇವತಾವಿಗ್ರಹಕ್ಕೊಗ್ಗಿಸುವ' 'ಅಸಲು ಕಸಬಿ'ನ ಕೆಲವರನ್ನು ಹೊರತುಪಡಿಸಿ ಉಳಿದವರೆಲ್ಲ ಏಕೆ ಕವಿತೆ ಬರೆಯುತ್ತಾರೆಂದು ಸಂಶೋಧಿಸುತ್ತ ಹೋಗುವದೇ ಒಂದು ದೊಡ್ಡ ಮೂರ್ಖತನವಾಗಬಹುದಾದ್ದರಿಂದ ಆ ಉಪದ್ವ್ಯಾಪವನ್ನು ಬಿಟ್ಟುಕೊಟ್ಟು ಸಧ್ಯಕ್ಕೆ ನಾನು ಏಕೆ ಬರೆಯುತ್ತೇನೆ ಎಂದಷ್ಟೇ ಹೇಳುತ್ತೇನೆ. ಉತ್ತರ ಸರಳವಿದೆ. ಬರೆಯಬೇಕು ಎಂದೆನಿಸುತ್ತದೆ. ಆದರೆ ಬರೆಯುವದಿಲ್ಲ. ತಪ್ಪಿಸುತ್ತೇನೆ. ಬರೆಯಲೇಬೇಕು ಎಂಬ ಅನಿಸಿಕೆ ಶೀರಾ ಜೀವ ಹಿಂಡಲು ತೊಡಗುತ್ತದೆ. ಆಗ ಬರೆಯುತ್ತೇನೆ.

ಪ್ರಶ್ನೆ: ಕಳೆದೆರಡು ದಶಕಗಳಿಂದ ಕಾವ್ಯ ಎಂದಾಗಲೆಲ್ಲ ಅಡಿಗರ ಹೆಸರು ಕೇಳಿಬರುತ್ತಿದೆ. ಅವರ, 'ನವ್ಯ ಕಾವ್ಯದ ಜನಕ' ಎಂಬ 'ಪಟ್ಟ'ದಿಂದಾಗಿಯೇ, ನವ್ಯದ ಪ್ರಸ್ತಾಪ ಬಂದಾಗಲೆಲ್ಲ ಪದೇ ಪದೇ ಪ್ರಸ್ತಾಪಿಸಲ್ಪಟ್ಟು ಅಡಿಗರ ಹೆಸರು ಇಷ್ಟು, ಅನಿವಾರ್ಯವೆಂಬಷ್ಟು ಪ್ರಚಲಿತವಾಗಿದೆ. ಆದರೆ, ನಿಜಕ್ಕೂ ಅಂಥ ವ್ಯಕ್ತಿತ್ವದ ಹರಹು ಅವರಲ್ಲಾಗಲೀ ಅವರ ಕಾವ್ಯದಲ್ಲಾಗಲೀ ಇಲ್ಲ ಎಂದು ಕೆಲವರ ವಾದ. ನೀವೇನನ್ನುತ್ತೀರಿ?

ಉತ್ತರ: ನೋಡೀ; ಒಂದು ಹೊಸ ತಲೆಮಾರಿನ ಅನುಭವಗಳಿಂದಾವೃತ್ತ 'ತನ್ನತನ'ದ ಮುಂಡನೆಗಾಗಿ; ಹಳೆಯ ತಲೆಮಾರಿನ ಒಂದು ಸ್ವೀಕೃತ ಕಾವ್ಯಸ್ವರೂಪದ ಜಿಡ್ಡುಗಟ್ಟಿದ ಸಂವೇದನೆಯ ಆಯಾಮವನ್ನು ತನಗೆ ಅನುಕೂಲಕರವಾದ 'ಜೀವಂತ ಅಭಿವ್ಯಕ್ತಿ'ಯತ್ತ ಮತ್ತು ಬದಲಾಯಿಸಿ ಹೇಳುವದು ಯಾವುದೇ ಉತ್ತಮ ಕವಿಯ ಕರ್ತವ್ಯ. ಹೀಗ ಹೊಸ ಬಗೆಯ ಅಭಿವ್ಯಕ್ತಿಗಾಗಿ ಅಡಿಗರು ಅನ್ವೇಷಣೆಗೆ ತೊಡಗಿದ್ದು ಆಂತರಿಕ ಒತ್ತಡಗಳ, ಆವಶ್ಯಕತೆಗಳ, ಬದಲಾವಣೆಗಳ, ದ್ವಂದ್ವಗಳ ಪ್ರಬಲ ಪ್ರೇರಣೆಗಳಿಂದಾಗಿ ಕೇವಲ ಹೊಸ ಧ್ವನಿಯೊಂದರ, ಹರಿಕಾರನಾಗಬೇಕೆಂಬ ಹುರುಡು ಹಂಬಲದಿಂದಲ್ಲ. 'ನವ್ಯ ಕಾವ್ಯದ ಜನಕ' ಎಂಬ 'ಪಟ್ಟ' ಅವರಿಗೆ ಲಭಿಸಿದ್ದರೆ ಅದು ಕಾವ್ಯಾಭಿವ್ಯಕ್ತಿಯಲ್ಲಿಯ ಅವರ ನಿರಂತರ, ಪ್ರಾಮಾಣಿಕ, ಜ್ವಲಂತ, ಅನುಭವ ನಿಷ್ಠ, ಆವಶ್ಯಕ ಪ್ರಯತ್ನಗಳಿಂದಾಗಿಯೇ ಹೊರತು ಆಕರ್ಷಕ ಪ್ರತಿಪಾದನೆಗಳಿಂದಲ್ಲ.

ಕೇವಲ ನಮ್ಮ ಸಾಹಿತ್ಯಿಕ ಇತಿಹಾಸದಲ್ಲಿ ಮಾತ್ರವಲ್ಲದೆ ನಮ್ಮ ಸಾಂಸ್ಕೃತಿಕ ಇತಿಹಾಸದಲ್ಲಿಯೂ ಕೂಡ ಒಂದು ಮುಖ್ಯ ಮಜಲಾಗಿ ನಿಲ್ಲಬಲ್ಲ ನಿಲುವು ಮತ್ತು ಹರಹು ಉಳ್ಳ ವ್ಯಕ್ತಿತ್ವ ಅಡಿಗರದು. ಶ್ರೇಷ್ಠ ದರ್ಜೆಯ ಕವನಾಭಿವ್ಯಕ್ತಿಯ ಮೂಲ ತಳಪಾಯವಾದ ಗಾಢ ಅನುಭವಗಳಿಗೆ ಎಂದರೆ ತೀವ್ರವಾದ ಪ್ರಾಮಾಣಿಕ ಬದುಕಿಗೂ ಕತ್ತು ಕೊಟ್ಟ ಚರಿತ್ರಶೀಲ ಬರಹಗಾರರು ಅವರು. ಜೀವನವನ್ನು ಕುರಿತ ಈ ಪ್ರಾಮಾಣಿಕ ನಿಷ್ಠೆ ಮತ್ತು ವಿಶ್ವಾಸಗಳಿಂದಾಗಿಯೇ ನೈತಿಕತೆ ಮತ್ತು ಚಾರಿತ್ರ್ಯಗಳಿಗೆ ಸಂಬಂಧಿಸಿದ ಬದುಕಿನ ಸೂಕ್ಷ್ಮ ಸ್ತರಗಳು ಅವರ ಕಾವ್ಯಕ್ಕೆ, ಒಂದು ಶ್ರೇಷ್ಠ ಸಂಪ್ರದಾಯದ ಧ್ವನಿಯಾಗಬಲ್ಲ ಕಾವ್ಯವಾಗಬಲ್ಲ ಭದ್ರ ತಳಪಾಯವನ್ನೊದಗಿಸಿವೆ.

ಪ್ರಶ್ನೆ: ನಮ್ಮಲ್ಲಿ ಈಗ ಅಡಿಗರನ್ನು ಬಿಟ್ಟರೆ ಅವರಷ್ಟು ಉತ್ತಮ ಕವಿಗಳು ಮತ್ತೆ ಯಾರು ಯಾರು?

ಉತ್ತರ: ಈ ಪ್ರಶ್ನೆಗೆ ಉತ್ತರಿಸುವಲ್ಲಿ ಎರಡು ಮುಖ್ಯ ತೊಡಕುಗಳಿವೆ. ೧) ನೀವು 'ಈಗ' ಎಂದಿರಿ. 'ಈಗ' ಎಂಬುದರ ವ್ಯಾಪ್ತಿ ತೀರ ದೊಡ್ಡದಾಯಿತು. ಏಕೆಂದರೆ ಈ 'ಈಗ' ದಲ್ಲಿ ಅಡಿಗರೀಚೆಯ ಮೂರು ತಲೆಮಾರುಗಳು ಬರೆಯುತ್ತಿವೆ ಎಂಬುದನ್ನು ನೆನಪಿಡಿ. ಬದುಕಿನ ಹರಹು, ಅನುಭವಗಳ ಬೀಸು, ಭಾಷೆಯ ಬಳಕೆ ಈ ಎಲ್ಲದರಲ್ಲೂ ಭಿನ್ನವಾಗಿವೆ ಈ ತಲೆಮಾರುಗಳು. ೨)'ಅವರಷ್ಟು',ಎಂದು ಕೇಳುವ ನಿಮ್ಮ ಧ್ವನಿ, ಉಚಿತೋದ್ಯದ್ದಾಗಿದೆ ಎನಿಸುತ್ತದೆ. ಏಕೆಂದರೆ 'ಅವರಷ್ಟು' ಎನ್ನಬೇಕಾದರೆ, ಇತರರನ್ನು ಅಳೆಯಲು ಅಡಿಗರನ್ನು, ಅವರ ಸಾಧನೆಯನ್ನು, ಒಂದು ಅಳತೆಗೋಲಾಗಿ ಉಪಯೋಗಿಸಿಕೊಳ್ಳುವದು ಎಂದಾಗುತ್ತದೆ. ಇದು ದಡ್ಡತನ ಆದ್ದರಿಂದ ಬರೇ ಉತ್ತಮ ಕವಿಗಳು ಎಂಬ ಅರ್ಥದಲ್ಲಷ್ಟೇ ಉತ್ತರಿಸುವದು ಹೆಚ್ಚು ಯೋಗ್ಯವಾಗುತ್ತದೆ. ಈ ದೃಷ್ಟಿಯಿಂದ ಹೇಳುವದಾದಲ್ಲಿ ಅಡಿಗರೊಂದಿಗಿನ ಕೆ.ಎಸ್. ನರಸಿಂಹಸ್ವಾಮಿ, ಚೆನ್ನವೀರ ಕಣವಿ, ರಾಮಚಂದ್ರ ಶರ್ಮ ಮತ್ತು ಕೆಲ ಮಟ್ಟಿಗೆ ಚಿತ್ತಾಲ ಮತ್ತು ಮಣೇಕರ್. (ಈ ಅವಧಿಯಲ್ಲಿಯೇ ಕೆಲವು ಉತ್ತಮ ಸಾಲುಗಳನ್ನು ಬರೆದ 'ವೇಚಾವರ, ಯರ್ಮುಂಜ ಮತ್ತು ಕೆ. ರಾಮಚಂದ್ರರನ್ನು ನೆನಪಿಡಿ.) ನಂತರದ ತಲೆಮಾರಿನಲ್ಲಿ ಕಂಬಾರ, ಪಟ್ಟಣಶೆಟ್ಟಿ, ತಿರುಮಲೇಶ್ ಮತ್ತು ಲಂಕೇಶ್. ಇದೀಗ ನನ್ನೊಂದಿಗೆ ಬರೆಯುತ್ತಿರುವ ನನ್ನ ತಲೆಮಾರಿನ ಕವಿಗಳಲ್ಲಿ ಸುಬ್ರಾಯ ಚೊಕ್ಕಾಡಿ, ಶ್ರೀಕೃಷ್ಣ ಆಲನಹಳ್ಳಿ, ಜಯಸುದರ್ಶನ ಮತ್ತು ಲಕ್ಷ್ಮಣರಾವ್, ಇವರೆಲ್ಲರೂ ಈವರೆಗೆ ಒಂದಿಲ್ಲೊಂದು ಹಂತದಲ್ಲಿ ಉತ್ತಮ ಕಾವ್ಯ ನೀಡಿದ್ದಾರೆ ಅಂದುಕೊಂಡಿದ್ದೇನೆ.

ಪ್ರಶ್ನೆ: ಮತ್ತೆ ನೀವು ಎಲ್ಲಿ?

ಉತ್ತರ: ನಾನು ನಿಮ್ಮೆದುರಿಗೇ ಕೂತಿದ್ದೇನೆ.

ಪ್ರಶ್ನೆ: ಅಲ್ರೀ, ನಿಮ್ಮ ಒಂದು ಸಂಕಲನ, 'ಬೊಗಸೆ ತುಂಬಿದ ಬದುಕು ಕೇವಲ ಕೇವಲ ಐದು ತಿಂಗಳಲ್ಲಿ ಮೂರು ಮುದ್ರಣ ಕಂಡು ಕನ್ನಡ ಸಾಹಿತ್ಯದಲ್ಲಿಯೇ ಒಂದು ಹೊಸ ವಿಕ್ರಮ ಸ್ಥಾಪಿಸಿಲ್ಲವೆ? ಅದಕ್ಕೆ ೧೯೭೨ರ ಕ.ವಿ.ವ.ಸಂ.ದ ಪಾರಿತೋಷಕ ಸಿಕ್ಕಿಲ್ಲವೆ? ನಿಮ್ಮ ಆ 'ನಾಲ್ಕು ಹಿಡಿ ಬೆಂಕಿ'...

ಉತ್ತರ: ಡೋಂಟ್ ವೇಸ್ಟ್ ಟೈಮ್. ನೀವು ಹೇಳಿದ ಮಾಹಿತಿ ನನಗೂ ಗೊತ್ತಿದೆ. ಈಗ ಮುಂದಿನ ಪ್ರಶ್ನೆ ಕೇಳಿ.

ಪ್ರಶ್ನೆ: ಈಗ ನಮ್ಮಲ್ಲಿ ಅಡಿಗರೀಚೆಯ ಮೂರು ತಲೆಮಾರುಗಳು ಬರೆಯುತ್ತಿವೆ ಎಂದಿರಿ. ಆದರೆ ಎರಡನ್ನೇ ಕುರಿತು ಹೇಳಿದಿರಿ. ಮೂರನೆಯದು ?

ಉತ್ತರ: ಇದೆ. ಆದರೆ ಈ ತಲೆಮಾರಿನ ಕವಿಗಳು ತಮ್ಮ ಮೊದಲ ಸಂಗ್ರಹಗಳಿಂದ ಇದೀಗ ಮುಖ ಕಾಣಿಸಿಕೊಳ್ಳುತ್ತಲಿದ್ದಾರೆ. ಆದ್ದರಿಂದ ಇವರನ್ನು ಕುರಿತು ಈಗಲೇ ಏನನ್ನೂ ಹೇಳುವದು ಕಷ್ಟದ

ಕೆಲಸ. ಆದರೂ ನಾನು ಈ ವರೆಗೆ ಭರವಸೆ ತಾಳಿದ ಕೆಲವರನ್ನು ಕುರಿತು ಹೇಳುತ್ತೇನೆ. ಅವರು, 'ಹೊಲೆ ಮಾದಿಗರ ಹಾಡಿ'ನ ಸಿದ್ಧಲಿಂಗಯ್ಯ, 'ರಂಗದಿಂದೊಷ್ಟು ದೂರ'ದ ಜಯಂತ ಕಾಯ್ಕಿಣಿ 'ಕಲ್ಲರಳಿ ಹೂವಾಗಿ'ಯ ಜಗದೀಶ ಮಂಗಳೂರ ಮಠ ಮತ್ತು 'ಪದಗಳ ಪರಿಧಿಯಲ್ಲಿ' ಸಂಗ್ರಹದ ಆನಂದ ಝುಂಜರವಾಡ ನೀವು ಕೇಳಿರಲೂಬಹುದು. ಮೊದಲಿನ ಇಬ್ಬರಿಗೆ ಈಗಾಗಲೇ ನಾಕಷ್ಟು–ಚೆನ್ನಿಗೆ ಭಾರವಾಗುವಷ್ಟು ಪ್ರಚಾರ ಸಿಕ್ಕಿದೆ. ಅದಕೆ ಪ್ರತಿಕ್ರಿಯೆ ಎಂಬಂತೆ ಉಳಿದಿಬ್ಬರಿಗೆ ದಿವ್ಯ ನಿರ್ಲಕ್ಷವೂ ಸಿಕ್ಕಿದೆ. ಆದ್ದರಿಂದ ಈ ಉಳಿದಿಬ್ಬರನ್ನು ಕುರಿತು ಎರಡು ಮಾತು ಹೇಳುತ್ತೇನೆ. ಈ ಇಬ್ಬರಿಗೂ ದಟ್ಟವಾದ ಜೀವನಾನುಭವವಿದೆ. ಇಬ್ಬರಲ್ಲಿಯೂ ಕಾವ್ಯಕ್ಕೆ ಆತ್ಮಗತ್ಯವಾದ ಪ್ರಾಮಾಣಿಕ ಪ್ರಯತ್ನ, ತಾಳ್ಮೆ, ಕಲಾತ್ಮಕ ಪ್ರಜ್ಞೆ, ಚಿಂತನಶೀಲತೆ, ಮತ್ತು ಮುಖ್ಯವಾಗಿ ಪ್ರಶಂಸೆಗೆ ಕುರುಡುತನ ಮತ್ತು ಪ್ರಚಾರಕ್ಕೆ ಕಿವುಡುತನಗಳಿವೆ. ತಾವು ಏನು ಎನ್ನುವದನ್ನು ಜಗದೀಶರು 'ಕಲ್ಲರಳಿ ಹೂವಾಗಿ' ಸಂಕಲನದಲ್ಲಿ ತೋರಿಸಿಕೊಟ್ಟಿದ್ದಾರೆ. ಕನ್ನಡದಲ್ಲಿ ಇಷ್ಟೊಂದು ಪ್ರಭಾವಶಾಲೀ 'ಮೊದಲ' ಸಂಕಲನಗಳು ತೀರ ಕಡಿಮೆ. 'ಪದಗಳ ಪರಿಧಿಯಲ್ಲಿ' ನಂತರ ಬರೆದ ಬಿಡಿಗವನಗಳಲ್ಲಿ ಕೂಡ ಆನಂದ ಝುಂಜರವಾಡ ತುಂಬ ಗಮನಾರ್ಹ ಬೆಳವಣಿಗೆ ತೋರಿದ್ದಾರೆ. ಇವರಿಬ್ಬರ ಮುಂದಿನ ಕೊಡುಗೆಗಳನ್ನು ನಾವು ಕುತೂಹಲದಿಂದ ಕಾಯಬೇಕಷ್ಟೇ.

ಪ್ರಶ್ನೆ: ಆದರೆ ಇತ್ತೀಚೆಗೆ ತಮ್ಮ 'ಮೊದಲ ಸಂಕಲನಗಳನ್ನು ತಂದ ಹೊಸ ತಲೆಮಾರಿನ ಕೆಲವರ ಹೆಸರುಗಳನ್ನು ನೀವು ಹೇಳಲಿಲ್ಲ. ಎಂದರೆ ಮತ್ತೆ ಮತ್ತೆ ಕಾಣಿಸುವ ಹೆಸರುಗಳು.... ಈ ಹೆಸರುಗಳಂತೂ ಅದೇ ಅದೇ ಒಂದೆರಡು ಪತ್ರಿಕೆಗಳಲ್ಲಿ ಕಾಣಿಸುತ್ತಲೇ ಇರುತ್ತವಲ್ಲ? ಇವರು ಉತ್ತಮ ಕವಿಗಳು ಹೇಗಲ್ಲ?

ಉತ್ತರ: ನೋಡಿ: ಪತ್ರಿಕೆಗಳಲ್ಲಿ ಸಂಪಾದಕನ ಹೆಸರು ದಿನಾಲು ಕಾಣಿಸುತ್ತದೆ. ಹಾಗೆಂದು ಆತನಿಗೆ ತಿಲಕವಿಟ್ಟು, ಆರತಿ ಎತ್ತಿ 'ಕಾವ್ಯರ್ಷಿ' ಬಿರುದನ್ನು ದಯಪಾಲಿಸಲಾಗುವದಿಲ್ಲ. ಒಳ್ಳೆಯ ಕವಿತೆಯನ್ನು ಬರೆಯುವದೇ ಬೇರೆ. ಬರೆದುದ್ದನ್ನೆಲ್ಲ 'ಕಾವ್ಯ'ದ ಕಾಲಂಗಳಲ್ಲಿ ಪ್ರಕಟಿಸಿಕೊಳ್ಳುವದೇ ಬೇರೆ.

ಪ್ರಶ್ನೆ: ಬರೇ ಕಾಲಂಗಳಲ್ಲಿ ಅಲ್ಲೀ. ಈ ಹೆಸರುಗಳು ಎಲ್ಲ ಜಾಹಿರಾತು ಕವಿಸಮ್ಮೇಲನಗಳಲ್ಲಿ, ಗೋಷ್ಠಿಗಳಲ್ಲಿ, ಬಳಗಗಳಲ್ಲಿ, ಬಾನುಲಿಯಲ್ಲಿ...

ಉತ್ತರ: ತಡೆಯಿರಿ. ಸುಮ್ಮನಿದ್ದರೆ ನಿಮ್ಮ ಪಟ್ಟಿ ಬಾನುಲಿಯಿಂದ ಬಚ್ಚಲಿಗೂ ಹರಿದೀತು. ಆದ್ದರಿಂದ ವಿವರಿಸುತ್ತೇನೆ. ಸಾಹಿತ್ಯದ ಯಾವುದೇ ಸಾಧನೆ ಪರಿಣತಿಗಾಗಿ ದೊಡ್ಡ ಬೆಲೆಯನ್ನು ಕೇಳುತ್ತದೆ. ಇದು ನಾವು ಸದಾ ಮರೆಯುವ ಅಂಶ. ಇದಕ್ಕಾಗಿ ಮುಖ್ಯ ತ್ಯಾಗ ಬೇಕು, ಅನೇಕ ಪ್ರಲೋಭನೆಗಳನ್ನು, ದರಿದ್ರ ದೌಲತ್ತುಗಳನ್ನು, ಅಗ್ಗದ ಮುಖಸ್ತುತಿಗಳನ್ನು, ಪತ್ರಿಕೆಯ ಪ್ರಚಾರವನ್ನು ಧಿಃಕ್ಕರಿಸುವ ಎದೆಗಾರಿಕೆ ಬೇಕು. ಇದನ್ನು ಬದಿಯಲ್ಲಿಟ್ಟು ನೋಡಿದಾಗ, ನೀವು ಹೆಸರಿಸಿದ ಇತ್ತೀಚಿನ ನಮ್ಮ ಯುವ ಲೇಖಕರು ನನಗೊಂದು ವಿಚಿತ್ರ ದೃಶ್ಯವಾಗುತ್ತಾರೆ. ಹೇಗೋ ಕೆಲವು ಕವನಗಳನ್ನು ಹೊಸೆಯುವದು, ಖಾಲೀ ಕಾಲಂಗಳಲ್ಲಿ ನೊಣ ಹೊಡೆಯುವ ಎಲ್ಲ ಪತ್ರಿಕೆಗಳಲ್ಲಿ ಕೊರೆಯುವದು, ಆ ಕವನಗಳ ಅರ್ಥಾರ್ಥತೆ ಕುರಿತು ತಾವು ತಾವೇ ವಿಮರ್ಶಾದಿ ಬರೆದು ಕಚ್ಚಾಡುವ ನಾಟಕವಾಡುವದು, ಇವರಲ್ಲಿ ಹೆಚ್ಚಿನಂಶ ಸಾಹಿತ್ಯದ ವಿದ್ಯಾರ್ಥಿಗಳು.

ಪ್ರಶ್ನೆ: ಇತ್ತೀಚೆಗೆ ಕಾವ್ಯದಲ್ಲಿ ಹೆಚ್ಚು ಕೇಳಿ ಬರುತ್ತಿರುವ ಜಾನಪದ ಕಥೆ–ಭಾಷೆ–ಪ್ರಜ್ಞೆ ಇತ್ಯಾದಿಗಳನ್ನು ಕುರಿತು ನಿಮ್ಮ ಅಭಿಪ್ರಾಯ ?

ಉತ್ತರ: ಹೌದು. ಈಗೀಗ ಜಾನಪದದಲ್ಲಿ, ಆದು ಮಾತಿನಲ್ಲಿ ಉಲಿಯುವ ಕೋಗಿಲೆಗಳು ಈ ಗೊಂಡಾರಣ್ಯದಲ್ಲಿ ವಿಪರೀತವಾಗಿವೆ. ಡಪ್ಪಿ ಹಾಡು, ಪಪ್ಪಿ ಹಾಡು ಎಂಬ ಹೇಷಾರವಗಳಿಂದ ಸಾಹಿತ್ಯದ ತುಂಬೆಲ್ಲ ಕೇಸರು ದನಿಯ ಅಪಲಾಪಗಳು–ಗೆಜ್ಜೆ ಮೇಳಗಳ ಗಾರ್ದಭ ಕುಣಿತಗಳು. ನಮ್ಮ ಅನಿಸಿಕೆಗಳನ್ನು ಹೆಚ್ಚು ತೀವ್ರವಾಗಿ ವಾಚಕನಿಗೆ ತಟ್ಟಿಸಲು ಈ ಮಾಧ್ಯಮ ಸಾಧ್ಯವೇ ಎಂಬ ಪರಿಜ್ಞಾನಕ್ಕಿಂತ ಏನೋ ತಾಜಾತನವನ್ನು ಬಡಿಸುತ್ತಿರುವ ಭ್ರಮೆಯಲ್ಲಿ ಬೆನ್ನು ತಟ್ಟಿಸಿಕೊಳ್ಳುವ ಸಂಭ್ರಮ ಇಲ್ಲಿ ವಿಜೃಂಭಿಸುತ್ತದೆ. ವಿಚಾರ ಮಾಡಿ: ಒಂದು ಪ್ರದೇಶದ ಒಂದು ಕಂತೆ ಜಾನಪದ ಕಥೆಗಳಿಂದ ಕೆಲವು ರಂಜಕ ಕಥೆಗಳನ್ನು, ಆಕರ್ಷಕ ಭಾಷೆಯನ್ನು ಒಂದು ಹಾಳೆಯ ಮೇಲೆ ವಾಂತಿ ಮಾಡಿಕೊಂಡ ಮಾತ್ರಕ್ಕೆ ಅದು ಸುರುವಿದವನ ಕಾವ್ಯವಾಗಲಾರದು. ಒಂದು ತೀರ ಕೆಟ್ಟದಾದ, ಅಸ್ತವ್ಯಸ್ತ ಜಾನಪದ 'ಸಂಗ್ರಹ'ವಾಗಬಹುದಷ್ಟೇ ಅನುಕರಿತವಾಗಿದ್ದಲ್ಲಿ. ಸೂಕ್ಷ್ಮ 'ಕಳ್ಳತನ'ವೂ ಆಗಬಹುದಷ್ಟೇ.

ಖರೇ ಎಂದರೆ ಜಾನಪದ ಭಾಷೆಯನ್ನು ಈವರೆಗೆ ಕನ್ನಡದಲ್ಲಿ ಯಾರೂ ಸಮರ್ಥವಾಗಿ ದುಡಿಸಿಕೊಂಡಿಲ್ಲ. ಬೇಂದ್ರೆ ಕೂಡ. ಕಾರಣ ಸ್ಪಷ್ಟ. ಒಬ್ಬ ವ್ಯಕ್ತಿಯ ಸ್ವೀಕೃತ ಯಾ ನಿರಾಕೃತ ಮೌಲ್ಯಗಳು ಅವು ನಿರ್ಮಿಸುವ ವ್ಯಕ್ತಿತ್ವ, ಅವನಿದ್ದ ಪರಿಸರ, ಇವೆಲ್ಲವೂ ಈ ಯುವ ಅನುಭವ, ಮತ್ತು ಇದೆಲ್ಲವನ್ನೂ ಹೆಚ್ಚು ತೀವ್ರವಾಗಿ ದಟ್ಟವಾಗಿ ತಾಗಿಸುವ ಅಭಿವ್ಯಕ್ತಿಯ ಸೃಜನಕ್ಕೆ ಎಂಥ ಭಾಷೆ ಸಾಧ್ಯ ಎಂಬ ಪರಿಜ್ಞಾನಕ್ಕೆ ನಮ್ಮ ಹೆಚ್ಚಿನಂಶ ಲೇಖಕರು ತೀರ ದೂರ. ಒಂದು ಅನುಭವದ ಪುನರ್ಮಂಡನೆಗಾಗಿ ಎಂದರೆ ಪುನರ್ನಿರ್ಮಾಣಕ್ಕಾಗಿ, ತನ್ನ ಸಮಸ್ತ ಹೊಳಪಿನಿಂದ ಅದು ಥಳಥಳಿಸುವಂತೆ ಮಾಡುವದಕ್ಕಾಗಿ ಅಪಾರ ಕೌಶಲ, ದುಡಿತ, ಕಲ್ಪನಾಶಕ್ತಿ ತುಂಬ ಅಗತ್ಯ. ಅದರಲ್ಲೂ ನಮ್ಮ ಇಂದಿನ ಸಂಕೀರ್ಣ ಬದುಕನ್ನು: ಕೆಲ ವಿಶಿಷ್ಟ ಮೌಲ್ಯಗಳನ್ನು, ಅನಿಸಿಕೆಗಳನ್ನು ಮಾತ್ರವೇ ಅಭಿವ್ಯಕ್ತಿಸುವದಕ್ಕಾಗಿ ಸಿದ್ಧಗೊಂಡ ಜಾನಪದ ಭಾಷೆಯಲ್ಲಿ ಒಗ್ಗಿಸುವದಂತೂ ಅತ್ಯಂತ ಪ್ರಯಾಸದ, ಅಗಾಧ ಕೌಶಲದ ಕಾರ್ಯ. ಇಂಥ ಕಾರ್ಯಕ್ಕೆ ಎದೆಗೊಡಲು 'ನೀರಿ'ರುವ ಯಾವನಿಗೂ ಅಪಾರ ಅವಕಾಶಗಳು ಇಲ್ಲಿ ಯಾವತ್ತೂ ಕಾದಿವೆ. ಆದರೆ ಇದನ್ನು ಸೂರೆಗೊಳ್ಳುವ ಯಾವುದೇ ಹಮ್ಮೀರ ಮಾತ್ರ ಈ ವರೆ ಬಂದಿಲ್ಲ.

## ಬ್ಯಾಂಕರ್ ಮತ್ತು ಛತ್ರಿ

ಮಾರ್ಕ್ ಟ್ವಾಯಿನ್ ಒಮ್ಮೆ,

"ಬ್ಯಾಂಕರ್ ಎಂಬವನು ಸೂರ್ಯ ಪ್ರಕಾಶಿಸುತ್ತಿರುವ ಛತ್ರಿ ಎರವಲು ಕೊಟ್ಟ, ಮಳೆ ಶುರುವಾದ ತರುಣದಲ್ಲೇ ಅದನ್ನು ವಾಪಸ್ಸು ಕೇಳುವ ವ್ಯಕ್ತಿ" ಎಂದು ಹೇಳಿದರು.

ಎಸ್ ವಿಶ ನಾಥ

# ಸತ್ತು ಬದುಕಿದವಳು

ಗೋವಿಂದಮೂರ್ತಿ ದೇಸಾಯಿ

ಹಿರಿಯ ಸೊಸೆ ಸರಸ್ವತಿ ಸತ್ತು ದೆವ್ವವಾಗಿ ಸವತಿ ವೇದವತಿಯನ್ನು ಕಾಡಿ ಕೃಶಳನ್ನಾಗಿಸುತ್ತಿದ್ದಾಳೆಂದೇ ಗಂಗಾಬಾಯಿಯವರು ಭಾವಿಸಿದರು. ಅವರಿವರು ಹಡಗಲಿಯ ಡಾ|| ಸಾರಾ ಅವರಲ್ಲಿಗೆ ವೇದವತಿಯನ್ನು ಕರಕೊಂಡು ಹೋಗಲು ಹೇಳಿದಾಗ ಗಂಗಾಬಾಯಿಯು ಮಗನೊಂದಿಗೆ ಸೊಸೆಯನ್ನು ಕಳಿಸಿದರು. ಸಾಯುವಂತಾಗಿದ್ದ ವೇದವತಿ ಬದುಕಿಬಂದರೂ ಸತ್ತಂತೆಯೇ ಇದ್ದ ಕಾರಣ ಡಾ|| ಸಾರಾಗ ಗೊತ್ತಾಯಿತು.







ಆಶ್ವಿನ ಶುಕ್ಲಪಕ್ಷದ ಮಳೆ ಬಿದಗಳ್ಳಿಯಲ್ಲಿ ಸಂಭ್ರಮದ್ರೋಣವಾಗಿ ಸುರಿಯುತ್ತಿತ್ತು. ಮೈತುಂಬಿಕೊಂಡು ಹರಿಯುತ್ತಿದ್ದ ತುಂಗಭದ್ರೆಯ ರೌದ್ರರಮಣೀಯತೆ ಕೆಲವರಿಗೆ ರೋಮಾಂಚನಗೊಳ್ಳುವಂತೆ ಮಾಡಿದರೆ, ಕೆಲವರಿಗೆ ಅವಳೆಲ್ಲಿ ತಮ್ಮ ಮನೆಗಳಲ್ಲಿ ನುಗ್ಗುವಳೋ ಎಂದು ವಿಹ್ವಲಗೊಳ್ಳುವಂತೆ ಮಾಡಿತ್ತು. ಅವಳ ಅಲ್ಲಾಟದಿಂದ ಬಿದರಳ್ಳಿಯ [illegible] ಸ್ಥೈರ್ಯವೇ ಉಡುಗ ಹತ್ತಿತ್ತು. ತ್ರಸ್ತರಾದ ಹೆಂವಾರು ಹಳ್ಳಿಗರು ಮನೆಗಳಲ್ಲಿ ಇಂದು ಒಲೆಗೆ ಬೆಂಕಿಯನ್ನೇ ಇಟ್ಟಿರಲಿಲ್ಲ. ಜಡೆಗಟ್ಟಿ ಬರುತ್ತಿದ್ದ ಮಳೆ ನಿಲ್ಲಲು ನಿಂತಿದ್ದಾಗೂ ನದಿ ಏರುತ್ತಲೇ ಇತ್ತು. ವೇಣುಗೋಪಾಲ [illegible] ರಿಯ ಮೋಹನಾದಳ ಮೇಲೆಯೂ ತುಂಗಭದ್ರೆ [illegible]

ಇವೆ. ನ ಊರನ್ನು ಪ್ರವೇಶಿಸುವವಳೇನೋ ಎಂದು ಜನರು ಪಿತೃಜೀವಗಳ ರಕ್ಷಣೆಗಾಗಿ ಅತ್ತಿತ್ತ ಅಲೆದಾಡ ಹತ್ತಿದರು. ಆದರೆ ಬಾಹ್ಯ ಪ್ರಪಂಚದಲ್ಲಿ ನಡೆಯುತ್ತಿದ್ದುದರ ಪ್ರಜ್ಞೆಯಿಲ್ಲದ ಲಕ್ಷ್ಮೀಕಾಂತಾಚಾರ್ಯರು ಮಾತ್ರ ನಿರಾತಂಕವಾಗಿ ನಿತ್ಯದ ಸಮಯಕ್ಕೆ ದೇವರ ಘಂಟೆಯನ್ನು ಬಾರಿಸಹತ್ತಿದ್ದರು. ಶಾಲಿಗ್ರಾಮ-ಸುದರ್ಶನ- ಚಕ್ರಾಂಕಿತ- ವಿಷ್ಣುಪಾದ- ಕೃಷ್ಣಪ್ರತಿಮೆಗಳನ್ನು ಅಭಿಷೇಕದ ಸ್ವರ್ಣ ಪಾತ್ರೆಯಲ್ಲಿಟ್ಟು 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರ ಮಂತ್ರವನ್ನು ಪಠಿಸುತ್ತ ಅಭಿಮಂತ್ರಿಸಹತ್ತಿದ್ದರು.

ನೈವೇದ್ಯಕ್ಕೆ ಸಿದ್ಧತೆಗಳನ್ನು ಮಾಡುತ್ತಿದ್ದ ಆಚಾರ್ಯರ ಧರ್ಮಪತ್ನಿ ಗಂಗಾಬಾಯಿಯವರು ಅರ್ಧ ತಾಸಿನ ಹಿಂದೆ ನದಿಗೆ ನೀರು ತರಲು ಹೋದ ಸೊಸೆ ಇನ್ನೂ ಏಕೆ ಬರಲಿಲ್ಲವೆಂದು ತಮ್ಮಲ್ಲಿಯೇ ಗೊಣಗಿಕೊಳ್ಳುತ್ತಿದ್ದರು. ಆಚಾರ್ಯರು ನೈವೇದ್ಯ, ವೈಶ್ವದೇವ, ಬಲಿಹರಣಗಳನ್ನು ಮಾಡಿ ದೇವರ ಸಂಪುಷ್ಪಗಳನ್ನು ಭುಜಂಗಿಸಹತ್ತಿದರೂ ಸೊಸೆ ಸರಸ್ವತಿ ಬರದ್ದಕ್ಕೆ ಗಂಗಾಬಾಯಿಯವರು ಕೆಂಡಕೆಂಡವಾದರು. "ಸುಡಗಾಡ ನುಂಗ್ಲಿ ಅದ್ಯಾವಾಗ ನೀರ ತಗೊಂಡ ಬರ್ತದೋ ಏನೋ... ನೀವು ಊಟಕ ಕೂಡ್ರಿ" ಎಂದು, ಗಂಡನಿಗೆ ಎಲೆ ಹಾಕಿ ಊಟಕೆ ಬಡಿಸಿದರು ಗಂಗಾಬಾಯಿ.

ಅಷ್ಟರಲ್ಲಿ ಆಚಾರ್ಯರ ಕನಿಷ್ಠ ಪುತ್ರನಾದ ಕೇಶವನು ಧಾವಿಸುತ್ತ ಬಂದು "ಅಪ್ಪಾ. ಅತಿಗಿ ನದ್ಯಾಗ ಬಿದ್ದಾಳಂತ..." ಎಂದು, ಭಯಭೀತನಾಗಿ ಹೇಳಹತ್ತಿದನು

"ಸತ್ತಾಳಂತೊ... ಬದಕ್ಯಾಳಂತೋ..." ಎಂದು, ಚಿತ್ರಾಹುತಿಯನ್ನಿಡುತ್ತ ನೆರೆಮನೆಯವರ ಸೊಸೆ ಸತ್ತಾಗ ಕೇಳುವಂತೆ ಆಚಾರ್ಯರು ಮಗನನ್ನು ಕೇಳಿದರು.

"ನನಗೇನು ಗೊತ್ತಪ... ಹಿಂಗs ಅಂತ ಊರಾಗೆಲ್ಲಾ ಮಾತಾಡಿಕೊಳ್ಳಲಿಕ್ಕೆ ಹತ್ತ್ಯಾರ. ವೇಣುಗೋಪಾಲನ ಗುಡಿ ಮುಂದ ಜನಾಜಾತ್ರಿ ಸೇರೇದ..." ಎಂದು ಪ್ರಾಮಾಣಿಕವಾಗಿ ಕೇಶವನು ತಾನು ಕೇಳಿದ್ದನ್ನು ಮತ್ತು ನೋಡಿದ್ದನ್ನು ಹೇಳಿದನು.

ಕೇಶಾ, ಭಡಾನ ಹೋಗಿ ಏನದ ಸುದ್ದಿ ಕೇಳಿಕೊಂಡ ಬಾ. ಹಂಗs ಜಯತೀರ್ಥ ಇದ್ದರ ನಾ ಕರದೀನಿ ಅಂತ ಹೇಳು" ಎಂದು, ಆಚಾರ್ಯರು ಮಗನಿಗೆ ಕಾರ್ಯಭಾರವನ್ನು ಹೊರಿಸಿ ಅನ್ನದಲ್ಲಿ ತುಪ್ಪ ಮತ್ತು ತೊವ್ವೆಗಳನ್ನು ಕಲೆಸಹತ್ತಿದರು

"ಕೆಟ್ಟ ಸುದ್ದಿ ಬರೋದ್ರಾಗ ಅಷ್ಟು ಲಗೂನ ಊಟಾ ಮಾಡಿ ಬಿಡ್ರಿ: ನಾಳೆ ಏಕಾದಶಿ ಬ್ಯಾರೇ ಅದ" ಎಂದು ಗಂಗಾಬಾಯಿಯವರು ಬಡಿಸಹತ್ತಿದರು.

ಕೇಶವನು ಮರಳಿ ಬಂದು "ಅಪಾ... ಅತಿಗಿ ಇದ್ದಾಳೋ ಸತ್ತಾಳೋ ಅನ್ನೋದು ಇನ್ನೂ ಗೊತ್ತಾಗಿಲ್ಲ. ವೇಣುಗೋಪಾಲನ ಗುಡಿ ಕಟ್ಟೀಮ್ಯಾಲೆ ನಮ್ಮ ಕೊಡಾ ಮತ್ತು ತಂಬಿಗಿ ಡಬ್ಬ ಹಾಕಿದ್ದು ಹಂಗs ಅವ. ಆದರ ಯಾರೋ ಒಬ್ಬ ಅಂಬೇರವಾ ಒಬ್ಬ ಹೆಣ ಮಗಳು ನದ್ಯಾಗ ಹಾರಿಕೊಂಡದ್ದನ್ನು ನೋಡಿ ಚೀರಿಕೊಂಡನಂತ. ಗುಡಿ ಕೃಷ್ಣಾಚಾರು, ಶಿವನಗೌಡರು, ಶ್ಯಾನುಭೋಗರು ಅತಿಗಿನ್ನ ಹುಡಕಾಡಸಲಿಕ್ಕೆ ಹತ್ಯಾರ. ನಿನ್ನ ಕರಕೊಂಡ ಬಾ ಅಂತ ಹೇಳ್ಯಾರ. ಲಗೂನ ಊಟಾ ಮಾಡಿ ಬಾ ಅಪ್ಪ..." ಎಂದು ಕೇಶವನು ಗದ್ಗದವಾಗಿ ಹೇಳಹತ್ತಿದನು.

"ಊಟಾ ಮಾಡಿ ಬರತಾರಂತ ಹೇಳಹೋಗು. ಹಂಗs ಆ ಕೊಡಾ ಮತ್ತೂ ತಂಬಿಗೀನ ತಗೊಂಡು ಬಂದಬಿಡಪಾ. ಯಾರಾದರೂ ತಗೊಂಡು ಹೋದಾರು" ಎಂದು ಗಂಗಾಬಾಯಿಯವರು ತಾವೂ ಒಂದು ಎಲೆಯನ್ನು ಹಾಕಿಕೊಂಡು ಊಟಕ್ಕೆ ಕುಳಿತೇ ಬಿಟ್ಟರು. ಸೊಸೆ ಇದ್ದಾಳೋ ಅಥವಾ ಸತ್ತಾಳೋ ಎಂಬ ಪ್ರಶ್ನೆ ದಂಪತಿಗಳಿಬ್ಬರನ್ನೂ ಅಸ್ಥಿರರನ್ನಾಗಲಿ ಅಥವಾ ಔತ್ಸುಕ್ಯರನ್ನಾಗಲಿ ಮಾಡಲಿಲ್ಲ.

ನದಿಯ ದಂಡೆಯ ಮೇಲಿದ್ದ ವೇಣುಗೋಪಾಲ ಸ್ವಾಮಿಯ ಕಟ್ಟೆಯ ಮೇಲೆ ಬಿದರಳ್ಳಿಗೆ ಬಿದರಳ್ಳಿಯೇ ನೆರೆದಿತ್ತು. ಕೂಡಿದವರಲ್ಲಿ "ಸರಸ್ವತಿ ಅಂದ್ರ ಸಾಕ್ಷಾತ್ ರತಿ. ಇದ್ದ್ಹಾಂಗ್ಹ ಇದ್ದಳವಾ. ನಾಳಿನ ಕಾರ್ತಿಕ ಹುಣ್ಣಿವೀಗೆ ಹದನಾರ ತುಂಬತಾವ ಅಂತ್ರವಾ. ಅತ್ತಿ, ಮಾವಾ, ಗಂಡ ಕೂಡೇ ಆಕಿನ್ನ ನದಿಗೆ ಕೆಡವಿದಾಂಗ್ಹಾತು. ಅತ್ತಿ ಮಾವಾ ಅನ್ನೋವರು ಆಕಿಗಷ್ಟರ ತ್ರಾಸಕೊಡಬೇಕು ಅಂತೀನಿ" ಎಂದು ಆಚಾರ್ಯರ ನೆರೆಮನೆಯ ಚಂಪಾಬಾಯಿಯವರು ಸರಸ್ವತಿಯ ಬಗ್ಗೆ ತಮಗಿದ್ದ ಸಹಾನುಭೂತಿಯನ್ನು ತೋರಿಸಿದರು.

"ಆ ಗೊಂಬಿಯಂಥಾ ಚಂದ ಹುಡುಗಿ ಸಿಗಬೇಕಾದರ ಈ ಜಯತೀರ್ಥ ಎಷ್ಟು ವರ್ಷ ತಪಸ್ಸು ಮಾಡಿದ್ದನೋ ಏನೋ. ಇಪ್ಪತ್ತ ವರ್ಷದ ಧಡವ ಆಗಿ ಹ್ಯಾಂಗ ನಿಂತಾನ ನೋಡ್ರಿ. ಹೆಂಡ್ತಿನ್ನ ಸಂಭಾಳಿಸಿಕೊಂಡು ಇರಲಿಕ್ಕೆ ಇವಗೇನ ಧಾಡಿ ಆಗಿತ್ತವಾ" ಎಂದು ಆಚಾರ್ಯರ ಎದುರು ಮನೆಯ ರಮಾಬಾಯಿಯವರು ತಮ್ಮವೆರಡು ಅಕ್ಕೀಕಾಳನ್ನು ಕೂಡಿಸಿದರು.

"ರಮಾಬಾಯಿಯವ್ರs...ಆ... ಜಯಾ... ಏನ... ಮಾಡತಾನ. ಆ ಗಂಗಾಬಾಯಿಯಂದ್ರ ಬ್ರಹ್ಮ ರಾಕ್ಷಸ ಇದ್ದ್ಹಾಂಗ್ಹ. ಆಕೀ ಬಾಯಿಗೆ ಯಾರ ಹತ್ತ್ಯಾರ್ರಿ. ಆಕಿ ಪರಮ ನೀಚ ಇದ್ದಾಳಂತ ಜಗತ್ತಿಗೆಲ್ಲಾ ಝಾಂಗಟಿ ಹೊಡೆದ ಹೋಗೇದ. ಮೊನ್ನೆ ನದ್ಯಾಗ ಭೆಟ್ಟಿ ಆದಾಗ ಸರಸ್ವತಿ. ಹೇಳಿ ಅತ್ತೇ ಅತ್ರವಾ. ಬದುಕಿರೋದಕಿಂತಾ ಸಾಯೋದs ಒಳ್ಳೇದು ಅಂತ ಅಂತಿದ್ದಳವಾ" ಎಂದು ತುಂಗಾಬಾಯಿಯವರು ಆಚಾರ್ಯರ ಮನೆಯಿಂದಲ್ಲಾ ತಮಗೆ ಗೊತ್ತಿದ್ದಷ್ಟು ಬೇರಾರಿಗೂ ಗೊತ್ತಿಲ್ಲವೆನ್ನುವಷ್ಟು ಅಧಿಕಾರಯುತವಾಗಿ ಹೇಳಹತ್ತಿದರು. ಮಾತನಾಡುತ್ತ ನಿಂತವರಲ್ಲಾ ಜರದ ಶಾಲನ್ನು ಹೊತ್ತುಕೊಂಡು, ಬೆಳ್ಳೀ ಬೆತ್ತದ ಕೋಲನ್ನು ಹಿಡಕೊಂಡು, ಕಿವಿಯಲ್ಲೊಂದು ತುಳಸಿಪತ್ರವನ್ನಿರಿಸಿಕೊಂಡು, ಭವ್ಯವಾಗಿ ಅಂಗಾರಾಕ್ಷತೆಗಳನ್ನು ಧರಿಸಿಕೊಂಡು, ಮೆಲ್ಲನೆ ಬರುತ್ತಿದ್ದ ಲಕ್ಷ್ಮೀಕಾಂತಾ-ಚಾರ್ಯರನ್ನು ನೋಡಿ ಸ್ತಬ್ಧರಾದರು.

ಗುಡಿ ಕೃಷ್ಣಾಚಾರರು ಮುಂದಕ್ಕೆ ಹೋಗಿ ಆಚಾರ್ಯರ ಕೈ ಹಿಡಿದು ಕರೆತಂದು "ತಮ್ಮಂತಹ ಸಾತ್ವಿಕರಿಗೆ ಹೀಂಗ ಆಗತದಂತ ನಮಗ ಸ್ವಪ್ನದಾಗ ಕೂಡಾ ಅನಿಸಿದ್ದಿಲ್ಲ ನೋಡ್ರಿ" ಎಂದು. ಸಾಂತ್ವನಗೊಳಿಸಲು ಪ್ರಯತ್ನಿಸಿದರು.

ಆಚಾರ್ಯರು ಗಂಭೀರ ವದನರಾಗಿ ತಮ್ಮ ಕೈಗೋಲಿನ ಮೇಲೆ ಎರಡೂ ಕೈಗಳನ್ನಿಟ್ಟು ನದಿಯತ್ತ ತದೇಕ ಚಿತ್ತದಿಂದ ನೋಡುತ್ತಿದ್ದರು. ಅವರ ಬಾಯಿಯಿಂದ ಯಾವ ಮುಕ್ತಾಫಲಗಳೂ ಹೊರಬರಲಿಲ್ಲ.

"ತಮ್ಮಂತಹ ಸತ್ಕರ್ಮ ನಿರತರ ಮತ್ತು ಶುಚಿರ್ಭೂತ ಜೀವನ ನಡೆಸುವ ಪುಣ್ಯಜೀವಿಗಳಿಗೆ ಇಂತಹ ಅಪಚಾರವಾಗಬಹುದೆಂದು ನಾವು ಸರ್ವಥಾ ಭಾವಿಸಿರಲಿಲ್ಲ" ಎಂದು ಬಿದರಳ್ಳಿಯ ಇನ್ನೊಬ್ಬ ಪ್ರಕಾಂಡ ಪಂಡಿತರಾದ ಭೂಯಾರ ಹರಿವಿಠ್ಠಲಾಚಾರ್ಯರು ತಮಗೂ ಆಚಾರ್ಯರಷ್ಟೇ ದುಃಖ ಸಂವೇದನೆಯಾಗಿದೆಯೆಂಬುದನ್ನು ವ್ಯಕ್ತಪಡಿಸಿದರು,

"ಹರಿರೇವ ಕರ್ತಾ... ಹರಿ ಚಿತ್ತ ! ನಮ್ಮೆಲ್ಲರ ಗರ್ಭಗಳಲ್ಲಿ ಅನ್ನೋದಕಗಳನ್ನಿತ್ತು ರಕ್ಷಿಸುವ ಜಗನ್ನಿಯಾಮಕ ಭಗವಂತನ ಇಚ್ಛೆಯಿಲ್ಲದೆ ಒಂದು ತೃಣ ಕೂಡ ಅಲುಗಾಡಲಾರದು. ಸರ್ವೋತ್ತಮನಾದ ಹರಿಯ ಮನಸ್ಸಿನಲ್ಲಿ ಏನಿತ್ತೋ ಅದಾಯಿತು. ಮನುಷ್ಯ ಮಾತ್ರರಾದ ನಾವು ವ್ಯಥಾ ಪ್ರಲಾಪಿಸಿ ಯಾವ ಪ್ರಯೋಜನವನ್ನು ಪಡೆಯಲಿದ್ದೇವೆ" ಎಂದು, ಆಚಾರ್ಯರು ತಮ್ಮ ತಾತ್ಪರ್ಯ ನಿರ್ಣಯವನ್ನು ಹೇಳಿ, ಮುಂದಿನ ಕಾರ್ಯ ನಡೆಯಲೆಂದು ಅಪ್ಪಣೆಯನ್ನು ಕೊಡಿಸಿದರು.

ಶಿವನಗೌಡರು ಕಳಿಸಿದ ವಾಲೀಕಾರರು ಮತ್ತು ಅಂಬಿಗರು ಬಂದು ತಾವು ಎಲ್ಲ ಕಡೆ ಹುಡುಕಿದರೂ ಎಲ್ಲಿಯೂ ಅವ್ವನವರ ಸುಳಿವು ಹತ್ತಲಿಲ್ಲವೆಂದು ವರದಿಯನ್ನು ಒಪ್ಪಿಸಿದರು. ತುಂಬಿದ ನದಿ ಶವವನ್ನು ದೂರಕ್ಕೆ ತೇಲಿಸಿಕೊಂಡು ಹೋಗಿರಬೇಕೆಂದು ಅನುಭವಿಕ ಕೆಲ ಅಂಬಿಗರು ಹೇಳಿದರು. ಅವರಲ್ಲಿ ಒಬ್ಬನಾದ ವೃದ್ಧ ಅಂಬಿಗನು "ಎಪ್ಪಾ ಯಾಡ್ ಮೂರ ತಾಸಿನ ಹಿಂದ ಒಬ್ಬ ಹುಡುಗಿ ಹಾರಿಕೊಂಡದನ್ನ ನಾ ನೋಡಿದೆನ್ರಿ. ನಾ ಗುಡಸಲ ಮುಂದ್ಯ ನಿಂತಿದ್ನಿರ್ರಿ. ಓಡಿ ಹೋಗಬೇಕಂದ್ರ ಟೊಂಕ ಹಿಡದೈತ್ರಿ. ನನ್ನ ಮಗನ್ನ ಕರೀ ಬೇಕಂದ್ರ ಅವಾ ಎಲ್ಲೊ ಹೋಗಿದ್ನರಿ". ಎಂದು ಪಂಚರ ಮುಂದೆ ಸಾಕ್ಷಿ ಹೇಳಿದನು.

ಬಿದರಳ್ಳಿಯ ಗೌಡರಾದ ಶಿವನಗೌಡರು, ಶ್ಯಾನುಭೋಗ ದೇವರಾಯ ಕುಲಕರ್ಣಿಯವರು, ಗುಡಿ ಕೃಷ್ಣಾಚಾರ್ಯರು, ಶೆಟ್ಟರ ಸಂಕಪ್ಪನವರು ಸೇರಿ ಪಂಚನಾಮೆಗೆ ಸಹಿ ಮಾಡಿದರು.

"ಮೌಜೆ ಬಿದರಳ್ಳಿ ಗ್ರಾಮದಲ್ಲಿ. ವೇದಶಾಸ್ತ್ರ ಸಂಪನ್ನರಾದ ಶ್ರೀ ಲಕ್ಷ್ಮೀಕಾಂತಾಚಾರ್ಯ ಶೇಷದಾಸಾಚಾರ್ಯ ಆಯಾಚಿತ್ ಅವರ ಸೊಸೆ ಮತ್ತು ಜಯತೀರ್ಥಾಚಾರ್ಯ ಲಕ್ಷ್ಮೀಕಾಂತಾಚಾರ್ಯ ಆಯಾಚಿತ್ ಅವರ ಲಗ್ನದ ಹೆಂಡತಿಯಾದ ಶ್ರೀಮತಿ ಸರಸ್ವತಿ ಬಾಯಿ, ವಯಸ್ಸು ಅಜಮಾಸ ೧೭ ಬಣ್ಣ ಕೆಂಪು, ಕಣ್ಣಿನ ಹತ್ತಿರ ಮಾಯ್ದ ಘಾಯದ ಕಲೆ, ಇಂದು ಮುಂಜಾನೆ ೯ ಘಂಟೆಯ ಸುಮಾರಿಗೆ ನೀರು ತರಲಿಕ್ಕೆಂದು ನದಿಗೆ ಹೋದಳು. ನದಿಯಲ್ಲಿ ಕಾಲು ಜಾರಿ ಬಿದ್ದಳು. ಅವಳೇ ಬಿದ್ದು ಸತ್ತಳೆಂಬುದಕ್ಕೆ ಅವಳು ಬಿಟ್ಟು ಹೋದ ಕೊಡಾ ಮತ್ತು ತಂಬಿಗೆಗಳೇ ಸಾಕ್ಷಿ. ನದಿ ತುಂಬಿದ್ದರಿಂದ ಶವವು ದೊರೆಯುವದು ಸಾಧ್ಯವಿಲ್ಲ. ಅವಳು ನದಿಯಲ್ಲಿ ಬಿದ್ದುದನ್ನು ನಿಂಗಪ್ಪ ತಾಯಿ ಹನುಮವ್ವ ಅಂಬಿಗೇರ. ಸಾಕೀನ ಬಿದರಳ್ಳಿ ನೋಡಿದ್ದಾನೆ. ಮೃತಳ ಮರಣಕ್ಕೆ ಬೇರಾರೂ ಹೊಣೆಗಾರರಲ್ಲ. ಅವಳ ಮಾವನಿಗಾಗಲಿ ಅಥವಾ ಗಂಡನಿಗಾಗಲಿ ಬೇರೆ ಯಾರ ಮೇಲೂ ಸಂಶಯವಿಲ್ಲ. ಈ ರೀತಿ ಪಂಚರು ನಿರ್ಣಯಕ್ಕೆ ಬಂದಿದ್ದಾರೆ." ಎಂದು ಶ್ಯಾನುಭೋಗರಾದ ದೇವರಾಯ ಶೇಷೋ ಕುಲಕರ್ಣಿಯವರು ಬರೆದು ಪಂಚರ ಹಸ್ತಾಕ್ಷರಗಳನ್ನು ಪಡೆದರು.

ಪಂಚರ ನಿರ್ಣಯವು ಸರಸ್ವತಿ ಸಾವಿನ ಮೇಲೆ ದೊಡ್ಡದೊಂದು ಬಂಡೆಗಲ್ಲನ್ನು ಎಳೆದು ಬಿರುಕನ್ನು ಮುಚ್ಚಿ ಬಿಟ್ಟಿತು. ಪಂಚನಾಮೆ ಆದಮೇಲೆ ಗುಡಿ ಕೃಷ್ಣಾಚಾರ್ಯರು ಮತ್ತು ಶ್ಯಾನುಭೋಗ ದೇವರಾಯರು ಆಚಾರ್ಯರನ್ನು ಮನೆಯವರೆಗೂ ಕಳಿಸಿ ಬಂದರು. ಆಚಾರ್ಯರು ಮನೆಗೆ ಬಂದೊಡನೆ ಗಂಗಾಬಾಯಿಯವರು ದೊಡ್ಡ ಧ್ವನಿ ತೆಗೆದು ಹಾಡಾಡಿಕೊಂಡು ಅಳಹತ್ತಿದರು. ಬಿದರಳ್ಳಿಯ ತುಂಬಾ ಅಂದು ಅದೇ ಮಾತು ಚರ್ವಿತಚರ್ವಣಗೊಳ್ಳುತ್ತಿತ್ತು.

ಆಚಾರ್ಯರ ಪ್ರಕಾಂಡ ಪಾಂಡಿತ್ಯ ಮತ್ತು ಶ್ರೀಮಂತಿಕೆಯ ದರ್ಪದ ಪ್ರಸಾದವಕ್ಕೊಳಗಾದ ಬಿದರಳ್ಳಿಯ ಕೆಲ ಪ್ರತಿಷ್ಠಿತರು ಆಚಾರ್ಯರನ್ನು ದೇವಮಾನುಷ್ಯರ ಸಾಲಿನಲ್ಲಿ ನಿಲ್ಲಿಸುತ್ತಿದ್ದರು. ಅಂತಲೇ ಅವರ ಸೊಸೆಯ ಸಾವಿನ ವಿಷಯವು ಅವರಿಗೆ ಒಂದು ಗೌಣ ವಿಷಯವಾಗಿ ಪರಿಣಮಿಸಿತು. ಸರಸ್ವತಿಯು ಆತ್ಮಹತ್ಯೆಯನ್ನು ಮಾಡಿಕೊಂಡು ಸತ್ತಿರಬೇಕೆಂದು ಬಿದರಳ್ಳಿಯಲ್ಲಿ ಯಾರಿಗೂ ಸಂಶಯವು ಬರಲಿಲ್ಲ. ಸಂಶಯ ಬಂದವರು ತಮಗೇಕೆ ಆದರ ಗೊಡವೆಯೆಂದು ಸುಮ್ಮನಾಗಿ ಬಿಟ್ಟರು.

ಜಯತೀರ್ಥನು ಸರಸ್ವತಿಯ ಶ್ರಾದ್ಧ ಮಾಡಿದ ಮೇಲಂತೂ ಸರಸ್ವತಿಯ ಸ್ಮೃತಿ ಬಿದರಳ್ಳಿಯಿಂದ ಹಾರಿ ಹೋಯಿತು. "ಪಾಪ, ಎಳೆಯ ಕೂಸಿಗೆ ಹೆಂಡತಿಯ ಉತ್ತರಕ್ರಿಯೆ ಮಾಡುವ ದುರ್ಧರ ಪ್ರಸಂಗ ಬಂತು ನೋಡ್ರಿ..." ಎಂದೂ, ಮಗನಿಗಾದ ವ್ಯಥೆಗೆ ಗಂಗಾಬಾಯರು ಎರಡು ಕಣ್ಣೀರುಗಳನ್ನು ಸುರಿಸಿದರೆ ವಿನಾ ಸತ್ತ ಸೊಸೆಗೆ ಒಂದಶ್ರುವನ್ನೂ ತೊಟಕ್ಕಿಸಲಿಲ್ಲ. ಅಪ್ಪನೆಕ್ಕಿಂತ ಅವ್ವನು ಸರಸ್ವತಿಯನ್ನು ಉರಿಸಿಕೊಳ್ಳುತ್ತಿದ್ದುದರಿಂದ ಜಯತೀರ್ಥನಿಗೂ ಹೆಂಡತಿಯ ನೆರಳನ್ನು ಕಂಡರಾಗದಂತಾಯಿತು. ಸರಸ್ವತಿ ಮದುವೆಯಾಗಿ ಆ ಮನೆಗೆ ಬಂದು ಎರಡು ವರುಷ ಕಳೆದರೂ ಅವಳಿಗೆ ಅತ್ತೆ ಮಾವ, ಹಾಗು ಗಂಡನಾಡಿದ ಒಂದು ಒಳ್ಳೇ ಶಬ್ದವೇ ಕೇಳಿಸಲಿಲ್ಲ. ಸರಸ್ವತಿಯ ಸಂರಕ್ಷಣೆಗೆ ಬೆನ್ನೆಲುವಾಗಿ ನಿಂತವಳೆಂದರೆ ತುಂಗಭದ್ರೆಯೊಬ್ಬಳೇ ಆಗಿದ್ದಳು. ನದಿಗೆ ಹೋದಾಗ ಅವಳ ಮುಂದೆಯೇ ಸರಸ್ವತಿ ತನ ಸುಖದುಃಖಗಳನ್ನು ಹೇಳಿ ಸಮಾಧಾನ ಮಾಡಿಕೊಂಡು ಬರುತ್ತಿದ್ದಳು. ಸರಸ್ವತಿಯ ಕಣ್ಣೀರುಗಳನ್ನು ತನ್ನ ಒಡಲಲ್ಲಿ ಹಿಡಕೊಂಡು "ಸರಸ್ವತಿ, ನನ್ನ ಮನೆ ನಿನಗೆ ಹಗಲಿರಳೂ ತೆರೆದಿರುತ್ತದ" ಎಂದು ಹೇಳಿ ಅಭಯವನ್ನಿತ್ತು ಮುಂದಕ್ಕೆ ಹೋಗುತ್ತಿದ್ದಳು ತುಂಗಭದ್ರೆ! ಹೀಗಾಗಿ ಸರಸ್ವತಿಗೂ ತುಂಗಭದ್ರೆಗೂ ಬಿಡಲಾರದ ನಂಟು ಬೆಳೆದು ಬಂದಿತ್ತು. ನದಿಗೆ ಹೋದ ಸರಸ್ವತಿಗೆ ಮರಳಿ ಮನೆಗೆ ಬರಬೇಕೆನಿಸುತ್ತಿರಲಿಲ್ಲ. ಮನೆಗೆ ಬಂದರೆ "ಬಾ" ಅನ್ನುವ ಆತ್ಮೀಯ ಶಬ್ದವನ್ನೇ ಅವಳು ಕೇಳಿರಲಿಲ್ಲ. ಹೀಗಾಗಿ, ಮನೆಯಕಿಂತ ತುಂಗಭದ್ರೆಯ ಮಡಿಲೇ ಅವಳಿಗೆ ಹಿತವಾಗಿ ಕಂಡಿತು.

ಸರಸ್ವತಿಯ ಉತ್ತರ ಕ್ರಿಯೆಗಳು ಕೊನೆಗೊಂಡಾಗ, ಅಧಿಕಾರ ನಡೆಸಲು ತಮಗಿನ್ನು ಸೊಸೆಯಿಲ್ಲವಲ್ಲಾ ಎಂದು ಗಂಗಾಬಾಯರು ಗೋಳಾಡಹತ್ತಿದರು. ಅವರ ಅಹಂಭಾವ ಈಗ ಅತೃಪ್ತಿಯ ಜೋಳಿಗೆಯಲ್ಲಿ ಮಲಗಿ ನಿದ್ರಿಸಹತ್ತಿತು.

ಸರಸ್ವತಿ ಸತ್ತು ಎರಡು ವರುಷಗಳಾಗಿದ್ದವೋ ಇಲ್ಲವೋ ಗಂಗಾಬಾಯರು ವೇದವತಿಯನ್ನು ಮನೆ ತುಂಬಿಸಿಕೊಂಡು ಹೊಸ ಸೊಸೆಯನ್ನಾಗಿ ಬಿದರಳ್ಳಿಗೆ ಕರತಂದರು. ಸುಸಂಪನ್ನರು ಹಾಗು ಶ್ರೀಮಂತರು ಎಂದು ಪ್ರತೀತಿ ಪಡೆದ ಆಚಾರ್ಯರ ಮಗನಿಗೆ ಯಾರು ತಾನೆ ಕನ್ಯೆಯನ್ನು ಕೊಡಲು ಹಿಂಜರಿದಾರು. ವೇದವತಿ ಮನೆಗೆ ಬಂದ ಮೇಲೆ ಗಂಗಾಬಾಯರ ಬಾಯಿಗೆ ಮತ್ತೆ ಬಲವು ಬಂದಂತಾಯಿತು. ವೇದವತಿಯೆಂದರೆ ಮೊದಲು ತಮ್ಮ ಸೊಸೆ. ತದನಂತರ ಜಯತೀರ್ಥನ ಹೆಂಡತಿ ಎಂಬ ಪ್ರಜ್ಞೆಯಿಂದ ಸೊಸೆಯನ್ನು ನಡೆಸಿಕೊಳ್ಳಹತ್ತಿದರು. ಮದುವೆಯಾದ ಹೊಸದರಲ್ಲಿ ವೇದವತಿಗೆ ಅತ್ತೆ-ಮಾವ ಒಳ್ಳೆಯವರಾಗಿ ಕಂಡರು. ದಿನಗಳುರುಳಿದಂತೆ ಗಂಗಾಬಾಯರ ಬಣ್ಣವು ಬಯಲಾಗುತ್ತ ಹೋಗಲು ಸರಸ್ವತಿ ಆತ್ಮಹತ್ಯೆಯನ್ನು ಮಾಡಿಕೊಂಡು ಸತ್ತಳೆಂದು ಅವರಿವರು ಆಡಿಕೊಳ್ಳುತ್ತಿದ್ದ ಮಾತಿನಲ್ಲಿ ತಥ್ಯವಿದೆಯೆಂದು ವೇದವತಿಗೆ ಅನಿಸಹತ್ತಿತು.

ಮದುವೆಯಾಗಿ ನಾಲ್ಕು ವರುಷದ ಮೇಲೆ ವೇದವತಿ ಚೊಚ್ಚಲು ಹೆಣ್ಣನ್ನು ಹಡೆದು ಹೆತ್ತಿಬ್ಬಣ ಬಂದರೆ, ಹೆಣ್ಣು ಹಡೆದಿದ್ದಾಳೆಂದು ಸೊಸೆಯನ್ನು ಗಂಗಾಬಾಯರು ಮನೆಯಲ್ಲಿ ಸೇರಿಸಿಕೊಳ್ಳಲು ಸಿದ್ಧರಾಗಲಿಲ್ಲ. ಮಾತು ಮಾತಿಗೆ ಹೆಣ್ಣು ಹಡದಿಯೆಂದು ಮೂದಲಿಸುತ್ತಿದ್ದರು. ಮುಂದೆ ಮೂರು ವರುಷಗಳ ಮೇಲೆ ವೇದವತಿ ಗಂಡುಮಗುವನ್ನು ಹಡೆದಾಗ ಸೊಸೆಯನ್ನು ಗಂಗಾಬಾಯರು ಮನುಷ್ಯಳಂತೆ ಕಾಣಹತ್ತಿದರು. ಮೊಮ್ಮಗ ರಾಘವೇಂದ್ರನ ಮೇಲೆ ಅಜ್ಜಿಯದೇ ಹೆಚ್ಚು ಪ್ರಭುತ್ವವು ಬೆಳೆಯಹತ್ತಿತು. ಆಚಾರ್ಯರ ಸ್ಥಿರ-ಚರ ಆಸ್ತಿಯೆಲ್ಲವನ್ನೂ ಗಂಗಾಬಾಯರು ತವರಿನಿಂದ ತಂದಿದ್ದರಿಂದ ಮನೆಯಲ್ಲಿ ಅವರು ಹೇಳಿದ್ದೇ ನಡೆಯುತ್ತಿತ್ತು.

ರಾಘವೇಂದ್ರನು ಶಾಲೆಗೆ ಹೋಗಲು ಪ್ರಾರಂಭಿಸಿದಾಗ ಲಕ್ಷ್ಮೀಕಾಂತಾಚಾರ್ಯರು ದೇಹತ್ಯಾಗಮಾಡಿ ಇಹಲೋಕ ಯಾತ್ರೆಯನ್ನು ಪೂರೈಸಿದರು. ಆಚಾರ್ಯರ ಅಗಲುವಿಕೆ ಗಂಗಾಬಾಯರ ಮೇಲೆ ಯಾವ ಪರಿಣಾಮ ಉಂಟು ಮಾಡಲಿಲ್ಲ. ಈಗಂತೂ ಮನೆಯಲ್ಲಿ ಅವರೇ ಸಾರ್ವಭೌಮಾಧಿಕಾರಿಯಾಗಿದ್ದರು. ಅವರು ಹೇಳಿದ್ದೇ ನಡೆಯಬೇಕೆಂದು ಅನ್ನುತ್ತಿದ್ದರು.

ಹಿರಿಯ ಮಗಳು ಪದ್ಮಾವತಿಗೆ ಹದಿನಾಲ್ಕು ವರುಷಗಳಾಗುತ್ತ ಬಂದಿದ್ದರೂ ಅತ್ತೆಯ ಆಜ್ಞೆಯ ವಿನಾ ಉಸಿರಾಡಿಸುವಷ್ಟು ಸ್ವಾತಂತ್ರ್ಯವನ್ನೂ ವೇದವತಿ ಪಡೆದಿರಲಿಲ್ಲ. ತನ್ನಸ್ತಿತ್ವವನ್ನು ಆ ಮನೆಗೆ ಬಂದ ದಿವಸವೇ ಅವಳು ಕಳೆದುಕೊಂಡು ಬಿಟ್ಟಿದ್ದಳು. ಮಾನಸಿಕ ತೊಳಲಾಟದಿಂದ ಕ್ಷಯರೋಗಿಯಂತೆ ಕಾಣಹತ್ತಿದಳು. ಚಿವುಟಿದರೆ ನೋವಾಗುವದೆಂಬ ಪ್ರಜ್ಞೆಯನ್ನು ಕೂಡ ವೇದವತಿ ಕಳೆದುಕೊಂಡಿದ್ದಳು. ಸ್ವಂತಿಕೆಯನ್ನು ಮಾರಿಕೊಂಡಿದ್ದ ಜಯತೀರ್ಥನು ತಾಯಿಯ ನೆರಳಾಗಿ ನಡೆದು, ವೇದವತಿಯ ದುಃಖಾಗ್ನಿಗೆ ಆಜ್ಯವನ್ನು ಸುರುವುತ್ತಿದ್ದನು.

ಗಂಡ ಮತ್ತು ಮಕ್ಕಳಿದ್ದರೂ ವೇದವತಿಗೆ ತುಂಗಭದ್ರೆಯೊಬ್ಬಳೆ ಹಿತಚಿಂತಕಳಾಗಿ ಕಾಣಹತ್ತಿದ್ದಳು. ಅವಳೊಂದಿಗೆ ಒಡನಾಟವೆಂದರೆ ವೇದವತಿಗೆ ಅಪ್ಯಾಯನವೆನಿಸಹತ್ತಿತು. ಬಟ್ಟೆಗಳನ್ನು ಒಗೆಯಲು ನದಿಗೆ ಹೋದ ವೇದವತಿಗೆ ನದಿಯಲ್ಲಿಯೇ ಇರಬೇಕೆನಿಸುತ್ತಿತ್ತು. ಮದುವೆಯಲ್ಲಿ ಪುತ್ಥಳಿಯಂತಿದ್ದ ವೇದವತಿಯನ್ನು ಈಗ ವೇದವತಿಯೆಂದು ಗುರುತಿಸುವದೂ ಸಾಧ್ಯವಿರಲಿಲ್ಲ. ಒಬ್ಬಿಬ್ಬ ವೈದ್ಯರಿಂದ ಔಷಧೋಪಚಾರವು ನಡೆದರೂ ಅವಳಲ್ಲಿ ಯಾವ ಬದಲಾವಣೆ ಕಂಡು ಬರಲಿಲ್ಲ. ಮೈಗೆ ನೋವಾದರೆ ತಾನೇ ಧನ್ವಂತರಿಯ ಮದ್ದು ನಾಟೀತು; ಮನಸ್ಸಿಗಾದರೆ ಧನ್ವಂತರಿಯಾದರೂ ಏನು ಮಾಡ್ಯಾನು!

ನಿಃಶಕ್ತಳಾಗಿದ್ದ ವೇದವತಿಗೆ ಮಲಗಿಕೊಂಡರೆ ಏಳಬೇಕೆನಿಸುತ್ತಿರಲಿಲ್ಲ. ಸವತಿ-ಸರಸ್ವತಿ ದೆವ್ವವಾಗಿ ವೇದವತಿಗೆ ಬಡಕೊಂಡಿರಬೇಕೆಂದು ಗಂಗಾಬಾಯರ ಮನಸ್ಸಿನಲ್ಲಿ ಮೂಡಹತ್ತಿತು. ಈ ವಿಚಾರವನ್ನು ಗಂಗಾಬಾಯರು ಜಯತೀರ್ಥನ ಮುಂದೆ ಹೇಳಿದಾಗ ಅವ್ವನ ವಿಚಾರವು ಅವನಿಗೆ ಅವಾಸ್ತವವಾಗಿ ಕಾಣಲಿಲ್ಲ. ಗಂಗಾಬಾಯರ ವಿಚಾರವನ್ನು ಕೇಳಿದವರೆಲ್ಲಾ ಪುಷ್ಟೀಕರಿಸಹತ್ತಿದರು. ಔಷಧವನ್ನು ಬಿಟ್ಟು ಭೂತೋಚ್ಚಾಟನೆಗೆ ಯಂತ್ರ-ಮಂತ್ರ-ಪಾದೋದಕಗಳು ನಡೆದವು. ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ಯಾರೋ ಒಬ್ಬರು ವೇದವತಿಯನ್ನು ಹಿಡಕೊಂಡ ಮನೆಯಲ್ಲಿರುವ ದೆವ್ವವು ಅವಳು ಸಾಯುವವರೆಗೆ ಬೇರೆಡೆ ಹೋಗುವುದು ಸಾಧ್ಯವಿಲ್ಲವೆಂದು ಆಡಿಕೊಂಡರು. ಗರ ಬಡದವರಂತಿದ್ದ ವೇದವತಿ ಇತ್ತೀಚೆಗಂತೂ ಮನೆಯಲ್ಲಿ ಕೆಲಸವನ್ನೇ ಮಾಡುತ್ತಿರಲಿಲ್ಲ. ಹೀಗಾಗಿ ಗಂಗಾಬಾಯರ ಮೇಲೆಯೇ ಮನೆಯ ಕಾರ್ಯಭಾರವು ಬೀಳಹತ್ತಿತು. ವರ್ಷಾನುವರ್ಷ ನಡೆದ ಚಿಕಿತ್ಸೆ ಮತ್ತು ಯಂತ್ರ-ತಂತ್ರಗಳು ವೇದವತಿಯ ದೆವ್ವವನ್ನು ಬಿಡಿಸಲು ಸಾಧ್ಯವಾಗಲಿಲ್ಲ.

ಮಾತಿಗೆ ಮಾತು ಬಂದಾಗ ಯಾರೋ ಒಬ್ಬರು "ಗಂಗಾಬಾಯರ, ನಿಮ್ಮ ಸೊಸಿನ್ನ ಹಡಗಲಿ ಡಾಕ್ಟರಿಗೆ ಯಾಕ ತೋರಿಸಬಾರದು ಅಂತೀನಿ. ಭಾಳ ಶಾಣೇ ಡಾಕ್ಟರ ಇದ್ದಾಳಂತ್ರವಾ. ಬಳ್ಳಾರಿಯಿಂದ ಬಂದು ಬಡಬಗ್ಗರಿಗೆ ಪುಕಟ ಔಷಧಾ ಕೊಡತಾಳಂತ್ರಿ. ಆಕಿ ಕೈಗುಣ ಕ್ಷಯಾ ಕೂಡ ಕಡಿಮೆ ಆಗೇದಂತ. ನದೀ ದಾಟಿ ಅತ್ಲಾಗಿನ ದಂಡಿಗೆ ಹೋದ್ರ ಹಡಗಲಿ ಬರತದೇನವ್ರಾ. ಜಯತೀರ್ಥಗ ಹೇಳಿ ಹೆಂಡ್ತಿನ್ನ ಕರಕೊಂಡ ಹೋಗಿ ತೋರಿಸಬಾ ಅನ್ರಿ" ಎಂದು ಸೂಚಿಸಿದರು. ಆ ಸೂಚನೆ ಗಂಗಾಬಾಯರಿಗೆ ಗ್ರಾಹ್ಯವೆನಿಸಿತು. ಜಯತೀರ್ಥನನ್ನು ಕರೆದು ಹೆಂಡತಿಯನ್ನು ಹಡಗಲಿಗೆ ಕರಕೊಂಡು ಹೋಗಿ ಡಾಕ್ಟರ ಸಾರಾ ಫಿಲಿಪೋಸರಿಗೆ ತೋರಿಸಿಕೊಂಡು ಬರಲು ಗಂಗಾಬಾಯರು ಹೇಳಿದರು. ಜಯತೀರ್ಥನು ಡಾಕ್ಟರರ ಪೂರ್ಣ ವಿವರಗಳನ್ನು ತೆಗೆದುಕೊಂಡು ವೇದವತಿಯೊಂದಿಗೆ ಹಡಗಲಿಗೆ ಹೋದನು.

ಆಸ್ಪತ್ರೆಯಲ್ಲಿ ಸಾಕಷ್ಟು ರೋಗಿಗಳು ನೆರೆದಿದ್ದರು. ಹೆಣ್ಣುಮಕ್ಕಳ ಆಸ್ಪತ್ರೆಯಾಗಿದ್ದರಿಂದ, ಗಂಡಸರು ನೇರವಾಗಿ ಡಾಕ್ಟರ ಸಾರಾ ಅವರ ಬಳಿ ಹೋಗುವಂತಿರಲಿಲ್ಲ. ಹೊರಗೆ ಕುಳಿತು ಮಾರ್ಗರೇಟಳ ಬಳಿ ಕೇಸ ಪೇಪರ ಮಾಡಿಸಿ ಸರದಿ ಬಂದಾಗ ನರ್ಸಿನೊಡನೆ ಒಳಗೆ ಹೋಗುವ ಪರಿಪಾಠವು ಅಲ್ಲಿತ್ತು. ಅಂತಲೇ ಜಯತೀರ್ಥಾಚಾರ್ಯರು ವೇದವತಿಯ ಹೆಸರು ಊರು, ವಯಸ್ಸು, ಬೇನೆಯ ವಿವರಗಳನು ಕೊಟ್ಟು ಸರದಿಗಾಗಿ ಕಾಯಹತ್ತಿದರು. ನರ್ಸ ಕರೆದಾಗ ಕೂಡ ರೋಗಿಯಷ್ಟೇ ಒಳಗೆ ಹೋಗಬೇಕಾಗುತ್ತಿತ್ತು. ಮುಖ್ಯ ಡಾಕ್ಟರರಾದ ಸಾರಾ ಹೇಳಿ ಕಳಿಸದೆ ಯಾವ ಗಂಡಸರೂ ಅವರ ಕೋಣೆಗೆ ಹೋಗುವಂತಿರಲಿಲ್ಲ. ಡಾಕ್ಟರ ಸಾರಾ ಅಂದರೆ ಶಿಸ್ತಿಗೆ ಹೆಸರಾಗಿದ್ದರು. ಪರದೇಶದಲ್ಲಿ ಕಲಿತು ಬಂದ ಸಾರಾ ಡಾಕ್ಟರರು ಔಷಧಿ ಕೊಟ್ಟರೆ ಖಂಡಿತವಾಗಿಯೂ ಕಡಿಮೆಯಾಗುವದೆಂಬ ಪ್ರತೀತಿ ಸುತ್ತಲಿನ ಹಳ್ಳಿಗಳಲ್ಲಿಯೆಲ್ಲಾ ಹರಡಿತ್ತು. ವೇದವತಿಯ ಸರದಿ ಬಂದೊಡನೆ ನರ್ಸ ಬಂದು ವೇದವತಿಯನ್ನು ಪರೀಕ್ಷೆಗೆ ಕರೆದೊಯ್ದಳು.

ಪರೀಕ್ಷೆಗೆ ಬಂದ ರೋಗಿಯ ಹೆಸರನು ನೋಡಿದೊಡನೆ ಡಾಕ್ಟರ ಸಾರಾ ಅವರಿಗೆ ಕುಳಿತ ಕುರ್ಚಿಯಲ್ಲಿಯೇ ಮೂರ್ಛೆ ಬಂದಂತಾಯಿತು. ಇಪ್ಪತ್ತು ವರುಷಗಳ ಹಿಂದಿನ ಸ್ಮೃತಿ ಸುರುಳಿಸುರುಳಿಯಾಗಿ ಕಣ್ಮುಂದೆ ಬರಹತ್ತಿತು.

× × ×

ಅದೇಕಿರುವದಕಿಂತ ಸಾಲ್ಕೆಂಟು ವಿಂದು ನದಿಯಲ್ಲಿ ಹಾರಿಕೊಂಡರ ತುಂಗಭದ್ರೆ ಸಾಯಲು ಬಿಡದೆ

ಪೆಟ್ಟಿಗೆ ತೇಲಿಸಿ ತನ್ನನ್ನು ಆಳಿಯ ದಂಡೆಯ ಮೇಲೆ ತಂದಾಗ ... ಮೇಲೆ ಮಲಗಿಸಿ ಹೋಗಿ ದ್ದರು. ಎಚ್ಚರವಾದಾಗ ತಾನೇಕೆ ಸಾಯಲಿಲ್ಲವೆಂದು ಅನಿಸಿತು. "ನನ್ನನ್ನೇಕೆ–ಬದುಕಿಸಲು ಪ್ರಯತ್ನಿಸುವಿರಿ. ನನಗೆ ಸಾಯಲು ಬಿಡಿರಿ" ಎಂದು ಚೀರಿದಾಗ ಡಾಕ್ಟರ ಜಾನಸನ್ ಫಿಲಿಪ್ಸ್‌ರು "ಮಗು, ಹಾಗನ್ನಬಾರದು. ಸಾಯಲಿಕ್ಕೆ ನಿನಗೇನಾಗಿದೆ" ಎಂದು ಕೇಳಿದರು. "ನಾನೇಕೆ ಬದುಕಬೇಕು?" ಎಂದು ಕೇಳಿದಾಗ ಡಾಕ್ಟರ ಜಾನಸನ್‌ರು "ಮಗು ನಾವಿರುವೆವಲ್ಲ. ನಮಗಾಗಿಯಾದರೂ ಬದುಕು" ಎಂದು, ಹಣೆಯ ಮೇಲೆ ಕೈಯಾಡಿಸುತ್ತ ಚಿಕಿತ್ಸೆ ಮಾಡಿದರು. ಪ್ರಾಯಶಃ ಕಾಲು ಜಾರಿ ನದಿಯಲ್ಲಿ ಬಿದ್ದಿರಬೇಕೆಂದು ಅವರ ವಿಚಾರವಾಗಿತ್ತು. ಮಲೇರಿಯಾ ಉಚ್ಚಾಟನೆಗೆಂದು ಬಳ್ಳಾರಿಯಿಂದ ಬಂದು ಹೊಳಲಿನಲ್ಲಿ ವಾಸ್ತವ್ಯ ಮಾಡಿದ್ದ ಸಾರ್ವಜನಿಕ ಆರೋಗ್ಯ ಖಾತೆಯ ಮುಖ್ಯ ಡಾಕ್ಟರರಾದ ಜಾನಸನ್‌ರು ನದಿಯ ರಮಣೀಯತೆಯನ್ನು ನೋಡಲು ಆಕಸ್ಮಿಕವಾಗಿ, ನದಿಗೆ ಬಂದಿದ್ದರಿಂದ ಹೊಳಲಿನಲ್ಲಿ ಹೆಣದಂತೆ ಬಿದ್ದ ಸರಸ್ವತಿಯನ್ನು ಅವರು ನೋಡಿದರು. ಸರಸ್ವತಿಗೆ ಚಿಕಿತ್ಸೆ ಮಾಡಿ ಆರೋಗ್ಯವಾದ ಮೇಲೆ ಅವಳ ವಿವರಗಳನ್ನೆಲ್ಲಾ ಕೇಳಿ ತಿಳಿದುಕೊಂಡರು. ಡಾಕ್ಟರ ಜಾನಸನ್‌ರು ಮರಳಿ ಅವಳನ್ನು ಬಿದರಳ್ಳಿಗೆ ಕಳಿಸುವ ವ್ಯವಸ್ಥೆಯನ್ನು ಮಾಡುವೆನೆಂದರೆ "ನನ್ನನ್ನು ಬೇಕಾದರೆ ಮರಳಿ ನದಿಯಲ್ಲಿ ಒಗೆಯಿರಿ. ಆ ನರಕಕ್ಕೆ ಮಾತ್ರ ನನ್ನನ್ನು ಕಳಿಸಬೇಡಿರಿ" ಎಂದು ಜಾನಸನ್‌ರಿಗೆ ತನ್ನ ವ್ಯಥೆಯನ್ನೆಲ್ಲಾ ಹೇಳಿದಳು. ವಿದೇಶಿಯರಾದ ಜಾನಸನ್ ದಂಪತಿ ಸರಕಾರದ ಸೇವೆಯ ಶ್ರೀ ಸೇ... ...ಗಳಾಯಿತು ಮತ್ತು ಬಳ್ಳಾರಿಯಲ್ಲಿ ಹತ್ತಾರು ವರ್ಷ ಸೇವೆ ಸಲ್ಲಿಸಿದ್ದರಿಂದ ಮಾತನಾಡುವಷ್ಟರ ಮಟ್ಟಿಗೆ ಕನ್ನಡವನ್ನು ಕಲಿತಿದ್ದರು. ಸರಸ್ವತಿ ಮಾನಸಿಕ ತೊಳಲಾಟದಿಂದ ಬಳಲುತ್ತಿರಬಹುದೆಂದು ಡಾಕ್ಟರ ಜಾನಸನ್ ಅವಳನ್ನು ಬಳ್ಳಾರಿಗೆ ಕರೆದೊಯ್ದರು. ಜಾನ್‌ಸನ್‌ರ ಹೆಂಡತಿ ಮೇಡಮ್ ಲಿಡಿಯಾ ಅವರಿಗೆ ಡಾಕ್ಟರಕಿಂತಲೂ ಹೆಚ್ಚಿನ ಕನಿಕರವು ಬರುತ್ತಿತ್ತು. ಅವರು ಸರಸ್ವತಿಯ ಸಾದ್ಯಂತ ವ್ಯಥೆಯ ಕಥೆ ಕೇಳಿ ಅವಳು ಒಪ್ಪುವದಾದರೆ ಅವಳನ್ನು ತಮ್ಮಲ್ಲಿಯೇ ಇಟ್ಟುಕೊಳ್ಳಬೇಕೆಂದು ನಿರ್ಧರಿಸಿದರು. ಅವಳನ್ನು ತಮ್ಮಲ್ಲಿ ಉಳಿಸಿಕೊಳ್ಳುವಲ್ಲಿ ಅವರ ಸ್ವಾರ್ಥವೂ ಇತ್ತು. ಕಾರಣ ಜಾನ್‌ಸನ್ ದಂಪತಿಗಳಿಗೆ ಮಕ್ಕಳಿರಲಿಲ್ಲ. ಸರಸ್ವತಿ ಆ ಕೊರತೆಯನ್ನು ನೀಗಿಸಬಹುದೆಂದು ಶ್ರೀಮತಿ ಲಿಡಿಯಾ ಭಾವಿಸಿದರು. ಆ ದಂಪತಿಗಳ ವಾತ್ಸಲ್ಯಪೂರ್ಣ ಮಾತುಗಳನ್ನು ಕೇಳಿ ಜಗತ್ತೆಲ್ಲವೂ ದುಷ್ಟರಿಂದಲೇ ತುಂಬಿದೆಯೇನೋ ಅನ್ನುವ ಸರಸ್ವತಿಯ ವಿಚಾರವು ದಿನದಿನಕ್ಕೆ ಬದಲಾಗಹತ್ತಿತು. ತಾನೇ ಕೊರಳಲ್ಲಿಯ ಮಂಗಳಸೂತ್ರವನ್ನು ಹರಿದೊಗೆದು ಬಾಬ್ ಕಟ್ ಮಾಡಿಸಿಕೊಂಡು ಕ್ರಿಶ್ಚನ್‌ಧರ್ಮಕ್ಕೆ ಪರಿವರ್ತನೆಗೊಂಡಳು. ಮನೆಯಲ್ಲಿ ಅವಳಿಗೆ ಇಂಗ್ಲೀಷ ಅಭ್ಯಾಸವು ಪ್ರಾರಂಭವಾಯಿತು. ಸರಸ್ವತಿ ಬಯಸಿದ್ದನ್ನು ಫಿಲಿಪ್ಸ ದಂಪತಿಗಳು ಒದಗಿಸುತ್ತಿದ್ದರು. ಅವರು ಬಿಡುವಿನಲ್ಲಿ ಇಂಗ್ಲಂಡಕ್ಕೆ ಹೋದಾಗ ಸರಸ್ವತಿಯನ್ನು ಕರೆದುಕೊಂಡು ಹೋಗಿದ್ದರು. ಸರಸ್ವತಿ ಕ್ರಿಶ್ಚನ್ ಆದ ಮೇಲೆ ಸಾರಾ ಆದಳು. ತನ್ನ ಹೆಸರಿನ ಮುಂದೆ ತಾನೇ ಫಿಲಿಪ್ಸ ಎಂದು ಬರೆ... ಮೊದಮೊದಲು ಇಂಗ್ಲೀಷ ಕಲಿಯಲಿಕ್ಕೆ ಅವಳಿಗೆ ತೊಂದರೆಯಾಗಹತ್ತಿತ್ತು. ಆದರೆ ಕಲಿತು ತಾನೊಬ್ಬ ಮನುಷ್ಯಳಾಗಬೇಕೆಂಬ ಛಲವು ಅವಳನ್ನು ಹಗಲಿರುಳೂ ಅಭ್ಯಾಸದತ್ತ ಲಕ್ಷ್ಯವನ್ನು ಪೂರೈಸಲು ಹಚ್ಚಿತು. ಒಂದು ದಿವಸ ಸಾರಾಳನ್ನು ಡಾಕ್ಟರ ಜಾನ್‌ಸನ್ "ಮಗು ಮುಂದೆ ನೀನೇನಾಗಬೇಕೆಂದಿರುವಿ?" ಎಂದು ಕೇಳಿದರು.

"ಡ್ಯಾಡಿ, ನಿಮ್ಮಂತೆ ಡಾಕ್ಟರಳಾಗಿ ಅಳುವವರ ಕಣ್ಣೀರನ್ನು ಒರೆಸಿ ಸಾಧ್ಯವಾದಷ್ಟು ಜನರ ಸೇವೆಯನ್ನು ಮಾಡಬೇಕೆಂದಿರುವೆ" ಎಂದಳು.

"ಗುಡ್...ಗುಡ್...ಎಂದು, ಡಾಕ್ಟರ ಜಾನ್‌ಸನ್ ಅವಳನ್ನು ಇಂಗ್ಲಂಡಿಗೆ ಕಳಿಸಿ ಡಾಕ್ಟರಳನ್ನಾಗಿ ಮಾಡಲು ನಿಶ್ಚಯಿಸಿ ಇಂಗ್ಲಂಡಕ್ಕೆ ಕರೆದೊಯ್ದರು. ಈಗ ಸಾರಾಳನ್ನು ನೋಡಿದರೆ ಅವಳು ಭಾರತೀಯಳಂತೆ ಕಾಣುತ್ತಿರಲಿಲ್ಲ. ಜಾನ್‌ಸನ್ ಅವಳನ್ನು ತಮ್ಮ ಸಂಬಂಧಿಕರ ಮನೆಯಲ್ಲಿಟ್ಟು ಶಿಕ್ಷಣದ ವ್ಯವಸ್ಥೆ ಮಾಡಿ ಬಂದರು. ಎಂಟು ವರುಷಗಳ ಕಾಲ ಸಾರಾ ಇಂಗ್ಲಂಡದಲ್ಲಿದ್ದು ಡಾ|| ಸಾರಾ ಫಿಲಿಪ್ಸರಾಗಿ ಬಂದಾಗ ಡಾಕ್ಟರ ಜಾನ್‌ಸನ್‌ರು ನಿವೃತ್ತರಾಗಲು ಬಂದಿದ್ದರು. ಸಾರಾ ಸರಕಾರಿ ನೌಕರಿಯನ್ನು ಹಿಡಿಯದೆ, ಬಳ್ಳಾರಿಯ ಕ್ರಿಶ್ಚನ್ ಮಿಶನರಿಯ ಸಹಾಯದಿಂದ ಹಳ್ಳಿಗಳಿಗೆ ಹೋಗಿ ಬಡಜನರಿಗೆ ಧರ್ಮಾರ್ಥ ಔಷಧವನ್ನು ಕೊಡಹತ್ತಿದಳು. ಹೀಗಾಗಿ ಹಡಗಲಿಯಲ್ಲಿ ಒಂದು ದೊಡ್ಡ ಆಸ್ಪತ್ರೆ

ಯನ್ನೇ ಮಿಶನರಿಯವರು ತೆಗೆದು ಸಾರಾಳನ್ನು ಆದರ ಮುಖ್ಯ ಡಾಕ್ಟರಳನ್ನಾಗಿ ನಿಯಮಿಸಿದರು. ಡಾಕ್ಟರ ಜಾನ್‌ಸನ್ ನಿವೃತ್ತರಾದವೇಲೆ ಮರಳಿ ಇಂಗ್ಲಂಡಕ್ಕೆ ಹೋಗಿ ಬಿಟ್ಟರು. ಹೋಗುವಾಗ ಸಾರಾಳನ್ನೂ ಕರೆದರು. ಆದರೆ ಸಾರಾ ಹೋಗಲಿಲ್ಲ "ನನ್ನ ಕಾರ್ಯ ಭೂಮಿ ಇದೇ" ಎಂದು ಅಲ್ಲಿಯೇ ಇರಹತ್ತಿದಳು.

× × ×

"ವೇದವತಿ ಜಯತೀರ್ಥಾಚಾರ್ಯ ಅಯಾ ಚಿತ್..." ಎಂಬ ಹೆಸರನ್ನು ಓದಿಯೇ ಸಾರಾ ಆರಕ್ಷಣ ಕುರ್ಚಿಯಲ್ಲಿ ಕುಸಿದು ಬಿದ್ದಳು ಮತ್ತೆ ಸುಧಾರಿಸಿಕೊಂಡು ತಾನೀಗ ಅಧೈರ್ಯವನ್ನು ತೋರಿಸಿದರೆ ತನ್ನ ಕರ್ತವ್ಯಕ್ಕೆ ಚ್ಯುತಿ ಬರುವದೆಂದು ಕೇಸ ಪೇಪರನ್ನು ಹಿಡಕೊಂಡು ವೇದವತಿಯನ್ನು ಪರೀಕ್ಷಿಸಲು ಒಳಗೆ ಹೋದಳು. ಅವಳ ಬಾಯಿಂದ ಮನೆಯ ವಿವರಗಳನ್ನೆಲ್ಲಾ ತಿಳಿಕೊಂಡು ಅವಳಿಗೆ ಸಾಂತ್ವನಪರ ಮಾತುಗಳನ್ನಾಡಿ "ವೇದವತಿ, ನನ ದವಾಖಾನೆಯಲ್ಲಿ ನೀನು ಒಂದು ತಿಂಗಳಿರುವದಾದರೆ ನಿನಗೆ ಚಿಕಿತ್ಸೆ ಮಾಡುತ್ತೇನೆ. ನಿನಗೆ ಪೂರ್ಣ ಗುಣವಾಗುವದು" ಎಂದು ಹೇಳಿ ಬಿದರಳ್ಳಿಯಲ್ಲಿ ಯಾವ್ಯಾವ ಚಿಕಿತ್ಸೆಯನ್ನು ನಡೆಸಿದ್ದಾರೆಂದು ಕೇಳಿದಳು. ವೇದವತಿ ತನಗೆ ತಿಳಿದಷ್ಟು ಹೇಳಿ ಕಣ್ಣೀರನ್ನು ಸುರಿಸುತ್ತ "ಡಾಕ್ಟರ... ನಮ್ಮತ್ತೆ ನನಗೆ ನನ್ನ ಸವತಿ ದೆವ್ವವಾಗಿ ಹಿಡಕೊಂಡಿದ್ದಾಳೆಂದು ಹೇಳಿ ದೆವ್ವವನ್ನು ಬಿಡಿಸಲು ಯಂತ್ರ–ಮಂತ್ರಗಳನ್ನು ಮಾಡಿಸಿ ನನಗೆ ಮತ್ತಷ್ಟು ಅನಾರೋಗ್ಯವಾಗುವಂತೆ ಮಾಡಿದ್ದಾರೆ. ಅದರಿಂದಲೇ ಈ ನಿಃಶಕ್ತಿ ಬಂದಿದೆ" ಎಂದು ಹೇಳಿದಳು.

ಸತ್ತುಹೋಗಿ ದೆವ್ವವಾದ ಸವತಿ, ಸರಸ್ವತಿಯೇ ತಾನೆಂದು ಸಾರಾಳಿಗೆ ಹೇಳಬೇಕೆನಿಸಿತು. ಆದರೆ ಅದರ ಪರಿಣಾಮ ವೇದವತಿಯ ಮೇಲಾಗುವದೆಂದು ಸಾರಾ ಸುಮ್ಮನಾದಳು. "ಅಹುದು... ಲಕ್ಷ್ಮೀಕಾಂತಾಚಾರ್ಯರ ಸೊಸೆ ಸರಸ್ವತಿ ಆದೆಂದೋ ಸತ್ತಿದ್ದಾಳೆ. ನಾನೀಗ ಸರಸ್ವತಿಯಲ್ಲ. ನಾನು ಡಾಕ್ಟರ ಫಿಲಿಪೋಸ ದಂಪತಿಗಳ ಮಗಳಾದ ಸಾರಾ ಫಿಲಿಪೋಸ. ಪ್ರಾಯಶಃ ಸರಸ್ವತಿ ಏನಾದರೂ ದೆವ್ವವಾಗಿ ಅತ್ತಿತ್ತ ಅಲೆಯಹತ್ತಿದ್ದಾಳೋ ಏನೋ..." ಎಂದು ಮನಸ್ಸಿನಲ್ಲಿ ಸಾರಾ ನಕ್ಕೇ ನಕ್ಕಳು.

ಎಲ್ಲ ಪರೀಕ್ಷೆಯನ್ನು ಮುಗಿಸಿ "ವೇದವತಿ ನೀನು, ನಿನ್ನ ಗಂಡನೂ ಇಲ್ಲಿ ಒಂದು ತಿಂಗಳು ಇರುವದಾದರೆ ನಾನು ಔಷಧವನ್ನು ಕೊಟ್ಟು ನಿನ್ನನ್ನು ಗುಣಮುಖ ಮಾಡುತ್ತೇನೆ. ಹೊರಗೆ ಹೋಗಿ ಅವರನ್ನು ಕೇಳಿಕೊಂಡು ಬಾ" ಎಂದು, ವೇದವತಿಯನ್ನು ಹೊರಗೆ ಕಳಿಸಿದಳು.

ಡಾ॥ ಸಾರಾ ವೇದವತಿಯ ಪರೀಕ್ಷೆಗೆ ಒಂದು ಗಂಟೆ ಕಾಲಕ್ಕೂ ಹೆಚ್ಚು ಸಮಯ ತೆಗೆದುಕೊಂಡಿದ್ದರಿಂದ ವೇದವತಿಗೆ ಯಾವದೋ ಒಂದು ದೊಡ್ಡ ರೋಗವು ಅಂಟಿಕೊಂಡಿದೆಯೆಂದು ಆಸ್ಪತ್ರೆಯ ಉಳಿದ ಸಿಬ್ಬಂದಿಯವರು ಭಾವಿಸಿದರು. ಹೀಗಾಗಿ ಅಂದು ಹಲವಾರು ರೋಗಿಗಳು ಹೆಚ್ಚು ಸಮಯ ಅಲ್ಲಿ ಕಾಯಬೇಕಾಯಿತು. ಜಯತೀರ್ಥಾಚಾರ್ಯರಿಗೆ ಹೆಂಡತಿಯನ್ನು ಅಲ್ಲಿ ಬಿಡುವದೇ ಸೂಕ್ತವೆಂದು ಅನಿಸಿತು. ಸಾರಾ ಡಾಕ್ಟರರೆಂದರೆ ದೇವರಿದ್ದಂತೆ ಮತ್ತು ಅವರು ಕೈಹಿಡಿದ ಯಾವ ರೋಗಿಯೂ ಗುಣಮುಖವಾಗದೆ ಮರಳಿಲ್ಲವೆಂದು ಪ್ರತೀತಿಯನ್ನು ಕೇಳಿದ ಜಯತೀರ್ಥಾಚಾರ್ಯರಿಗೆ ಹೆಂಡತಿಯ ರೋಗ ವಾಸಿಯಾದರೆ ಸಾಕು ಅನಿಸಿತು. ಅವ್ವನು ಏನೇ ಹೇಳಿದರೂ ತಾವು ವೇದವತಿಗೆ ಅಲ್ಲಿಯೇ ಚಿಕಿತ್ಸೆ ಕೊಡಿಸಬೇಕೆಂದು ನಿರ್ಧರಿಸಿದರು. ಹೀಗಾಗಿ ವೇದವತಿಯನ್ನು ಜಯತೀರ್ಥಾಚಾರ್ಯರು ಅಲ್ಲಿಯೇ ಬಿಟ್ಟು ಬದರಳಿಗೆ ಬಂದರು. ಗಂಗಾಬಾಯರು ಸೊಸೆಯನ್ನು ಹಡಗಲಿಯಲ್ಲಿ ಬಿಟ್ಟು ಬಂದುದಕ್ಕೆ ಮಗನನ್ನು ವಾಚಾಮಗೋಚರವಾಗಿ ಬೈದರು. "ಆ ಕಪ್ಪುಕಡಿ ತಿನ್ನುವ ಪಾದ್ರಿಗಳ ಬಳಿ ಏಕೆ ಬಿಟ್ಟು ಬಂದಿ?" ಎಂದು, ಮತ್ತೆ ಮತ್ತೆ ಛೇಡಿಸಿ ಕೇಳಿದರು ಗಂಗಾಬಾಯರು.

ಜಯತೀರ್ಥಾಚಾರ್ಯರು ಅವ್ವನ ಮಾತಿನಿಂದ ಸಿಡಿದೆದ್ದರು. ಇಷ್ಟು ವರ್ಷಗಳ ಕಾಲ ನಿದ್ರಾವಸ್ಥೆಯಲ್ಲಿದ್ದ ಅವರ ಕೋಪದ ಜ್ವಾಲಾಮುಖಿ ಸ್ಫೋಟಗೊಂಡು ಅವ್ವಾ...ಸರಸ್ವತಿಯನ್ನ ನದ್ಯಾಗ ದೂಡಿ ಕೊಂದಿ. ಈಗ ವೇದವತಿಯನ್ನೂ ಸಾಯಿಸಬೇಕಂತ ಮಾಡಿಯೇನು?" ಎಂದು, ಚೀರಿಕೊಂಡರು. ಮಗನ ಅಂತಹ ಉಗ್ರ ಮುಖವನ್ನು ಗಂಗಾಬಾಯರು ಈ ವರೆಗೂ ಕಂಡಿರಲಿಲ್ಲ. ಅದೇಕೋ ಸ್ವಲ್ಪ ಅಂಜಿದರು. ಮಗನು ಹೀಗೆ ಮಾತನಾಡಬಹುದೆಂದು ಅವರು ಪ್ರಾಯಶಃ ಕನಸಿನಲ್ಲಿಯೂ ಭಾವಿಸಿರಲಿಲ್ಲ. ಮಾತು ವಿಕೋಪಕ್ಕೆ ಹೋಗಿ ತಾಯಿ–ಮಗನ ಸಂಬಂಧವೇ ಕೆಟ್ಟು ಹೋಗಬಹುದೆಂದು ಗಂಗಾಬಾಯರು ಮೌನತಾಳಿದರು. ಜೀವನದಲ್ಲಿ ಅವರು ಸೋತಿದ್ದು ಇದೇ ಮೊದಲು. ಪ್ರಾಯಶಃ ಜಯತೀರ್ಥಾಚಾರ್ಯರು ಹೀಗೆ ಮಾತಾಡಿದ್ದೂ ಇದೇ ಮೊದಲಿನ ಸಲವೇನೋ!

ಜಯತೀರ್ಥಾಚಾರ್ಯರು ಮಧ್ಯದಲ್ಲಿ ಒಮ್ಮೆ ಹಡಗಲಿಗೆ ಹೋಗಿ ಹೆಂಡತಿಯನ್ನು ನೋಡಿಕೊಂಡು ಬಂದರು. ಈಗ ವೇದವತಿಯ ಬಣ್ಣವೇ ಬದಲಾಗಿತ್ತು. ವೇದವತಿ ಇಷ್ಟು ಸುಧಾರಿಸಬಹುದೆಂದು ಜಯತೀರ್ಥಾಚಾರ್ಯರು ಕಲ್ಪನೆಯನ್ನು ಕೂಡ ಮಾಡಿರಲಿಲ್ಲ. ಒಬ್ಬಳು ನೀರಿನಲ್ಲಿ ಬಿದ್ದು ಸತ್ತಿದ್ದರೆ, ಇನ್ನೊಬ್ಬ ಹೆಂಡತಿ ನೆಲದಲ್ಲಿಯೇ ಬಿದ್ದು ಸಾಯುವಳೆಂದು ಅವರು ನಿರ್ಧರಿಸಿದ್ದರು.

ಡಾ॥ ಸಾರಾಳಿಗೆ ವೇದವತಿಗೆ ಯಾವ ಚಿಕಿತ್ಸೆಯನ್ನು ಕೊಡಬೇಕೆಂಬುದು ಪೂರ್ಣ ತಿಳಿದಿತ್ತು. ಅವಳ ಒಂದು ತಿಂಗಳ ವಾಸ್ತವ್ಯ ಒಂದೂವರೆ ತಿಂಗಳಿಗೆ ಬೆಳೆಯಿತು. ವೇದವತಿ ಮನೆಗೆ ಹೋಗುವ ದಿವಸ ಬಂದಿತು. ಅಂದು ಕರೆಯಲು ಜಯತೀರ್ಥಾಚಾರ್ಯರೇ ಬಂದಿದ್ದರು. ವೇದವತಿಯನ್ನು, ನರ್ಸ್ ಹೊರಗೆ ಕರತಂದಾಗ ಆಚಾರ್ಯರಿಗೆ ಅವಳೇ ತಮ್ಮ ಹೆಂಡತಿ ಅಹುದೋ ಅಲ್ಲವೋ ಎಂಬ ಸಂಶಯವು ಬರಹತ್ತಿತು. ಜಯತೀರ್ಥಾಚಾರ್ಯರು "ಬಿಲ್ ಎಷ್ಟಾಗಿದೆ" ಎಂದರು. ಮಾರ್ಗರೇಟಳು "ನೀವೇನೂ ಕೊಡಬೇಕಿಲ್ಲ. ನಿಮ್ಮಿಂದ ಡಾಕ್ಟರರು ಏನೂ ವಸೂಲ ಮಾಡಬಾರದೆಂದು ಹೇಳಿದ್ದಾರೆ" ಎಂದಳು ಸಾರಾ ಅವರ ಮನುಷ್ಯತ್ವಕ್ಕೆ ಜಯತೀರ್ಥರು ಮನಸ್ಸಿನಲ್ಲಿಯೇ ತಲೆಬಾಗಿದರು. ಜಯತೀರ್ಥಾಚಾರ್ಯರು "ನಾವು ಬಡವರಲ್ಲ. ನಿಮ್ಮ ಫೀ ತೆಗೆದುಕೊಳ್ಳಬೇಕು" ಎಂದು ಮಾರ್ಗರೇಟಳಿಗೆ ಹೇಳಿದರು. ಆದರೆ ಮಾರ್ಗರೇಟ ಮುಖ್ಯ ಡಾಕ್ಟರರ ಆಜ್ಞೆಯಾಗಿರುವದರಿಂದ ತಮಗೇನೂ ಮಾಡಲು ಸಾಧ್ಯವಿಲ್ಲವೆಂದು ಹೇಳಿ ಬಿಟ್ಟರು.

ಕೊನೆಗೆ ಜಯತೀರ್ಥಾಚಾರ್ಯರು "ಮಾರ್ಗರೇಟ ನನ ಹೆಂಡತಿಯನ್ನು ಬದುಕಿಸಿದ ಡಾಕ್ಟರ ಸಾರಾ ಅವರ ಭೆಟ್ಟಿಯನ್ನಾದರೂ ಮಾಡಿಸು, ಅವರನ್ನೊಮ್ಮೆ ನೋಡಿ ಅವರಿಗೆ ನಮಸ್ಕಾರ ಮಾಡಿ ಅವರು ಮಾಡಿದ ಉಪಕಾರದ ಕೃತಜ್ಞತೆಗಳನ್ನಾದರೂ ಸಲ್ಲಿಸುತ್ತೇನೆ" ಎಂದು ದೀನವಾಣಿಯಿಂದ ಪ್ರಾರ್ಥಿಸಿದರು.

ಮಾರ್ಗರೇಟ ಒಳಗೆ ಹೋಗಿ "ಡಾಕ್ಟರ ಇಪ್ಪತ್ತನೇ ನಂಬರಿನ ಪೇಶಂಟರ ಗಂಡನು ತಮ್ಮನ್ನೊಮ್ಮೆ ನೋಡಿ ನಮಸ್ಕಾರ ಮಾಡಿ ಹೋಗಬೇಕೆಂದು ನನಗೆ ಕಾಡಿಸಹತ್ತಿದ್ದಾರೆ. ಅವರನ್ನು ಒಳಗೆ ಕರೆತರಲೇನು?" ಎಂದು ಕೇಳಿದಳು.

ಸಾರಾ ಮನಸ್ಸಿನಲ್ಲಿಯೇ ನಕ್ಕು "ಅವರಿಗೆ ಹೇಳು ನನಗೀಗ ಸಮಯವಿಲ್ಲವೆಂದು. ನನಗೆ ನಮಸ್ಕರಿಸುವದಕ್ಕಿಂತಾ ಹೆಂಡತಿಯನ್ನು ಸರಿಯಾಗಿ ನೋಡಿಕೊಳ್ಳಲು ಹೇಳು. ನಾನೇ ಒಮ್ಮೆ ಬಿದರಳ್ಳಿಗೆ ಹೋಗಿ ವೇದವತಿಯನ್ನು ನೋಡಿಕೊಂಡು ಬರುತ್ತೇನೆಂದು ಹೇಳಿಬಿಡು" ಎಂದು ಹೇಳುತ್ತ ತಾವು ಬಿದರಳ್ಳಿಗೆ ಬರುವ ದಿವಸವನ್ನೂ ತಿಳಿಸಿದರು. ಮಾರ್ಗರೇಟ ಹೊರಗೆ ಬಂದು ಡಾಕ್ಟರರು ಹೇಳಿದ ಮಾತುಗಳನ್ನೇ ಶಬ್ದಶಃ ಆಚಾರ್ಯರಿಗೆ ಹೇಳಿದಳು. ಡಾಕ್ಟರರ ಉಪದೇಶದಿಂದ ಆಚಾರ್ಯರು ಮುಖವನ್ನು ಕೆಳಗೆ ಹಾಕುವಂತಾಯಿತು. ಆದರ ವ್ಯಥೆಗಿಂತ ಡಾಕ್ಟರರು ಬಿದರಳ್ಳಿಗೆ ಬರುವರಲ್ಲಾ ಎಂಬ ಸಂತೋಷದಿಂದ ಜಯತೀರ್ಥಾಚಾರ್ಯರು ಆಸ್ಪತ್ರೆಗೇನೇ ಒಮ್ಮೆ ನಮಸ್ಕರಿಸಿ ಬಿದರಳ್ಳಿಗೆ ಬಂದರು.

ವೇದವತಿಯನ್ನು ನೋಡಿದವರೆಲ್ಲಾ ವೇದವತಿಗೆ ಪುನರ್ಜನ್ಮವಾಗಿದೆಯೆಂದು ಅನ್ನಹತ್ತಿದರು. ಜಯತೀರ್ಥಾಚಾರ್ಯರು ಡಾಕ್ಟರರ ಮಾತುಗಳನ್ನು ತಾಯಿಗೆ ಹೇಳಿ "ಅವ್ವಾ ಇನ್ನ ಮ್ಯಾಲಾರ ಸೊಸೀನ್ನ ಒಳ್ಳೇ ರೀತಿಯಿಂದ ನೋಡಿಕೊ" ಎಂದು ಹೇಳಿದರು. ಗಂಗಾಬಾಯರು ಮುಖವನ್ನು ಕೆಳಗೆ ಮಾಡಿಕೊಂಡು ಕೆಲಸಕ್ಕೆ ಹೋದರು. ಸೊಸೆ ಮೊದಲಿನಂತಾಗಿ ಬಂದು ಗಂಗಾಬಾಯರ ಕೆಲಸದಲ್ಲಿ ಸಹಭಾಗಿಯಾದಾಗ ಗಂಗಾಬಾಯರಿಗೆ ಬಿಡುವು ದೊರೆಯಹತ್ತಿತು. ಗಂಗಾಬಾಯರಿಗೆ ಹೃದಯ ಪರಿವರ್ತನೆಯಾಗುತ್ತ ನಡೆದಿತ್ತು.

ನಿಶ್ಚಿತವಾದ ದಿವಸ ಮಾರ್ಗರೇಟಳನ್ನು ಕರೆಕೊಂಡು ಡಾಕ್ಟರ ಸಾರಾ ಬಿದರಳ್ಳಿಗೆ ಬಂದರು. ಸಾರಾಳಿಗೆ ವೇದವತಿಯ ಮಕ್ಕಳನ್ನು ನೋಡಬೇಕಾಗಿತ್ತು. ಮನೆಗೆ ಹೋದಾಗ ಗಂಗಾಬಾಯರು ಮತ್ತು ಜಯತೀರ್ಥಾಚಾರ್ಯರು ಕೈಮುಗಿದು ಸಾರಾಳನ್ನು ಬರಮಾಡಿಕೊಂಡರು. ಸಾರಾ ಸರಸ್ವತಿಯೆಂಬ ಗುರುತು ಯಾರಿಗೂ ಹತ್ತಲಿಲ್ಲ. ವೇದವತಿಯನ್ನು ಪುನಃ ಪರೀಕ್ಷಿಸಿ. ಮಕ್ಕಳಿಬ್ಬರ ಕೈಗೆ ತಿಂಡಿಯನ್ನು ಕೊಟ್ಟು "ಬೇಕಾದಾಗ ನಮ್ಮ ಆಸ್ಪತ್ರೆಗೆ ಬರಬೇಕು" ಎಂದು ಸಾರಾ ಹೇಳಿದಳು. ಸಾರಾ ಹೋಗುವಾಗ, ಗಂಗಾಬಾಯರು "ನನ್ನ ಸೊಸಿನ್ನ ನೀವು ಬದುಕಿಸಿದಾಂಗಾಯಿತು. ದೇವರು ನಿಮಗ ನೂರು ವರ್ಷ ಆಯುಷ್ಯ ಕೊಡಲಿ" ಎಂದು ಆಶೀರ್ವದಿಸಿದರು. ಸಾರಾ ಹೋಗುವತನಕ ಅತ್ತೆ, ಮಗ, ಸೊಸೆ ಸಾರಾಳಿಗೆ ಕೈ ಜೋಡಿಸಿಕೊಂಡೇ ಇದ್ದರು. ಸಾರಾಳಿಗೆ ಅಲ್ಲಿಂದ ಬರುವಾಗ ತಾನು ಸತ್ತು ಬದುಕಿದವಳೆನಿಸಿದರೆ, ವೇದವತಿ ಬದುಕಿಯೂ ಸತ್ತವಳಂತೆ ಕಂಡಳು. ●

(ಎಪ್ಪತ್ತು ವರ್ಷಗಳ ಹಿಂದೆ ನಡೆದ ಸತ್ಯ ಘಟನೆ ಹೇಳಿ ಕಥೆಯನ್ನು ಬರೆಯುವಂತೆ ಪ್ರೇರೇಪಿಸಿದ ಶ್ರೀಮತಿ ವೆಂಕೂಬಾಯಿ ರಾಮರಾವ ಬಾಳೇಹೊಸೂರ, ಶಿರಹಟ್ಟಿ, ಅವರಿಗೆ ಈ ಲೇಖಕನು ಋಣಿ)

# ಜಾಗೃತ ಗ್ರಾಮೀಣ ಭಾರತ

ಶಂಕರ ಪಾಟೀಲ

**ಭಾರತ ಹಳ್ಳಿಗಳ ನಾಡು. ಭಾರತದ ಉದ್ಧಾರ ಅಭಿವೃದ್ಧಿಯೆಂದರೆ ಹಳ್ಳಿಗಳ ಪ್ರಗತಿ, ಅಲ್ಲಿ ವಾಸಿಸುವ ದೇಶದ ಪ್ರತಿಶತ ೮೦ ರಷ್ಟು ಜನರ ಕಲ್ಯಾಣ. ಇದೀಗ ಮೂಲೆಮೂಲೆಯ ಹಳ್ಳಿಯಲ್ಲಿಯೂ ಚೈತನ ಮಿಸುಕಾಡತೊಡಗಿದೆ. ಗ್ರಾಮೀಣ ಭಾರತದಲ್ಲಿ ನಡೆದಿರುವ ಅಭಿವೃದ್ಧಿ ಕಾರ್ಯಗಳ ಪ್ರಗತಿಯ ಹಕ್ಕಿನೋಟ.**

ಮುಳ್ಳು ಕಂಟಿಗಳಿಂದ ತುಂಬಿದ ಖುಷ್ಕ-ಹಾಳು ಭೂಮಿ, ಅದು ಸಮತಟ್ಟಾಗಿ ಕೃಷಿ ಯೋಗ್ಯವಾಗಿ ಪರಿಣಮಿಸಿತು; ಅದು ನೀರಾವರಿ ಸೌಲಭ್ಯವನ್ನು ಪಡೆಯಿತು. ಇದೆಲ್ಲ ಸಂಭವಿಸಿದ್ದು ಕೇವಲ ಮೂವತ್ತು ದಿನಗಳ ಅವಧಿಯಲ್ಲಿ. ಇದನ್ನು ನಂಬಲು ಸಾಧ್ಯವೆ? ಆದರೆ ಇದು ನಡೆದುದಂತೂ ನಿಜ. ಆಂಧ್ರ ಪ್ರದೇಶದ ನೆಲ್ಲೂರು ಜಿಲ್ಲೆಯ ರಾಪೂರ ತಾಲೂಕಿನ ಸಿದ್ಧಾವರಂ ಗ್ರಾಮದಲ್ಲಿ ಇಪ್ಪತ್ತು ಅಂಶಗಳ ಆರ್ಥಿಕ ಕಾರ್ಯಕ್ರಮದ ಅನುಷ್ಠಾನದ ಅಂಗವಾಗಿ ಈ ಪವಾಡ ಜರುಗಿತು. ಪರಿಣಾಮವಾಗಿ ಈ ಗ್ರಾಮವು ಈಗ ಬಲವಾಗಿ ಚೇತರಿಸಿಕೊಂಡಿದೆ. ಗಡಬಡಿಸಿಕೊಂಡು ಎದ್ದಿದೆ. ಚಟುವಟಿಕೆಗಳ ಬೀಡಾಗಿ ಪರಿಣಮಿಸಿದೆ. ಇದೊಂದು ಚಿಕ್ಕ ರೈತರ ಮತ್ತು ಕೃಷಿಕಾರ್ಮಿಕರ ಗ್ರಾಮ. ಮಳೆಯ ನೀರಿನಿಂದಲೇ ಕೃಷಿ ಸಾಗುತ್ತಿತ್ತು. ಹೊಸ ಆರ್ಥಿಕ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ರಾಜ್ಯ ಸರಕಾರ ಈ ಗ್ರಾಮವನ್ನು ಗಮನಿಸಿತು. ಅಲ್ಲಿ ಪರಿಶಿಷ್ಟ ವರ್ಗ ಹಾಗೂ ಜನಾಂಗಕ್ಕೆ ಸೇರಿದ ೫೧ ಭೂರಹಿತ ಕೃಷಿ ಕಾರ್ಮಿಕರಿದ್ದರು. ಯಳಿಕಾಂಟರು ಕಿರು ನದಿಯ ಗುಂಟವಿರುವ ೮೦ ಎಕರೆ ಬೀಳು ಭೂಮಿಯನ್ನು ಅವರಿಗೆ ಕೊಡ ಮಾಡಿತು. ಅವರು ಸಹಕಾರಿ ಕೃಷಿ ಸಂಘ ನಿರ್ಮಿಸಿಕೊಂಡರು. ಈ ಜಿಲ್ಲೆಯ ಲೀಡ್ ಬ್ಯಾಂಕ್ ಸಿಂಡಿಕೇಟ್ ಬ್ಯಾಂಕ್ ಇದ್ದಿತು. ರಾಪೂರದ ಶಾಖೆಯವರು ಈ ಹೊಸ ಸಂಘದ ಮತ್ತು ಆ ಕೃಷಿಕರ ತೊಂದರೆಗಳನ್ನು ಗಮನಿಸಿದೊಡನೆ ಅವನ್ನು ನಿವಾರಿಸಲು ಮತ್ತು ಅವರಿಗೆ ಅವಶ್ಯವಿರುವ ಸೌಲಭ್ಯಗಳನ್ನು ನೀಡಲು ಮುಂದಾದರು. ಅವರಿಗೆ ಬೇಕಾದ ತಾಂತ್ರಿಕ ಸಲಹೆ ಮತ್ತು ಅವಶ್ಯವಿರುವ ಪತ್ತುಗಳನ್ನು ಈ ಬ್ಯಾಂಕು ನೀಡಿತು. ಸರಕಾರದ ವಿವಿಧ ಶಾಖೆಗಳಿಂದ ದೊರೆವ ಸೌಲಭ್ಯಗಳನ್ನು ಇವರಿಗೆ ದೊರಕಿಸಿಕೊಡುವ ಹೊಣೆಗಾರಿಕೆಯನು ವಹಿಸಿತು. ಬ್ಯಾಂಕು ಕೇವಲ ಸಾಂಪ್ರದಾಯಿಕ ತಾಂತ್ರಿಕ ಆರ್ಥಿಕ ಧೋರಣೆಯನ್ನು ಇಲ್ಲಿ ಅನುಸರಿಸದೇ ಈ ಯೋಜನೆಯನ್ನು ಯಶಸ್ವಿಗೊಳಿಸುವ ನಾಯಕತ್ವವನ್ನು ವಹಿಸಿತು. ಗ್ರಾಮೀಣ ಜನರಿಗೇ ಅಚ್ಚರಿಯಾಗುವ ರೀತಿಯಲ್ಲಿ ಈ ಗ್ರಾಮವು ಪರಿವರ್ತನೆ ಹೊಂದಿತು. ಜಾಗೃತಗೊಂಡು ಭರದಿಂದ ಮುನ್ನಡೆಯತೊಡಗಿತು.



ಬಳ್ಳಾರಿ ಜಿಲ್ಲೆಯ [illegible] ಜನಸಂಪರ್ಕ [illegible] ಸಂಘಟನೆ. ಮುಖ್ಯಮಂತ್ರಿ, ಶ್ರೀ ದೇವರಾಜ ಅರಸು. ಕಂದಾಯ ಮಂತ್ರಿ ಶ್ರೀ ಎಂ. ವಾಯ್. ಘೋರ್ಪಡೆ ಅವರು ಭಾಗವಹಿಸಿದ್ದರು.

## ನೆಹರೂರ ಕನಸು

ಇದು ಒಂದು ಗ್ರಾಮದ ಅಭಿವೃದ್ಧಿಯ ನೋಟ ಮಾತ್ರವಲ್ಲ; ಭಾರತದ ಲಕ್ಷಾವಧಿ ಗ್ರಾಮಗಳಲ್ಲಿ ಇಂದು ಭರದಿಂದ ಅಭಿವೃದ್ಧಿಯ ಚಟುವಟಿಕೆಗಳು ನಡೆದಿರುವ ನೋಟವನ್ನು ನಾವು ಗಮನಿಸುತ್ತೇವೆ. ಗ್ರಾಮೀಣ ಭಾರತ ರಾಷ್ಟ್ರದ ಜೀವನಾಡಿ. ಇದೇ ಮಾತನ್ನು ಗಾಂಧೀಜಿ ಅವರ ಮಾತುಗಳಲ್ಲಿ ಹೇಳುವದಾದರೆ ರಾಷ್ಟ್ರದ ಏಳೂವರೆ ಲಕ್ಷ ಗ್ರಾಮಗಳಲ್ಲಿ ಭಾರತದ ಆತ್ಮ ಅಡಕವಾಗಿದೆ. ನಮ್ಮ ಜನಸಂಖ್ಯೆಯ ಪ್ರತಿಶತ ೮೦ ರಷ್ಟು ಜನ ಗ್ರಾಮೀಣ ಭಾರತದ ನಿವಾಸಿಗಳು. ಈ ಜೀವನಾಡಿ ಸದಾ ಜಾಗೃತವಾಗಿರಬೇಕು. ಅದು ಅಭಿವೃದ್ಧಿಯತ್ತ ಪ್ರವಹಿಸಬೇಕು. ಗ್ರಾಮೀಣ ಭಾರತ ಕೇವಲ ಹಸಿರಿನಿಂದ ಕಂಗೊಳಿಸಿದರೆ ಸಾಲದು; ಅದರ ಜೀವನವೂ ಹಸಿರಾಗಿರಬೇಕು. ಅವರ ಕಷ್ಟ ಕಾರ್ಪಣ್ಯಗಳು ನೀಗಬೇಕು; ಅವರ ಬಡತನ ನಿವಾರಣೆಯಾಗಬೇಕು; ದುಃಖದುಮ್ಮಾನಗಳು ದೂರಾಗಬೇಕು; ಋಣಬಾಧೆಯಿಂದ ಅವರು ಮುಕ್ತರಾಗಬೇಕು; ತಾವು ದುಡಿವ ಭೂಮಿಯ ಒಡೆಯರು ಅವರಾಗಬೇಕು; ಚಿಕ್ಕದೇ ಆಗಿರಲಿ ಸ್ವಂತ ಮನೆಯಲ್ಲಿ ಜೀವಿಸಬೇಕು. ಈ ಬಗೆಯ ಅಭಿವೃದ್ಧಿ ಸಾಧಿತವಾಗಿ ಅವರ ಜೀವನ ಮಟ್ಟ ಉನ್ನತವಾಗಬೇಕು. ತನ್ಮೂಲಕ ಪಟ್ಟಣ ಪ್ರದೇಶಕ್ಕೆ ವಲಸೆ ಹೋಗುವ ಆಮಿಷದಿಂದ ದೂರ ಉಳಿದು ಎಂದೆಂದಿಗೂ ಗ್ರಾಮೀಣ ಭಾರತದ ಉನ್ನತಿಗಾಗಿ ಪರಿಶ್ರಮಿಸಬೇಕು. ಸ್ವತಂತ್ರ ಭಾರತದ ಆಡಳಿತದ ನೊಗವನ್ನು ಹೊತ್ತುಕೊಳ್ಳುವ ಸಂದರ್ಭದಲ್ಲಿ ನಮ್ಮ ದಿವಂಗತ ಪ್ರಧಾನಿ ಜವಾಹರಲಾಲ

ನೆಹರು ಅವರು ಕನಸು ಕಂಡಿದ್ದರು. ಗ್ರಾಮೀಣ ಭಾರತ ಈ ಕ್ರಾಂತಿಕಾರಿ ಪರಿವರ್ತನೆಯನ್ನು ಸಾಧಿಸುವಂತೆ ಮಾಡುವಲ್ಲಿ ಅವರು ಮಹತ್ವದ ಪಾತ್ರವನ್ನು ನಿರ್ವಹಿಸಿದರು. ಭೂಸುಧಾರಣೆಗಾಗಿ ನಾಂದಿ ಹಾಡಿದರು; ಕೃಷಿ ಸುಧಾರಣೆಗಾಗಿ ಕ್ರಮ ನಿಯೋಜಿಸಿದರು; ನೀರಾವರಿಗಾಗಿ ಅಣೆಕಟ್ಟುಗಳ ನಿರ್ಮಾಣ ಕೈಕೊಂಡರು. ಅವನ್ನು ಭಾರತದ ಆಧುನಿಕ ದೇಗುಲಗಳೆಂದು ಅವರು ಬಹು ಯಥಾರ್ಥ ರೀತಿಯಲ್ಲಿ ಕರೆದರು.

## ಭೂ ಸುಧಾರಣೆ

ಅವರು ತಾವು ಸೇವೆ ಸಲ್ಲಿಸಬೇಕಾದ ಕಟ್ಟಬಯಸಿದ ನಾಡಿನ ಜನತೆಯ ಅಗತ್ಯಗಳನ್ನು ಅಪೇಕ್ಷೆಗಳನ್ನು ಬಹು ಸವಿಯಾಗಿ ಅರ್ಥಮಾಡಿಕೊಂಡು ಆ ಮೇರೆಗೆ ಕಾರ್ಯಕ್ರಮ ನಿಯೋಜಿಸಿದರು. ನಾಡನ್ನು ಆ ದಿಸೆಯಲ್ಲಿ ಮುನ್ನಡೆಸಿಕೊಂಡು ಬಂದರು. ಆದರೆ ಮಧ್ಯದಲ್ಲಿ ಬಂದ ಹಲವಾರು ಆಪತ್ತುಗಳಿಂದಾಗಿ, ಸಮಸ್ಯೆಗಳಿಂದಾಗಿ ಆ ಕನಸು ನನಸಾಗಲಿಲ್ಲ. ಅದಕ್ಕಾಗಿ ಬಹುದಿನಗಳವರೆಗೆ ಕಾಯಬೇಕಾಗಲಿಲ್ಲ. ಅವರ ಮಗಳು ಶ್ರೀಮತಿ ಇಂದಿರಾ ಗಾಂಧಿ ಅವರು ಆಡಳಿತದ ಸೂತ್ರಗಳನ್ನು ವಹಿಸಿಕೊಂಡೊಡನೆ ಈ ಕಾರ್ಯದಲ್ಲಿ ಮುಂದಡಿಯಿರಿಸಿದರು. ಈ ವಿಷಯದಲ್ಲಿ ಅವರು ತುಂಬ ದೃಢ ನಿರ್ಧಾರ ಮಾಡಿದ್ದರು. ಅವರು ನಾಡನ್ನುದ್ದೇಶಿಸಿ ೧೯೭೫ ಜುಲೈ ೧ ರಂದು ಮಾತನಾಡಿದಾಗ ಹೇಳಿದರು: "ನಮ್ಮಲ್ಲಿ ಬಹು ಸಂಖ್ಯರು ಗ್ರಾಮೀಣ ಪ್ರದೇಶದ ನಿವಾಸಿಗಳು. ಪರಮಾವಧಿ ಹಿಡುವಳಿ ಕಾನೂನನ್ನು ನಾವು ಅನುಷ್ಠಾನಗೊಳಿಸಿ ಹೆಚ್ಚುಳಿಯುವ ಭೂಮಿಯನ್ನು ಭೂರಹಿತ ಕೃಷಿಕ ಕಾರ್ಮಿಕರಿಗೆ ಇಮ್ಮಡಿ ಉತ್ಸಾಹದಿಂದ ಹಂಚಬೇಕು. ಈ ಕಾರ್ಯದಲ್ಲಿ ಸ್ಥಾನಿಕ ನಾಯಕರು ಹೆಚ್ಚು ಹೆಚ್ಚಾಗಿ ನೆರವಾಗಬೇಕು. ಅವರು ಕೂಡಲೇ ಕಾರ್ಯಪ್ರವೃತ್ತರಾದರು. ಅವಶ್ಯಬಿದ್ದರೆ ಸುಗ್ರೀವಾಜ್ಞೆಯನ್ನು ಹೊರಡಿಸಿಯಾದರೂ ಭೂಸುಧಾರಣೆ ಕ್ರಮಗಳನ್ನು ಅನುಷ್ಠಾನಕ್ಕೆ ತರಬೇಕೆಂದು ರಾಜ್ಯಗಳಿಗೆಲ್ಲ ತಿಳಿಸಲಾಯಿತು. ಈ ಮೇರೆಗೆ ನಾಡಿನಲ್ಲಿ ಸುಮಾರು ೩೮ ಲಕ್ಷ ಎಕರೆ ಭೂಮಿಯು ಹಂಚಿಕೆಗೆ ಉಳಿಯುವದೆಂದು ಅಂದಾಜು ಮಾಡಲಾಗಿರುವುದು. ಹಂಚಿಕೆಗೆ ಕೂಡ ಈಗಾಗಲೇ ಕ್ರಮಗಳನ್ನು ಕೈಕೊಳ್ಳಲಾಗಿದೆ. ವಾಡಿಕೆಯ ರೀತಿಯಲ್ಲಿ ಹಿಡುವಳಿ ಪಡೆದವರಲ್ಲದೇ ಇದು ಹೆಚ್ಚಿನ ಹಂಚಿಕೆಯ ಭೂಮಿಯಾಗಿರುವುದು. ಭೂ ಸುಧಾರಣೆ ಸುಲಭವಾದ ಕಾರ್ಯಕ್ರಮವಾಗಿರಲಿಲ್ಲ. ಪರಂಪರೆಯಿಂದ ನಡೆದು ಬಂದ ಪದ್ಧತಿ ನಿಲ್ಲುವುದು ಬಹು ಕಠಿಣ. ಜಮೀನುದಾರರು, ಅವರ ಹಿತಾಸಕ್ತರು ಈ ಕಾರ್ಯಕ್ರಮದಲ್ಲಿ ನಾನಾ ಬಗೆಯ ತೊಂದರೆಗಳನ್ನು ಆಪತ್ತುಗಳನ್ನು ಒಡ್ಡುವುದೂ ಸ್ವಾಭಾವಿಕ. ಹೀಗಾಗಿ ಈ ಕಾರ್ಯಕ್ರಮ ಪ್ರಾರಂಭದಲ್ಲಿ ಸಾವಧಾನವಾಗಿ ಸಾಗಿತ್ತು. ಹೊಸ ಆರ್ಥಿಕ ಕಾರ್ಯಕ್ರಮ ಅನುಷ್ಠಾನಕ್ಕೆ ಬಂದನಂತರವೇ ಅದು ನಾಗಾಲೋಟದಲ್ಲಿ ಸಾಗಿತು. ಸಂವಿಧಾನವನ್ನು ತಿದ್ದುಪಡಿ ಮಾಡಿ ರಾಜ್ಯಗಳಿಗೆ ಅವಶ್ಯಕವಾದ ಅಧಿಕಾರಬಲವನ್ನು ನೀಡಲಾಯಿತು. ಕೃಷಿ ಕಾರ್ಮಿಕರು ಹಿಡುವಳಿದಾರರಾಗಿ ಹೊಸ ಹುಮ್ಮಸ್ಸಿನಿಂದ ಕೃಷಿಯಲ್ಲಿ ನಿರತರಾಗಲು ಸಾಧ್ಯವಾಯಿತು. ಉಳುವವನಿಗೇ ಭೂಮಿ ಎಂಬ ಘೋಷಣೆ ಈಗ ಸಾರ್ಥಕವಾಗಿ ಪರಿಣಮಿಸಿತು. ಜೊತೆಗೆ ಕೃಷಿಕಾರ್ಯಗಳು ಮೇಲ್ಮಟ್ಟದಲ್ಲಿ ನಡೆಯಲು ಅನುವಾಯಿತು.



ಇಪ್ಪತ್ತಂಶ ಕಾರ್ಯಕ್ರಮದ ಅಂಗವಾಗಿ ಬಂಧ ವಿಮುಕ್ತರಾದ ಜೀತದಾಳುಗಳು. ದೇಶದಾದ್ಯಂತ ೫೦,೪೦೦ ಜೀತದಾಳುಗಳ ಬಿಡುಗಡೆ. ಒತ್ತಿ ಬಿದ್ದು ಬತ್ತಿ ಹೋದ ಜನತೆಯ ಮುಖದಲ್ಲಿ ನಗೆಯರಳಿಸಿದ ಕೀರ್ತಿ ಸರಕಾರದ್ದು.



"ಹಳ್ಳಿ ಹಳ್ಳಿಗೆ ವಿದ್ಯುಚ್ಛಕ್ತಿ." ಸ್ವಾತಂತ್ರ್ಯ ನಂತರ ಸರಕಾರ ಕೈಕೊಂಡ ಈ ಯೋಜನೆ ತುಂಬ ಫಲ ಕೊಟ್ಟಿದೆ. ಬಾವಿಯ ನೀರೆತ್ತಿ ಹೊಲಕ್ಕೆ ಹಾಯಿಸುವುದರಿಂದ ಹಿಡಿದು ವಿದ್ಯುಚ್ಚಾಲಿತ ಎಣ್ಣೆಯ ಗಾಣದ ವರೆಗೂ ವಿದ್ಯುತ್‌ಶಕ್ತಿಯ ಉಪಯೋಗ ಹಳ್ಳಿಯಲ್ಲಾಗುತ್ತಿದೆ.

## ಪ್ರಾದೇಶಿಕ ಗ್ರಾಮೀಣ ಬ್ಯಾಂಕ್

ಕೇವಲ ಭೂಮಿಯನ್ನು ಅವರಿಗೆ ವಹಿಸಿಕೊಟ್ಟರೆ ಏನಾಯಿತು? ಅವರು ಅಲ್ಲಿ ಉತ್ತು-ಬಿತ್ತಿ ಚೆನ್ನಾಗಿ ಕೃಷಿ ನಡೆಸಬೇಡವೆ? ಅದಕ್ಕೆ ಅವಶ್ಯವಿರುವ ಪತ್ತು ಕೂಡ ಅವರಿಗೆ ಬೇಕಲ್ಲ. ಸಹಕಾರಿ ಸಂಘಗಳು ಅವಶ್ಯಕ ರೀತಿಯಲ್ಲಿ ಈ ಪತ್ತು ಒದಗಿಸುವುದು ಸಾಧ್ಯವಿಲ್ಲವೆಂದು ಕಂಡು ಬಂದಿತು. ಅಲ್ಲದೇ ವಾಣಿಜ್ಯ ಬ್ಯಾಂಕುಗಳು ಕೂಡ ಸುಲಭವಾಗಿ ಗ್ರಾಮೀಣ ಕೃಷಿಕರಿಗೆ ಪತ್ತು ಒದಗಿಸುವುದು ಕಠಿಣವಾಗಿರುವ ಕೆಲಸವೆಂದು ತಿಳಿದು ಬಂದಿತು. ಗ್ರಾಮೀಣ ಋಣ ವಿಮೋಚನೆಯ ನಂತರ ಆ ಜನರಿಗೆ ಅವಶ್ಯವಿರುವ ಪತ್ತು ಸುಲಭವಾಗಿ ಒದಗಿಸುವುದು ಅವಶ್ಯವೆಂದು ಅನಿ

ಸಿತು. ಅದರಲ್ಲಿಯೂ ಬಂಧಮುಕ್ತ ಜೀತಗಾರರಿಗೆ, ಇತರ ದುರ್ಬಲವರ್ಗಗಳಿಗೆ ಅದರ ಅವಶ್ಯಕತೆ ಹೆಚ್ಚು ತೋರಿ ಬಂದಿತು. ಗ್ರಾಮಾಂತರ ಪ್ರದೇಶದಲ್ಲಿಯ ವಾಣಿಜ್ಯ ಬ್ಯಾಂಕುಗಳ ಶಾಖೆಗಳು ಈ ಪತ್ತಿನ ಸೌಕರ್ಯವನ್ನು ಒದಗಿಸುವಂತೆ ಮುಂದಾದವು. ಆದರೂ ಗ್ರಾಮೀಣ ಜನರಿಗೆ ಸಂಪೂರ್ಣವಾಗಿ ಪ್ರಯೋಜನಕಾರಿಯಾಗಿ ಪರಿಣಮಿಸಲಿಲ್ಲ. ಅದಕ್ಕಾಗಿ ಹೊಸ ಸಂಘಟನೆಯನ್ನು ಏರ್ಪಡಿಸಲಾಯಿತು. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಏರ್ಪಡಿಸಲು ಈ ವರುಷ ಜಾನೇವರಿಯಲ್ಲಿ ಕಾನೂನು ಅಂಗೀಕರಿಸಲಾಯಿತು. ಇಡೀ ರಾಷ್ಟ್ರದಲ್ಲಿ ಇಂಥ ೨೬ ಬ್ಯಾಂಕುಗಳು ಈಗ ಕೆಲಸ ಮಾಡುತ್ತಿದ್ದರೆ, ರಾಜ್ಯದಲ್ಲಿ ಮೂರು ಬ್ಯಾಂಕುಗಳು ಗ್ರಾಮೀಣ ಜನರ ಅಗತ್ಯಗಳನ್ನು ಪೂರೈಸಲು ಮುಂದಾಗಿವೆ. ಹಳ್ಳಿಗಳಲ್ಲಿ ಸುಲಭರೀತಿಯಲ್ಲಿ ಹೆಚ್ಚಿನ ತೊಂದರೆ ಇಲ್ಲದೇ ಪತ್ತು ಒದಗಿಸುವುದು ಇವುಗಳ ಸಂಘಟನೆಯ ಉದ್ದೇಶ. ಕೆಲ ವಾಣಿಜ್ಯ ಬ್ಯಾಂಕುಗಳ ಸಹಯೋಗವಿದ್ದು ಕೇಂದ್ರ ಮತ್ತು ರಾಜ್ಯ ಸರಕಾರಗಳು ನಿರ್ದಿಷ್ಟ ಪ್ರಮಾಣದಲ್ಲಿ ಬಂಡವಲನ್ನು ಒದಗಿಸುವವು. ರಾಜ್ಯದಲ್ಲಿರುವ ಈ ಬಗೆಯ ಮೂರು ಬ್ಯಾಂಕುಗಳು: ತುಂಗಭದ್ರಾ ಗ್ರಾಮೀಣ ಬ್ಯಾಂಕು; ಮಲಪ್ರಭಾ ಗ್ರಾಮೀಣ ಬ್ಯಾಂಕು ಹಾಗೂ ಈಚೆಗೆ ಮುಖ್ಯಮಂತ್ರಿಗಳು ಉದ್ಘಾಟಿಸಿದ ಕಾವೇರಿ ಗ್ರಾಮೀಣ ಬ್ಯಾಂಕು. ಆಡಳಿತ ವೆಚ್ಚವನ್ನು ಮಿತಗೊಳಿಸಿ ಸಂಬಳ ಸಾರಿಗೆಯನ್ನು ರಾಜ್ಯಮಟ್ಟದಲ್ಲಿ ಇರಿಸಿಕೊಂಡು ಕೆಲಸ ಮಾಡಲು ಈ ಬ್ಯಾಂಕುಗಳಿಗೆ ಸಾಧ್ಯವಾಗುವದರಿಂದ ಗ್ರಾಮೀಣ ಜನರಿಗೆ ಅತಿ ಕಡಿಮೆ ಬಡ್ಡಿ ದರದಲ್ಲಿ ಪತ್ತು ಒದಗಿಸಲು ಈ ಬ್ಯಾಂಕುಗಳಿಗೆ ಸಾಧ್ಯವಾಗುವುದು. ಅಲ್ಲದೇ ವಾರ್ಷಿಕ ಸರಾಸರಿ ೩ ಸಾವಿರದಿಂದ ೩.೬೦೦ರೂ. ಆದಾಯವಿರುವವರಿಗೆ ಮಾತ್ರ ಈ ಸೌಕರ್ಯವನ್ನು ಒದಗಿಸಬೇಕೆಂದು ಉದ್ದೇಶಿಸಲಾಗಿದೆ. ಪತ್ತು ದೊರಕಿಸಿಕೊಳ್ಳಲು ಇರುವ ವಿಧಾನಗಳನ್ನು ಸರಳಗೊಳಿಸಲಾಗಿದೆ. ಕಾಗದದ ಕೆಲಸವನ್ನು ಕಡಿಮೆಗೊಳಿಸಲಾಗಿದೆ. ಆದರೂ ಈ ಬ್ಯಾಂಕ್ ಶಾಖೆಗಳ ಮ್ಯಾನೇಜರರು ತುಂಬ ಪರಿಶ್ರಮಿಸಬೇಕಾಗುವುದು.

ತುಂಗಭದ್ರಾ ಗ್ರಾಮೀಣ ಬ್ಯಾಂಕು ಈಗ ಸುಮಾರು ೫೭೦೦ ಜನರಿಗೆ ೩೦ ಲಕ್ಷ ರೂ.ಗಳನ್ನು ಪತ್ತಿನ ರೂಪದಲ್ಲಿ ನೀಡಿದೆ, ೧೧೦೦೦ ಜನರು ಸುಮಾರು ೭ಲಕ್ಷ ರೂ.ಗಳನ್ನು ಠೇವಣಿಯಾಗಿ ಇರಿಸಿರುವರು. ತರಕಾರಿ ಮಾರಾಟಗಾರರಿಂದ ಮೊದಲ್ಗೊಂಡು ಹರಿಜನ, ಚರ್ಮ ಹದಮಾಡುವ ಕೆಲಸಗಾರರ ವರೆಗೂ ಈ ಬ್ಯಾಂಕುಗಳು ಸಾಲ ನೀಡುತ್ತಿವೆ. ಅದರ ಜೊತೆಗೆ ಸಾಲದ ಮರು ಪಾವತಿಯ ಬಗೆಗೂ ಕ್ರಮಬದ್ಧವಾದ ಏರ್ಪಾಡನ್ನು ಅವು ಮಾಡುತ್ತಿವೆ. ಈ ಕ್ರಮದ ಪ್ರಯೋಜನವನ್ನು ಪಡೆದ ಕೆಲವರು ಠೇವಣಿಗಳನ್ನು ಕೂಡ ಹೆಚ್ಚಿಸಿಕೊಂಡಿರುವರು. ಗ್ರಾಮೀಣ ಜನರಿಗೆ ಕೇವಲ ಪತ್ತು ಒದಗಿಸಿದರೆ ಸಾಲದು; ಅವರು ಈ ಪತ್ತಿನ ಪ್ರಯೋಜನ ಪಡೆದು ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳಬೇಕು; ಆ ಮೂಲಕ ಅವರ ಆರ್ಥಿಕ ಭದ್ರತೆ ಬೆಳೆಯಬೇಕು. ಹಾಗೆ ಆದಾಗಲೆ ಈ ಬ್ಯಾಂಕುಗಳ ಸಾರ್ಥಕತೆ ಕಂಡು ಬರುವುದು. ತುಂಗಭದ್ರಾ ಗ್ರಾಮೀಣ ಬ್ಯಾಂಕಿನ ಪ್ರದೇಶದಲ್ಲಿ ಜನರು ಅದರ ಉಪಯೋಗವನ್ನು ಚೆನ್ನಾಗಿ ಮಾಡಿಕೊಂಡಿರುವರು. ಅದೇ ಮೇರೆಗೆ ಉಳಿದ ಬ್ಯಾಂಕುಗಳೂ ಪ್ರಯೋಜನಕಾರಿಯಾಗುವವು. ಗ್ರಾಮೀಣ ಜನರ ಉತ್ಪನ್ನವು ಈಗ ಕ್ರಮೇಣ ಹೆಚ್ಚುತ್ತಿರುವುದು ನಿಜವಾಗಿ ಇವುಗಳ ಸಾರ್ಥಕತೆಯ ಲಕ್ಷಣವಾಗಿರುವಂತೆ ಗ್ರಾಮೋದ್ಧಾರದಲ್ಲಿ ಒಳ್ಳೆಯ ಹೆಜ್ಜೆ. ಅದು ತುಂಬ ಸಂತೋಷದ ಸಂಗತಿ.

ಗ್ರಾಮೀಣ ಪ್ರದೇಶದಲ್ಲಿ ಕೈಗಾರಿಕೆಗಳೂ ಹೆಚ್ಚು; ಅವು ರಾಷ್ಟ್ರದ ಬಹುಭಾಗದಲ್ಲಿ ವ್ಯಾಪಿಸಿವೆ. ಕೈಮಗ್ಗದ ಉದ್ದಿಮೆ ಅವುಗಳಲ್ಲಿ ಪ್ರಮುಖವಾದುದು. ಗ್ರಾಮೀಣ ಪ್ರದೇಶದಲ್ಲಿ ಕೃಷಿಯ ನಂತರ ಮಹತ್ವದ ಉದ್ದಿಮೆ ಇದಾಗಿದೆ. ಅದರಲ್ಲಿ ತೊಡಗಿರುವವರ ಸಂಖ್ಯೆಯೂ ಅತ್ಯಧಿಕ. ಅದಕ್ಕಾಗಿ ಈ ಉದ್ಯಮದ ಅಭಿವೃದ್ಧಿಗಾಗಿಯೂ ಕ್ರಮಗಳನ್ನು ನಿಯೋಜಿಸಲಾಗಿದೆ. ಅವರಿಗೆ ನೂಲು ಒದಗಿಸುವುದು, ಕೈಮಗ್ಗದ ಸರಕುಗಳ ಮಾರಾಟದ ಬಗೆಗೆ ಪತ್ತು ಒದಗಿಸಲಾಗುತ್ತಿದೆ. ಆದಕ್ಕಾಗಿ ಕೈಮಗ್ಗ ನೇಕಾರರ ಸಹಕಾರಿ ಸಂಘಗಳನ್ನು ಸಂಘಟಿಸಲಾಗಿದೆ. ಹಲವಾರು ರಾಜ್ಯಗಳಲ್ಲಿ ಸೇವಾಸಂಘಗಳು ತಲೆಯೆತ್ತಿವೆ. ಅವು ಮುಖ್ಯವಾಗಿ ನೇಕಾರರಿಗೆ ನೆರವು ನೀಡುತ್ತಿವೆ. ಕುಂಬಾರ, ಕಮ್ಮಾರ ಮತ್ತಿತರ ಗ್ರಾಮೋದ್ಯೋಗಗಳಲ್ಲಿ ತೊಡಗಿದ ಕಸಬುದಾರರನ್ನು ಗಮನಿಸಲಾಗಿದೆ. ಅವರು ಸರಕುಗಳನ್ನು ಸಿದ್ಧಪಡಿಸಲು ಸಾಂಪ್ರದಾಯಕ ಉಪಕರಣಗಳು ಅವರ ಶಕ್ತಿಯನ್ನು ತುಂಬ ಬಳಸಿಕೊಂಡರೂ ಪ್ರಯೋಜನ ಕಡಿಮೆ. ಅದಕ್ಕಾಗಿ ಈ ಬಗೆಯ ಉಪಕರಣಗಳಲ್ಲಿ ಸೂಕ್ತವಾದ ಸುಧಾರಣೆ ಮಾಡುವುದು ಅವಶ್ಯವಾಗಿ ಪರಿಣಮಿಸಿತ್ತು. ಕರ್ನಾಟಕ ರಾಜ್ಯದ ಮೈಸೂರು ಜಿಲ್ಲೆಯ ದುರಾ ಗ್ರಾಮದ ಕುಂಬಾರರು ೮–೧೦ ಗಂಟೆ ಪರಿಶ್ರಮಿಸಿದರೆ ಎರಡು ರೂಪಾಯಿಗಳಿಸಲು ಸಾಧ್ಯವಿತ್ತು. ಅವರ ಚಕ್ರವು ಹಳೆಯದು. ಅದರ ಮೇಲೆ ಕೆಲಸ ಮಾಡುವಾಗ ತುಂಬ ದಣಿಯುತ್ತಿದ್ದರು. ಆದರೂ ಅವರ ಆದಾಯ ಹೆಚ್ಚುತ್ತಿರಲಿಲ್ಲ. ಅವರ ಈ ಉಪಕರಣದಲ್ಲಿ ಈಗ ಸುಧಾರಣೆಯಾಗಿದೆ. ವರ್ಧಾದಲ್ಲಿಯ ಗ್ರಾಮೋದ್ಯೋಗಿಗಳ ಕೇಂದ್ರಸಂಶೋಧನಾ ಸಂಸ್ಥೆ ಇದನ್ನು ಸಾಧಿಸಿತು. ಹೀಗಾಗಿ ಈಗ ದುರಾ ಗ್ರಾಮದ ಕುಂಬಾರರು ಕಡಿಮೆ ಅವಧಿಯಲ್ಲಿ ಹೆಚ್ಚು ಕೆಲಸ ಮಾಡಲು ಗಳಿಸಲು ಸಾಧ್ಯವಾಗಿದೆ. ಈಗ ಅವರ ಗಳಿಕೆ ದಿನಕ್ಕೆ ೬ ರೂ.ಗಳು. ಪರಿಶ್ರಮವೂ ಕಡಿಮೆ. ಉತ್ಪಾದನೆಯ ಮಟ್ಟವೂ ಹೆಚ್ಚಿದೆ. ಗ್ರಾಮೀಣ ಕಸಬುದಾರರು ಉಪಕರಣಗಳ ನವೀಕರಣವಾಗುವದರೊಂದಿಗೆ ಅವರಿಗೆ ಯೋಗ್ಯ ಸಂಘಟನೆ ಒದಗಿಸುವುದೂ ಮುಖ್ಯ ಎಂಬ ಮಾತನ್ನು ಗಮನಿಸಲಾಗಿದೆ. ಎಣ್ಣೆ ಗಾಣ, ಕೈಮಗ್ಗ ಇವುಗಳಲ್ಲಿ ಈಗ ಸುಧಾರಣೆಯಾಗಿದೆ. ವಿದ್ಯುಚ್ಛಕ್ತಿಯ ಬಳಕೆಯಾಗುತ್ತಿದೆ. ಪರಿಣಾಮವಾಗಿ ಉತ್ಪಾದನೆಯಲ್ಲಿ ಅಧಿಕ ಹೆಚ್ಚಳ ಕಂಡು ಬರುತ್ತಿದೆ.

## ಸಂಶೋಧನೆಗಳು

ಕರ್ನಾಟಕದ ನಂಜನಗೂಡು ಬಳಿಯ ಬದನವಾಳು ಗ್ರಾಮದ ಸಂಯುಕ್ತ ಗ್ರಾಮೋದ್ಯೋಗ ಕೇಂದ್ರದಲ್ಲಿ ಈ ಸುಧಾರಿತ ಉಪಕರಣಗಳನ್ನು ಬಳಸಲಾಗಿದೆ. ರೇಶ್ಮೆ ರೀಲಿಂಗ್ ಘಟಕ ಹೊಸದೆನಿಸಿದೆ. ಕೋಯಿಮತ್ತೂರಿನ ಓರ್ವ ಇಂಜನೀಯರ್ ಲೋಕವಸ್ತ್ರ ಘಟಕವನ್ನು ಶೋಧಿಸಿದ್ದಾರೆ. ಉರುಟು–ಮಧ್ಯಮ ನೂಲನ್ನು ಬಟ್ಟೆಯನ್ನು ಅದು ಉತ್ಪಾದಿಸಬಲ್ಲುದು. ೫೦ ಜನರಿಗೆ ಉದ್ಯೋಗ ಒದಗಿಸುವ ಈ ಘಟಕವು ಅಗ್ಗದಲ್ಲಿ ಬಟ್ಟೆ ಉತ್ಪಾದಿಸುವುದು. ೫ ಸಾವಿರ ಜನವಸತಿಯ ಹಳ್ಳಿಗಳಲ್ಲಿ ಬಳಸಬಹುದು. ತಮಿಳುನಾಡು ಕರ್ನಾಟಕಗಳಲ್ಲಿ ಪ್ರಾಯೋಗಿಕವಾಗಿ ನಡೆಸಲಾಗುತ್ತಿದೆ. ಖಾದಿ ಗ್ರಾಮೋದ್ಯೋಗ ಆಯೋಗವು ಈ ರಂಗದಲ್ಲಿ ಇನ್ನೂ ಹೆಚ್ಚಿನ ಸಂಶೋಧನೆ ನಡೆಸುತ್ತಿದೆ. ರಾಜ್ಯ ಮಂಡಳಿಗಳ ಯೋಜನೆಗಳಿಗೆ ಹಣಕಾಸನ್ನು ಒದಗಿಸುತ್ತಿದೆ. ಅವುಗಳಿಗೆ ತಾಂತ್ರಿಕ ಪರಿಶೋಧನೆಯ ಅಗತ್ಯ ಕಂಡು ಬಂದಾಗ ಆ ಸೌಕರ್ಯವನ್ನು ಒದಗಿಸಿ ಕೊಡಲಾಗುತ್ತಿದೆ. ಈ ಕಸಬುದಾರರ



ಬೆಲೆಗಳು ಏರದಂತೆ ಹಿಡಿತದಲ್ಲಿಡಲು ಹೊಸ ಹೊಸ ಪದ್ಧತಿಗಳ ಅನುಷ್ಠಾನ. ಬಡವರ ಕೈಗೆಟುಕುವ ಬೆಲೆಯಲ್ಲಿ ಬಟ್ಟೆಯ ವಿಕ್ರಯ ಗ್ರಾಹಕರಿಂದ ಒಂದ ಲಾಭಾಂಶವನ್ನೂ ಸೇರಿಸಿ ಸುಲಭ ದರದಲ್ಲಿ ನೀಡುವ ಬಟ್ಟೆಯಂಗಡಿ ...

ದಕ್ಷತೆಯ ಸಾಮರ್ಥ್ಯ ಹೆಚ್ಚಿಸುವುದು. ಅವರ ಉತ್ಪನ್ನದ ಸ್ಥಿರೀಕರಣ ಮತ್ತು ಕೆಲಸದ ಪರಿಸ್ಥಿತಿಯ ಸುಧಾರಣೆ ಇವು ಈ ಬಗೆಯ ಯೋಜನೆಯಲ್ಲಿಯ ಮೂರು ಮುಖ್ಯ ಅಂಶಗಳು. ಈ ಹಿನ್ನೆಲೆಯಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಈ ಯಾವ ಸಂದರ್ಭದಲ್ಲಿಯೂ ಕೆಲಸಗಾರರಲ್ಲಿ ನಿರುದ್ಯೋಗವುಂಟಾಗದಂತೆ ನೋಡಿಕೊಂಡಿರುವುದು. ಈ ಸರಕುಗಳನ್ನು ಪೇಟೆಗೆ ಸಾಗಿಸುವುದೂ ಒಂದು ಸಮಸ್ಯೆ. ಅಥಣಿಯ (ಬೆಳಗಾವಿ ಜಿಲ್ಲೆ) ಸಮಗಾರರು ಸಿದ್ಧಪಡಿಸುವ ಉಚ್ಚ ತರಗತಿಯ ಚಪ್ಪಲಿಗಳಿಗೆ ಬೇಡಿಕೆ ಬಹಳ. ಆದರೆ ಮುಂಬಯಿ ವ್ಯಾಪಾರಸ್ಥರು ಅದನ್ನು ಅಗ್ಗವಾಗಿ ಖರೀದಿಸಿ ಬಿಡುತ್ತಿದ್ದರು. ಈಗ ಖಾದಿ ಆಯೋಗವು ಮಧ್ಯ ಪ್ರವೇಶಿಸಿ ಯೋಗ್ಯ ಬೆಲೆ ಅವರಿಗೆ ದೊರಕುವಂತೆ ಮಾಡಿದೆ. ಇಂಥ ಅನುಕೂಲಗಳೂ ನಮ್ಮ ಗ್ರಾಮೀಣ ಕಸುಬುದಾರರಿಗೆ ದೊರೆವುದು ಅವಶ್ಯ. ಇದು ಅವರ ಸಾಮರ್ಥ್ಯವನ್ನು ದಕ್ಷತೆಯನ್ನು ತುಂಬ ಹೆಚ್ಚಿಸುತ್ತಿರುವುದು. ಕೃಷಿ ಉತ್ಪಾದನೆಗೂ ಯೋಗ್ಯ ರೀತಿಯಲ್ಲಿ ಪೇಟೆ ದೊರಕುವುದು ಅವಶ್ಯ. ಅಲ್ಲಲ್ಲಿ ಏರ್ಪಟ್ಟಿರುವ ಕೃಷಿಕರ ಸೇವಾ ಸಂಘಗಳು ಈ ಕಾರ್ಯದಲ್ಲಿ ನೆರವಾಗುತ್ತಿವೆ. ಬ್ಯಾಂಕುಗಳಿಂದಲೂ ಕೆಲ ಮಟ್ಟಿಗೆ ಸಹಾಯವಾಗುತ್ತಿದೆ. ಸಮೀಕೃತ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ ಇದಕ್ಕೆ ಪೂರಕವಾಗಿ ಬಂದಿದೆ. ಯಾವುದೇ ಬಗೆಯ ಭೇದ ಭಾವವಿಲ್ಲದೆ ಅದು ಎಲ್ಲರಿಗೂ ಸಮಾನ ರೀತಿಯಲ್ಲಿ ಸೌಕರ್ಯಗಳನ್ನು ಒದಗಿಸುತ್ತಿದೆ.

ಸರಕಾರ ಎಷ್ಟು ಪ್ರಯತ್ನಿಸಿದರೂ ದುರ್ಬಲ ವರ್ಗದವರಿಗೆ ಬಹು ಬೇಗ ಅನುಕೂಲಗಳು ಲಭ್ಯವಾಗುವುದು ಕಡಿಮೆ. ಅವರಿಗೆ ದೊರೆಯಬೇಕಾದ ಸೌಕರ್ಯಗಳಿಗೂ ಆತಂಕ ಪ್ರಾಪ್ತವಾಗುವುದು. ಆಸಾಮದ ಕಾಮರೂಪ ಜಿಲ್ಲೆಯ ಬೊರ್‌ಕುಟಿ ಗ್ರಾಮದ ಸೋನೇಶ್ವರ ದಾಸ್ ಬಡ ಭೂರಹಿತ ಕೃಷಿಕ. ಭೂ ಸುಧಾರಣೆಯ ಪರಿಣಾಮವಾಗಿ ೩.೫ ಬಿಘಾ ಭೂಮಿಯ ಮಾಲಿಕನಾದ. ಭೂ ಮಾಲಿಕನಿಗೆ ಇದು ಒಪ್ಪಿತವಾಗಲಿಲ್ಲ. ಹಿಡುವಳಿ ನಿರ್ಧಾರದ ಅಧಿಕಾರಿಗಳಿಗೆ ಅವನು ಅಪೀಲು ಮಾಡಿಕೊಂಡ. ಸೋನೇಶ್ವರ ದಾಸ್‌ನಿಗೆ ಮೂರು ಸಲ ಹಾಜರಾಗಲು ಕಳಿಸಿದ ನೋಟೀಸುಗಳು ಅದು ಹೇಗೋ ಅವನಿಗೆ ತಲುಪಲೇ ಇಲ್ಲ. ಅಧಿಕಾರಿ ಮೊದಲಿನ ಮಾಲಕನಿಗೆ ಭೂಮಿಯನ್ನು ವಹಿಸಿದ. ನಂತರ ಹೊಲದಲ್ಲಿಯ ಕೆಲ ಉಪಕರಣ ಕಳವು ಮಾಡಿರುವುದಾಗಿ ಅವರ ಮೇಲೆ ಖಟ್ಲೆ ಹಾಕಲಾಯಿತು. ಪೋಲೀಸರಿಂದ ತೊಂದರೆಯೂ ಆಯಿತು. ಈ ಪ್ರಕರಣದಲ್ಲಿ ಹಣವೂ ಕೈ ಬಿಟ್ಟಿತು. ಅದರ ಜೊತೆಗೆ ಕಳವಿನ ಆಪಾದನೆ ಸಾಬೀತಾಯಿತು. ಪ್ರತಿಯೊಬ್ಬರಿಗೂ ೫೦೦ ರೂ. ದಂಡ ವಿಧಿಸಲಾಯಿತು. ಈ ಅವಮಾನವನ್ನು ಸಹಿಸದೆ ಮತ್ತೆ ತುಂಬ ನಿರಾಸೆಗೊಂಡ ಸೋನೇಶ್ವರ ದಾಸ್ ಆತ್ಮಹತ್ಯೆ ಮಾಡಿಕೊಂಡನು. ಈ ಘಟನೆ ಸಂಭವಿಸಿ ೧೫ ದಿನಗಳ ನಂತರ ಮುಖ್ಯ ಮಂತ್ರಿ ಶ್ರೀ ಎಸ್. ಸಿ. ಸಿಂಹರಿಗೆ ಈ ಸುದ್ದಿ ತಿಳಿದಾಗ ಆಘಾತವಾಯಿತು. ಅವರು ಆ ಗ್ರಾಮಕ್ಕೆ ಹೋಗಿ ಅವನ ವಿಧವೆ ಹಾಗೂ ಮಕ್ಕಳನ್ನು ಕಂಡು ಸಂತೈಸಿದರು. ಅವರಿಗೆ ೫೦೦ ರೂ.ಗಳ ತಾತ್ಕಾಲಿಕ ಪರಿಹಾರ ನೀಡಿ ಮಕ್ಕಳು ಬೆಳೆದು ದೊಡ್ಡವರಾಗುವವರೆಗೆ ಆ ವಿಧವೆಗೆ ೧೦೦ ರೂ.ಗಳ ಮಾಸಿಕ ಸಹಾಯ ಧನ ಗೊತ್ತು ಪಡಿಸಿದರು. ಮಹಾರಾಷ್ಟ್ರದ ಮುಖ್ಯ ಮಂತ್ರಿ ಶ್ರೀ ಶಂಕರರಾವ್ ಚವ್ಹಾಣರು ಪಾದಯಾತ್ರೆಯನ್ನು ಕೈಕೊಂಡ ಸಂದರ್ಭದಲ್ಲಿ ಗ್ರಾಮವೊಂದರಲ್ಲಿ ವಿಧವೆಯೊಬ್ಬಳಿಗೆ ಭೂಮಿಯಲ್ಲಿ ಪಾಲು ನಿರಾಕರಿಸಿದೆಯೆಂದು ತಿಳಿದು ಬಂದಿತು. ಅವರು ಆ ಕೂಡಲೇ ಅವಳಿಗೆ ಪಾಲು ದೊರೆವಂತೆ ಏರ್ಪಡಿಸಿದರು.



ಆರ್ಥಿಕವಾಗಿ ದುರ್ಬಲರಾದ ಶ್ರಮಜೀವಿಗಳಿಗೆ ಬ್ಯಾಂಕಿನ ಸಾಲ. ಅವರಿಗೆ ಸಾಲ ಪಡೆಯಲು ಮತ್ತು ಹಿಂದಿರುಗಿಸಲು ಸುಲಭವಾಗುವಂತೆ. ಬ್ಯಾಂಕುಗಳ ಶಾಖೆಗಳನ್ನು ಹಳ್ಳಿಯಲ್ಲಿ ತೆರೆಯಲಾಗಿದೆ. ಬಡವರ ಬದುಕು ಚೇತರಿಸಿಕೊಳ್ಳುವುದಕ್ಕೆ ಇಪ್ಪತ್ತು ಅಂಶ ಹೀಗೆ ಸಹಾಯಕವಾಗಿದೆ.

## ಪ್ರತ್ಯೇಕ ವಿಭಾಗ

ಗ್ರಾಮೀಣ ಪ್ರದೇಶದ ಅಭ್ಯುದಯಕ್ಕೆ ಸರ್ವಾಂಗೀಣ ಪ್ರಯತ್ನ ಅವಶ್ಯ ಎಂಬುದನ್ನು ಮನಗಂಡು ಒಂದು ಪ್ರತ್ಯೇಕವಾದ ವಿಭಾಗವನ್ನು ಏರ್ಪಡಿಸಲಾಗಿದೆ. ಕೃಷಿ, ಆರೋಗ್ಯ, ಸಣ್ಣ ಕೈಗಾರಿಕೆಗಳು ಹಾಗೂ ಶಿಕ್ಷಣದಂಥ ವಿಷಯಗಳೂ ವಿಶೇಷ ಕ್ರಮಗಳನ್ನು ನಿಯೋಜಿಸಿ ಅಭಿವೃದ್ಧಿಯ ಪ್ರಯೋಜನ ಸಕಲರಿಗೂ ದೊರೆವಂತೆ ಮಾಡಬೇಕೆಂಬ ಉದ್ದೇಶ ಇರಿಸಿಕೊಳ್ಳಲಾಗಿದೆ. ಅವರೂ ತಮ್ಮ ಅಭ್ಯುದಯಕ್ಕಾಗಿರುವ ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಶ್ರಮಿಸುವಂತೆ ಮಾಡಬೇಕೆಂಬುದಾಗಿತ್ತು. ಅವರು ತಮ್ಮ ಗುರಿಗಳನ್ನು ಅರಿಯಬೇಕು; ಅವುಗಳ ಸಾಧನೆಯಲ್ಲಿ ಸೇರಬೇಕು. ಕುಟುಂಬ ಸಣ್ಣದಿರಬೇಕು; ಯೋಗ್ಯ ಜೀವನ ಮಟ್ಟ ದೊರೆಯಬೇಕು. ಅಲ್ಲದೇ ಈ ಕಾರ್ಯಕ್ರಮದ ಯಶಸ್ಸಿಗೆ ಶ್ರಮ ದಾನ, ಧನ ಸಹಾಯ, ನಾಯಕತ್ವ ಒದಗಿಸಿ ನೆರವಾಗಬೇಕು. ರಾಜ್ಯ ಮತ್ತು ಕೇಂದ್ರ ಸರಕಾರಗಳು ವೆಚ್ಚವನ್ನು ಹಂಚಿಕೊಂಡು ಭರಿಸಬೇಕು ಎಂಬುದನ್ನು ಈ ಯೋಜನೆಯಲ್ಲಿ ನಿರೂಪಿಸಲಾಗಿತ್ತು. ಆ ಮೇರೆಗೆ ಈಗ ತ್ವರಿತವಾಗಿ ಅದು ಕಾರ್ಯಗತಗೊಳ್ಳುತ್ತಿರುವುದು ಸಂತೋಷದ ಸಂಗತಿ. ಈಗ ಯುವಕರೂ ಇದರಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಪ್ರತಿ ೨೦ ಗ್ರಾಮಗಳಿಗೆ ಒಂದರಂತೆ ರಾಷ್ಟ್ರದಲ್ಲಿ ೨೦ ಸಾವಿರ ಯುವಕ ಕ್ಲಬ್ಬುಗಳನ್ನು ಇದಕ್ಕಾಗಿ ಸಂಘಟಿಸಲಾಗಿದೆ. ರಾಷ್ಟ್ರೀಯ ಪ್ರಾದೇಶಿಕ ಉತ್ಸವಗಳಲ್ಲಿ ಈ ಯುವಕರು ಭಾಗವಹಿಸುವರು, ಗ್ರಾಮೀಣ ಸಮಸ್ಯೆಗಳನ್ನು ಚರ್ಚಿಸಿ ಪರಿಹಾರಕ್ಕಾಗಿ ವಿಚಾರಿಸುವರು. ನೆಹರು ಯುವಕ ಕೇಂದ್ರಗಳೂ ತುಂಬ ಪ್ರಯೋಜನಕಾರಿಯಾಗಿ ಕೆಲಸ ಮಾಡುತ್ತಿವೆ. ಇದರಿಂದ ಅವರ ದೈಹಿಕ-ಮಾನಸಿಕ ಬೆಳವಣಿಗೆಗೆ ಒಳ್ಳೇ ಅವಕಾಶವಾಗಿರುವುದು.

ಗ್ರಾಮೀಣ ಜನರಿಗೆ ಆಡಳಿತದ ಪರಿಚಯವನ್ನು ಮಾಡಿಕೊಡಲಾಗುತ್ತಿದೆ. ಸದ್ಯಕ್ಕೆ ೫,೪೪,೩೫೫ ಗ್ರಾಮಗಳಲ್ಲಿ ವಾಸಿಸುವ ೪೦.೬೮ ಕೋಟಿ ಜನರಿಗಾಗಿ ೨,೧೯,೮೯೨ ಗ್ರಾಮ ಪಂಚಾಯತಿಗಳು ಇವೆ. ಅಲ್ಲದೇ ೩೮೬೩ ಪಂಚಾಯತ ಸಮಿತಿಗಳೂ ೨೦೧ ಜಿಲ್ಲಾ ಪರಿಷತ್ತುಗಳೂ ಕಾರ್ಯೋನ್ಮುಖವಾಗಿವೆ. ರಾಷ್ಟ್ರದ ೧೫ ರಾಜ್ಯಗಳಲ್ಲಿ ತ್ರೀಶ್ರೇಣಿಯ ಪಂಚಾಯತ ರಾಜ್ಯವಿದ್ದರೆ ಜಮ್ಮು-ಕಾಶ್ಮೀರ, ಕೇರಳ ಮಣಿಪುರ ಮತ್ತು ತ್ರಿಪುರಾಗಳಲ್ಲಿ ಕೇವಲ ಗ್ರಾಮ ಪಂಚಾಯತಿಗಳಿರುವವು. ಗ್ರಾಮೀಣ ಜನರು ಈ ಮೂಲಕ ಆಡಳಿತದಲ್ಲಿ ಪ್ರತ್ಯಕ್ಷವಾಗಿ ಪಾಲ್ಗೊಳ್ಳುತ್ತಿರುವುದು ಗ್ರಾಮೀಣ ಭಾರತವು ವಿದ್ಯುಚ್ಛಕ್ತಿ ಸಂಪರ್ಕ ಸಾಧನಗಳು, ಶೈಕ್ಷಣಿಕ ಮತ್ತು ವೈದ್ಯಕೀಯ ಸೌಕರ್ಯಗಳನ್ನು ಹೆಚ್ಚು ಹೆಚ್ಚಾಗಿ ಪಡೆಯುತ್ತಿದೆ. ತಾಂತ್ರಿಕ ಜ್ಞಾನವನ್ನು ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ಹೆಚ್ಚಾಗಿ ಬಳಸಿಕೊಳ್ಳಲು ಈಗ ಯತ್ನಿಸಲಾಗುತ್ತಿದೆ. ಆ ಮೂಲಕ ಗ್ರಾಮಗಳ ಆರ್ಥಿಕ ಸ್ಥಿತಿ ಗತಿ ಸುಧಾರಿಸಲು ಸಾಧ್ಯವಾಗುತ್ತಿದೆ. ಗ್ರಾಮೀಣ ಭಾರತ ಈ ಮೂಲಕವಾಗಿ ಜಾಗೃತವಾಗುತ್ತಿದೆ. ಅಲ್ಲಿ ಚಟುವಟಿಕೆಗಳು ಹೆಚ್ಚುತ್ತಿವೆ. ಗ್ರಾಮೀಣ ಪಟ್ಟಣ ಪ್ರದೇಶಗಳ ಜೀವನ ಮಟ್ಟದ ಅಂತರವೂ ಕ್ರಮೇಣ ಕಡಿಮೆಯಾಗುತ್ತಿದೆ. ಅದರಿಂದಾಗಿ ಗ್ರಾಮೀಣ ಜನತೆ ಉದ್ಯೋಗ ಹುಡುಕಿಕೊಂಡು ನಗರ-ಪಟ್ಟಣಗಳಿಗೆ ಧಾವಿಸುವುದನ್ನು ತಪ್ಪಿಸಲು ಇನ್ನೂ ಹೆಚ್ಚು ಸಾಧ್ಯವಾಗಬಹುದು.

# ಇಪ್ಪತ್ತು ಅಂಶಗಳ ಅನುಷ್ಠಾನ

ಎಚ್ಚೆಸ್ಕೆ

**ಪ್ರಧಾನಿಗಳು ಘೋಷಿಸಿದ ೨೦ ಅಂಶ ಕಾರ್ಯಕ್ರಮದ ಯಶಸ್ಸಿನ ಬಗ್ಗೆ ಎರಡು ಮಾತಿಲ್ಲ. ಅಲ್ಪ ವೇಳೆಯಲ್ಲೇ ಅದ್ಭುತವನ್ನು ಸಾಧಿಸಿ, ದೇಶದ ಜನತೆಯ ಬಾಳು ಹಸನಾಗಿಸಿದ್ದು ಈ ಹೊಸ ಆರ್ಥಿಕ ಕಾರ್ಯಕ್ರಮದ ಆಶಾದಾಯಕ ಫಲಿತಾಂಶ. ಇದು ಬರಿ ಘೋಷಣೆಯಲ್ಲ; ಪ್ರಜಾಪೋಷಣೆಯ ಪ್ರಬಲಾಂಶ.**

ಭಾರತದ ಆರ್ಥಿಕತೆಯ ಕಾಯಕಲ್ಪಕ್ಕಾಗಿ ಪ್ರಧಾನಿ ಇಂದಿರಾ ಗಾಂಧಿಯವರು ಇಪ್ಪತ್ತು ಅಂಶಗಳ ಕಾರ್ಯಕ್ರಮ ಘೋಷಿಸಿ ಹದಿನೈದು ತಿಂಗಳುಗಳಾಗುತ್ತಬಂತು. ಈ ಕಾರ್ಯಕ್ರಮದ ಗುರಿ ಹಾಗೂ ಸಾಧನೆಗಳ ಸಮೀಕ್ಷೆ ನಡೆಸುವುದಕ್ಕೆ ಇದೀಗ ಕಾಲ ಸೂಕ್ತ.

ಹಲವು ಅಂಶಗಳ ಕಾರ್ಯಕ್ರಮದ ಮಾತು ಭಾರತಕ್ಕೆ ಹೊಸದೇನೂ ಅಲ್ಲ. ಧರ್ಮ–ಅರ್ಥ–ಕಾಮ–ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳು ಮಾನವನ ವಿಕಾಸಕ್ಕೆ ನಾಲ್ಕು ಅಂಶಗಳ ಕಾರ್ಯಕ್ರಮ. ಕಾಂಗ್ರೆಸ್ಸು ಸುಮಾರು ಒಂಭತ್ತು ವರ್ಷ ಹಿಂದೆ ಘೋಷಿಸಿದ ಹತ್ತು ಅಂಶಗಳ ಕಾರ್ಯಕ್ರಮ ಆರ್ಥಿಕ ಪ್ರಗತಿಗೆ ಒಂದು ದಿಕ್ಸೂಚಿ. ಎರಡು ವರ್ಷ ಹಿಂದೆ ಘೋಷಿಸಲಾದ ವರೋರ ಕಾರ್ಯಕ್ರಮ ಈ ದಿಕ್ಕಿನಲ್ಲಿ ಇನ್ನೊಂದು ಪ್ರಯತ್ನ. ಭಾರತದ ಸಾಮಾಜಿಕ–ಆರ್ಥಿಕ ಪ್ರಗತಿಯ ವೇಗವನ್ನು ಹೆಚ್ಚಿಸಿ, ಕನಿಷ್ಠ ಕಾಲದಲ್ಲಿ ಗರಿಷ್ಠ ಪರಿವರ್ತನೆ ಸಾಧಿಸುವ ಉದ್ದೇಶದಿಂದ ಘೋಷಿಸಲಾದ ಇಪ್ಪತ್ತು ಅಂಶಗಳ ಕಾರ್ಯಕ್ರಮ ಈ ಹಳೆಯ ಹಂಬಲಕ್ಕೆ ನೀಡಲಾದ ಹೊಸ ಚೈತನ್ಯ. ತುರ್ತು ಪರಿಸ್ಥಿತಿಯ ಹಿನ್ನೆಲೆಯಲ್ಲಿ ಉದಿಸಿರುವ ಶಿಸ್ತಿನ ವಾತಾವರಣದಲ್ಲಿ, ಪ್ರತಿಗಾಮಿ ಶಕ್ತಿಗಳ ಅಡಚಣೆಯ ಅಂಜಿಕೆಯಿಲ್ಲದೆ ತ್ವರಿತವಾಗಿ ಸಾಧಿಸಬೇಕಾದ ಪ್ರಗತಿಯ ಕಾರ್ಯಗಳ ಪಟ್ಟಿ ಇದು. ಅತ್ಯಂತ ಶೀಘ್ರವಾಗಿ-ಒಂದು ವರ್ಷದೊಳಗೆ–ಇದರ ಬಹು ಅಂಶ ಸಾಧಿತವಾಗಬೇಕು, ಇಲ್ಲವೇ ಪ್ರಗತಿಯ ಚಕ್ರ ಮುಂದಕ್ಕೆ ಉರುಳಬೇಕು, ಎಂಬ ಆಶಯದಿಂದ ಘೋಷಿಸಲಾದ ಕಾರ್ಯಕ್ರಮವಿದು. ಲಭ್ಯವಿರುವ ಸೌಲಭ್ಯಗಳ ದೃಷ್ಟಿಯಿಂದ ಕೂಡಲೇ ಜನಜೀವನ ಪರಿಸ್ಥಿತಿಯಲ್ಲಿ ಸಾಧಿಸಬಹುದಾದ ಪ್ರಗತಿಕಾರ್ಯಗಳ ಪಟ್ಟಿ ಇದು.

ಇಪ್ಪತ್ತು ಅಂಶಗಳ ಕಾರ್ಯಕ್ರಮಕ್ಕೆ ಪೂರ್ವಭಾ[illegible] [illegible] ವಿರುದ್ಧ ಕೈಕೊಂಡ ಕಾರ್ಯಾಚರಣೆಯಿಂದಲೂ, ಕಪ್ಪು ಹಣ ಅಕ್ರಮ ದಾಸ್ತಾನುಗಳನ್ನು ಪತ್ತೆ ಹಚ್ಚಿ ಸಂಬಂಧಪಟ್ಟವರನ್ನು ಶಿಕ್ಷಿಸುವ ಕ್ರಮದಿಂದಲೂ ಆರ್ಥಿಕ ವಾತಾವರಣ ತಕ್ಕಮಟ್ಟಿಗೆ ನಿಯಂತ್ರಣಕ್ಕೆ ಒಳಪಡುತ್ತಲಿತ್ತು. ಆದರೂ ಹಣದುಬ್ಬರ ಪರಿಸ್ಥಿತಿ ಇನ್ನೂ ತೀವ್ರವಾಗಿಯೇ ಇತ್ತು. ೧೯೭೨–೭೩ರಲ್ಲಿ ಶೇ. ೨೨.೭ರ ದರದಲ್ಲಿ ಏರುತ್ತಿದ್ದ ಹಣದುಬ್ಬರ ೧೯೭೩–೭೪ರಲ್ಲಿ ಇನ್ನೂ ಉಲ್ಬಣವಾಗಿತ್ತು. ೧೯೭೪ರ ಸೆಪ್ಟೆಂಬರ ವೇಳೆಗೆ ಅದರ ಏರಿಕೆಯ ದರ ಶೇ. ೩೨ ಆಗಿತ್ತು. ದೇಶದ ಕೇಂದ್ರೀಯ ಬ್ಯಾಂಕಾದ ರಿಸರ್ವ ಬ್ಯಾಂಕಿನ ಬೆಂಬಲದೊಂದಿಗೆ ೧೯೭೫ರಲ್ಲಿ ಸರಕಾರ ಕೈಗೊಂಡ ಬಿಗಿ ನೀತಿಯ ಫಲವಾಗಿ ಹಣದುಬ್ಬರವನ್ನು ತಡೆಗಟ್ಟಲು ಸಾಧ್ಯವಾಯಿತಷ್ಟೇ ಅಲ್ಲ, ಅದನ್ನು ಹಿಮ್ಮೆಟ್ಟಿಸುವುದೂ ಸಾಧ್ಯವಾಯಿತು. ಅಭಿವೃದ್ಧಿಶೀಲ ದೇಶವೊಂದು ಈ ನಿಟ್ಟಿನಲ್ಲಿ ಗಳಿಸಿರುವ ಯಶಸ್ಸು ಅಭೂತಪೂರ್ವವೆಂದೇ ಹೇಳಬೇಕು. ಸಗಟು ಬೆಲೆ ಸೂಚಿ, ೧೯೭೦–೭೧ರ ಮಟ್ಟದೊಂದಿಗೆ (೧೦೦) ಹೋಲಿಸಿದಾಗ, ೧೯೭೪ರ ಸೆಪ್ಟೆಂಬರ್ ವೇಳೆಗೆ ೩೩೦.೭ಕ್ಕೆ ಏರಿತ್ತು, ೧೯೭೫ರ ಮಾರ್ಚ ವೇಳೆಗೆ ಸಗಟು ಬೆಲೆಗಳಲ್ಲಿ ಶೇ. ೭.೪ ರಷ್ಟು ಇಳಿತಾಯವಾದದ್ದು ಗಮನಾರ್ಹ ಸಾಧನೆ. ಇದೇ ಪ್ರವೃತ್ತಿ ಅನಂತರವೂ ಮುಂದುವರಿಯಿತು. ೧೯೭೬ರ ಮಾರ್ಚ ವೇಳೆಗೆ ಬೆಲೆಗಳು ಇನ್ನೂ ಶೇ. ೫.೬ ರಷ್ಟು ಇಳಿದುವು. ಆದರೆ ಅಲ್ಲಿಂದೀಚೆಗೆ ಬೆಲೆಗಳಲ್ಲಿ ಮತ್ತೆ ಆತಂಕಕಾರಿ ಪ್ರವೃತ್ತಿಗಳು ತಲೆದೋರಿವೆ, ಮುಂಗಾರಿನ ವಿಳಂಬ, ವ್ಯಾಪಾರಿಗಳ ಲಾಭದೃಷ್ಟಿ, ಕೃಷಿ ಉತ್ಪನ್ನ ಬೆಲೆಗಳು ತೀರ ಕೆಳಮಟ್ಟಕ್ಕೆ ಇಳಿಯದಂತೆ ಸರ್ಕಾರ ಕೈಗೊಂಡ ಕ್ರಮಗಳ ದುರುಪಯೋಗ ಪಡೆದುಕೊಳ್ಳಲು ಮಧ್ಯವರ್ತಿಗಳು ನಡೆಸಿದ ಚಟುವಟಿಕೆ ಮುಂತಾದ ಕಾರಣಗಳಿಂದ ಬೆಲೆಗಳು ಮತ್ತೆ ತಲೆಯೆತ್ತತೊಡಗಿದುವು. ಎಣ್ಣೆಬೀಜ. ಸಕ್ಕರೆ. ಹತ್ತಿ ಮುಂತಾದ ಕೆಲವು ಪದಾರ್ಥಗಳ ಬೆಲೆಗಳು ಶೇ. ೪೦ ರಷ್ಟೇ ಅಧಿಕವಾದುವೆನ್ನಬಹುದು. ಏರುಬೆಲೆ ಪ್ರವೃತ್ತಿಯನ್ನು ಅದು ನೀಡಲಾಗಿದೆಯಾದರೂ ಅದನ್ನು ಸಂಪೂರ್ಣವಾಗಿ ಅಡಗಿಸುವುದು ಸಾಧ್ಯವಾಗಿಲ್ಲವೆಂಬುದರ ಸೂಚನೆಯಿದು. ಬೇಡಿಕೆ ತೀವ್ರವಾಗಿ ಏರಿದಾಗ ವಿತರಣೆಯಲ್ಲಿ ಸಂಭವಿಸುವ ತೊಡಕುಗಳಿಂದಾಗಿ ಇಂಥ ಪ್ರವೃತ್ತಿ ಪದೇಪದೇ ತಲೆದೋರುವುದೆಂಬುದು ಸರ್ಕಾರ ಕಂಡುಕೊಂಡ ಕಟು ಸತ್ಯ. ಆದ್ದರಿಂದ ಅದು ಅಗತ್ಯ ವಸ್ತುಗಳ ಉತ್ಪಾದನೆ ವಿತರಣೆಗಳಿಗೆ ಸಮಗ್ರ ಕಾರ್ಯಕ್ರಮವೊಂದನ್ನು ರೂಪಿಸಿದೆ. ಆಹಾರ ಧಾನ್ಯದ ಕಾಪು ದಾಸ್ತಾನು ಹಿಂದೆಂದೂ ಮುಟ್ಟದ ಉನ್ನತ ಮಟ್ಟ ಮುಟ್ಟಿದೆ.. ಪರಿಸ್ಥಿತಿ ಕೈಮೀರದಂತೆ ಎಚ್ಚರ ವಹಿಸಿ, ಬೆಲೆಗಳನ್ನು ಸ್ಥಾಯಿಗೊಳಿಸಿ. ಶ್ರೀಸಾಮಾನ್ಯನ ನೆಮ್ಮದಿ ಸಾಧಿಸುವುದು ಇಪ್ಪತ್ತು ಅಂಶಗಳ ಕಾರ್ಯಕ್ರಮದಲ್ಲಿ ಮೊದಲನೆಯ ಅಂಶ.

ವಿಶ್ವಬ್ಯಾಂಕು ಭಾರತದ ಆರ್ಥಿಕತೆಯನ್ನು ಕುರಿತಂತೆ ಇತ್ತೀಚೆಗೆ ಪ್ರಕಟಿಸಿದ ಒಂದು ಹಿನ್ನೆಲೆ ಟಿಪ್ಪಣಿಯಲ್ಲಿ ಒಂದು ವಿಚಾರದತ್ತ ಗಮನ ಸೆಳೆದಿದೆ. ಕೃಷಿ ಉತ್ಪನ್ನದಲ್ಲಿ ಭಾರತ ಕಳೆದ ವರ್ಷ ಅಭೂತಪೂರ್ವ ಮಟ್ಟ ಸಾಧಿಸಿದೆಯಾದರೂ, ದೀರ್ಘ ಅವಧಿಯಲ್ಲಿ ಕೃಷಿಯ ಉತ್ಪನ್ನದ ಬೆಳವಣಿಗೆ ಜನಸಂಖ್ಯೆ ಬೆಳೆದಿರುವ ದರದಲ್ಲೇ ಆಗಿದೆಯೆಂದು ಅದು ಹೇಳಿದೆ. ದೇಶದ ಬೇಡಿಕೆಗೂ ಪೂರೈಕೆಗೂ ನಡುವಣ ಅಂತರ ಹಾಗೆಯೇ ಉಳಿದಿದೆ. ಪ್ರಸಾಮಾನ್ಯ ಬೆಳೆ ಆದ ವರ್ಷದಲ್ಲಿ ದೇಶದ ಆಹಾರಧಾನ್ಯ ಉತ್ಪನ್ನ ಅದರ ಜನಸಂಖ್ಯೆಯ ಶೇ. ೯೫–೯೭ ರಷ್ಟಕ್ಕೆ ಮಾತ್ರ ಸಾಕು. ಫಸಲು ಅತ್ಯಂತ ಸಮೃದ್ಧಿಯಾಗಿ ಬಂದ ವರ್ಷದಲ್ಲಿ ಮಾತ್ರವೇ ಬೇಡಿಕೆಗಿಂತ ಅಧಿಕ ಉತ್ಪನ್ನ ದೊರಕಿ. ಜನತೆಯ ಅನುಭೋಗದ ಮಟ್ಟವನ್ನು ಹೆಚ್ಚಿಸುವ ಕ್ರಮಕೈಗೊಳ್ಳುವುದು ಸಾಧ್ಯ ಎಂದು ವಿಶ್ವ ಬ್ಯಾಂಕ್ ಟಿಪ್ಪಣಿ ತಿಳಿಸುತ್ತದೆ. ಆದ್ದರಿಂದ ಕೃಷಿ ಉತ್ಪಾದನೆಗೆ ನಮ್ಮ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಎಂದಿನಂತೆ ಆದ್ಯತೆ ಸಂದಿದೆ.

ಉತ್ಪಾದನೆಗೆ ಅತ್ಯಂತ ಹೊಂದಿಕೊಂಡದ್ದು ಭೂಸುಧಾರಣೆ. ದೇಶಕ್ಕೆ ಸ್ವಾತಂತ್ರ್ಯ ಬಂದಾಗಿನಿಂದ ಭೂಸುಧಾರಣೆಯ ವಿಚಾರವಾಗಿ ಮಾತಾಡುತ್ತಲೇ ಇದ್ದೇವೆ. ಉಳುವವನಿಗೇ ನೆಲ ದೊರಕಬೇಕು. ಗಭೀರ ದಾರಿದ್ರ್ಯದಿಂದ ನರಳುತ್ತಿರುವ ಹಳ್ಳಿಗರಿಗೆ ಪರಿಹಾರ ದೊರಕಬೇಕು. ಭೂ ಹಿಡುವಳಿಯಲ್ಲಿ ಸುಧಾರಣೆಯಾಗಬೇಕು. ಒಂದು ಪರಿಮಿತಿಗಿಂತ ಹೆಚ್ಚಾಗಿ ಇರುವ ಜಮೀನನ್ನು ಅದರ ಒಡೆಯರಿಂದ ತೆಗೆದುಕೊಂಡು ಭೂ ಹೀನರಲ್ಲಿ ಹಂಚಬೇಕು. ಇವೆಲ್ಲ ಉದಾತ್ತ ಆಶಯಗಳೇ. ಆದರೆ ಇವನ್ನು ಕಾರ್ಯಗತಗೊಳಿಸುವಲ್ಲಿ ನಾನಾ ಬಗೆಯ ತೊಡಕು.

ಇಪ್ಪತ್ತು ಅಂಶಗಳ ಕಾರ್ಯಕ್ರಮದಲ್ಲಿ ಭೂಸುಧಾರಣೆಗೆ ವಿಶೇಷ ಗಮನ ಸಂದಿದೆ. ರಿಟ್ ಅರ್ಜಿಗಳ ಗೊಂದಲವಿಲ್ಲದೆ ಇದನ್ನು ಇತ್ಯರ್ಥಪಡಿಸುವುದು ಈಗ ಸಾಧ್ಯ. ದೇಶದಲ್ಲಿ ಒಟ್ಟು ೧೫,೩೨,೦೦೦ ಹೆಕ್ಟೇರ್ ಹೆಚ್ಚುವರಿ ಜಮೀನು ಹಂಚಿಕೆಗಾಗಿ ಲಭ್ಯವಿರುವುದೆಂಬುದು ರಾಜ್ಯ ಸರಕಾರಗಳ ನಿರೀಕ್ಷೆ. ರಾಜ್ಯಾನುಗುಣವಾಗಿ ವಿವರ ಹೀಗಿದೆ: ಆಂಧ್ರಪ್ರದೇಶದಲ್ಲಿ ೪,೦೦,೦೦೦ ಹೆಕ್ಟೇರ್, ಅಸ್ಸಾಮಿನಲ್ಲಿ ೧,೬೧,೨೦೦ ಹೆಕ್ಟೇರ್, ಬಿಹಾರದಲ್ಲಿ ೮೦,೦೦೦ ಹೆಕ್ಟೇರ್, ಗುಜರಾತಿನಲ್ಲಿ ೨೦,೦೦೦ ಹೆಕ್ಟೇರ್, ಹರ್ಯಾಣದಲ್ಲಿ ೨೨,೪೦೦ ಹೆಕ್ಟೇರ್, ಜಮ್ಮು-ಕಾಶ್ಮೀರದಲ್ಲಿ ೧೮,೦೦೦ ಹೆಕ್ಟೇರ್, ಕರ್ನಾಟಕದಲ್ಲಿ ೧,೬೦,೦೦೦ ಹೆಕ್ಟೇರ್, ಕೇರಳದಲ್ಲಿ ೪೨,೦೦೦ ಹೆಕ್ಟೇರ್, ಮಧ್ಯಪ್ರದೇಶದಲ್ಲಿ ೨೦,೦೦೦ ಹೆಕ್ಟೇರ್, ಮಹಾರಾಷ್ಟ್ರದಲ್ಲಿ ೧,೪೮,೬೦೦ ಹೆಕ್ಟೇರ್, ಮಣಿಪುರದಲ್ಲಿ ೧,೬೦೦ ಹೆಕ್ಟೇರ್, ಒರಿಸ್ಸಾದಲ್ಲಿ ೪೦,೦೦೦ ಹೆಕ್ಟೇರ್, ಪಂಜಾಬಿನಲ್ಲಿ ೩೪,೮೦೦ ಹೆಕ್ಟೇರ್ ರಾಜಸ್ಥಾನದಲ್ಲಿ ೧.೧೯.೨೦೦ ಹೆಕ್ಟೇರ್, ತಮಿಳುನಾಡಿನಲ್ಲಿ ೩೭,೨೦೦ ಹೆಕ್ಟೇರ್, ತ್ರಿಪುರದಲ್ಲಿ ೮೦೦ ಹೆಕ್ಟೇರ್ ಮತ್ತು ಪಶ್ಚಿಮ ಬಂಗಾಳದಲ್ಲಿ ೮೦,೦೦೦ ಹೆಕ್ಟೇರ್.

ಇಪ್ಪತ್ತು ಅಂಶಗಳ ಕಾರ್ಯಕ್ರಮದ ಪ್ರಕಾರ ಆದ್ಯ ಪ್ರಾಶಸ್ತ್ಯ ನೀಡಲಾದ ಈ ಕೆಲಸ ಈಗ ಸತತವಾಗಿ ಸಾಗಿದೆ. ಹೆಚ್ಚುವರಿ ಜಮೀನನ್ನು ನಿರ್ಧರಿಸಿ ಹಂಚುವ ಕೆಲಸ ಸ್ವಲ್ಪ ನಿಧಾನವಾಗಿದ್ದರೆ ಅದಕ್ಕೆ ಕಾರಣ ಈ ಕಾರ್ಯಕ್ಕೆ ಸಂಬಂಧಿಸಿದಂತೆ ನಾನಾ ಬಗೆಯ ತೊಡಕು. ಪಟ್ಟಭದ್ರ ಹಿತಾಸಕ್ತಿಗಳ ಅಡಗಾಲು. ಅಂತೂ ಆದಷ್ಟು ಬೇಗ ಈ ಕೆಲಸ ಮುಗಿದೀತು- ಎಂಬುದಾಗಿ ಆಶೆ.

ದಾರಿದ್ರ್ಯ ರೇಖೆಗಿಂತ ಕೆಳಗಿನ ಮಟ್ಟದಲ್ಲಿ ಜೀವಿಸುತ್ತಿರುವ ಇಪ್ಪತ್ತೆ ದು ಕೋಟಿ ಜನರನ್ನುಳ್ಳ ಭಾರತದಲ್ಲಿ ಅನೇಕರಿಗೆ ತಮ್ಮದೆಂಬ ಮನೆಯೂ ಇಲ್ಲ. ಭವ್ಯ ನಗರಗಳಲ್ಲಿ ಉನ್ನತ ಸೌಧಗಳನ್ನು ನಿರ್ಮಿಸುವ ಮಾತು ಹಾಗಿರಲಿ, ಈ ಗೃಹಹೀನರಿಗೆ ಕಾಲು ಚಾಚಿ ಕೂಡುವಷ್ಟು ನೆರಳಿರುವ ಮನೆಗಳನ್ನು ಒದಗಿಸುವುದು ತುಂಬ ಜರೂರು. ಇಪ್ಪತ್ತು ಅಂಶಗಳಲ್ಲಿ ಈ ಕಾರ್ಯಕ್ಕೆ ಮೂರನೆಯ ಸ್ಥಾನ. ಇದುವರೆಗೆ ೬೫ ಲಕ್ಷಕ್ಕೂ ಹೆಚ್ಚು ನಿವೇಶನಗಳನ್ನು ಬಡವರಿಗೆ ಹಂಚಲಾಗಿದೆ. ಸುಮಾರು ೩ ಲಕ್ಷ ಮಂದಿ ಮನೆ ಕಟ್ಟಿಕೊಂಡಿದ್ದಾರೆ. ರಾಜ್ಯ ಸರ್ಕಾರಗಳು ಗೃಹನಿರ್ಮಾಣಕ್ಕೆ ಸೂಕ್ತವಾದ ನೆರವನ್ನು ನೀಡುತ್ತಿವೆ. ಕರ್ನಾಟಕ ರಾಜ್ಯದ ಕ್ರಮ ಈ ನಿಟ್ಟಿನಲ್ಲಿ ಗಮನಾರ್ಹ.

ಭಾರತದ ನಾಗರಿಕತೆಗೆ ಒಂದು ಕಳಂಕವಾಗಿದ್ದದ್ದೆಂದರೆ ಜೀತಪದ್ಧತಿ. ಕರ್ನಾಟಕದಲ್ಲಿ ಮಾಡಲಾದ ಒಂದು ಸಮೀಕ್ಷೆಯ ಪ್ರಕಾರ ಜೀತಪದ್ಧತಿ ಬಹುತೇಕ ವಂಶಪಾರಂಪರ್ಯ. ಯಾರೋ ಮಾಡಿದ ಯಾವುದೋ ಅಲ್ಪ ಸಾಲವೇ ಹಲವು ವೇಳೆ ಇದಕ್ಕೆ ನಿಮಿತ್ತ. ಬಿಡುಗಡೆಯ ಆಸೆಯೇ ಇಲ್ಲದ ದುಡಿತ. ಜೀತಪದ್ಧತಿಯ ರದ್ದಿಗಾಗಿ ಕೈಗೊಂಡ ಕ್ರಮಗಳಿಂದಾಗಿ ದೇಶದಲ್ಲಿ ೫೮,೦೦೦ ಕ್ಕಿಂತ ಹೆಚ್ಚು ಮಂದಿ ಜೀತಗಾರರ ವಿಮೋಚನೆಯಾಗಿದೆಯೆಂದು ವರದಿ.

ಬಿಡುಗಡೆಯಾದ ಜನಕ್ಕೆ ಅನ್ಯ ಜೀವನೋಪಾಯ ಒದಗಿಸುವುದೊಂದು ಸಮಸ್ಯೆ. ಈ ನಿಟ್ಟಿನಲ್ಲೂ ಕರ್ನಾಟಕದ ಕ್ರಮ ಒಂದು ಮಾದರಿ. ಸರ್ಕಾರಿ ಮರಾಮತ್ ಕಾಮಗಾರಿಗಳಲ್ಲಿ, ಇತರ ಉದ್ಯಮಗಳಲ್ಲಿ ಇಂಥವರಿಗೆ ಆದ್ಯತೆ. ಜಿಲ್ಲಾ ನ್ಯಾಯಾಧೀಶರಿಂದ ಪ್ರಮಾಣ ಪತ್ರ ಪಡೆದವರಿಗೆ ಕೆಲಸದಲ್ಲಿ ಮೊದಲ ಪ್ರಾಶಸ್ತ್ಯ. ಜೀತದಿಂದ ಬಿಡುಗಡೆ ಹೊಂದಿದವರ ದುಡಿಮೆ ಅವರ ಹಿಂದಿನ ಒಡೆಯರಿಗೆ ಅಗತ್ಯವಾದ್ದರಿಂದ ಅವರೇ ನಿಗದಿಯಾದ ಕನಿಷ್ಠ ಕೂಲಿಕೊಟ್ಟು ಅವರ ದುಡಿಮೆ ಪಡೆಯುವುದು ಅನಿವಾರ್ಯ.

ಬಡ ಬೋರೇಗೌಡನ ಸಾಲದ ಹೊರೆ ನಮ್ಮ ದೇಶದಲ್ಲಿ ಪರಂಪರೆಯಾಗಿ ಬಂದ ಒಂದು ಶಾಪ. ಊರಿನ ಸಾಹುಕಾರನ ಋಣದ ಪಾಶಕ್ಕೆ ಸಿಲುಕಿದ ರೈತ ಅದರಿಂದ ಬಿಡಿಸಿಕೊಳ್ಳುವುದೇ ಸಾಧ್ಯವಿರಲಿಲ್ಲ. ಸಾಹುಕಾರ ಹಳ್ಳಿಯ ಜನಕ್ಕೆ ಅನಿವಾರ್ಯ ಒಡುಗಾಗಿದ್ದ. ಆಪತ್ತಿನ ಸಮಯದಲ್ಲಿ ರೈತನ ಮರ್ಯಾದೆ ಕಾಯುವ ನೆಪದಲ್ಲಿ ಅವನ ಗಾಳ. ಗ್ರಾಮೀಣ ಋಣ ಭಾರವನ್ನು ಪರಿಹರಿಸುವುದೂ ಇಪ್ಪತ್ತು ಅಂಶಗಳ ಕಾರ್ಯಕ್ರಮದಲ್ಲಿ ಒಂದು ಅಂಶ. ಕೃಷಿ ಕಾರ್ಮಿಕರು, ಕುಶಲ ಕರ್ಮಿಗಳು ಮುಂತಾದ ಅಲ್ಪ ವರಮಾನದವರ ಋಣಭಾರವನ್ನು ಪರಿಹರಿಸಲು ರಾಜ್ಯ ಸರ್ಕಾರಗಳು ಅಧ್ಯಾದೇಶ ಜಾರಿಗೆ ತಂದಿವೆ. ಕರ್ನಾಟಕದಲ್ಲಿ ೨,೪೦೦ ರೂಗಳಿಂದ ಹೆಚ್ಚಿನ ವಾರ್ಷಿಕ ವರಮಾನ ಇಲ್ಲದವರಿಗೆಲ್ಲ ಋಣದಿಂದ ವಿಮೋಚನೆ.

ಕಾರ್ಯಕ್ರಮದ ಇನ್ನೊಂದು ಅಂಶವೆಂದರೆ ಕನಿಷ್ಠ ಕೃಷಿ ಕೂಲಿ ನಿರ್ಧಾರ. ಹೆಚ್ಚುವರಿ ನೆಲವನ್ನು ಭೂರಹಿತರಲ್ಲಿ ಮತ್ತು ಕಡಿಮೆ ನೆಲ ಹೊಂದಿರುವವರಲ್ಲಿ ಹಂಚಿದಾಗ್ಯೂ ಅನೇಕ ಗ್ರಾಮೀಣ ಜನ ಭೂಹೀನರಾಗಿಯೇ ಮುಂದುವರಿಯುವುದು ಅನಿವಾರ್ಯ. ಇವರು ಮುಖ್ಯವಾಗಿ ಕೃಷಿ ಕಾರ್ಮಿಕರು. ದೇಶದಲ್ಲಿ ಕನಿಷ್ಠ ೫ಕೋಟಿ ಕೃಷಿ ಕಾರ್ಮಿಕರಿದ್ದಾರೆಂದು ಅಂದಾಜು. ಇವರ ಅಸಹಾಯಕತೆಯ ದುರುಪಯೋಗವಾಗದಂತೆ, ಇವರು ಶೋಷಣೆಗೆ ಒಳಗಾಗದಂತೆ, ಇವರಿಗೆ ಸಲ್ಲಬೇಕಾದ ಕನಿಷ್ಠ ಕೂಲಿಯನ್ನು ನಿಗದಿ ಮಾಡುವುದಕ್ಕೂ ಇಪ್ಪತ್ತು ಅಂಶಗಳ ಕಾರ್ಯಕ್ರಮ ಆದ್ಯ ಗಮನ ನೀಡಿದೆ. ಎಲ್ಲ ರಾಜ್ಯಗಳೂ ಈ ನಿಟ್ಟಿನಲ್ಲಿ ಕಾರ್ಯನಿರತವಾಗಿವೆ. ೧೯೪೮ರ ಕನಿಷ್ಠ ವೇತನ ಅಧಿನಿಯಮದ ಅಡಿಯಲ್ಲಿ ಕರ್ನಾಟಕ ಸರ್ಕಾರ ಕಳೆದ ವರ್ಷ ಅಕ್ಟೋಬರಿನಲ್ಲಿ ಕೃಷಿ ಕಾರ್ಮಿಕರ ಕನಿಷ್ಠ ವೇತನವನ್ನು ಪುನರ್ವಿಮರ್ಶಿಸಿ ವಿವಿಧ ಕೃಷಿ ಕಾರ್ಯಗಳಿಗೆ ಸೂಕ್ತ ದರಗಳನ್ನು ನಿರ್ಧರಿಸಿದೆ. ಇದಕ್ಕಿಂತ ಕಡಿಮೆ ಕೊಡುವುದು ಅಪರಾಧ.

ಕಳೆದ ಹತ್ತು ವರ್ಷಗಳ ಅವಧಿಯಲ್ಲಿ ಸುಮಾರು ಅರ್ಧದಷ್ಟು ಕಾಲದಲ್ಲಿ ಅಭಾವ ಪರಿಸ್ಥಿತಿ ತಲೆದೋರಿತ್ತು. ಇದಕ್ಕೆ ಕಾರಣ ನೀರಾವರಿಯ ಅಸಮರ್ಪಕತೆ ಕೃಷಿ ವಿಧಾನದಲ್ಲಿ ಕ್ರಾಂತಿ. ನೀರಾವರಿ ಯೋಜನೆಗಳ ಜಾರಿ-ಇವಕ್ಕೂ ಇಪ್ಪತ್ತು ಅಂಶಗಳ ಕಾರ್ಯಕ್ರಮದಲ್ಲಿ ಗಮನ ಸಂದಿದೆ. ಹೊಸದಾಗಿ ಐವತ್ತು ಲಕ್ಷ ಹೆಕ್ಟೇರಿಗೆ ನೀರಾವರಿ ಸೌಲಭ್ಯ ಒದಗಲಿದೆ. ನೀರಾವರಿ ಯೋಜನೆ ದೀರ್ಘಾವಧಿಯಲ್ಲಿ ಫಲ ಕೊಡುವಂಥದು. ಜಾರಿಯಲ್ಲಿರುವ ಯೋಜನೆಗಳನ್ನು ಶೀಘ್ರ ಕಾರ್ಯಗತಗೊಳಿಸುವುದು ಜರೂರು. ನೀರಾವರಿ ಸೌಲಭ್ಯ ಒದಗಿಸಬಹುದಾದ ಒಟ್ಟು ನೆಲದಲ್ಲಿ ಶೇ. ೫೦ ರಷ್ಟು ಮಾತ್ರ ನೀರಾವರಿಗೆ ಒಳಪಟ್ಟಿದೆ. ಬಹುಕಾಲದಿಂದ ರಾಜ್ಯಗಳ ನಡುವೆ ಇದ್ದ ನದೀ ನೀರಿನ ವಿವಾದಗಳು ಬಗೆಹರಿದಿರುವುದರಿಂದ ಅರ್ಧದಲ್ಲ ನಿಂತಿದ್ದ ನೀರಾವರಿ ಯೋಜನೆಗಳು ಕಾರ್ಯಗತವಾಗಬಹುದು. ಈಗಾಗಲೇ ಪೂರೈಸಲಾದ ನೀರಾವರಿ ಯೋಜನೆಗಳ ಅಚ್ಚುಕಟ್ಟಿಗೆ ಒಳಪಟ್ಟ ಸುಮಾರು ಒಂದು ಕೋಟಿ ಹೆಕ್ಟೇರುಗಳನ್ನು ಇನ್ನೂ ಅಭಿವೃದ್ಧಿ ಪಡಿಸಿಲ್ಲವೆಂದು ರಾಷ್ಟ್ರೀಯ ಕೃಷಿ ಆಯೋಗ ತಿಳಿಸುತ್ತದೆ. ಇದರ ಫಲವಾಗಿ ೪,೦೦೦ ಕೋಟಿ ರೂಗಳ ಕಾರ್ಯಕ್ರಮಗಳಿಂದ ಸಂಪೂರ್ಣ ಪ್ರಯೋಜನ ದೇಶಕ್ಕೆ ಲಭಿಸಿಲ್ಲ. ಸ್ವಾತಂತ್ರ್ಯ ಬಂದ ಅನಂತರ-ಕಳೆದ ಇಪ್ಪತ್ತೆಂಟು ವರ್ಷಗಳಲ್ಲಿ ನೀರಾವರಿಗಾಗಿ ಒಟ್ಟು ೮.೬೦೦ ಕೋಟಿ ರೂಗಳನ್ನು ವೆಚ್ಚ ಮಾಡಿದೆ. ಆದರೂ ದೇಶದ ಮೂರನೆಯ ಒಂದು ಭಾಗ ಅಭಾವದ ಅಪಾಯವನ್ನೆದುರಿಸುವ ಸಂಭವ ಇದೆ. ಇಪ್ಪತ್ತೆಂಟು ವರ್ಷಗಳಲ್ಲಿ ೧,೪೦೦ ಕೋಟಿ ರೂಗಳನ್ನು ಅಭಾವ ಪರಿಸ್ಥಿತಿಯ ಪ್ರದೇಶಗಳಲ್ಲಿ ಪರಿಹಾರ ಕಾರ್ಯಕ್ಕಾಗಿ ವೆಚ್ಚ ಮಾಡಲಾಗಿದೆ. ೨,೩೦೦ ಕೋಟಿ ರೂ. ಗಳ ಆಹಾರ ಧಾನ್ಯ ಆಮದು ಮಾಡಿಕೊಳ್ಳಲಾಗಿದೆ. ಇದೆಲ್ಲ ತಪ್ಪುವಂತೆ ಶಾಶ್ವತ ಕ್ರಮ ಕೈಗೊಳ್ಳಲು ಇಪ್ಪತ್ತು ಅಂಶಗಳ ಕಾರ್ಯಕ್ರಮದಲ್ಲಿ ಪ್ರಾಮುಖ್ಯ ನೀಡಲಾಗಿದೆ. ಐದನೆಯ ಪಂಚವಾರ್ಷಿಕ ಯೋಜನೆಯ ತಿರುಳಿನ ಭಾಗದಲ್ಲಿ ನೀರಾವರಿಯೂ ಸೇರಿದೆ.

ನೀರಾವರಿಯೊಂದಿಗೆ ವಿದ್ಯುತ್ತು. ಈ ನಿಟ್ಟಿನಲ್ಲಿ ಇದುವರೆಗಿನ ಪ್ರಗತಿ ಗಮನಾರ್ಹವಾದ್ದು. ೧೯೬೫-೬೬ ರಲ್ಲಿ ಸ್ಥಾಪಿತ ಸಾಮರ್ಥ್ಯ ಒಂದು ಕೋಟಿ ಕಿವ್ಯಾ ಇದ್ದದ್ದು ೧೯೭೪-೭೫ರ ವೇಳೆಗೆ ೨ ಕೋಟಿ ಕಿವ್ಯಾಗೆ ಏರಿತ್ತು. ಇಂದು ವಿದ್ಯುತ್ತಿನ ಬೇಡಿಕೆ ದಿನಕ್ಕೆ ೨೨.೫ ಕೋಟಿ ಯೂನಿಟ್ಟು. ಆದರೆ ಲಭ್ಯವಿರುವುದು ೨೨.೧೨ ಕೋಟಿ ಯೂನಿಟ್ ಮಾತ್ರ. ಬೇಡಿಕೆ ಪೂರೈಕೆಗಳ ಅಂತರ ನಿವಾರಿಸಲೂ, ಮುಂದೆ ಹೆಚ್ಚುವ ಬೇಡಿಕೆಯನ್ನು ಪೂರೈಸಲೂ ಆದ್ಯಗಮನ ಸಂದಿದೆ. ಗ್ರಾಮ ಪ್ರದೇಶಗಳಿಗೆ ವಿದ್ಯುತ್ತನ್ನು ಒದಗಿಸುವ ಕ್ರಮ ಚುರುಕಾಗಿ ನಡೆದಿದೆ. ದೇಶದ ಸುಮಾರು ಒಂದೂ ಮುಕ್ಕಾಲು ಲಕ್ಷ ಹಳ್ಳಿಗಳಿಗೆ ಈಗ ವಿದ್ಯುತ್ ಒದಗಿದೆ.

ಕೈಮಗ್ಗದ ಕೈಗಾರಿಕೆ ನಮ್ಮ ದೇಶದ ಒಂದು ಮುಖ್ಯ ಉದ್ಯಮ. ಕೃಷಿಯ ಅನಂತರದ ಸ್ಥಾನ ಇದಕ್ಕೆ ಸಲ್ಲುತ್ತದೆ. ಆದರೆ ಅಸಂಘಟಿತರಾದ ನೇಕಾರರ ಬವಣೆ ಅವರ್ಣನೀಯ. ಇವರಿಗೆ ಸೂಕ್ತ ಪ್ರತಿಫಲ ದೊರಕಿಸಿಕೊಡಲೂ ಕ್ರಮ ಕೈಗೊಳ್ಳಲಾಗಿದೆ. ಸಹಕಾರ ಸಂಘಗಳ ಸಂಘಟನೆ, ಕೈಮಗ್ಗ ಅಭಿವೃದ್ಧಿ ಕಾರ್ಪೊರೇಷನ್ ಸ್ಥಾಪನೆ ಮುಂತಾದವು ನಿದರ್ಶನಗಳು.

ದೊಡ ದೊಡ್ಡ ನಗರಗಳಲ್ಲಿಯ ವಸತಿ ಹೀನರ ಸಮಸ್ಯೆಯನ್ನು ಪರಿಹರಿಸಲೂ ಯತ್ನ ನಡೆದಿದೆ. ಹೊಲಸು ಕೊಂಪೆಗಳ ನಿವಾರಣೆಗಾಗಿ ಪ್ರಾಧಿಕರಣಗಳ ಸ್ಥಾಪನೆಯಾಗಿದೆ. ಒಬ್ಬನಿಗೆ ಎಷ್ಟು ನೆಲ ಅಗತ್ಯವೋ ಅಷ್ಟಕ್ಕಿಂತ ಹೆಚ್ಚಾಗಿ ಅವನು ಹೊಂದಿರಬಾರದೆಂಬ ತತ್ತ್ವವನ್ನು ನಗರಕ್ಕೂ ಅನ್ವಯಿಸಲಾಗುತ್ತಿದೆ. ಇದರ ಅನುಷ್ಠಾನದ ಮೊದಲ ಹೆಜ್ಜೆಯಾಗಿ ನಗರ ಭೂಮಿತಿ ಅಧಿನಿಯಮ ಜಾರಿಗೆ ಬಂದಿದೆ. ಹೆಚ್ಚುವರಿ ನೆಲ ವಸತಿಹೀನರಿಗೆ ಹಂಚಿಕೆಯಾಗಬೇಕು. ಕ್ರಮೇಣ ನಗರ ಆಸ್ತಿ ಮಿತಿ ನಿಯಮವೂ ಪರಿಣಾಮಕಾರಿಯಾಗಿ ಜಾರಿಗೆ ಬಂದೀತು.

ತೆರಿಗೆ ಗಳ್ಳತನವೂ ಭಾರತದ ಆರ್ಥಿಕತೆಯ ಶಾಪಗಳಲ್ಲೊಂದು. ತೆರಿಗೆ ವಸೂಲಿ ಬಿಗಿಗೊಳಿಸಿ, ಸೋರುವ ರಂಧ್ರಗಳನ್ನೆಲ್ಲ ಮುಚ್ಚಲೂ ಗಮನ ನೀಡಿರುವುದು ಸಹಜವೇ. ಕಳ್ಳಸಾಗಣೆದಾರರ ವಿರುದ್ಧ ಕೈಗೊಂಡ ಕ್ರಮ ಕಪ್ಪು ಹಣ ಘೋಷಣೆಗೆ ಹಾಗೂ ಸ್ವಯಂ ತೆರಿಗೆ ನಿರ್ಧರಣೆಗೆ ನೀಡಲಾದ ಅವಕಾಶ. ಗುಪ್ತ ಸಂಪತ್ತಿನ ಪತ್ತೆಯ ಕ್ರಮ- ಇವೆಲ್ಲ ಯಶಸ್ವಿಯಾಗಿವೆ. ಇದರ ಪರಿ

ಕಾಮವಾಗಿ ಪ್ರತ್ಯಕ್ಷ ತೆರಿಗೆಯ ವಸೂಲಿ ೧೯೭೫-೭೬ ರಲ್ಲಿ ಶೇ. ೧೮ರಷ್ಟು ಹೆಚ್ಚಿದೆ ಹೊಸದಾಗಿ ಸ್ವಯಂ ವರಮಾನ ತೆರಿಗೆಗಾಗಿ ವಿವರಣ ಪಟ್ಟಿ ಸಲ್ಲಿಸಿದವರ ಸಂಖ್ಯೆ ೧,೦೮,೦೦೦ ರಿಂದ (೧೯೭೪-೭೫) ೧.೪೫,೦೦೦ ಕ್ಕೆ (೧೯೭೫-೭೬) ಹೆಚ್ಚಿದೆ. ಮಿಸಾ ಪ್ರಯೋಗಿಸಿ ಕಳ್ಳ ಸಾಗಣೆದಾರರನ್ನು ಹಿಡಿಯುವ ಕ್ರಮ ಆರಂಭವಾದಾಗಿನಿಂದ ಹದಿನೈದು ತಿಂಗಳುಗಳಲ್ಲಿ ದೇಶಕ್ಕೆ ಸಲ್ಲಿಕೆಯಾಗುವ ಮಾಸಿಕ ವಿದೇಶಿ ವಿನಿಯಮದ ಮೊಬಲಗು ರೂ. ೪೨.೯೪ ಕೋಟಿಯಿಂದ ಸು. ರೂ. ೧೩೫ ಕೋಟಿಗೆ ಏರಿದೆ. ತತ್ಫಲವಾಗಿ ಭಾರತದ ಆರ್ಥಿಕತೆ ತಲೆಯೆತ್ತಿ ನಿಂತಿದೆ. ರೂಪಾಯಿಯ ಆಂತರಿಕ ಹಾಗೂ ಬಹಿರ್ಮೌಲ್ಯಗಳು ಏರುತ್ತಿವೆ.

ಕೃಷಿಯೊಂದಿಗೆ ಕೈಗಾರಿಕೆಯ ಪುನಶ್ಚೇತನವೂ ಸಾಧ್ಯವಾಗುವುದಾದರೆ ಭಾರತದ ಆರ್ಥಿಕತೆ ಸುಸೂತ್ರವಾದೀತು. ಶಿಸ್ತು ದಕ್ಷತೆಗಳಿಂದಾಗಿ ಸರ್ಕಾರಿ ವಲಯದ ಕೈಗಾರಿಕೆಗಳ ಉತ್ಪಾದಕತೆ ಲಾಭಪ್ರದತೆಗಳು ಅಧಿಕವಾಗಿರುವುದು ಗಮನಾರ್ಹ. ಆದರೆ ಖಾಸಗಿ ಕೈಗಾರಿಕೆಗಳಲ್ಲಿ ಕೆಲವಕ್ಕೆ ಬೇಡಿಕೆ ಪೂರೈಕೆಗಳ ಸಮತೋಲ ತಪ್ಪಿರುವುದರ ಫಲವಾಗಿ ಅವು ಹಿಂಜರಿತದ ಪ್ರವೃತ್ತಿಗೆ ಒಳಗಾಗಿರುವುದಾದರೂ ಒಟ್ಟಿನಲ್ಲಿ ಕೈಗಾರಿಕಾ ಉತ್ಪಾದನೆ ಅಧಿಕವಾಗಿದೆ. ರಿಸರ್ವ್ ಬ್ಯಾಂಕು ಈಚೆಗೆ ಪ್ರಕಟಿಸಿರುವ ವಾರ್ಷಿಕ ವರದಿಯ ಪ್ರಕಾರ ೧೯೭೬ ರಲ್ಲಿ ಕೈಗಾರಿಕೆಯ ಉತ್ಪಾದನೆಯಲ್ಲಿ ಶೇ. ೬-೭ರಷ್ಟು ಬೆಳವಣಿಗೆಯಾಗುವುದೆಂದು ನಿರೀಕ್ಷೆ. ಕೃಷಿ ಉತ್ಪಾದನೆಯ ಬೆಳವಣಿಗೆ ೧೯೭೫-೭೬ರಲ್ಲಿ ಶೇ. ೮ ರಷ್ಟಿತ್ತೆಂದೂ ೧೯೭೬-೭೭ ರಲ್ಲಿ ಇದೇ ಬೆಳವಣಿಗೆಯ ದರ ಮುಂದುವರಿದೀತೆಂದೂ ಅದು ಅಭಿಪ್ರಾಯ ಪಟ್ಟಿದೆ. ಲೈಸೆನ್ಸ್ ಪದ್ಧತಿಯ ಸುಧಾರಣೆ, ಕಂಪನಿಗಳ ಲಾಭಾಂಶ (ಡಿವಿಡೆಂಡ್) ಘೋಷಣೆಯ ನಿರ್ಬಂಧದ ಸಡಿಲಿಕೆ ಉಚಿತಾರ್ಥ (ಬೋನಸ್) ಶೇರುಗಳ ನೀಡಿಕೆಯ ನಿರ್ಬಂಧ ರದ್ದು, ಉತ್ಪಾದನೆ ಹೆಚ್ಚಿಸಲು ನೀಡಲಾದ ಉತ್ತೇಜನಗಳು-ಇವುಗಳಿಂದ ಖಾಸಗಿ ವಲಯದಲ್ಲಿ ವಿನಿಯೋಜನೆ ಅಧಿಕವಾಗುವುದೆಂಬುದು ರಿಸರ್ವ್ ಬ್ಯಾಂಕಿನ ನಿರೀಕ್ಷೆ. ಐದನೆಯ ಯೋಜನೆಯ ವೆಚ್ಚವನ್ನು ಈ ವರ್ಷ ಗಮನಾರ್ಹವಾಗಿ ಹೆಚ್ಚಿಸಲಾಗಿದೆ. ಅಭಿವೃದ್ಧಿಗಾಗಿ ಐದನೆಯ ಯೋಜನೆಯಲ್ಲಿ ನಿಗದಿಪಡಿಸಲಾದ ೩೭ ೨೫೦ ಕೋಟಿ ರೂ. ಗಳಿಗಿಂತ ಇನ್ನೂ ೨.೦೦೦ ಕೋಟಿ ರೂ. ಹೆಚ್ಚಾಗಿ ಸರ್ಕಾರ ಖರ್ಚು ಮಾಡಬೇಕೆಂದು ಈಗ ತೀರ್ಮಾನಿಸಲಾಗಿದೆ. ಮುಂದಿನ ಎರಡು ವರ್ಷಗಳಲ್ಲಿ ಒಟ್ಟು ೨೦.೦೦೦ ಕೋಟಿ ರೂ. ಗಳನ್ನು ವೆಚ್ಚ ಮಾಡಬೇಕಾಗುತ್ತದೆ. ಇದಕ್ಕೆ ಅಗತ್ಯವಾದ ಸಂಪನ್ಮೂಲಗಳನ್ನು ರೂಢಿಸಿಕೊಳ್ಳಲು ಸರಕಾರ ಸಜ್ಜಾಗಿದೆ.

ಈ ಅಗಾಧ ವೆಚ್ಚದ ಕಾರ್ಯಕ್ರಮದಿಂದ ಬೆಲೆಗಳು ಮತ್ತೆ ಏರದಂತೆ ಎಚ್ಚರಿಕೆ ವಹಿಸುವುದೂ ಅವಶ್ಯವಾಗಿದೆ. ದೇಶದಲ್ಲಿ ಉಳಿತಾಯ ರಾಷ್ಟ್ರೀಯ ವರಮಾನದ ೧೩.೧% ರಿಂದ ೧೪.೫% ಏರಿರುವುದೂ, ವಿನಿಯೋಜನೆ (ಇನ್ವೆಸ್ಟ್‌ಮೆಂಟ್) ೧೪.೮% ರಿಂದ ೧೬.೦%ಕ್ಕೆ ಏರಿರುವುದೂ ಶುಭಸೂಚನೆಗಳು. ಇದೇ ದರಗಳು ಮುಂದಿನ ವರ್ಷಗಳಲ್ಲೂ ಮುಂದುವರಿದಾವೆಂದು ನಿರೀಕ್ಷೆ. ೧೯೭೪-೭೫ರಲ್ಲಿ ರಾಷ್ಟ್ರೀಯ ವರಮಾನದ ಬೆಳವಣಿಗೆಯ ದರ ಕೇವಲ ೦.೨೦% ಇತ್ತು. ೧೯೭೫-೭೬ರಲ್ಲಿ ಇದು ೫.೫%ಕ್ಕೆ ಏರಿದೆಯೆಂದು ರಿಸರ್ವ್ ಬ್ಯಾಂಕ್ ಅಂದಾಜು ಮಾಡಿದೆ. ವಾಸ್ತವವಾಗಿ ಇದು ಇನ್ನೂ ಹೆಚ್ಚಾಗಿರಬಹುದೆಂಬುದೂ ೧೯೭೬-೭೭ರಲ್ಲೂ ಈ ಪ್ರವೃತ್ತಿ ಮುಂದುವರಿದೀತೆಂಬುದೂ ರಿಸರ್ವ್ ಬ್ಯಾಂಕಿನ ಆಶಾವಾದ.

ಕಾರ್ಮಿಕರು ಕೈಗಾರಿಕೆಯಲ್ಲಿ ಪಾಲ್ಗೊಳ್ಳುವ ಕ್ರಮ, ಮಧ್ಯಮ ವರ್ಗದ ಜನರ ವರಮಾನ ತೆರಿಗೆ ವಿನಾಯಿತಿಯ ಮಟ್ಟವನ್ನು ರೂ. ೬,೦೦೦ ದಿಂದ ರೂ. ೮,೦೦೦ಕ್ಕೆ ಏರಿಸಿರುವುದು, ವಿದ್ಯಾರ್ಥಿಗಳಿಗೆ ನಿಯಂತ್ರಿತ ಬೆಲೆಗಳಲ್ಲಿ ಅಗತ್ಯ ವಸ್ತುಗಳ ಮತ್ತು ಪುಸ್ತಕ ಹಾಗೂ ಲೇಖನ ಸಾಮಗ್ರಿಗಳ ಪೂರೈಕೆ, ಉದ್ಯೋಗಾವಕಾಶವನ್ನು ವಿಸ್ತರಿಸಲು ತರಬೇತಿ ನೀಡಿಕೆ-ಮುಂತಾದವೂ ಇಪ್ಪತ್ತು ಅಂಶಗಳ ಕಾರ್ಯಕ್ರಮದಲ್ಲಿ ಸೇರಿವೆ. ಒಟ್ಟಿನಲ್ಲಿ ಆರ್ಥಿಕತೆಯನ್ನು ಶಿಸ್ತಿಗೆ ಒಳಪಡಿಸಿ ಅತ್ಯಂತ ಶೀಘ್ರವಾಗಿ ಬೆಳವಣಿಗೆಯನ್ನೂ ಸಮತೆಯನ್ನೂ ಸಾಧಿಸುವ ಉದ್ದೇಶ ಹೊಂದಿರುವ ಇಪ್ಪತ್ತು ಅಂಶಗಳ ಕಾರ್ಯಕ್ರಮ "ಗರೀಬೀ ಹಟಾವೊ"ದಂತೆ ಕೇವಲ ಘೋಷಣೆಯಲ್ಲ. ಅದು ಕಾಲಬದ್ಧ ಕಾರ್ಯಕ್ರಮ; ವಾಸ್ತವ ದೃಷ್ಟಿಯ ಪ್ರಯತ್ನಶೀಲತೆಗೆ ಒಂದು ರೂಪರೇಷೆ.



# ಪಾರ್ಥೇನಿಯಂ

ಅನಂತ ಕಲ್ಲೋಳ



ಗೋಪಾ ಬೆಂಗಳೂರಿಗೆ ಬಂದಾಗಲೇ ನನಗೆ ಗಾಬರಿ ಆಗಿತ್ತು. ಅವನು ಚರ್ಚಿಸುವ ನವ್ಯ ಕವನ, ನಿರೋಧ ಅದೆಲ್ಲಕ್ಕೂ ಹೆಚ್ಚಾಗಿ ಪಾರ್ಥೇನಿಯಂದ ಬಗ್ಗೆ ಭಾಷಣ, ನನ್ನ ತಲೆ ತಿಂದಿತು. ಪಾರ್ಥೇನಿಯಂ, ಹುಲುಸು ಬೆಳೆ ಹೊಲಸು ಕಳೆ ಎಂದು ಗೊತ್ತಿದ್ದ ಗೋಪ್ಯಾನಿಂದಲೇ!

....ನೋಡು. ನಾನು ಬೆಂಗ್ಳೂರಿಗೆ ವರ್ಗ ಆಗೇದ. ಬುಧವಾರ ಬೆಳಿಗ್ಗೆ ಎಂಟು ಗಂಟೆಗೆ ನಾನು ಬೆಂಗಳೂರಿನಲ್ಲಿ ಹಾಜರ್. ನಿಲ್ದಾಣಕ್ಕ ನೀ ಬರ್ರೀ ಇಲ್ಲೋ ಮತ್ತ; ನಾನೇನೂ ತಾಜಮಹಲ್ ರಾಜಮಹಲ್‌ಗಳಿಗೆ ಹೋಗಾಂವಲ್ಲ. ನಿನ್ನ ಮನ್ಯಾಗ ಠಾಣೆ ಹಾಕಾಂವಾ. ಏನಂತಿ? ನಾ ಏನ್ ನಿನ್ನ ಉತ್ತರದ ದಾರಿ ನೋಡೂದಿಲ್ಲ. ಥೇಟ್ ದಕ್ಷಿಣಕ್ಕ ನನ್ನ ಸವಾರಿ! ಬುಧವಾರ ಬೆಳಗ್ಗೆ ಎಂಟು ಗಂಟೆ ಬೆಂಗ್ಳೂರ್!! ಇತಿ ಗೋಪು.

ಗೋಪ್ಯಾನ ಪತ್ರ ಓದಿದೆ. ಗೋಪ್ಯಾ ಬೆಂಗ್ಳೂರಿಗೆ ಬರ್ತಾನ ಅಂತ ನನಗೂ ಖುಷೀನ್ನೇ ಆತು. ಭಾಳ ವರ್ಷಗಳಾಗಿದ್ದವು. ಆತನ ಸಹವಾಸ ತಪ್ಪಿ. ಗೋಪ್ಯಾ ಮೊದಲಿನಿಂದಲೂ ಹಾಂಗೇ. ಮಾತು. ಮಾತು. ಮಾತು ಅದು ಇದು ಬರೀತಾನ ಬ್ಯಾರೆ. ಮೊದಲು, ಮೊದಲು ಆತ ಬರೀತಿದ್ದ ಕಥೆ. ಕವನ ನನಗ ಅರ್ಥ ಆಗತಿದ್ದು. ಈಗೀಗಿನ್ನೂ ಊಂ ಹೂಂ! ಆತನ ಕವನ ಮತ್ತು ಆ ಕವನಗಳ ಜೊತೆಗೆ ಪತ್ರಿಕೆಯೊಳಗ ಮೂಡಿ ಬರೂವ ಆ ಚಿತ್ರ, ವಿಚಿತ್ರ, ರೇಖಾ ಚಿತ್ರಗಳು ನನ್ನ ಗಂಟು ಬಿಡಿಸಲಾಗದ ಗಗ್ಗಂಟು. ಅವನ್ನ ಅರ್ಥ ಮಾಡಿಕೊಳ್ಳುವ ಎಂದೂ ಈ ತಲಿಯೊಳಗ ಇಲ್ಲ!

ಆತನ ಮೊದಲಿನ ಪತ್ರಗಳೊಳಗೆ ಪೂರ್ಣ ವಿರಾಮದ ಚಿಹ್ನೆಗಳು ಇದ್ದವು. ಈಗೀಗ ಅದಕ್ಕೆ ಬದಲಾಗಿ ಉದ್ಗಾರವಾಚಕ ಮತ್ತು ಪ್ರಶ್ನಾರ್ಥಕ ಚಿಹ್ನೆಗಳ ಹಾವಳಿ. ಹೀಗಾಗಿ ಅನೇಕ ಸಲ ಅವನ ಪತ್ರದ ಸಾಲುಗಳ ನಡುವೆ, ಸರಸ್ವತಿ ನದಿಯಂತೆ, ಗುಪ್ತಗಾಮಿನಿಯಾಗಿ ಹರಿಯುವ ಧ್ವನಿ ನನಗೆ ಗೊತ್ತು ಆಗೂದಿಲ್ಲ. ನಮ್ಮ ಅಜ್ಞಾನದ 'ಕನ್ಫೆಷನ್' ಹೀಂಗೆ ಮಾಡಿಬಿಟ್ರು ಅಂದ್ರ 'ಹಾಯ್' ಅಂತ ಹಗುರ ಅನಿಸಿಬಿಡ್ತದ. ಢೋಂಗಿ ಜ್ಞಾನದ ಭಾರ ಯಾರಿಗೆ ಬೇಕು?

ಆ ಬುಧವಾರ ಬಂತು, ಬಸ್ಸೂ ಬಂತು. ಬೆಳಗಿನ ಎಂಟು ಗಂಟೆಯ ಸುಮಾರಿಗೆ. ನಾನು ನೋಡುತ್ತಿದ್ದಂತೇ ಗೋಪ್ಯಾ "ಟಣ್" ಅಂತ ಜಿಗಿದ ಬಸ್ಸಿನ ಬಾಗಿಲಿನಿಂದ. ಅವನ ಜಿಗಿತದ ಕೂಡ ಆತ ಬಿಟ್ಟಿದ್ದ ಉದ್ದ ಕೂದಲು ಆರೆಂಟು ಅಂಗುಲ ಎತ್ತರಕ್ಕ ಹಾರಿ ಮತ್ತ ಆತನ ಕೊರಳು, ಕಪೋಲಗಳ ಮ್ಯಾಲ ಮುಚ್ಚಿಳಧಾಂಗೆ ಸುತ್ತಲೂ ಆವರಿಸಿಕೊಂಡವು. ಕ್ಷಣಹೊತ್ತು ಬಿಡಿಸಿದ ಕೊಡೆ ಸಟಕ್ಕನ ಮುಚ್ಚಿಕೊಂಡ ಹಾಂಗ!

ಗೋಪ್ಯಾನ ಕರಕೊಂಡು ಮನೀಕಡೆಗೆ ನಡದೆ. ಆತನ ಮಾತು ಅವ್ಯಾಹತವಾಗಿ ನಡೆದಿತ್ತು. ನಗರದ ಸಂಚಾರದ ವಾಹನದಿಂದ ನನ್ನ ಮನೀ ಇರೋ ಬಡಾವಣೆಗೆ ಬಂದೆವು. ಮುಂದ ಮತ್ತೊಂದು ಮೈಲು ನಡೀಬೇಕಾಗಿತ್ತು. ಸಾಮಾನು ಹೆಗಲಿಗೆ ಏರಿಸಿ "ಎಡ ಬಲ, ಎಡ ಬಲ" ಎಂಬ ಗತ್ತಿನಲ್ಲಿ ಹೆಜ್ಜೆ ಹಾಕತೊಡಗಿದೆವು. ಹತ್ತಿಪ್ಪತ್ತು ಗಜ ಹೋದೆವೋ ಇಲ್ಲವೋ ಗೋಪ್ಯಾ ನಿಂತುಬಿಟ್ಟ. ಹೆಗಲಮ್ಯಾಲಿನ ಸಾಮಾನು ರಸ್ತೇದ ಮ್ಯಾಲ ಇಟ್ಟ. ಬದೀಗೆ ಹೋಗಿ ನಿರುಕಿಸುತ್ತ ನಿಂತ. ಆತ ನೋಡೋ ರೀತಿಯಿಂದ ನನಗೆ ಅನಿಸ್ತು, "ಬಡ್ಡೀಮಗ್ಗ ಕೋಹಿನೂರ್ ವಜ್ರಸ್ಸ ಕಂಡಿರಬೇಕು" ಅಂತ ನಾನು ಕುತೂಹಲಗೊಂಡು ಕೇಳಿದೆ,

"ಏನೋ ಗೋಪ್ಯಾ, ಏನದು?"

"ಏನೋಽಽಽ ಏನಿದೆಲ್ಲ?" ಸುತ್ತಲೂ ಉದ್ದಗಲಕ್ಕೆ ಕೈ ಬಿತ್ತರಿಸುತ್ತ ಗೋಪ್ಯಾ ಕೇಳಿದ.

"ಜಗದಗಲ ಮುಗಿಲಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ" ಎಂಬ ವಚನವನ್ನ ಹೇಳೂವಾಗ ನಮ್ಮ ಕನ್ನಡ ಮಾಸ್ತರು ಹೀಂಗಽಽ ಕೈ ಚಾಚಿ ಆಡಿಸ್ತಿದ್ರು ಅಂಬೋ ಸಂಗತಿ ನನಗೆ ಥಟ್ಟನ ನೆನಪಾತು. ಗೋಪ್ಯಾ ಅಗದೀ ಹಾಂಗಽ ಕೈ ಆಡಿಸಿ ಕೇಳಿದ್ದ.

"ಏನೋಽ. ಏನಿದೆಲ್ಲ?" ಅಂತ.

"ಅದು ಪಾರ್ಥೇನಿಯಂ ಹುಲ್ಲು. ಯಾಕ ನೀ ನೋಡಿಲ್ಲೇನ ಇದನ್ನ?"

"ಅಬ್ಬಽ ಬ್ಬಽ ಬಾ!! ಏನು ಹುಲುಸು ಬೆಳೀಮೋ ಇದು!!"

"ಹುಲುಸು ಅಷ್ಟ ಅಲ್ಲಾ; ಹೊಲಸು ಬೇಳಿನೂ"

"ಕ್ಲ್ಯಾಕ್, ಕ್ಲ್ಯಾಕ್, ಕ್ಲ್ಯಾಕ್ ಅಗಾಧಪಾ!! ಇದರ ದೇನರ ಉಪಯೋಗ ಅದನೋ ಇಲ್ಲೋ; ನೀವು ಗೀವು ಅಂತ?"

"ಊಂ ಹುಂ ಒಂದಕ್ಕಽ ಉಪಯೋಗ ಇದು."

"ಒಂದಕ್ಕ? ಅದು ಯಾವುದಕ್ಕ?"

"ಕರಾಕರಾಕರಾಂತ ತುರಸಲಿಕ್ಕ."

"ಛೇ ಹೊಗ್ಗೋ ನಿನ" ಸಾಮಾನು ಹೆಗಲಿಗೆ ಏರಿಸಿ ಗೋಪು ಮುಂದಡಿ ಇಟ್ಟ. ಇನ್ನೂ ನನ್ನ ಮನಿ ಬಂದಿರಲಿಲ್ಲ. ನಡೆದು ಬ್ಯಾಸರ ಬಂದಿರಬೇಕು ಗೋಪುಗೆ.

"ಭಾಳ ಬೆಳೆದದಪಾ."

"ಬೆಂಗ್ಳೂರ್ ಹೌದಲ್ಲೊ, ಅತೋನಾತ ಬೆಳ್ದದ."

"ಬೆಂಗಳೂರ ವಿಷಯ ಅನಲಿಲ್ಲೋ ನಿನ ಮಂಚಾಳ ಹೋಗಲಿ; ನಾ ಹೇಳಿದ್ದು ಈ ಪಾರ್ಥೇನಿಯಂ ಹುಲ್ಲಿಂದು."

"ಅದೇನ್ ನಿನ್ನ ಮನಸಿನಾಗೆ ನಟ್ಟದೋ?"

"ಹೂಂ: ಅದು ನಡಬಾರದ ಜಾಗಾದಾಗ ಎಲ್ಲಾ ಕಡೆಗೆ ನಡ್ತದ. ಅದಕ್ಕೇನು? ಇಲ್ಲಿ ನಾಟಬೇಕು, ಅಲ್ಲಿ ನಾಟಬಾರದು ಅನ್ನೋ ವಿಧಿ ನಿಷೇಧ ಇದ್ದ್ಯಾಂಗ ಕಾಣಾಂಗಿಲ್ಲ."

ಆತನ ಈ ಉತ್ತರದ ಅರ್ಥ ನನಗೆ ಸರಿಯಾಗಿ ಆಗಲಿಲ್ಲ. ಅದರ ಅಷ್ಟರಾಗೆ ನನ್ನ ಮನೀ ಬಂತು, ಈ ವಿಷಯದ ಚರ್ಚೆಗೆ ಖಂಡ ಬಿತ್ತು.

X X X

ಗೋಪ್ಯಾನ ಸ್ನಾನ ಗೀನಾ ಮುಗೀತು. ಸ್ವಲ್ಪ ತಾಜಾ ಆಗಿ ಬಂದಾ; ಕೂದಲು ಹಿಂದಕ್ಕೆ ತಿರುಗಿಸಿ ನಾಲ್ಕೆಂಟು ಹಲ್ಲು ಸಡಿಲು ಆಗಿರಬೇಕು ನನ್ನ ಹಣಿಗೀವು!

ಎರಡನೇ ಸುತ್ತು ಚಹ ಬಂತು ಎಡಗೈಲೇ ಎದುರಿಗಿನ ಅಂದಿನ ವರ್ತಮಾನಪತ್ರ ಎತ್ತಿಕೊಂಡು ಬಲಗೈಯಾಗಿನ ಪಿಂಗಾಣಿ ಕೊಳಗದಾಗಿನ ಚಹ 'ಸುರ್' ಅಂತ ಸಪ್ಪಳ ಮಾಡಿಕೋತ ಕುಡಿಯ ತೊಡಗಿದ. ನಾನೂ ಎದುರಿಗೆ ಕುಳಿತು ಚಹ ಕುಡಿಯುತ್ತಿದ್ದೆ. ಮೂರು ನಾಲ್ಕು ನಿಮಿಷ ಯಾವ ಮಾತಿಲ್ಲದೆ ಕಳೆದಿರಬೇಕು. ಅಲ್ಲೇ ಬಾಜೂಕ್ಕ ನನ್ನ ಮಕ್ಕಳು ಭಾಳ ಜಾಣಹುಡುಗರ ಹಾಂಗೆ (ಅತಿಥಿಯ ಮುಂದ ಮಾಡುವ ಮಾಮೂಲಿ ಪ್ರದರ್ಶನ) ಪುಸ್ತಕ ಹಿಡಿದು ಕೊಂಡು ಕುಳಿತಿದ್ರು. ಏನ್ ಕಂಡಿತೋ ಏನೋ ಗೋಪ್ಯಾ ಚಹದ ಪಿಂಗಾಣಿ ಕೊಳಗ ಮೇಜಿನ ಮ್ಯಾಲ ಕುಕ್ಕಿದ.

"ಇದ್ಕ ಇದ್ಕ ನೋಡು ಪಾರ್ಥೇನಿಯಮ್‌ಕ್ಕ ಕಾರಣ."

ನನ್ನ ಮುಂದ ಪತ್ರಿಕೆ ಕುಣಿಸಿದ.

ಆತ ತೋರಿಸಿದ ಜಾಗಾದಲ್ಲಿ ಪಾರ್ಥೆನಿಯಮ್‌ದ ವಿಷಯ ಚೂರೂ ಇರಲಿಲ್ಲ. ವರ್ತಮಾನ ಪತ್ರದಾಗ.

"ಏನೋ ನೀ ಕಂಡು ಹುಡುಕಿದ ಕಾರಣ? ಏನೂ ಬರ್ದಿಲ್ಲಲ್ಲ ಪಾರ್ಥೇನಿಯಮ್‌ದ ಬಗ್ಗೆ ಅಲ್ಲಿ."

"ಹ್ಯಽ ಹ್ಯಽ ಹ್ಯಽ ಪಾರ್ಥೇನಿಯಮ್ ಅಂತ ಶಬ್ದಿಲ್ಲಾ, ಆದ್ರ ಇದು ಕಾಣ್ತದಿಲ್ಲೋ ನಿ...ರೋ...ಧ್! ಜಾಹಿರಾತು?

ರಘಲ್ ಅಂದಿತು ನನ್ನ ಎದಿ. ನನ್ನ ಹುಡುಗರು ತೀರ ಚಿಕ್ಕವರೇನಲ್ಲ ಮೂರರ ಪೈಕಿ ಇಬ್ಬರು ಕಿಶೋರ ವಯಸ್ಸಿನವರು. ನನ್ನ ಮಡದಿ ಅಡಗಿಮನ್ಯಾಗ ಇದ್ದಳು ಅಡಗೀ ಮನಿ ದೂರೇನಿಲ್ಲ. ನಾವು ಇಲ್ಲಿ ಕುಳಿತು ಮಾತಾಡ್ತಾ ಇದ್ದದ್ದು ಅವಳಿಗೆ ನಕ್ಕೀ ಕಿವಿಮ್ಯಾಲ ಬೀಳ್ತದ. ಈ ಖಬರ ಇಲ್ದ ಗೋಪ್ಯಾ ನಿ...ರೋ...ಧ್ ಅಂತ ನಾಟಕೀಯವಾಗಿ ಘೋಷಿಸಿದ್ದು ನನ್ನನ್ನು ರಘುಲ್ಲೀಕರಿಸ್ತದ. ಏನ್ ಅನಾಬೇಕು ತಿಳೀಲಿಲ್ಲ. ಯಾಕಂದ್ರ ಗೋಪ್ಯಾ ಇದೇ ಈಗ ಹೊಸದಾಗಿ ಮನೀಗೆ ಬಂದ ಹಳೆಯ ಗೆಳೆಯ!

"ನಾನ್‌ಸೆನ್ಸ್, ನಿನ ಮಂಟ್ಯಾಳತನ ಇನೂ ಹೋಗಿಲ್ಲ ಅದಕ್ಕೂ ಇದಕ್ಕೂ ಏನ್ ಸಂಗತಿಯೋ? ಕುಡಿ ಕುಡಿ ಛಾ ಕುಡಿ. ಅರಿ ಅಂಗಾರ್ ಆದೀತು."

ಆತ ಏನೋ ಹೇಳ್‌ಬೇಕು ಅಂತಾ ಬಾಯಿ ತೆರೆಯುವುದರಲ್ಲಿದ್ದ ನಾನು ಸಿಟ್ಟಿನ ಆವಿರ್ಭಾವ ತೋರುತ್ತ ಸುಮ್ಮನಿರು ಅಂತ ಪಟ್‌ಪಟಾ ಕಣ್ಣವೆ ಬಡಿದ್ಯೆ, ಗೋಪ್ಯಾ ಸ್ವಲ್ಪ ಥಣ್ಣಗಾದ.

"ಹ್ಯಾಂಗ ನಡದದ ನಿನ್ನ ಸಾಹಿತ್ಯ ಕೃಷಿ ?"

"ಹ್ಹೆ ಹ್ಹೆ ಸಾಹಿತ್ಯ ಕೃಷಿ ? ಉಂ. ಎಲ್ಲಾ ಪಾರ್ಥೇನಿಯಂ'

ಸುಟ್ಟಿತು ನಿನ್ ಪಾರ್ಥೇನಿಯಂ, ನಿನ್ನ ಸಾಹಿತ್ಯದ್ದು ಹೇಳು ಮತ್ತೆ ಎಲ್ಲಿ ನಿರೋಧಕ ಹಾಯ್ತದೋ ಆತನ ಮಾತಿನ ಗಾಡಿ ಎಂದು ಎಚ್ಚರವಹಿಸಿದೆ.

ಅಂಥ್ಯಾಂಗ ನಿನಗ . ಈಗಿನ ಹೊಸ ಸಾಹಿತ್ಯದ ಗುರ್ತು ಪರಿಚಯ ಇದ್ದಾಂಗ ಅನಿಸಾಂಗಿಲ್ಲ. ಓದ್‌ತಿ ಇಲ್ಲೋ ನನ್ನ ನವ್ಯಕವಿತಾ?

"ರೊಕ್ಕ ಕೊಟ್ಟು ಪತ್ರಿಕೆ ಕೊಳ್ಳೋ ತಪ್ಪಿಗೆ ಅದನ್ನೂ ಓದ್‌ತೀನಿ, ಅಮ್ಯಾಲ ಅನಾಸಿನ್ ನುಂಗಿ ನೀರ ಕುಡೀತೇನಿ. ನಿಮ್ದು ಪತ್ರಿಕೆಯವರ್ದೂ ಮತ್ತು ಆ ಅನಾಸಿನ್ ತಯಾರಕರದು ಏನಾರೆ ಒಳಗಿಂದ ಒಳಗ ಒಪ್ಪಂದ ಅದ ಏನು?"

ಹ ಹ...ನಿನಗೆ ವಿನೋದ ಮಾಡ್ಲಿಕ್ಕ ಬರ್ತದೋ ಭೇಷ್! ಇರ್ಲಿ, ನವ್ಯಕಾವ್ಯ ನಿನಗ ಅಷ್ಟು ತಿಳಿಯೂದಿಲ್ಲ ಅಂಥಾಂಗ ಆತು. ಅದರೊಳಗ ಏನ್ ಇರ್ತದ ಅಂದ್ರ ಪ್ರತಿಮೆಗೊಳ್ನ ಹೊಂದಿಸಿರ್ತೇವಪಾ. ಇದೀಗ ನಿಂಗೆ ಅದನ್ನು ತೋರಿಸಿದೆನ್ನಾ, ಅದಕೂ ಪಾರ್ಥೇನಿಯಮ್‌ಕ್ಕೂ ಏನ್ ಸಂಬಂಧ ಅಂದ್ರ..."

"ಈ ಕಾವ್ಯಲಕ್ಷಣಗಳನ್ನೆಲ್ಲ ಸಂಜೀನಾಗ ಹೇಳಪಾ ದೂರ ತಿರುಗಾಡಲಿಕ್ಕೆ ಹೋದಾಗ. ಈಗ ಬಾ.ಡಾ. ಸ್ನಾನಾಗೀನಾ ಮಾಡಿ ಶುಚಿರ್ಭೂತ ಆಗೇನಿ. ಸ್ವಲ್ಪ ಊಟಗೀಟಾ ಹೊಟ್ಟ್ಯಾಗ ಹೋಗಲಿ. ಇನ್ನೇನು ನೀ ಇಲ್ಲೇ ಬಂದೀದಿ ವರ್ಗ ಆಗಿ. ಅಂಥಾಂಗ ನಿನ್ನ ಸರಕಾರಿ ಸೇವಾ ಹ್ಯಾಂಗ ನಡದ?

ನಡದದ. ನಡದದ ಕುಂಟಿಗೋತ ನಡದದ ಆರಾಂ ಇದ್ದ ಊರಾಗ ಎತ್ತಿ ಹಾಕಿದರಲ್ಲ ರಾಜಧಾನಿಗೆ.

ಯಾಕ? ಕಛೇರಿ ಕಾಗದ ಮ್ಯಾಲ ನಡೆದಿರಬೇಕು ನಿನ್ನ ಸಾಹಿತ್ಯ ಸೇವಾ ಸಿಕ್ಕಬಿದ್ದಿರಬೇಕು. ತುರ್ತುಪರಿಸ್ಥಿತಿಯಾಗ. ಎತ್ತಿ ಹಾಕಿರಬೇಕು ಅದಕ್ಕ.

ಹ ಹ್ಹಃ ಹ್ಃss ಮನಸೋಕ್ತ ನಕ್ಕಮ್ಯಾಲ ಗೋಪಾ ಅಂದ,

...ಛಲೋ ಕೆಲಸಾ ಮಾಡುವವ ಅಂತ ಎತ್ತಿ ಹಾಕ್ಯಾರ ಇಲ್ಲಿ, ಅಂದ್ರ ಒಳ್ಳೇದಕ್ಕ ಶಿಕ್ಷಾಗೊತ್ತಾತೇನು? ಇದರೊಳಗ ಯಾವ ಪ್ರತಿಮಾ ಇಲ್ಲ ಹಂ ಮತ್ತ.

"ಉಂ ಹೂಂ; ಗೊತ್ತಾಗಲಿಲ್ಲ" ಗೋಣು ಅಲ್ಲಾಡಿಸಿದೆ. ಅವನ ಆತ್ಮಪ್ರಶಂಸೆಗೆ ಸ್ವಲ ಅವಕಾಶ ಕೊಡೋಣು ಅಂತ.

ಅಂದ್ರ ಇಲ್ಲಿ ಒಂದು ಛಲೋ ಹ್ಯಾಂಡ್ ಬೇಕಾಗಿತ್ತಂತ. ಇದೂ ಒಂದು ಪಾರ್ಥೇನಿಯಂ ತತ್ವನ್ಸs

ನಾನು ಚಟ್ ಅಂತ ಖುರ್ಚಿ ಬಿಟ್ಟು ಎದ್ದೆ; ಮತ್ತೆ ಆತನ ಮಾತು ಪಾರ್ಥೇನಿಯಂದ ಮೂಲ ಪದಕ ಬಂದವಲ್ಲಾ ಅ.

ಸಾಕು ಬಾ; ನಮ್ಮ ಮನೀ ಹ್ಯಾಂಗ ಅದ ತೋರಸ್ತೇನಿ.

ಸುತ್ತಾಡಿ ಮನೀ ತೋರಿಸಿಯಾಯ್ತು. ಗೋಪು ಸಿಗರೇಟ್ ಹಚಿ ಮನೆ ಹೊರಗೆ, ಅಂಗಳಕ್ಕೆ ಹೋಗಿ ನಿಂತ. ಆತ ಮನೆ ಮುಂದೆ ಸುತ್ತ ಹರಡಿದ್ದ ಪಾರ್ಥೇನಿಯಂ ಹುಲ್ಲು ವಿರುಕಿಸುತ್ತ ನಿಂತದ್ದನ್ನು ಕಂಡು ನಾನು ಹಾಳಾಗಲಿ ಎಂದುಕೊಂಡು ಪಡಸಾಲೆಯಲ್ಲಿಯೇ ಉಳಿದೆ. ಸುಮ್ಮನೆ ಕೂಡಲಾರದೆ ಪತ್ರಿಕೆ ಎತ್ತಿಕೊಂಡೆ. ಹಾಳಾದ್ದು, ನನ್ನ ದೃಷ್ಟಿ ನಿರೋಧ್‌ದ ಜಾಹೀರಾತಿನ ಮೇಲೆ ನೆಡಬೇಕೆ? ಇದಕ್ಕೂ ಪಾರ್ಥೇನಿಯಮ್‌ಕ್ಕೂ ಯಾವ ಬೀಜ (?!) ವೃಕ್ಷ ನ್ಯಾಯವನ್ನು ಗೋಪು ತಳಕುಹಾಕಿರುವನೋ ಎಂದು ನನ್ನ ಮನದಲ್ಲಿ ಜಿಜ್ಞಾಸೆ ಕುರುಕುರಿಸತೊಡಗಿತು. ತಲೆಯಲ್ಲಿ ವಿಚಾರಗಳ ಹಾವಳಿ! ಯೋಚನೆ ಮಾಡಿದ ಹಾಗೆ ನನಗೆ ಒಂದು ವಿಷಯ ಹೊಳೆಯಿತು. ನಾವು ಚಿಕ್ಕವರಿರುವಾಗ ಇಂಥ ದೈತ್ಯ ಪಾರ್ಥೇನಿಯಂ ಬೆಳೆ ಕಂಡ ನೆನಪಿಲ್ಲ. ಆಗ ಕುಟುಂಬ ಯೋಜನೆಯ ಜಾಹೀರಾತೂ ಇದ್ದಿರಲಿಲ್ಲ. (ಯಾಕಂದ್ರ ಇದರ ಮುಗ್ಗಾ ಮಾಡಿ ಊದಿದ್ದರ ನೆನಪು ನನಗಿಲ್ಲ). ಈಗ ಇವು ಬಂದವು ಅದರ ಜೊತೆಗೆ ಈ ದರಿದ್ರ ಹುಲ್ಲು ವಿಸ್ತಾರವಾಗ್ತಾ ಇದೆ! ಅದಕ್ಕೂ ಇದಕ್ಕೂ ಏನರೆ ಸಂಬಂಧ ಇರ್‌ಬೇಕೇನ್ ಮತ್ತು ?!

ಹಿಂದೆ ಬಂಗಾಲದಾಗ ಭೀಕರ ಬರಗಾಲ ಬಿದ್ದಾಗ ಮಹಾತ್ಮಾಜಿ ಅಂದಿದ್ರಂತ, ಜನರ ಪಾಪಕರ್ಮ ಜಾಸ್ತಿ ಆದಾಗ ಹೀಂಗ ಬರಗಾಲ ಬೀಳ್ತದ ಅಂತ ಅದಕ್ಕೂ ಇದಕ್ಕೂ ವೈಜ್ಞಾನಿಕ ಸಿದ್ಧಾಂತದ ಒರೆಗಲ್ಲಿಗೆ ಸರಿ ಹೋಗುವ ಕಾರಣ ಏನು ಗೊತ್ತಿಲ್ಲ. (ಇನ್ನೂ ಆಗ್ಗೆ ಬೆಂಗಳೂರು ವಿಶ್ವವಿದ್ಯಾನಿಲಯ, ಅದರ ಸತ್ಯ ಶೋಧನ ವಿಭಾಗ ಇರಲಿಲ್ಲವಲ್ಲ!)

× × ×

ಅಪ್ಪಾ; ನೀವು ಮತ್ತ ಅವರು ಊಟಕ್ಕ ಬರಬೇಕಂತ ನನ್ನ ಚಿಕ್ಕ ಮಗ ಬಂದು ಹೇಳಿದ.

ಅವರು ಅಂದ್ರ ಯಾರೋ ?

ಅವರು ಅಂದರ, ಅವರು ಅಂದರ ಪಾರ್ಥೇನಿ ಪಾರ್ಥೇನಿ ಅಂತ ಅಂತಾರಲ್ಲ ಆ ಮಾಮಾ.

ಹ್ಹ ಹ್ಹss ನೋಡೋ ಗೋಪ್ಯಾ; ನಿನಗ ಏನಂತ ಹೆಸರ ಇಟ್ಟಾನ ನೋಡು ನನ್ನ ಮಗಾ.

ಸಿಗರೇಟ್ ಎಸೆದು ಒಳಗ ಬಂದ ಗೋಪು ನನ್ನ ಮಗನ ಗಲ್ಲ ತಟ್ಟುತ್ತ.

ಏನಪಾ ಏನ್ ಹೆಸರ ಇಟ್ಟೇದಿ ನನಗ; ಕೊದಲ ಕಾಕಾ ಅಂತ ಹೆಸರಿಟ್ಟಿರಬೇಕಿಲ; ಹೌದಲ್ಲೋ

ನನ್ನ ಮಗಾ ನಾಚಿಕೊಂಡು ಒಳಗ ಹೋದ.

"ಕೊದಲ್ ಕಾಕಾ ಅಂತ ಅಲ್ಲಾ; ಪಾರ್ಥೇನಿಯಂ ಮಾಮಾ ಅಂತ ನಡೀ ಸಾಕ ನಿನ್ನ ನಿರೀಕ್ಷಣೆ; ಈಗ ಊಟ ಮಾಡೋಣಂತ. ತೀತಸ್ಗಿತ್ತು, ಗಂಟಲಾಗ ಸಿಕ್ಕೀತು ನಿನ್ನ ಆ ಹಾಳು ಹುಲ್ಲಿನ ನಾಮಜಪದಿಂದ"

ಊಟಕ್ಕ ಕುಳಿತಿದ್ವಿ ನನ್ನ ಮಡದಿ ಬಡಿಸ್ತಾ ಬಡಿಸ್ತಾ ಅಂದ್ಲು

"ನೀವು ನಿಲ್ದಾಣಕ್ಕ ಹೋದಾಗ ಪ್ರಹ್ಲಾದರಾಯರು ಬಂದಿದ್ರು. ಇಂದsa ನಡುವಿನ ಆರಾಧ್ನೀ. ಸಂಜೆನಾಗರ ಬಂದುಹೋಗ್‌ಬೇಕಂತ"

"ಓ ಹೋ ಹೌದಲಾ ಇಂದss ನಡುವಿನ ಆರಾಧನೆ. ಸರಿ ಸರಿ" ಎಲೆ ಬಡಿಸಿ ನನ್ನ ಮಡದಿ ಅಡುಗಿ ಮನಿಗೆ ಹೋದ್ಲು.

ಎಡಗೈಯಿಂದ ನನ್ನ ಪಕ್ಕೆಗೆ ತಿವಿದು ಗೋಪ್ಯಾ

"ನ...ಡು...ವಿ...ನ ಆ...ರಾ...ಧನೆ" ಅಂತ ಧನಿ ತೆಗೆದು ಕಣ್ಣು ಮಿಟುಕಿಸಿದ.

ಆತನ ಈ ಶ್ಲೇಷೆಯಿಂದ ನನಗ ಭಾಳ ಕ್ಲೇಶ ಆತು. ನನಗ ತಡೀಲಿಲ್ಲ.

"ಗೋಪ್ಯಾ ನಿನ್ನ ನಾಲಿಗ್ಗ ಎಲವು ಅದನೋ ಇಲ್ಲೋ..."

"ಹೆ ಹ್ಯೆss ನಾಲಿಗ್ಗೇ ಎಲವು? ನಿನ್ನಂಥ ಮುದಿ ಮಂತರ ಮನ್ಯಾಗ ಉಣ್ಣುವಾಗ ನನ್ನ ನಾಲಿಗ್ಗೇ ಎಲವು ಎಲ್ಲೇದ ಸಿಗಬೇಕು. ಈ ಮಗ್ಗೀಕಾಯಿನ ನಾಲಿಗ್ಗ ಎಲವು ಅಂತ ಚೆಪ್ಪರಿಸಿಕೋತಿನಿ. ಹೆ ಹ್ಯೆss"

ಈ ಗೋಪ್ಯಾ ಅಂದರ ಥೇಟ್ ಆ ಗಾದಿ. ಮಾತು ಆದss ಆಲ್ಲಾ ಹಂದರದಾಗ ಅಮಂಗಳ ಮಾತಾಡ ಬ್ಯಾಡೋ ರ್‍ಯಾಮ್ಯಾ ಅಂತ ಅಂದರೆ ನಾ ಯಾಕ ಮಾತಾಡ್ಲಿ ಅಮಂಗಳ? ಹೊಡದಷ್ಟು ಅನ್ನಾ ಹಾಕ್ರಿ ಉಂಡು ಹೆಣಾ ಬಿದ್ದಂಗ ಮಲಗ್ತೀನಿ ಹಂದರಕ್ಕ ಬೆಂಕಿ ಬಿದ್ರೂ, ನೀವ್ ಹೊಯ್ಕೊಂಡ್ರೂ ಏಳಾಂಗಿಲ್ಲ ಅತಿಲ್ಲೋ ಅಂಥಾ ಪೈಕಿ ಇದ್ದಾನ ನಾನಂದೆ.

ಆ ಎಲವು ಅಲ್ಲಾ, ಶೀ ಹೇಳ್ತಿ ಅಲ್ಲಾ ರೂಪಕಾನೋ ಪ್ರತಿಮಾನೋ ಆ ರೀತೀಲೆ ಕೇಳ್ದೆ.

"ಓ ಹೋ ಹಾಂಗೇನು? ಅಂದ, ನಿನ್ನಂಥ ಮಂದಿ ಮಂತನೂ ಇಂಥ ರೂಪಕ ಪ್ರತಿಮಾ ಬಳಸಬಹುದು ಅಂದಮ್ಯಾಲ ನನ್ನಂಥವ ಒಂದು ಹೆಜ್ಜೆ ಮುಂದ ಹೋದ್ರ ಏನ ತಪ್ಪು?

ಮಡದಿ ಏನೋ ತರ್‍ತಾ ಇದ್ದುದು ಕಂಡಿತು.

"ಊಟ ಮಾಡು ಶಾಣ್ಯಾ ಇದ್ದೀ ಮಧ್ಯಾಹ್ನ ಎಲ್ಲಾ ಮಾತಾಡೋಣು ಅಂತ ಹ್ಯಾಂಗೂ ನಾನು ರಜಾ ಹಾಕೇನಿ ಮತ್ತ ನೀ ಅಂತೂ ಖಾಳಿ ಕೆಲಸಕ್ಕ ಹಾಜರ್ ಆಗೇವಾ.

ಊಟ ಆತು ಹಿತ್ತಲಾಗ ಕೈ ತೊಳೆದುಕೊಳ ಲು ಹೋದಾಗ ಮತ್ತ ಸುರು ಆತು ಗೋಪ್ಯಾನ ನಿರೀಕ್ಷಣೆ.

ಈ ಸರತಿ ನಿರೀಕ್ಷಣೆಯು ಮನ್ತು ಮಾತ್ರ ಪಾರ್ಥೇನಿಯಂ ಅಲ್ಲ. ಹಿತ್ತಲಾಗ ತುಳಸಿ ಕಟ್ಟೆ ಇತ್ತು. ತುಳಸಿಯ ಗಿಡ ಸಮೃದ್ಧವಾಗಿ ಬೆಳೆದು ಅದರ ಕಂಪು ಸುತ್ತ ಆಡರಿತ್ತು. ಕಟ್ಟೆಯ ಸುತ್ತ ಮೂರೆ ನಾಲ್ಕು ಅಡಿ ಗೋಮಯದಿಂದ ದಿನಾಲೂ ಸಾರಿಸಿದ್ದರ ಫಲವಾಗಿ ಚಚ್ಚೌಕ ಸೀಮಾಂಕಣ ನಿರ್ಮಿತವಾಗಿತ್ತು. ಈ ಸೀಮಾಂಕಣದ ದಂಡೆಗೆ ರಂಗೋಲಿಯು ಎಳೆ ಲಕ್ಷ್ಮಣರೇಖೆಯಂತೆ ಕಂಗೊಳಿಸುತ್ತಿತ್ತು. ಲಕ್ಷ್ಮಣ ರೇಖೆ ಯಾಕೆಂದರೆ ಅದರ ಆ ಕಡೆ ಮತ್ತೆ ಪಾರ್ಥೇನಿಯಂ ಇತ್ತು; ಆದರೆ ಈ ತುಳಿಸಿಕಟ್ಟೆ ಮತ್ತು ಆ ಸುತ್ತಣ ಗೋಮಯದ ಸೀಮಾಂಕಣದ ಪ್ರದೇಶದಲ್ಲಿ ಪಾರ್ಥೇನಿಯಂದ ಲವಲೇಶ ಇರಲಿಲ್ಲ.

ಹಾಯ್ ಎಂದ ಗೋಪ್ಯಾ.

ಆತನ ತಲೆಯಲ್ಲಿ ನಡೆದಿರಬಹುದಾದ ಯೋಚನಾ ಲಹರಿಯನ್ನು ನಾನು ಗುರುತಿಸಲು ಶಕ್ಯವಾಗುವಷ್ಟು ಹಿನ್ನೆಲೆಯ ಹಗರಣ ಆಗಿತ್ತಲ್ಲ ಬೆಳಗ್ಗಿನಿಂದ!

ಮಧ್ಯಾಹ್ನ ನಾನು ಮತ್ತು ಅವನು ಕೋಣೆಯಲ್ಲಿ ವಿಶ್ರಾಂತಿ ತೆಗೋತಾ ಇದ್ವಿ. ಹುಡುಗರೆಲ್ಲ ಶಾಲೆಗೆ ಹೋಗಿದ್ದರು. ಇವಳು ಪಕ್ಕದ ಮನೆಯವಳ ಕೂಡ ಹರಟೆ ಕೊಚ್ಚಲು ಹೋದಂತಿತ್ತು. ಗೋಪ್ಯಾ ತನ್ನ ವಾಚಾಳಿತನ ಹರಿಬಿಟ್ಟಿದ್ದ.

ನಿರೋಧ: ಜಾಹೀರಾತಿಗೂ ಪಾರ್ಥೇನಿಯಂಕ್ಕೂ ಏನ್ ಸಂಬಂಧ ಅಂದಿ ಅಲ್ಲಾ: ಹೇಳ್ತೇನಿ ಕೇಳು' ಕಾಂಡಂದ ಒಟ್ಟು ತತ್ವ ಏನಪಾ? ಹೊಣೆಗಾರಿಕೆ, ಜಂಜಾಟ ಇವುದೇನ ರಗಳೆ ತಪ್ಪದ ಎಲ್ಲಾ ಸುಖ ಸಿಕ್ಕಿರಬೇಕು. ಈ ಕಾಂಡಂMentality ಎಲ್ಲಾ ಕಡೆ ಹಬ್ಬಿದ ಪಾರ್ಥೇನಿಯಂ ಧಾಂಗ.

ಛೇ ಹೊಗ್ಗೋ ನಿನ ಇದು ನವ್ಯಕಾವ್ಯದ ಪ್ರತಿಮಾ ಏನು ಹಾಂಗಾರ? ಮತ್ತ ನಿನ್ನ ವರ್ಗ ಈಕಡೆ ಆದದ್ದಕ್ಕೂ ಪಾರ್ಥೇನಿಯಂ ಅಂದಿ? ಅದೇನು?

ಹೇಳ್ತೇನ್ ಕೇಳ್ ಇಲ್ಲಿ ನಮ್ಮ ಕಛೇರಿಯೊಳಗಿನ ಹಿರಿ ಅಧಿಕಾರಿಗಳು ಇಂಥವರು ಸೇರ್‍ಯಾರೆಲ್ಲ ಕೇಳಬಾರದ ಸ್ವತಃ ಕೆಲಸ ಮಾಡುವದಿಲ್ಲ, ಅಧಿಕಾರದ ದುರುಪಯೋಗನss ತಾವು ಮಾಡುವ ಸೇವಾ ಅಂತ ಅವರ ಭಾವನೆ! ನಿನಗ ತಿಳೀತಲ್ಲ ನಾ ಅನ್ನೋದರ ಅರ್ಥ? ಹಾಂಗ ನೀ ಸೂಕ್ಷ್ಮಮತಿ ಇದ್ದೀದಿ. ಅವರ ಆಳ್ವಿಕೆ ನಿರಾತಂಕವಾಗಿ ಸಾಗಬೇಕಾದರ. ಮುಂದ ಯಾವ ತರದ ಘೋಟಾಳೆ-ಗೀಟಾಳೆಯ ಸಂತಾನ ಹುಟ್ಟಬಾರದು. ಕಛೇರಿ ಒಳಗೆ ಕಡತ. ಕಾಗದ ಪಕ್ಕಾ ಇರಬೇಕು ಅನ್ನೋ ಸಲುವಾಗಿ ನಮ್ಮಂಥ 'ಕಾಂಡ್‌ಂ' ಬಕರಾಗಳು ಬೇಕಲ್ಲ ವಾಲ್ಯಾರು ಮಂದಿ.

"ಕಾಂಡ್‌ಂ ಬಕರಾನೋ 'ಕಂಡ್‌ಂ' ಬಕರಾನೋ?"

"ಕಂಡಂ ಅಂದರೂ ತಪ್ಪೇನಿಲ್ಲ"

ಅಂತೂ ಏನು, ಎಲ್ಲಾ ಕಡೆಗೆ ಪಾರ್ಥೇನಿಯಂ ಹಬ್ಬೇದ ಅಂಧಾಂಗಾತು.

ಹೌದು, ಹೌದು! ಎಲ್ಲಿಯೋ ಮೂಲ್ಯಾಗ ಇರಬಹುದು ಕರ್ತವ್ಯನಿಷ್ಠ, ಸತ್ಯನಿಷೆಯ ಒಬ್ಬಿಬ್ಬರು. ಅವರೆಲ್ಲ ಹಿಂದ ಉಳಿದಿರ್‍ತಾರ ಹಿತ್ತಲಾಗ ಒಂದ್ ಮೂಲ್ಯಾಗ ತುಳಸಿಕಟ್ಟೆ ನೋಡಿದ ಕೂಡಲೆ ಅದss ಅನಿಸಿತು. ತುಳಸಿಗಿಡ ಮೂಲೆ ಗುಂಪಾಗ್ಯಾವ, ಪಾರ್ಥೇನಿಯಂ ಮಾತ್ರ ಅನಿರ್ಬಂಧವಾಗಿ ಎಲ್ಲಿ ನೋಡಿದಲ್ಲಿ ತಲೆ ಎತ್ತ್ಯಾವ.

ಮುಂದ ಇದಕ ಉಪಾಯ ?

"ಉಪಾಯ ಯಾರಿಗ್ಗೊತ್ತದ? ಪಾರ್ಥೇನಿಯಂ ಸಮೂಲವಾಗಿ ನಿರ್ಮೂಲ ಮಾಡುವ ಉಪಾಯ? ಯಾವಾಗರೆ ಒಮ್ಮೆ ಖಾಕಿ ಅಂಗಿ ಜೊಣ್ಣದವರು 'ಘುಸ್ ಘುಸ್' ಅಂತ ಔಷಧಿ ಗೊಜ್ಜತಾರ, ಆದರ ಪರಿಣಾಮ ಮಾತ್ರ ಓಂ ಘುಸ್! ಆ ಔಷಧಲೆ ಈ ಬೆಳಿಸಾಯಿತದೋ ಏನ್ ಮತ್ತಷ್ಟು ಚಿಗುರ್‍ತದೋ ಗೊತ್ತಿಲ್ಲ"

ಒಂದ್ ಸ್ವಲ್ಪ ಹೊತ್ತು ಸುಮ್ಮನಿದ್ದು. ಆಮ್ಯಾಲ ಮತ್ತ ಅಂದ.

"......ಜವಾಬ್ದಾರಿಯ ಹಂಗು ಇಲ್ದ ಏನಕೇನ ಪ್ರಕಾರೇಣ ಭೋಗವಿಲಾಸ ಗಳಿಸಿಕೊಳೊ ಮನೋವೃತ್ತಿಯಿಂದ ಮನುಷ್ಯಾ ಇಷ್ಟ ಸ್ವಾರ್ಥಿ ಆದ್ಯಾನಲ್ಲ, ಏನ ಕೇಳಬ್ಯಾಡಾ. ತನ್ನಿಂದ ಸುತ್ತಮುತ್ತಲಿನವರಿಗೆ ಏನಾದರೂ ಸ್ವಲ್ಪ ಪ್ರಯೋಜನ ಆಗಬೇಕು ಅನ್ನೋ ವಿಚಾರಾನು ಸತ್ತು ಹೋಗಿರ್‍ತದ. ಸಮೀಪ ಬಂದವರಿಗೆ, ಉಪದ್ರವದ ತುರಿಕೆ, ಇವರು ನೀಡುವ ಏಕಮಾತ್ರ ದಾನ! ಶುದ್ಧ ಪಾರ್ಥೇನಿಯಂ ನಿಲುವು ಇದು.

ಗೋಪ್ಯಾ ಅಂದ್ರ ಪೂರ್ತಿ 'ಬಂಡಲ್' ಏನಲ್ಲ ಅಂತ ನನಗೆ ಅನಿಸಿತು. ನವ್ಯ ಕವಿಯಾದರೂ ಹಳೇ ಮೌಲ್ಯದ ಗುರುತು ಮರ್‍ತಿಲ್ಲ ಮಗಾ! ಆತನ ಮಾತು ಮೊಲಕು ಹಾಕ್ತಾ ಇರೋವಾಗಲೇ ಒಂದ್ ಸ್ವಲ್ಪ ಝೊಂಪ ಹತ್ತಿತು. ಆದರ ಕನಸಿನಾಗ ಕೂಡ ಕಂಡಿತು ಎಲ್ಲಾ ಕಡೆಗೆ ಪಾರ್ಥೇನಿಯಂದ ಸಮೃದ್ಧ ಬೆಳೆ!

✦

# ಸರಸ ವಿರಸ

( ಏಕಾಂಕ ನಾಟಿಕ )

### ಪೀಠಿಕೆ

ಸರಸ-ವಿರಸ ಇದು ಮೂರು ದೃಶ್ಯಗಳಿರುವ ಅವಿದ್ಧ ರೂಪಕ. ಸರಸದಲ್ಲೂ ರಸವಿದೆ, ವಿರಸದಲ್ಲೂ ರಸವಿದೆ ಸರಸ ಜೀವನದಲ್ಲಿ ಉತ್ಸಾಹ ನೀಡಿದರೆ ವಿರಸ ಸಾಹಿತ್ಯದ ಮುಖಾಂತರ ಜೀವನವನ್ನು ತಿದ್ದುತ್ತದೆ.
ಗಂಡು-ಹೆಣ್ಣು ಜೀವನರಥದ ಎರಡು ಗಾಲಿಗಳು. ಆದರೆ ಅವು ಜೊತೆ ಜೊತೆಯಾಗಿ ಉರುಳಬೇಕಾದರೆ 'ತಿಳುವಳಿಕೆಯು' ಅಷ್ಟ ಮುಖ್ಯ. ತಿಳುವಳಿಕೆ ಹೆಚ್ಚು ಕಡಿಮೆಯಾದಾಗ ಜೀವನರಥ ಒಗ್ಗಾಲಿಯಾಗುತ್ತದೆ.
ಗಂಡನನ್ನು ತನ್ನ ಸೊತ್ತು ಮಾಡಿಕೊಳ್ಳಲು ಹೋದ ಒಬ್ಬ ಹೆಣ್ಣು ಅವನನ್ನು ಪಡೆದಳೇನೋ ನಿಜ. ಆದರೆ ಅವನನ್ನು ಕಳೆದುಕೊಂಡಳು ಕೂಡ. ಇಂಥ ಒಂದು ಸನ್ನಿವೇಶ ನಾಟಕದಲ್ಲಿದೆ. ಐಹಿಕ ಸುಖಸಾಧನೆಗಿಂತ ಮಹತ್ವದ್ದು ಮಾನಸಿಕ ತೃಪ್ತಿ. ಅದು ದೊರೆಯದೇ ಇದ್ದಾಗ ವ್ಯಕ್ತಿತ್ವದಲ್ಲಿಯೇ ಒಂದು ಬದಲಾವಣೆಯಾಗುತ್ತದೆ. ತಪ್ಪು-ತಿಳಿದಾಗ ಕಾಲ ಮೀರಿ ಹೋಗಿರುತ್ತದೆ.

'ಜೀವಿ' ಕುಲಕರ್ಣಿ

ಕಾಲ–ಆಧುನಿಕ, ಪಾತ್ರ–ಕಾಲ್ಪನಿಕ ಕಾಲ–೩೦ ನಿಮಿಷ

★

**ಪಾತ್ರ**

೧) ಗಂಡ ೨) ಹೆಂಡತಿ ೩) ಭಟ್ಟ ೪) ಮಿತ್ರ



## ದೃಶ್ಯ ಒಂದು

(ತೆರೆ ಮೇಲೆದ್ದಾಗ ರಂಗ ಬರಿದಾಗಿದೆ. ನಡುವೆ ಬಿಳಿಯ ಪರದೆ ಇದ್ದರೆ ಒಳ್ಳೇದು. ಇಲ್ಲದಿದ್ದರೆ ರಂಗದ ಮುಂಭಾಗಕ್ಕೆ ಮಾತ್ರ spot light ಬಿಡಬೇಕು. ಧ್ವನಿ ಕೇಳಿ ಬರುತ್ತದೆ Happy birth day to you... ಚಪ್ಪಾಳೆ–ನಗೆ–etc ಗಂಡ–ಹೆಂಡತಿಯ ಪ್ರವೇಶ)

**ಗಂಡ:** ನಾನು ಇಂದು ಬಹಳೇ ಸುಖಿಯಾಗಿದ್ದೇನೆ. Seventh heaven ಅಂತಾರಲ್ಲಾ–I am on the top of the world. My love, My darling ಎಂತಹ Co-incidence ಇದು.

**ಹೆಂಡತಿ:** ಏನು ?

**ಗಂ:** ನಿನ್ನ birth-day ಮತ್ತೆ ನಮ್ಮ ಮದುವೆಯ ದಿನ ಎರಡೂ ಒಂದೇ ದಿನ ಇರಬೇಕೆಂದ್ರೆ ಎಂತಹ Co-incidence!

**ಹೆಂ:** ಪಾರ್ಟಿ ಬಹಳ ಚೆನ್ನಾಗಿ ಆಯ್ತು. ನನ್ನ ಗೆಳತಿಯರೆಲ್ಲಾ ಬಂದರು– (pause) ನನ್ನ ಕಂಡರೆ ಕೆಲ ಗೆಳತಿಯರಿಗೆ ಹೊಟ್ಟೆ ಕಿಚ್ಚು.

**ಗಂ:** ಯಾಕೆ?

**ಹೆಂ:** ನಿಮ್ಮಂತಹ ಒಳ್ಳೆ ಗಂಡ ಸಿಕ್ಕನಲ್ಲಾ ಅಂತ.

**ಗಂ:** (pause) ನನ್ನ ಗೆಳೆಯರಿಗೂ ನನ್ನ ಕಂಡರೆ ಹೊಟ್ಟೆ ಕಿಚ್ಚು.

**ಹೆಂ:** ಯಾಕೆ?

**ಗಂ:** ನಿನ್ನಂತಹ ಚೆಲುವೆ ಹೆಂಡತಿ ಸಿಕ್ಕಳು ಅಂತ

**ಹೆಂ:** (ಹಾಸ್ಯಗೈದು ಒಂದೇಟು ಮೆತ್ತಗೆ ಹೊಡೆದು, ಕೊಂಕು ನೋಡಿಯಂತ್ರ) ನೀವು ಸುಳ್ಳು ಹೇಳ್ತೀರಿ. ನೀವು ನನ್ನನ್ನ ಸುಮ್ಮನೇ ವರ್ಣನೆ ಮಾಡ್ತೀರಿ ಅಷ್ಟೆ.

**ಗಂ:** ಇದು ನೋಡು ನಾನು ಹರಿಶ್ಚಂದ್ರ ವಂಶದವನೂ ಅಲ್ಲ, ಗಾಂಧೀಜಿಯವರ ಸಂಬಂಧಿಕನೂ ಅಲ್ಲ, ಇನ್ನು ನಾನು ಸುಳ್ಳೆ ಆಡೋದಿಲ್ಲ ಅಂತ ಸುಳ್ಳು ಹೇಳುವವನೂ ಅಲ್ಲ. ಕೆಲಸಲ ಸುಳ್ಳು ಆಡ್ತೇನೆ– permissable lie ಅಂತಾರಲ್ಲ– ಅಂಥ ಸುಳು. ಆದರೆ ನೀನು ಚೆಲುವೆ, ಸುಂದರಿ ಎಂದಾಗ ಮಾತ್ರ ನಾನು ಸತ್ಯವನ್ನೇ ಆಡುತ್ತೇನೆ, ಸತ್ಯದ ವಿನಾ ಏನನ್ನೂ ಆಡುವದಿಲ್ಲ. (ನಗುತ್ತಾನೆ) ಇಂದು ಪಾರ್ಟಿಗೆ ನನ್ನ ಇಷ್ಟೆಲ್ಲ ಸ್ನೇಹಿತರು ಬಂದಿದ್ದರಲ್ಲ. ಅವರಲ್ಲಿ ಯಾರ ಜೋಡಿ, ನಮ್ಮ ಜೋಡಿಯಷ್ಟು ಅಪರೂಪವಾಗಿತ್ತು, ಅನುರೂಪವಾಗಿತ್ತು ನೀನೇ ಹೇಳು. ಎಲ್ಲಾ ಇಜ್ಜೋಡಿಗಳೇ. Match ಅಂದ್ರೆ ಹ್ಯಾಗಿರಬೇಕು. "Made for each other" ಅಂದಿರಬೇಕು ನೋಡೋ ಜನ! ನಮ್ಮ ಒಬ್ಬ ಮಿತ್ರ ಪೈಲವಾನನಂತೆ ದಪ್ಪ ಇದ್ದರೆ, ಅವನ ಹೆಂಡತಿ ಎಷ್ಟು ತೆಳ್ಳಗೆ! ಕೋಲಿಗೆ ಸೀರೆ ಉಡಿಸಿದಂತೆ ಕಾಣತಾ ಇತ್ತು. ಇನ್ನೊಬ್ಬನ ಲಂಬೂ, ಎತ್ತರವಾಗಿದ್ದಾನೆ, ಅವನ ಹೆಂಡತಿ ಗಿಡ್ಡಿ ಅವನ ಭುಜಕ್ಕಿಂತ ನಾಲ್ಕು ಇಂಚು ಕೆಳಗೇ. ಇನ್ನೊಬ್ಬ ತೆಳಗೆ–ಬೆಳಗೆ ನಾಜೂಕಾಗಿದ್ದಾನೆ. ಆದರೆ ಅವನ ಹೆಂಡತಿ ಕಪ್ಪು ಹಾಗೂ ದಪ್ಪ. ನೀರು ತುಂಬುವ ಪಿಪಾಯಿ ಕೂಡ ಅವಳನ್ನು ನೋಡಿ ನಾಚಬೇಕು.

**ಹೆಂ:** ಸಾಕು ಬಿಡಿರಿ, ನೀವೂ ಅತೀಯಾಗಿ ವರ್ಣಿಸುವರು.

**ಗಂ:** ನಾನು ಸುಳು ಹೇಳ್ತೀನಾ? ಅಂಥಾ ಕಪ್ಪು ಹೆಣ್ಣನ್ನ ಅವನು ಮಾಡಿಕೊಂಡಿದ್ದಾದರೂ ಹೇಗೆ? ಅಂತ ನನಗೆ ದಿಗಿಲು!

**ಹೆಂ:** ಅವರಪ್ಪ ೫೦ ಸಾವಿರ ರೂಪಾಯಿ ವರದಕ್ಷಿಣೆ ತೆತ್ತಿದ್ದಾನೆ, ಮೂಗಿನಿಂದ.

**ಗಂ:** ಮೂಗಿನಿಂದ You mean he has paid through his nose. ಚೆನ್ನಾಗಿದೆ. ಚೆನ್ನಾಗಿದೆ. ಇಂಗ್ಲೀಶ್ idiomನ ಕನ್ನಡದಲ್ಲಿ ಇಳಿಸಿಬಿಟ್ಟಿದ್ದಿಯಾ? O. K. Let us come to the point. ಇಷ್ಟೆಲ್ಲ ಜೋಡಿಗಳು ಇಂದು ಬಂದಿದ್ದವಲ್ಲ. ಅವರಲ್ಲಿ ideal ಜೋಡಿ ಒಂದೇ ಒಂದು ಇತ್ತು.

**ಹೆಂ:** ಯಾವುದು ?

**ಗಂ:** ಯಾವುದು ಅಂದ್ರೆ ? ನಾನು ತೋರಿಸಬಹುದು, ಆದರೆ ಹೇಳಲಾರೆ !

**ಹೆಂ:** ತೋರಿಸಿ.

**ಗಂ:** (ಹತ್ತಿರ ಬರಲು ಕರೆದು) ಬಾ ಇಲ್ಲಿ ಎದುರಿಗೆ ದೊಡ್ಡ ಕನ್ನಡಿ ಇದೆ ಅಂತ ಭಾವಿಸು. ಅದರಲ್ಲಿ ಕಾಣುವುದೇನು ?

**ಹೆಂ:** ನಮ್ಮ ಎದುರಿಗೆ ಕನ್ನಡಿ ಇದ್ದರೆ ಅದರಲ್ಲಿ ಕಾಣೋದು ನಾವೇ?

**ಗಂ:** ಹೆಣ್ಣು ಕನ್ನಡಿಯ ಮುಂದೆ ನಿಂತಾಗ ಇಂಥಾ ರೂಪವತಿ ನೀನು ಅಂತ ಹೇಳಲು ಒಬ್ಬ ಗಂಡೂ ಜೊತೆಗೆ ಇರಬೇಕು, ಅಲ್ಲವೇನು ?

**ಹೆಂ:** ಸಾಕು ನಿಮ್ಮ ಬಣ್ಣದ ಮಾತು. ಇನ್ನು ಮುಂದೆ ಕಾರ್ಯಕ್ರಮವೇನು?

**ಗಂ:** ಇನ್ನು ಭಾವನೆಯ ಸಾಗರದಲ್ಲಿ, ಕಲ್ಪನೆಯ ನೌಕೆಯನ್ನೇರಿ. ಚಂದ್ರಲೋಕಕ್ಕೆ ತೆರಳಬೇಕು.

**ಹೆಂ:** ಅಲ್ಲಾರೀ, ಸಾಗರದಲ್ಲಿ ತೇಲುವವರಿಗೆ ಚಂದ್ರ ಹೇಗೆ ಸಿಗತಾನೆ? (ನಗುತ್ತಾಳೆ.)

**ಗಂ:** ಚಂದ್ರ ಸಿಗದಿದ್ದರೇನಾಯ್ತು ಚಂದ್ರಬಿಂಬ ಸಿಗತ್ತಲ್ಲಾ.

**ಹೆಂ:** ಚಂದ್ರ ಬಿಂಬ ತೆಗೆದುಕೊಂಡು ಏನು ಮಾಡೋದು ?

**ಗಂ:** ಚಂದ್ರ ಬಿಂಬಕ್ಕೆ ಅಣಕಿಸುವುದು ಎಲವೋ ಚಂದ್ರ, ನಿನ್ನ ಬಿಂಬವೂ ಇಲ್ಲಿದೆ ಅದಕ್ಕೆ ಪ್ರತಿಸ್ಪರ್ಧಿಯಾಗಿರುವ ಚಂದ್ರಮುಖಿ ನನ್ನ ಬಳಿಯಲ್ಲಿ ಇದ್ದಾಳೆ ಯಾರು ಚೆಂದ ನೀನೇ ಹೇಳು? ಅಂತ ಸವಾಲು ಹಾಕೋದು.

**ಹೆಂ:** ಏನೋ ಕವಿಗಳಂತೆ ಮಾತನಾಡ್ತಾ ಇದ್ದೀರಿ (pause) ಪ್ರಕೃತಿ ಸರಿಯಾಗಿದೆಯಲ್ಲ ?

**ಗಂ:** ಸರಿಯಾಗಿದೆ ಆದರೆ ಸ್ವಲ್ಪ ಜೋಲಿ ಹೋಗುತ್ತಾ ಇದೆ.

**ಹೆಂ:** ಸ್ವಲ್ಪ ಕುಡಿದಿಲ್ಲತಾನೆ ?

**ಗಂ:** ಹಾಂ ಕುಡಿದಿರುವೆ, ಅಧರಾಮೃತದ ಮದಿರೆ !

**ಹೆಂ:** ಹುಚ್ಚರಂತೆ ಆಡಬೇಡಿ

**ಗಂ:** ಹುಚ್ಚ–ಪ್ರೇಮಿ–ಕವಿ ಇವರೆಲ್ಲ ಒಂದೇ ಜಾತಿಗೆ ಸೇರಿದವರು ಅಂತ ಕವಿ ಶೇಕ್ಸ್‌ಪಿಯರ್ ಹೇಳಿದ್ದಾನೆ. Mid-summer nights' dreamನಲ್ಲಿ ಹೇಳಿದ ಸಾಲು ಇನ್ನೂ ನೆನಪಿವೆ.
"The lunatic the lover, and the poet. are of imagination all compact." "One sees more devils than vast hell can hold. That is the Madman; the lover, all as frantic sees. Helen's beauty in the brows of Egypt. The poet's eye, in a fine frenzy rolling, Doth glance from heaven to earth, from earth to heaven.)

**ಹೆಂ:** ನೀವು ಪ್ರೇಮಿಗಳು ನಿಜ, ಈಗ ಕವಿಯಾದಿರಿ, ಇನ್ನು ಹುಚ್ಚರಾಗೋದು ಯಾವಾಗ ?

**ಗಂ:** ನಿನ್ನ ಬಾಹುಗಳ ಬಂಧನದಲ್ಲಿರುವಾಗ ನಾನು ಪ್ರೇಮಿ. ಸ್ವಲ್ಪ ದೂರ ಸರಿದರೆ ಕವಿ, ಇನ್ನೂ ದೂರ ಹೋದರೆ ಹುಚ್ಚ. ಆ ಹುಚ್ಚು ಬೇಡವೆಂದೇ ನಿನ್ನ ಸುತ್ತಲೂ ಭ್ರಮಿಸುತ್ತಿರುವೆ. (ಅವಳ ಸುತ್ತಲೂ ತಿರುಗುತ್ತಾನೆ.) ಪ್ರೀತಿ ಮಾಡಿದಾರದು–ಅದು ಕರಗಿಸ–ಹೋಗುವಾಗ ಕೊರೆಯುವುದು, ಬರುವಾಗ ಕೊರೆಯುವದು, ನೀನು ದೂರ ಇದ್ದಾಗ ವಿಪ್ರಲಂಭ ಶೃಂಗಾರ—

"ಯಾವ ಜನುಮದ ನಂಟೋ ಏನೋ
ಭಾವ ನಿನ್ನನೆ ಬರೆದಿದೆ
ಎಂದಿನದೊ ಸಂಬಂಧವೇನೋ
ಮನವು ನಿನ್ನೆಡೆ ಕರೆದಿದೆ
　　ಮನದ ಆಳದಿ ಮುಳುಗಿ ನೋಡಲು
　　ನಿನ್ನ ಮೂರ್ತಿಯೆ ಕೆತ್ತಿದೆ.
　　ನಾನು ಮುಂಕ್ತನೆ ಬರಿಯ ಭ್ರಮೆಯೊ
　　ನಿನ್ನ ಜಾಲವೆ ಸುತ್ತಿದೆ.
ಯಾವ ಜನುಮದ ನಂಟೋ ಏನೋ..............(Lights off)

## ದೃಶ್ಯ ಎರಡು

(ಮನೆಯ ದಿವಾಣ ಖಾನೆಯ ಮೇಲೆ ಬೆಳಕು. ಅವಳು ಹೂವು ಮುಂದಿದದ್ದು ತೆಗೆದಿದ್ದಾಳೆ. ಅವನು ಕೋಟು ಟಿ ತೆಗೆದಿದ್ದಾನೆ, ಅವಳು ಮನೆಯಲ್ಲಿ ಕುಳಿತಿದ್ದಾಳೆ– ಅವನು ಆಫೀಸಿನಿಂದ ಬರುತ್ತಾನೆ.)

ಹೆಂ: ಸಂಜೆ ಆರು ಗಂಟೆಗೆ ಬನ್ನಿರಿ ಅಂತ ಹೇಳಿದ್ದೆ- ಈಗ ೮ ಗಂಟೆಯಾಯ್ತು.

ಗಂ: ಆಫೀಸು-ಕೆಲಸ-ಅಂತ ಲೇಟಾಯ್ತು. (ತಡವರಿಸುತ್ತ)

ಹೆಂ: ನಾನು ಬೇಗ ಬನ್ನಿ ಅಂತ ಎಷ್ಟೊಂದು ಹೇಳಿಕೊಂಡಿದ್ದೆ- ನನ್ನ ಮಾತಿಗೆ ಒಂದಿಷ್ಟು ಬೆಲೆ ಇದ್ದರಲ್ಲವೇ ನೀವು ಬೇಗ ಬರೋದು.

ಗಂ: ಅಲ್ಲ ಆಫೀಸು, duty...—

ಹೆಂ: ಆಫೀಸು. duty, ಕೆಲಸ ಅಂತ ಅನ್ನುವವರು ಮದುವೆಯಾದ್ರೂ ಯಾಕಾದ್ರಿ? ಅಲ್ಲೇ ೨೪ ತಾಸು ಇರಬಹುದಾಗಿತ್ತಲ್ಲ......

ಗಂ: ಯಾಕೋ ಇವತ್ತು ಮೈಯಲ್ಲಿ ಭೂತ ಸಂಚಾರ ಆದಂತೆ ಕಾಣ್ತಾ ಇದೆ. ದೇವತೆಯ ಅನುಗ್ರಹಕ್ಕೆ ಕೋಳಿ, ಕೋಣ ಬಲಿಯಾಗಬೇಕೇನು ?

ಹೆಂ: ನನ್ನ ಬಲಿಕೊಟ್ಟಿದ್ದು ಸಾಕಾಗಿಲ್ಲವೇ ? ಇನ್ನು ಕೋಳಿ ಕೋಣ ಯಾಕೆ ?

ಗಂ: ಯಾಕೆ,......ಏನಾಗಿದೆ ನಿನಗೆ ? ತಲೆ ಸರಿ ಇದೆ ಅಲ್ಲಾ ? ಬಂದ ಕೂಡಲೇ ಮಂತ್ರಪುಷ್ಪ !

ಹೆಂ: ನಿಮಗೆ ಒಂದು ಮನೆ ಇದೆ, ಆ ಮನೆಯಲ್ಲಿ ಹೆಂಡತಿ ಅಂಬೋ ಪ್ರಾಣಿಯೊಂದಿದೆ, ಅದಕ್ಕೂ ಒಂದು ತಲೆ ಇದೆ, ಹೃದಯ ಇದೆ ಎಂದಾದರೂ ನೆನಪು ಇರ್ತದೆಯೋ ?

ಗಂ: ನೆನಪಿರದೇ ಏನು ಆಫೀಸಿನಲ್ಲಿರುವಾಗ ನಿನ್ನದೇ ನೆನಪು !

ಹೆಂ: ಹಾಗಾದ್ರೆ ನಾನು ಇಷ್ಟೊಂದು ಅಂಗಲಾಚಿ ಬೇಗ ಬನ್ನಿ ಅಂತ ಹೇಳಿದೆನಲ್ಲ- ಯಾಕೆ ? ಅಂತ ಕೇಳಿದಿರಾ ? ನಿಮಗೆ Surprise ಮಾಡ್ಬೇಕು ಅಂತ ಏನೆಲ್ಲ ತಯಾರಿ ಮಾಡಿದ್ದೆ- ಎಲ್ಲಾ ಉತ್ಸಾಹ ನೀರಿನಲ್ಲಿಯ ಹೋಮವಾಯ್ತು.

ಗಂ: ಇವತ್ತು ಏನು ವಿಶೇಷ ?

ಹೆಂ: ಹೇಳ್ತೀನೆ, ನಾನೇ ಹೇಳ್ತೀನೆ, ನಿಮ್ಮ ಹೆಂಡತೀದೂ ಒಂದು ಹುಟ್ಟಿದ ಹಬ್ಬ ಅಂತಿದೆ- ಅದು ಹೋಗಲಿ ನೀವು ಮದುವೆಯಾದ ದಿನ ಅಂತ ಒಂದಿದೆ...

ಗಂ: ಇಂದು ಜನೇವರಿ 25th ! Oh God ! ಇವತ್ತು ನಮ್ಮ ಮದುವೆಯ anniversary ! ನಿನ್ನ brith day ಕೂಡ. ಎಲ್ಲಾ ಮರೆತೇ ಹೋಯಿತಲ್ಲ ! What a mistake!

ಹೆಂ: ನೀವು ಹೆಂಡತಿಯ ಮೇಲೆ ಎಷ್ಟು ಪ್ರೀತಿ ಇಟ್ಟುಕೊಂಡಿರುವಿರಿ ಅಂಬೋದಕ್ಕೆ ಇದೇ ಸಾಕ್ಷಿ. ನಾನು ಮಾತ್ರ ನಿಮ್ಮ birth day ದಿವಸ woolen ಸ್ವೆಟರ್ ಹೆಣೆದುಕೊಟ್ಟೆ !

ಗಂ: Darling- ನಿಜವಾಗಿಯೂ ನನಗೆ ಮರೆತೇ ಹೋಯ್ತು, ನನ್ನ ಡೈರಿಯಲ್ಲಿ note down ಕೂಡ ಮಾಡಿಟ್ಟಿದ್ದೆ- ಅದು ನೋಡಲೂ ಮರೆತೆ Its sheer oversight.

ಹೆಂ: ನಾನು ನಂಬೋದಿಲ್ಲ,

ಗಂ: ನಿನ್ನನ್ನನಾನು ಹೇಗೆ Convince ಮಾಡಲಿ? Forget it. Come on. let us go for walking.

ಹೆಂ: ನಾನು ಬರೋದಿಲ್ಲ- ನೀವೇ ಹೋಗಿ ಬನ್ನಿ.

ಗಂ: Dont be silly.

ಹೆಂ: ನಿಮಗೆ ಅಡ್ಡಾಡಲು ಬೇರೆ ಯಾರೂ ದೊರೆಯುವುದಿಲ್ಲವೇ ? ಹೆಣ್ಣೆಂದರೆ ಮನೆಯಲ್ಲಿ ಬಿದ್ದಿರುವ ಗಿಡ ಗಂಡೋ ಹಾರುವ ಹಕ್ಕಿ- ಈ ಗಿಡ ಇಲ್ಲ ಇನ್ನೊಂದು ಗಿಡಕ್ಕೆ ಹಾರಬಹುದು.



**ಗಂ.** ನೀನು ಇಲ್ಲದ ಸಲ್ಲದ ಮಾತು ಆಡಬೇಡ. ನನ್ನಿಂದ ತಪ್ಪು ಆಗಿದೆ. ಅದನ್ನೇ ವಿಪರೀತಕ್ಕೆ ಎಳೆಯಬೇಡ. ಬಾಯಿಗೆ ಬಂದಂತೆ ಮಾತಾಡಬೇಡ. I can understand your feelings– ಏನು ಹೇಳಲಿ I am sorry

**ಹೆಂ:** ನಿಮಗೆ ಸ್ತ್ರೀಯರ ಹೃದಯ ಅರ್ಥವಾಗೋದಿಲ್ಲ. ಯಾಕಂದರೆ ಪುರುಷರೆಲ್ಲ ಸ್ವಾರ್ಥಿಗಳು. ಭ್ರಮರದಂತೆ ಚಂಚಲರು. ನಿಮಗಾಗಿ ನಾವು ಎಷ್ಟೊಂದು ಕಾಯ್ದೆ. ನಿಮಗೆ ಇದೆಲ್ಲಾ–

**ಗಂ:** ನೀನು ಒಂದೂ ಫೋನ್ ಮಾಡಿ ಬಿಡಬಾರದಾಗಿತ್ತೇ ಎಲ್ಲಾ ಕೆಲಸ ಬಿಟ್ಟು ಓಡಿ ಬರ್‍ತಿದ್ದೆ. ಇದೆಲ್ಲ oversight !

**ಹೆಂ:** ನೀವು ಹೀಗೆಲ್ಲ ಅಂದ್ರ ನನಗೆ ಮತ್ತೆ ಸಿಟ್ಟು ಹೆಚ್ಚಾಗ್ತದೆ. ಎಲ್ಲಾ over sight ಹೆಂಡತಿಯ ವಿಷಯದಲ್ಲೇ ಯಾಕೆ? ಪ್ರತಿ ತಿಂಗಳ ಸಂಬಳ ಆದೊಡನೆಯೇ ತಂದೆಯವರಿಗೆ ೧೦೦ ಮನಿಆರ್ಡರ್ ಮಾಡೋದು ಮರೆಯು ತ್ತೀರಾ? ಅಲ್ಲಿ over sight ಇಲ್ಲ. ಅವರಿಗೆ ನೀವು ಒಬ್ಬನೇ ಮಗನಾ? ಉಳಿದವರಾರೂ ಇಲ್ಲವೆ? ತಮ್ಮನ educationಗೆ ಎಲ್ಲಾ ಹಣ ಕಳಿಸುವವರು ನೀವು ಒಬ್ಬರೇ ಬೇರೆಯವರಾರಿಲ್ಲವೇ? ನಿಮ್ಮ ಸಂಬಂಧಿಕ ರಿಗೆಲ್ಲ ನೀವು ಭೋಲಾ ಶಂಕರ! ಮೆತ್ತಗಿನ ನೆಲ ಇದ್ದರೆ ಮೊಳಕೈಯಿಂದ ಅಗೆ ಯುತ್ತಾರಂತೆ ಎಲ್ಲರೂ exploit ಮಾಡ್ತಾರೆ ನಿಮ್ಮನ್ನು. ಆದರೆ ಎಲ್ಲಾ ಮರೆವು. ಕಠೋರತನ ನನ್ನ ಕಂಡಾಗ ನನ್ನ ಸಂಬಂಧಿಕರನ್ನು ಕಂಡಾಗ ಬರುತ್ತದೆ. ಅಲ್ಲವೇ ? (ಆಕ್ರೋಶ)

**ಗಂ:** ಅದೆಲ್ಲ ರಗಳೆ ರಾಮಾಯಣ ಈಗ ಯಾಕೆ ?

**ಹೆಂ:** ಮತ್ತೆಯಾವಾಗ? ನಿಮ್ಮ ಸಂಬಂಧಿಕರ ಕೆಲಸ ಅಂದ್ರೆ ನಿಮಗೆ ವೇದವಾಕ್ಯ ನಮ್ಮದೆಂದರೆ ಎಲ್ಲಿಲ್ಲದ ತಾತ್ಸಾರ. ನನ್ನ ತಮ್ಮನಿಗೊಂದು ನೌಕರಿ ಕೊಡಿಸಿರಿ ಅಂತ ಅಂಗಲಾಚಿದೆ – ಇಲ್ಲಿ ಕೆಲಸ ಕೊಡಿಸಿದ್ದರೆ ಅವನೇನು ನಮ್ಮ ಮನೆ ಯಲ್ಲೇ ಮುಕ್ಕಾಂ ಮಾಡತಿದ್ದನೇ ?

**ಗಂ:** ಹಾಗಲ್ಲ ! ಅವನಿಗೆ ಈ ಮನೆಯಲ್ಲಿ ಇರಲಿಕ್ಕೆ ಯಾರು ಬೇಡ ಅಂದ್ರು? ಈಗ employment position ಸ್ವಲ್ಪ tight ಆಗಿದೆ ಅಂತ ಹೇಳಿದನೇ ಹೊರತೂ ನಾನು try ಮಾಡೋದಿಲ್ಲ ಅಂದನೇ?

**ಹೆಂ:** ನಾನೇನು ಕಿವಿಯಲ್ಲಿ ತುತ್ತು ಒಯ್ಯುವದಿಲ್ಲ. ನಿಮ್ಮ ಮಾತಿನ ಶೈಲಿ ನನಗೆ ರೂಢಿಯಾಗಿ ಬಿಟ್ಟಿದೆ.

**ಗಂ:** ನೀನು ಜಗಳಾಡಬೇಕು ಅಂತ ಇವತ್ತು decide ಮಾಡಿದಂತೆ ಕಾಣ್ತದೆ–ಉಪಾಯವಿಲ್ಲ.

**ಹೆಂ:** ಹೌದು. ನಾನೇ ಜಗಳಾಡ್ತೇನೆ. ನೀವು ಪಾಪ ಸಾಧು ಪ್ರಾಣಿಗಳು. ಬಾಯಲ್ಲಿ ಬೆರಳಿಟ್ಟರೆ ಕಚ್ಚಲು ಕೂಡಾ ಬರೋದಿಲ್ಲ. ನನ್ನ ತಂದೆ–ತಾಯಿ ಪೈಗೆ-ಪೈ ಕೂಡಿ ಕಷ್ಟಪಟ್ಟು ಗಳಿಸಿದ ದುಡ್ಡು ಮಗಳ ಹೆಸರಿನಿಂದ Savings Bank account ನಲ್ಲಿ ಇಟ್ಟಿದ್ದರಲ್ಲ –ಆ ೨೦ ಸಾವಿರ ರೂಪಾಯಿ ನೀವು ಸುಳ್ಳು ಹೇಳಿ ಪಡೆದುಕೊಂಡು ನಿಮ್ಮ ತಂದೆಯ ಹಾಗೂ ಅಣ್ಣ ತಮ್ಮಂದಿರ ಸಾಲ ತೀರಿಸಲಿಕ್ಕೆ ಉಪಯೋಗಿಸಿ ನಮ್ಮನ್ನು ಬಾಡಿಗೆ ಮನೆಯಲ್ಲಿ ಕೊಳೆಯು ವಂತ ಮಾಡಿದಿರಿ.

**ಗಂ:** ಮಹಾರಾಯಳೇ ನಿನ್ನ ಹಣ ಎಲ್ಲೂ ಹೋಗಿಲ್ಲ

**ಹೆಂ:** ಎಲ್ಲಿಯೂ ಹೋಗಿಲ್ಲ! ಹಾಗಾದರೆ ಯಾಕೆ ಬರ್‍ತಾ ಇಲ್ಲ? ನೋಡಿ. ನಾನು ಚಿಕ್ಕ ಮಗು ಅಲ್ಲ. ಈ ಬೆರಳಿಗೆ ಉಗುಳು ಹಚ್ಚಿ ಆ ಬೆರಳು ತೋರಿಸುವ ಆಟ ಮಾಡಬೇಡಿ. ನಿಮ್ಮ ಸಂಬಂಧಿಕರೆಲ್ಲರ ಯೋಗ್ಯತೆ ನನಗೆ ಗೊತ್ತಿದೆ. ಎಲ್ಲರೂ ಹರಿದುಕೊಳ್ಳಲು ಬರುವವರು ನಿಮ್ಮದು ಕಾಗೆ ಬಳಗ. ಇನ್ನು ಮೇಲೆ ಯಾರಿಗೂ ಇಲ್ಲಿ ಸ್ಥಾನವಿಲ್ಲ. ನಿಮ್ಮ ಸಂಬಂಧಿಕರ ಯಾರಾದರೂ ಬಂದರೆ ನಾನೇ insult ಮಾಡಿ ಕಳಿಸಿಬಿಡುತ್ತೇನೆ. ನಾಳೆ ನೀವು ನನಗೆ ಹೆಸರಿಡಬೇಡಿರಿ. ಮನೆಯಲ್ಲಿಯ ಸ್ತ್ರೀಯರನ್ನು ಕಸಕ್ಕಿಂತ ಕಡಿಮೆ ಮಾಡಿ ನೋಡಬಾರದು. ನಿಮ್ಮ ಈ ಪ್ರವೃತ್ತಿ ನನಗಂತೂ ಸರಿ ಬರೋದಿಲ್ಲ.

**ಗಂ:** ನನಗ ಈಗ ಹಸಿವೆಯಾಗಿದೆ. ನಿನ್ನ ಬೈಗಳ ತಿಂದು ಅರ್ಧ ಹೊಟ್ಟೆ ತುಂಬಿದೆ. ಇನ್ನು ಉಳಿದ ಅರ್ಧಕ್ಕೆ ಮನೆಯಲ್ಲಿ ಏನಾದರೂ ತಿನಲಿಕ್ಕೆ ಸಿಗುವದೋ ಅಥವಾ ಹೋಟೇಲಿಗೆ ಹೋಗಿ ತಿಂದು ಬರಬೇಕೋ?

**ಹೆಂ:** ಅಂದರೆ ಹೋಟಲಿಗೆ ಹೋಗ್ತೇನೆ ಅಂತ–ಹೆದರಿಸಿದರೆ ಸಮಸ್ಯೆ ಬಗೆಹರಿ ದಂತೆ ಆಯ್ತೇನು? ಇನ್ನು ಮೇಲೆ ದಿನಾಲೂ ಹೋಟೇಲಿಗೇ ಹೋಟ್ಟೆ ಹೋಗ್ತಾ ಇರ್ರಿ, ನಾನೇ ತವರು ಮನೆಗೆ ಹೋಗ್ತೇನೆ. ನನಗಂತೂ ಜೀವನ ಬೇಸರ ಬಂದು ಹೋಗಿದೆ.

(ಒಳಗೆ ಹೋಗುತ್ತಾಳೆ)

**ಗಂ:** (ಸಿಗರೇಟು ಹೊತ್ತಿಸಿ ಹಾ ಅನ್ನುತ್ತ ನಿಟ್ಟುಸಿರು ಬಿಟ್ಟು, ತಲೆ ಹಿಡಿದುಕೊಂಡು ಕೂಡುತ್ತಾನೆ ಒಂದು ಪತ್ರಿಕೆ ಓದುವನು. ಅಷ್ಟರಲ್ಲಿ ಅವಳು ಹೊರಗೆ ಬರುತ್ತಾಳೆ.)

ಇದು ನೋಡು Elizabeth Taylor ಮತ್ತ Richard Burton ಮತ್ತೆ ಮದುವೆಯಾದರಂತೆ. ಈಗ ಅವನು ಕುಡಿಯುವುದನ್ನೇ ಬಿಟ್ಟಿದ್ದಾನೆ-ಯಾಕೆಂದರೆ ಅವಳನ್ನು ಮತ್ತೆ ಕಳೆದುಕೊಳ್ಳುವ ಮನಸ್ಸಿಲ್ಲವಂತೆ ಅವನಿಗೆ.

**ಹೆಂ:** ಮಾತು ಮರೆಸಲಿಕ್ಕೆ ಸುದ್ದಿಪತ್ರದ ಮೊರೆ ಹೋಗಬೇಡ್ರಿ. ನನಗೆ ಈ ಮನೆಯಲ್ಲಿ ಬಹಳ ಬೇಜಾರು ಆಗಿದೆ. ನನ್ನ ತಂದೆ-ತಾಯಿಗಳ ಕಡೆಗೆ ಹೋಗ್ತೇನೆ. ನೀವು ನನ್ನನ್ನು ಕಳಿಸಲಿಕ್ಕೆ ಬರ್ತೀರೋ ಅಥವಾ ನಾನೇ ಹೊರಟು ಹೋಗಲೋ.

**ಗಂ:** Be sensible. ಒಂದು ಸಣ್ಣ incident ನ್ನೇ ಬೆಳೆಸಿ ಸುತ್ತಲಿನ ನಾಲ್ಕು ಜನ ನಗುವಂತೆ ಮಾಡಬೇಡ.

**ಹೆಂ:** ನೀವು ನನ್ನೊಂದಿಗೆ ಸಂಸಾರ ನಡೆಸಿರೋದು ನಾಲ್ಕು ಜನರ ಮನಸ್ಸೊಲಿಸಲಿಕ್ಕೋ, ಅಥವಾ ಹೆಂಡತಿ ಮೇಲಿನ ಪ್ರೀತಿಯಿಂದನೋ?

**ಗಂ:** ಅಲ್ಲವೇ ನಿನ್ನ ಮೇಲೆ ನನಗೆ ಪ್ರೀತಿ ಇಲ್ಲಾ ಅಂತ ಯಾರು ಹೇಳಿದರು?

**ಹೆಂ:** ಬರಿ ಬಾಯಿ ಮಾತಿನಿಂದ ಹೊಗಳಿದರೆ ಸಾಕೆ. ಪ್ರೀತಿಯನ್ನು ಕೃತಿಯಲ್ಲಿ ತೋರಿಸಬೇಕು. ನಾನಂತೂ ತವರಿಗೆ ಹೋಗುವ ನಿರ್ಧಾರ ಮಾಡಿದ್ದಾಯಿತು. ಇನ್ನು ನಿಮ್ಮ ಮಾನ ಮರ್ಯಾದೆ ನಿಮಗೆ ಸೇರಿದ್ದು. ನನ್ನ ಮಾತು ನಡೆಸಿಕೊಡುವ guts ನಿಮ್ಮ ಹತ್ರ ಇದ್ದರೆ, ಹೇಳಿರಿ. ನಾನು ಇಲ್ಲೇ ಇರಲು ತಯಾರು. ಆ ಗಂಡುತನ ನಿಮ್ಮಲ್ಲಿದೆಯೋ?

**ಗಂ:** ಅದೇನು?

**ಹೆಂ:** ಯಾವುದೋ ನೆಪ ಹೇಳಿ ನಿಮ್ಮ ಸಂಬಂಧಿಕರ ಸಾಲ ತೀರಿಸಲಿಕ್ಕೆ ನನ್ನ ೨೦ ಸಾವಿರ ರೂಪಾಯಿ ಬಳಸಿದ್ದೀರಲ್ಲ ಅದನ್ನು ೮ ದಿನಗಳಲ್ಲಿ ನನಗೆ ವಾಪಸು ಕೊಡಿರಿ.

**ಗಂ:** ಅಲ್ಲವೇ, ಎಲ್ಲಿಂದ ಹಣ ತರಬೇಕು?

**ಹೆಂ:** ಹಾಗಾದರೆ ಆಸ್ತಿಯನ್ನು ಪಾಲು ಮಾಡಲಿ. ನಿಮ್ಮ ತಂದೆಯವರಿಗೆ ಇಂದೇ Legal notice ಕೊಡಿರಿ. ಮತ್ತ ನೀವು ಈಗಾಗಲೇ ಕೊಟ್ಟ ೨೦ ಸಾವಿರವನ್ನ ಅವರು Common ಸಾಲ ಅಂತ treat ಮಾಡಲಿ.

**ಗಂ:** ಅಲ್ಲವೇ ನಾನು-ನನ್ನ ಸಂಬಂಧಿಕರೊಡನೆ ಸಂಬಂಧ ಕಡಿದುಕೊಳ್ಳಲೇನು?

**ಹೆಂ:** ಹೆಂಡತಿಯೊಂದಿಗೆ ಸಂಬಂಧ ಬೇಕಾದರೆ ಇತರ ಸಂಬಂಧ ಬಿಡಬೇಕು.

**ಗಂ:** ನೀನು ಆ ಹಣ ತೆಗೆದುಕೊಂಡಾದರೂ ಏನು ಮಾಡ್ತಿ?

**ಹೆಂ:** ನನ್ನ ಹಣ ಅದು, ನಾನು ಏನು ಬೇಕಾದ್ದು ಮಾಡ್ತೇನೆ. ನಮಗಿಂತ ಕಡಿಮೆ ಅಂತಸ್ತಿನವರು ಕಡಿಮೆ ಸಂಬಳ ಪಡೆಯುವವರು ಎಷ್ಟು ಅಚ್ಚುಕಟ್ಟಾಗಿ ಸಂಸಾರ ಮಾಡ್ತಾರೆ. ಮನೆಗೆ ಒಂದು ಒಳ್ಳೇ ಪೇಂಟ್ ಹಚ್ಚಿಸಿ, ಸುಂದರ ಫರ್ನಿಚರ ತಂದು ಒಳ್ಳೇ ಪಡದೆಗಳನ್ನು ಬಿಟ್ಟು ಟಿ. ವ್ಹಿ. ರೇಡಿಯೋ ಗ್ರಾಮ್‌ದಿಂದ ಅಲಂಕರಿಸಿ- ನಿಮಗಂತೂ ಯಾವುದರಲ್ಲೂ ಹೌಸೇ ಇಲ್ಲ! ಸುಖಿ ಸಂಸಾರದ ಸ್ವಪ್ನ ಕಾಣುವವಳು ನಾನು ಒಬ್ಬಳೇ!

**ಗಂ:** (ಸೋತಂತೆ) ಸರಿ ಆಸ್ತಿಯನ್ನು ಪಾಲುಮಾಡಲು ಇಂದೇ ಪತ್ರ ಬರೆಯುತ್ತೇವೆ.

**ಹೆಂ:** (ಗೆಲುವಿನ ಮುಖದಿಂದ) ಕಾಫೀ ತರ್ತೇನೆ.

(ಒಳಗೆ ನಡೆದಳು)

**ಗಂ:** ಕಾಲಾಯ ತಸ್ಮೈ ನಮಃ — —

(lights off ಮನೆಯಲ್ಲಿ ರೇಡಿಯೋ, ಟೆಲಿಫೋನ್ ಮುಂತಾದವುಗಳನ್ನು ಅರ್ಧ ನಿಮಿಷದಲ್ಲೇ ಇಡುವ ಏರ್ಪಾಡಾದರೆ ಒಳಿತು. ತಡವಾಗುವಂತಿದ್ದರೆ ನಡುವೆ ಬಿಳಿಯ ಪಡದೆ ಹಾಕಿ ಮುಂದಿನ ಪ್ರವೇಶ ಪ್ರಾರಂಭಿಸಬೇಕು. ಮುಂದಿನ ದೃಶ್ಯದ ಪ್ರಾರಂಭದಲ್ಲಿ ಬರುವ ಅಡುಗೆಯವನ ಪ್ರವೇಶ ೫ ನಿಮಿಷಗಳ ವರೆಗೆ ನಡೆದರೆ ಅಥವಾ ವಾಯು



ನಾಯಕಿ ಬಟ್ಟೆ ಬದಲು ಮಾಡಿಕೊಂಡು ಬರುವವರೆಗೂ ಇದ್ದರೆ ಒಳ್ಳೇದು. ನಡುವೆ light music ಬೇಕು. ೫ ವರ್ಷಗಳ ನಂತರ ಅಂತ Announce ಮಾಡಬಹುದು, ಸಂಗೀತದ ಮಧ್ಯೆ ಹಾಗೆ ಹೇಳಬಹುದು.)

## ಪ್ರವೇಶ ಮೂರು

**ಭಟ್ಟ:** ಹೋಟೆಲಿನಲ್ಲಿ ಅಡುಗೆ ಮಾಡಿ ಬೇಸರ ಬಂತು ಅಂತ ನಮ್ಮ ರಾಯರ ಮನೆಯನ್ನು ಸೇರಿದೆ. ನಮ್ಮ ರಾಯರು ಬಹಳ ದೊಡ್ಡ ಮನುಷ್ಯರು ನಮ್ಮ ಅಮ್ಮಾವ್ರೂ ದೊಡ್ಡವರೇ. ಇವರ ಮನೆಗೆ ಬಂದು ನನಗೆ ಗೊತ್ತಾದ ಒಂದು ದೊಡ್ಡ ರಹಸ್ಯ ಏನು ಗೊತ್ತಾ-(pause) ಇವರ ಮನೆಯ ದೋಸೆಗೂ ತೂತೇ ಇವೆ ಮಾರಾಯರೇ (pause)..........

ಮನೆಯಲ್ಲಿ ಮಕ್ಕಳಿರಬೇಕು. ಅಂದರೆ ನಮ್ಮಂತಹರಿಗೆ time pass ಆಗ್ತದೆ. ರಾಯರು ಆಫೀಸಿನಲ್ಲಿ, ಅಮ್ಮಾವ್ರು ತಮ್ಮ ಕೆಲಸದಲ್ಲಿ ಇರೋದ್ರಿಂದ ನನಗೆ ಒಬ್ಬನೇ ಮಾತನಾಡೋದು ಅಭ್ಯಾಸ ಆಗಿ ಹೋಗಿದೆ. ಮೊನ್ನೆ ನಮ್ಮ ಬಾಜು ಮನೆ ಅಡಿಗೆಯವಳು ಬಂದಿದ್ದಳು. ಮನೆಯಲ್ಲಿ ಯಾರೂ ಇರೋದಿಲ್ಲ–ಆದರೆ ನಿನ್ನ ಬಾಯಿ ಮಾತ್ರ ಸುಮ್ನೇ ಇರಲ್ಲ ಮಾತಾಡ್ತಾ ಇರ್ತಿಯಲ್ಲ ಯಾರ ಜೊತೆಗೆ ಅಂತ ಕೇಳಿದಳು. ನಾನೆಂದೆ "ನನಗೆ, ಒಬ್ಬನೇ ಇರೋದು ಬೇಜಾರು–ಅಡುಗೇ ಮನೆಯಲ್ಲಿ ಒಂದು ಕನ್ನಡಿ ಹಾಕಿಕೊಂಡು–ನನ್ನ ಮುಖ ನಾನೇ ನೋಡಿಕೊಂಡು ಮಾತಾಡ್ತೇನೆ" ಅವಳೆಂದಳು– "ನನಗೂ ಒಂದು ಕನ್ನಡೀ ತಂದುಕೊಡು ನನಗೂ ಬೇಜಾರು" ಅಂತ ನಾನೇನು ಅಂದೆ ಗೊತ್ತಾ–? "ನಿನಗೆ ಬೇಜಾರಾದಾಗ ಹೇಳು ನಾನೇ ನನ್ನ ಕನ್ನಡೀ ತೆಗೆದುಕೊಂಡು ನಿಮ್ಮ ಮನೆಗೆಬಂದು ಬಿಡ್ತೇನೆ" ನಗುತ್ತಾನೆ.) ಆವಕ್ಕೆ ಅವಳೇನು ಅಂದಳು ಗೊತ್ತಾ? "ಕನ್ನಡೀ ಏನು ತರಬ್ಯಾಡಾ, ನಿನ್ನ ಮುಖಾನೇ ಕನ್ನಡಿ ಇದ್ದ ಹಾಗಿದೆ." !

ನಮ್ಮ ರಾಯರು ಈಗಂತೂ ಒಂದು ತರಹ ಆಗಿ ಬಿಟ್ಟಿದ್ದಾರೆ. ಆಸ್ತಿ ಎಲ್ಲ ಪಾಲಾಯ್ತು, ಅಮ್ಮಾವ್ರು ಬೇಡಿದ್ದನೆಲ್ಲ ತಂದು ಕೊಟ್ಟರು. ಆದರ ಯಾಕೋ ಮನೆಯಲ್ಲಿ ಅವರಿಗೆ ಬೇಜಾರು.

ಮನೆ ಅಂದ್ರೆ ಹ್ಯಾಗಿರಬೇಕು. ನಗುನಗುತಾ ಎಲ್ಲರೂ ಇರಬೇಕು ಹಾಲಿನಲ್ಲಿ–ಸಕ್ರೆ ಬೆರತ ಹಾಗೆ ಇರಬೇಕು. ಅನ್ಯೋನ್ಯವಾಗಿಬೇಕು.

ನನಗೆ ಈ ಮನೆಯಲ್ಲಿ ಕೆಲಸ ಬಹಳ ಇಲ್ಲ. ಇಬ್ಬರದೇ ಅಡಿಗೆ ಮಾಡಿದರೆ ಸಾಕು, ನಾನೂ ಒಬ್ಬ ಇದ್ದೇನಲ್ಲಾ–ಅಂದ್ರೆ ಲೆಕ್ಕ ಮೂರು ಜನ ಆಯ್ತು. ಇಬ್ಬರದೇ ಅಡಿಗೆ ಸಾಕು. ಯಾಕೆ ಅಂತಿರಾ? ರಾಯರು ಮತ್ತೆ ಅಮ್ಮಾವರು ಜಗಳಾ ಆಡ್ತೇ ಊಟಾ ಮಾಡೋದಿಲ್ಲ. ಜಗಳದಲ್ಲಿ ಒಬ್ಬರಾದ್ರೂ ಉಪವಾಸ ಇರಲೇ ಬೇಕಲ್ಲಾ ! ಈ ಮನೆಯಲ್ಲಿ ದೇವರು ಎಲ್ಲಾ ಕೊಟ್ಟಿದ್ದಾನೆ ಆದರೆ ಸುಖ ಒಂದು ಕೊಡಲಿಲ್ಲ.

### (ಹೆಂಡತಿಯ ಪ್ರವೇಶ)

**ಹೆಂ:** ಏನೊ, ಇನ್ನು ರಾಯರು ಬರಲಿಲ್ಲವೆ? ಟಿ. ವ್ಹಿ. ಕಾರ್ಯಕ್ರಮ ಎಲ್ಲಾ ಮುಗಿಯಿತು. ಎಷ್ಟು ಲೇಟು ಇವತ್ತು.

**ಭಟ್ಟ:** ಅಮ್ಮಾವ್ರೆ ಅಡಿಗೆ ಎಲ್ಲಾ ಆರಿ ಹೋಗ್ತಾ ಇದೆ. ಇಂದು ನಿಮ್ಮ ಹುಟ್ಟಿದ ದಿನ ಅಂತ ರಾಯರೇ ಹೇಳಿದರು. ವಿಶೇಷ ಅಡುಗೆ ಮಾಡು ನಾನು ಬೇಗ ಬರ್ತೇನೆ ಅಂತ ತಾವೇ ಹೇಳಿದರು. ಅವರಿಂದ ಲೇಟಾದದ್ದಕ್ಕೆ ಟೆಲಿಫೋನ್ ಕೂಡಾ ಬರಲಿಲ್ಲ.

**ಹೆಂ:** ಇವತ್ತು ಬರಲಿ, ಅವರಿಗೆ ಸರಿಯಾಗಿ ಪಾಠ ಕಲಿಸ್ತೇನೆ. ಐದು ವರ್ಷದ ಹಿಂದೆ ಹೀಗೆ ಒಂದು ದಿನ ಹುಟ್ಟಿದ ಹಬ್ಬ ಇತ್ತು. ಅವರನ್ನು ತರಾಟೆಗೆ ತೆಗೆದುಕೊಂಡೆ. ಆಗ ಸರಿದಾರಿಗೆ ಬಂದಿದ್ದರು. ಈಗ ಮತ್ತೆ ಜಗಳಾಡಬೇಕಾಗಿದೆ. ಬಿಸಿಯಾಗದೇ ಬೆಣ್ಣೆ ಕರಗೋದಿಲ್ಲ.

### (ಮಿತ್ರನ ಪ್ರವೇಶ)

**ಮಿತ್ರ:** ಅಮ್ಮಾ ಅವರೇ ನಾನು ನಿಮ್ಮ ಯಜಮಾನರ ಆಫೀಸಿನಲ್ಲಿ ಕೆಲಸ ಮಾಡುವವನು.

**ಹೆಂ:** ಯಾಕೆ ? ಎಲ್ಲಿದ್ದಾರೆ ಅವರು ?

**ಮಿತ್ರ.** ಹೊರಗೆ ಟ್ಯಾಕ್ಸಿಯಲ್ಲಿದ್ದಾರೆ.

**ಹೆಂ.** ಕಾರ್ ಎಲ್ಲಿದೆ ?

**ಮಿತ್ರ:** ಒಂದು ಗಿಡಕ್ಕೆ ಢಿಕ್ಕಿ ಹೊಡೆದು ನಿಂತಿದೆ. ಇವರು ವಿಪರೀತ ಕುಡಿದಿದ್ದಾರೆ. ಬುದ್ಧಿ ಸ್ತಿಮಿತದಲ್ಲಿಲ್ಲ. ನಾವು ರಸ್ತೆಯಲ್ಲಿ ಇವರ ಕಾರ್ ಕಂಡು ಗುರ್ತು ಹಿಡಿದು– ಟ್ಯಾಕ್ಸಿಯಲ್ಲಿ ತಂದೆವು.

**ಭಟ್ಟ:** ನಡೆಯಿರಿ ನಾನು ಬರ್ತೀನಿ.

(ಇಬ್ಬರೂ ಹೊರಗೆ ಹೋಗುವರು. ಬಾಗಿಲ ಕಡೆ ಅವಳು ಕಾತುರತೆ ಭಯ ತುಂಬಿದ ದೃಷ್ಟಿಯಿಂದ ನೋಡುವಳು)

**ಗಂ:** (ಕುಡಿದ ಅಮಲಿನಲ್ಲಿ ಕುರ್ಚಿ–ಟೀಪಾಯಿ ಕಾಲಿನಿಂದ ಹಾಯುತ್ತ) ಬೀಚಮೆ ಆತಾ ಹೈ–ತುಮಕೋ ಬರಾಬರ್ ಕರೆದಾ !

**ಹೆಂ:** ಯಾರು? ಏನು?

**ಮಿತ್ರ:** ರಸ್ತೆಯಲ್ಲಿ ಗಿಡ ಅಡ್ಡ ಬಂತೂ ಅಂತ ಗಿಡದೊಂದಿಗೆ ಜಗಳಾಡಲಿಕ್ಕೆ ಪ್ರಾರಂಭಿಸಿದ್ದರು. (ಸೋಫಾದ ಮೇಲೆ ಕೂಡಿಸುವರು)

**ಹೆಂ:** (ನೀರು ತಂದು ತಲೆಗೆ ಸಿಡಿಸಿ) ಇದೆಲ್ಲಾ ಏನಾಯ್ತು ಅಂತ ಹೇಳಬಾರದೇ?

**ಮಿತ್ರ:** ನೋಡಿ ತಾಯಿ, ನನಗೂ ಅಕ್ಕ ತಂಗಿ ಇದ್ದಾರೆ. ನೀವು ನನ್ನ ತಂಗಿ ಅಂತ ಭಾವಿಸಿ ಹೇಳ್ತೀನಿ. ಇವರನ್ನು ನೀವು ನಿಮ್ಮ Control ದಲ್ಲಿ ಇಟ್ಟು ಕೊಳ್ಳಿರಿ. ಇಲ್ಲದಿದ್ದರೆ ಇವರು ನೌಕರಿ ಕಳೆದುಕೊಳ್ಳುವುದು ಖಂಡಿತ. ರಸ್ತೆಯಲ್ಲಿ ಎಲ್ಲಿಯಾದರೂ Accident ಆಗಿ... ...

**ಹೆಂ:** (ಕಿವಿ ಮುಚ್ಚಿಕೊಂಡು) ಅಯ್ಯೋ ಸಾಕು ಮಾಡಿ. (ಬಿಕ್ಕಿ ಅಳುತ್ತಾಳೆ)

**ಮಿತ್ರ:** ಅಳಬೇಡಿ ಅಳಬೇಡಿ.

**ಗಂ:** (ಕಾಲು ಚಾಚಿ ಟೀಪಾಯಿ ಒದೆಯುತ್ತ)
ಸೂವರ್ ಹರಾಮ್ ಖೋರ್ ತುಮಕೋ ಬರಾಬರ್ ಕರೇಗಾ...

**ಹೆಂ:** ಏನ್ರೀ ಇದೆಲ್ಲಾ ಹೀಗೇಕಾಗಿದ್ದಾರೆ?

**ಮಿತ್ರ:** ನಿಮ್ಮ ಮುಂದೆ ನಿಜ ಹೇಳ್ತೀನಿ. ಅವರೀಗ ದಾರಿ ತಪ್ಪಿದ್ದಾರೆ. ಕೆಟ್ಟ ಹೆಣ್ಣಿನ ಸಹವಾಸ ಕೂಡ ಅವರಿಗಿದೆ. ಆಫೀಸ ಮುಗಿದ ಮೇಲೆ ಎಲ್ಲಾ over time ಅಲ್ಲೇ. ಅವರೆಲ್ಲ ಇವರಿಗೆ ಕುಡಿಸಿ ಹಾಳು ಮಾಡುತ್ತಾರೆ ಮನೆಯಲ್ಲಿ ಸುಖ ಸಿಗದೇ ಇದ್ದಿದ್ದರೆ. ಪುರುಷರು ಅಡ್ಡದಾರಿ ಹಿಡೀತಾರೆ... ಎಂಥಾ ಒಳ್ಳೆ ಮನುಷ್ಯ ಏನಾಗಿದ್ದಾನೆ ಇವತ್ತು. ಎಂಥಾ ಪ್ರಾಮಾಣಿಕ ಇಂದು ಅಪ್ರಾಮಾಣಿಕನಾಗಿದ್ದಾನೆ. ಎಂಥಾ ಸಭ್ಯ ಇಂದು ಅಸಭ್ಯನಾಗಿದ್ದಾನೆ. ಇವರು ಹೀಗೇಕೆ ಆದರೆಂಬುದೇ ಎಲ್ಲರಿಗೂ ದಿಗಿಲು.

**ಹೆಂ:** ನೋಡಿ, ನೀವು ನನ್ನನ್ನ ತಂಗಿ ಅಂತ ಕರೆದಿರಿ ಅದಕ್ಕೇ ಹೇಳ್ತೀನಿ- ಇವರು ಹೀಗಾಗಲು (ಅಳುತ್ತ) ನಾನೇ ಕಾರಣ. ಇವರನ್ನ ಎಲ್ಲ ಸಂಬಂಧಿಕರಿಂದ ದೂರ ಇರಿಸಿದೆ. ನನ್ನ ವೈಯಕ್ತಿಕ ಸ್ವಾರ್ಥಕ್ಕಾಗಿ ಇವರಿಗೆ ಅಪ್ರಿಯ ಕೆಲಸ ಮಾಡಲು ಹಚ್ಚಿದೆ. ಇಂದು ಇವರಿಗೆ ತಿಳಿ ಹೇಳುವ ಹಿರಿಯರ್ಯಾರು ಹತ್ತಿರ ಇಲ್ಲ. ನನಗೆ ಬೇಕಾದ ಉಪ-ಭೋಗದ ವಸ್ತುಗಳೆಲ್ಲ ಇಂದು ದೊರೆತಿವೆ, ಆದರೆ ಇವರು ಮಾತ್ರ ದಿನೇ ದಿನೇ ನನ್ನಿಂದ ದೂರ ಆಗುತ್ತಿದ್ದಾರೆ.

ಬಡತನ ಇದ್ದರೂ ಗಂಡ ಹೆಂಡತಿ–ಅನ್ಯೋನ್ಯವಾಗಿರಬೇಕು. ಮದುವೆಯಾದ ಹೊಸತರಲ್ಲಿ ನಾವು ಸಮುದ್ರ ತೀರದಲ್ಲಿ ತಿರುಗಾಡುತ್ತ ಇರುವಾಗ ಚನಾ–ಸೇಂಗಾ ತಿಂದಾಗ ದೊರೆತ ಸುಖ ಇಂದು ದೊಡ್ಡ ಹೊಟೇಲಿನ ಪಾರ್ಟಿಗಳಲ್ಲೂ ದೊರೆಯುತ್ತಿಲ್ಲ. ನಾವು ಹತ್ತಿರ ಬಂದಾಗೊಮ್ಮೆ ಜಗಳಾಡುತ್ತೇವೆ. ಹತ್ತಿರ ಬಂದಷ್ಟು ದೂರ ಆಗ್ತಾ ಇದ್ದೇವೆ. ಇಂದು ಸುಖ ಮರೀಚಿಕೆಯಾಗಿದೆ. ಸಂತೋಷ ದೂರದ ಸ್ವಪ್ನವಾಗಿದೆ. ಗಂಡ ಸಂಪೂರ್ಣವಾಗಿ ನನ್ನವನೇ ಆಗಲಿ ಎಂದೆ, ಆದರೆ ನಾನು ಅವನನ್ನೇ ಕಳೆದುಕೊಂಡೆ. ಕಳೆದುಕೊಂಡೆ.

**ಮಿತ್ರ:** ಅವರನ್ನು ಉಳಿಸಲು ಇನ್ನೂ ಕಾಲ ಮೀರಿಲ್ಲ. ನೀವು ಅವರನ್ನು ಸರಿದಾರಿಗೆ ತರಬಹುದು.

**ಗಂಡ:** ನೀರು...ನೀರು...

(ಅವನ ಎದುರಿಗೆ ನೀರಿನ ವಾಟಿ ಇಡುವರು. ಅದನ್ನು ಕೈಗಳಿಂದ ಹುಡುಕಿ, ಬಡಿಸಿ ಕೆಡವಿ) ಎಲ್ಲಿದೆ...ನನಗೇನೂ ಕಾಣ್ತಾ ಇಲ್ಲಾ...ನೀನು ಎಲ್ಲಿದ್ದೀಯಾ?

**ಮಿತ್ರ:** ತಾಯಿ, ಪೇಟೆಯಲ್ಲಿ ಬನಾವಟಿ ಮಾಲು ಬಹಳ ಇದೆ ಮೊನ್ನೆ ಫ್ರೆಂಚ್ ಪಾಲಿಶ್ ಕುಡಿದು ೨೦ ಜನ ಕಣ್ಣು ಕಳೆದುಕೊಂಡರಂತೆ!

**ಹೆಂ:** (ಚೀರಿ) ದೇವಾ ಇಂಥಾ ಶಿಕ್ಷೆ ನನಗೆ ಕೊಡಬೇಡ...

**ಗಂ:** (ಕುರುಡನಂತೆ ಹುಡುಕುತ್ತಾ) ಎಲ್ಲಿರುವೆ ನೀನೆಲ್ಲಿರುವೆ.

**ಹೆಂ:** ನಾನು ಇಲ್ಲೇ ಇದ್ದೇನೆ (ಚೀರುತ್ತ ಅಳುತ್ತ) ನಾನು ನಿಮ್ಮ ಬಳಿಯಲ್ಲಿಯೇ ಇದ್ದೇನೆ.

........ತೆರೆ... ....

---

(ನಾಟಕ ಪ್ರಯೋಗಕ್ಕೆ, ಲೇಖಕರ ಲಿಖಿತ ಅಪ್ಪಣೆ ಪಡೆಯಬೇಕು.
ವಿಳಾಸ C/o 'ಕರ್ಮವೀರ')

---

# ಬದುಕು-ಮಹಾ-ಹಲ್ಕಟ್‌ಗಿರಿ

ಬದುಕುವುದೊಂದು
ಮಹಾ–
ಹಲ್ಕಟ್‌ಗಿರಿ!
ದಿನಾ ಬೆಳಗ್ಗೆದ್ದು
ಒಂದು ತೀವ್ರ ನಾಚಿಗೆಗೇಡಿತನದಿಂದ
ಶುರು ಮಾಡಿ,
ಸಂಜೆ,
ಅದೇ ಕೊಳಚೆಯಲ್ಲಿ, ಏಲಿ ಏಲಿ
ಒದ್ದಾಡುವವರೆಗಿನ
ಮಧ್ಯೆ–
ಬಿರು–ಬಿಸಿಲ ಮಧ್ಯಾಹ್ನಗಳಲ್ಲಿ
ಖಾಲಿಡಬ್ಬನ್ನು ಹೊತ್ತು ಭಿಕ್ಷೆ ಎತ್ತುತ್ತ
ಪುರುಸೊತ್ತಾದಾಗ ಒಂದೆರಡು
ಕೆಲಸಕ್ಕೆ ಬಾರದ
ಕನಸು ಕಟ್ಟುತ್ತ
ಉದ್ದುದ್ದ ನೆರಳುಗಳ ಗುಂಟ ನಡೆದು
ಅದಕ್ಕೂ ಉದ್ದದ ಉಸಿರ ತೆಗೆಯುತ್ತ
ಕಪ್ಪು ರಾತ್ರಿಯಲ್ಲಿ
ನೆಪಕ್ಕೆ ಮಾತ್ರ ಉಳಿದ ನನ್ನನ್ನು
ಅಲ್ಲ ನನ್ನ ನೆರಳನ್ನು
ಕಳೆದು ಕೊಳ್ಳುತ್ತ
ಉಸಿರು ಸರಿಯಾದಾಗೊಮ್ಮೆ
ಕಥೆ ಹೇಳುತ್ತ
ಗಾಂಧಿ, ಕ್ರಿಸ್ತರ ನೆನೆದು
ಕೃಷ್ಣ–ವಿಷ್ಣುಗಳ ಜಪಮಾಲೆ ಹಿಡಿದು
ಗುಳಿ ಎದ್ದ ದೇವರುಗಳ
ಬೆನ್ನು ಬಿದ್ದರೂ ಅಷ್ಟೇ
ಮರುದಿನದ ಬೆಳಗಿಗೂ
ಅದೇ ವಾಕರಿಕೆ ವ್ಯವಹಾರದಿಂದ
ಪ್ರಾರಂಭ !
ತಲೆಯಿದ್ದವರು ತಲೆಯಿಂದ
ಕೈಯಿದ್ದವರು ಕೈಯಿಂದ
ಜ್ಞಾನ
ಭಕ್ತಿ
ಕರ್ಮ
ಪಾಠ ಮಾಡಿದರೂ ಅಷ್ಟೇ
ಒಟ್ಟಿನಲ್ಲಿ ಬದುಕೆಂಬ
ಹಳೆತಿಪ್ಪೆಗೊಂದಿಷ್ಟು
ಹೊಸ ಕಸವ ಸುರಿದು
ಕೇಕೆ ಹಾಕುವರು.
ಈ ಕಾಲ ನಮಂದಂದು.

ಸುನಾ

# ಸಾಹಿತ್ಯ ಮತ್ತು ಶ್ರೀಸಾಮಾನ್ಯ

ಶ್ರೀಸಾಮಾನ್ಯನಿಗೆ ರಾಜಕಾರಣದಿಂದ ಸಾಹಿತ್ಯದವರೆಗೆ ಎಲ್ಲೆಡೆ ಅಗ್ರ ಪ್ರಾಶಸ್ತ್ಯ. ಆರ್ಥಿಕ ಯೋಜನೆ, ಸಾಮಾಜಿಕ ಕ್ರಾಂತಿ, ರಾಜಕೀಯ ಸೌಕರ್ಯ ಇಷ್ಟೇ ಅಲ್ಲ ಸಾಹಿತ್ಯ ಕೂಡ ಶ್ರೀಸಾಮಾನ್ಯನನ್ನು ಅರಸುತ್ತಿವೆ. ಆತನೇ ಇವಕ್ಕೆಲ್ಲ ಸ್ಫೂರ್ತಿ, ಕೇಂದ್ರ. ಆದರೆ ಯಾರೀತ? ಆತ ಶಿಕ್ಷಿತನಾಗಿರಬಹುದು. ಬಡವನೂ ಮಧ್ಯಮ ವರ್ಗೀಯನೋ ಇರಲು ಸಾಕು. ಶ್ರೀಮಂತನಂತೂ ಆತನಲ್ಲ. ಆತ ಕೂಲಿ, ಕೆಲಸಗಾರ ಕಾರಕೂನನಾಗಿರುವ ಸಾಧ್ಯತೆಯಿದೆ. ಆದರೆ ಅಧಿಕಾರಿ, ಬಂಡವಳಶಾಹಿ ಅಥವಾ ರಾಜಕಾರಣಿಯಾಗಲಾರ. ಆತನು ಸಮಾಜದ ಬಹ್ವಂಶ ಜನರ ಪ್ರತಿನಿಧಿಯೆಂದೇ ಎಲ್ಲರ ಕಲ್ಪನೆ. ಆದರೂ ರಾಜಕೀಯ ಬೀಸುಗಾಳಿ ಸಾಮಾಜಿಕ ಆಂದೋಲನ, ಸಾಹಿತ್ಯದ ಹೊಸ ಕೂಗಿನಲ್ಲಿ ಅವನಿಗೆ ಸ್ಥಾನವಿದೆ. ಮಾನ ಮರ್ಯಾದೆಗಳಿವೆ. ರಾಜಕೀಯವಾಗಿ ಆರ್ಥಿಕವಾಗಿ ಶ್ರೀಸಾಮಾನ್ಯನೆಂದು ಕರೆಯಿಸಿಕೊಳ್ಳುವವನು ಸಾಹಿತ್ಯಕವಾಗಿಯೂ ಶ್ರೀಸಾಮಾನ್ಯನೇ? ಹೀಗೆ ಹೇಳುವದು ತುಂಬ ಕಠಿಣ. ಎಷ್ಟೋ ಜನ ಸಾಹಿತಿಗಳು ಬಡತನದ ರೇಖೆಯೊಳಗೆ ಬಾಳುತ್ತಿಲ್ಲ! ಅಂತೆಯೇ ಶ್ರೀಸಾಮಾನ್ಯನ ಕಲ್ಪನೆ ತುಂಬ ಕ್ಲಿಷ್ಟ. ಆದರೂ ಅನುಕೂಲಕ್ಕಾಗಿ, ಅಷ್ಟೇನು ಶಿಕ್ಷಿತನಲ್ಲದ, ಆರ್ಥಿಕವಾಗಿ ಮುಂದುವರಿಯದಿರುವ, ಮನೋರಂಜನೆಗೊ ಹೊತ್ತು ಕಳೆಯಲೋ ಚಿಕ್ಕ ಪುಟ್ಟ ಕಥೆ, ಲೇಖ ಹರಟೆ ಪತ್ರಿಕೆಗಳನ್ನು ಓದುವವನು ಸಾಹಿತಿಯ ದೃಷ್ಟಿಯಲ್ಲಿ ಶ್ರೀಸಾಮಾನ್ಯ.

ಶ್ರೀಸಾಮಾನ್ಯನ ಕಲ್ಪನೆ, ವ್ಯಾಪ್ತಿ ಎಷ್ಟು ಕಠಿಣವೋ ಅದಕ್ಕೂ ಹೆಚ್ಚು ಕಠಿಣವಾದದ್ದು ಅವನಿಗೆ ಸಾಹಿತ್ಯ ಬೇಕೆ ಎಂಬುದಕ್ಕೆ ಉತ್ತರ ಹೇಳುವದು. ಮೊದಲನೆಯದಾಗಿ ಶ್ರೀಸಾಮಾನ್ಯ ಸಾಹಿತಿಯಾಗಲಾರ. ಅವನು ನಗೆಹನಿ, ಚುಟುಕು, ಚಿಕ್ಕ-ಪುಟ್ಟ ಕಥೆಗಳನ್ನು ಲೇಖನಗಳನ್ನು ಮಾತ್ರ ಬರೆಯಬಲ್ಲ. ಅದೂ ಅವನು ಸ್ವಲ್ಪಾದರೂ ಓದು ತಿಳಿದುಕೊಂಡಿದ್ದರೆ ಮಾತ್ರ. ಇನ್ನು ಆತನು ವೈಚಾರಿಕ ಲೇಖ, ಮಾನಸಿಕ ದ್ವಂದ್ವಗಳ ಚಿತ್ರಣ, ಪ್ರೌಢ ಗ್ರಂಥಗಳನ್ನು ಬರೆದರೆ ಅವನು ಶ್ರೀಸಾಮಾನ್ಯನಾಗದೇ ಹಿರಿಯ ಸಾಹಿತಿಯೇ ಆದಾನು. ಸಾಹಿತ್ಯಕ ಕೃತಿರಚನೆ ಅವನಿಗೆ ಅಸಾಧ್ಯ, ಕೃತಿಗಳ ಅಧ್ಯಯನ ಅವನ ಯೋಗ್ಯತೆಗೆ ಮೀರಿದ್ದು.

ಶ್ರೀಸಾಮಾನ್ಯನಿಗೆ ಬೇಕಾದ ಸಾಹಿತ್ಯ ಬುದ್ಧಿಜೀವಿಗಳಿಗಿಂತ ಬೇರೆಯೇ ಆದ ಸಾಹಿತ್ಯ. ವೈಜ್ಞಾನಿಕ ಮನೋವೈಜ್ಞಾನಿಕ ತಾಂತ್ರಿಕ ಹಾಗೂ ಶಾಸ್ತ್ರೀಯ ಗ್ರಂಥಗಳು ಅವನಿಗೆ ಬೇಡವೇ ಬೇಡ. ಸುಲಭವಾಗಿ ಓದಿ ಮುಗಿಸುವಂತಹ, ಅಥವಾ ಓದಿಸಿಕೊಂಡು ಹೋಗುವಂತಹ ರಮ್ಯ ಕಥಾನಕಗಳು ಅವನಿಗೆ ಬೇಕು. ರಾಜಕೀಯ ಸಾಮಾಜಿಕ ಚರ್ಚೆ, ಮಂಥನ, ಮಾನಸಿಕ ಅಂತರ್ದ್ವಂದ್ವ ಸಮಸ್ಯೆಗಳು ಅವನಿಗೆ ತಲೆಬೇಸರ, ಅವು ತಿಳಿಯಾಗಿದ್ದು ನೀತಿ ಬೋಧಕ ಅಥವಾ ರಂಜನೀಯವಾಗಿದ್ದರೆ ಅದಕ್ಕೆ ಸ್ವಾಗತ. ಪಾಂಡಿತ್ಯದ ಸ್ಪರ್ಶ, ತಾತ್ವಿಕ ಗಂಧ ಇರುವ ಕೃತಿಗಳು ಶ್ರೀಸಾಮಾನ್ಯನ ತಲೆಸೇರವು ಕೈಗೆ ಎಟುಕವು. ನೀತಿಕಥೆ, ಹರಿಕಥೆ, ಶರೀರ, ದಾಸರ ಹಾಡು, ಲೋಕಗೀತೆ ಕಥೆಗಳು ಜನಪ್ರಿಯ ಸಾಹಿತ್ಯ ಅವನ ಅಭಿರುಚಿ. ಅವು ಅವನ ಮನಸ್ಸು ಜೀವನದ ಮೇಲೆ ಪ್ರಭಾವ ಬೀರಬಲ್ಲವು.

ಸಾಹಿತ್ಯ ಎಲ್ಲರಿಗಲ್ಲ ಎನ್ನುತ್ತಾನೆ ಸರ್ವಜ್ಞ. ಸಾಹಿತ್ಯವು ಕೇವಲ ವಿದ್ವಾಂಸರು, ಬುದ್ಧಿಜೀವಿಗಳಿಗಷ್ಟೇ ಮೀಸಲು ಎಂದು ಅರ್ಥವೇ? ಹಾಗಾದರೆ ಶ್ರೀಸಾಮಾನ್ಯನಾದವನಿಂದ ಸಾಹಿತ್ಯ ದೂರವೇ ಉಳಿಯುವೇಕೇ? ಎಂದು ಅನೇಕ ಪ್ರಶ್ನೆಗಳು ಹೊರಡುವದು ಸಹಜ. ಶ್ರೀಸಾಮಾನ್ಯನು ಸಾಹಿತ್ಯದ ವಸ್ತುವಾಗಬಹುದು, ಅನೇಕ ಧೀಮಂತ ಸಾಹಿತಿಗಳು ಅವರ ಚಿತ್ರಣವನ್ನು ತಮ್ಮ ಕೃತಿಗಳಲ್ಲಿ ಸುಂದರವಾಗಿ ಮಾಡಿದುದುಂಟು. ಆದರೆ ಆತ ಅಂತಹವನ್ನು ಬರೆಯಲಾರನಷ್ಟೇ ಅಲ್ಲ ಓದಿಯೂ ಜೀರ್ಣಿಸಿಕೊಳ್ಳಲಾರ. ಮನುಷ್ಯ ಮನುಷ್ಯರಲ್ಲಿ ರೂಪ, ರುಚಿ, ಅರ್ಹತೆಗಳಲ್ಲಿ ಭಿನ್ನತೆ ಇರುವಂತೆ ಅವರ ಬೌದ್ಧಿಕ ಸ್ತರಗಳಲ್ಲೂ ಭಿನ್ನತೆ ಇದೆ. ಪ್ರೌಢ ವಿಚಾರ ತಾತ್ವಿಕ ವೈಜ್ಞಾನಿಕ ಚರ್ಚೆ ನಿರೂಪಣೆ ಆಂತರಿಕ ತುಮುಲವೇ ಮೊದಲಾದವುಳ್ಳ ಹಾಗೂ ಆಲಂಕಾರಿಕ ಮತ್ತು ಸಾಂಕೇತಿಕ ಭಾಷೆಯಲ್ಲಿ ಬರೆದ ಗ್ರಂಥಗಳು ಉತ್ತಮ ಕೃತಿಗಳೆಂದು ಸಾಹಿತ್ಯ ಲೋಕದಲ್ಲಿ ಮೆರೆದರೂ ಶ್ರೀಸಾಮಾನ್ಯನಿಗೆ ಅವು ಕಬ್ಬಿಣದ ಕಡಲೆ. ಶ್ರೀಸಾಮಾನ್ಯನಿಗೆ ತಿಳಿಯುವಂತಹ ಎಟುಕುವಂತಹ ಗ್ರಂಥಗಳಲ್ಲಿ ಇಂತಹ ವಿಚಾರ, ದೃಷ್ಟಿಕೋನ, ಕಡಿಮೆ ಇದ್ದಷ್ಟು ಒಳ್ಳೆಯದು.

ಸಾಹಿತ್ಯ ಮನಸ್ಸಿನ ಮೇಲೆ ಮರೆಯಲಾರದ ಪರಿಣಾಮ ಬೀರುವ ಕ್ರಿಯೆ, ಕೃತಿ. ಅದನ್ನು ಸವಿವಷ್ಟು ಸ್ವಾಗತಿಸುವಷ್ಟು ಆತನು ಪಕ್ವವಾಗಿರುವದಿಲ್ಲ. ಅಂತೆಯೇ ಸಾಹಿತ್ಯ ಎಲ್ಲರಿಗಲ್ಲ, ಎಲ್ಲರಿಗೂ ಸಾಹಿತ್ಯ ಎನ್ನುವದು ಸಾಹಿತ್ಯದಲ್ಲಿನ ಒಂದು ರಾಜಕೀಯ ಕೂಗು ಸೋಗು. ಸಾಹಿತ್ಯ ಎಲ್ಲರಿಗೂ ಅರ್ಥವಾಗಬೇಕೆನ್ನುವದು ಸಾಹಿತ್ಯಕ್ಕೆ ಅಪಾಯಕಾರಿ. ನಿಜವಾದ ಸಾಹಿತ್ಯ ಬರೆವವರು ತಿಳಿದವರು ಕೆಲವೇ ಜನ.

ಸಾಹಿತಿಗಳು, ಶ್ರೀಸಾಮಾನ್ಯ ಹಾಗೂ ಸಾಹಿತ್ಯದ ಬಗೆಗೆ ತಮ್ಮ ಅನಿಸಿಕೆಗಳನ್ನು ಇಲ್ಲಿ ನಿರೂಪಿಸಿದ್ದಾರೆ. ಅವುಗಳನ್ನು ನಿಮ್ಮ ಅವಗಾಹನೆಗೆ ನೀಡಲು ನಮಗೆ ತುಂಬ ಹರ್ಷ, ಇದು **ಓದುಗ ಅಷ್ಟೇ**

**ಸಂಪಾದಕರು**

# ಜನಸಾಮಾನ್ಯನಿಗೆ ಸಾಹಿತ್ಯವೇಕೆ?

ಸುಮತೀಂದ್ರ ನಾಡಿಗ

ನನ್ನ ಎದುರಿಗೆ ಒಬ್ಬ ಮನುಷ್ಯ ನಿಂತಿದ್ದ. ಅವನನ್ನು ನೋಡಿದಾಗ ಅವನಲ್ಲಿ ಯಾವ ವಿಶಿಷ್ಟತೆಯೂ ಇರಲಿಲ್ಲ. "ಯಾರು ನೀವು?" ಎಂದೆ. "ಜನಸಾಮಾನ್ಯ" ಎಂದ. ಹಾಗಾದರೆ ಪರವಾಗಿಲ್ಲ ಎಂದುಕೊಂಡು ಏಕವಚನ ಪ್ರಾರಂಭಿಸಿದೆ. "ನಿನ್ನ ಹೆಸರೇನು?" ಎಂದೆ. "ಜನಸಾಮಾನ್ಯ" ಎಂದ. "ನಿನ್ನ ಊರು ಯಾವುದು?" ಅಂತ ಕೇಳಿದೆ. "ಮೆದುಳು" ಎಂದ. "ತಂದೆ ತಾಯಿ ಯಾರು?" ಅಂತ ಕೇಳಿದೆ. "ಮೆದುಳು" ಅಂದ. "ಯಾಕೆ ಬಂದಿ?" ಅಂದೆ. "ಜನಸಾಮಾನ್ಯನಿಗೆ ಸಾಹಿತ್ಯ ಬೇಕೆ ಅಂತ ಯೋಚಿಸುತ್ತಿದ್ದಿ. ಅದನ್ನು ನೋಡಿ ಬಂದೆ" ಅಂದ. "ನೀನು ಬಂದದ್ದು ಒಳ್ಳೆಯದಾಯಿತು. ನನ್ನ ಸಮಸ್ಯೆ ಬಗೆಹರಿಸಲಿಕ್ಕೆ ನೀನೆ ಸರಿ, ಕೂತುಕೋ" ಎಂದೆ. "ನನಗೆ ಕೂರುವುದು ಅಭ್ಯಾಸವಿಲ್ಲ. ಜನರ ಕಲ್ಪನೆಯಲ್ಲಿ ಹೇಗೆ ಹೇಗೆ ಕಾಣಿಸುತ್ತೇನೋ. ಹಾಗೆ ಹಾಗೆ ಇರುತ್ತೇನೆ. ನನ್ನ ಪಾಡಿಗೆ ನೀನು ಪ್ರಶ್ನೆ ಕೇಳು. ನಾನು ಉತ್ತರಿಸುತ್ತೇನೆ" ಅಂದ. "ಆಯಿತು" ಅಂತ ಅವನೊಡನೆ ಸಂಭಾಷಿಸಿದ್ದನ್ನು ಇಲ್ಲಿ ವರದಿಮಾಡುತ್ತಿದ್ದೇನೆ.

ನಾನು: ನಿನ್ನನ್ನು ಜನಸಾಮಾನ್ಯ ಅಂತ ಯಾಕೆ ಕರೆಯುತ್ತಾರೆ ?

ಅವನು: ನಾನು ಎಲ್ಲಿಯೂ ಎದ್ದು ಕಾಣುವುದಿಲ್ಲ. ನನ್ನ ಕಣ್ಣಲ್ಲಿ ಹೊಳಪಿಲ್ಲ. ನನಗೆ ನನ್ನದೇ ಅನ್ನುವ ದನಿಯಿಲ್ಲ. ನನಗೆ ಜಾತಿ ಮತ ಲಿಂಗ ಯಾವುದೂ ಇಲ್ಲ.

ನಾನು: ಹಾಗಾದರೆ ನಿನ್ನನ್ನು ಕಂಡಾಗ ಗುರುತಿಸುವುದು ಹೇಗೆ ?

ಅವನು: ನನ್ನನ್ನು ನೀನು ಕಾಣುತ್ತಿಲ್ಲ, ಕಾಣುತ್ತಿ ಎಂದು ಭ್ರಮಿಸಿದ್ದೀಯ. ನಿನ್ನ ಕಲ್ಪನೆಯಲ್ಲಿ ನನಗೆ ಎರಡು ಕಣ್ಣು, ಒಂದು ಮೂಗು. ಒಂದು ಬಾಯಿ. ಎರಡು ಕಿವಿ, ತಲೆಗೂದಲು, ಎರಡು ಕೈ, ಎರಡು ಕಾಲು, ಹೊಟ್ಟೆ ಇಷ್ಟನ್ನು ಮಾತ್ರ ಕೊಟ್ಟಿದ್ದೀಯ.

ನಾನು: ನಿನಗೆ ಓದಲು ಬರುತ್ತದೆಯೆ ?

ಅವನು: ನಿನ್ನ ಕಲ್ಪನೆಯಲ್ಲಿ ಬರುತ್ತದೆ ಅಂದರೆ ಬರುತ್ತದೆ. ಇಲ್ಲ ಅಂದರೆ ಇಲ್ಲ.

ನಾನು: ನೀನು ಇದ್ದಕ್ಕಿದ್ದ ಹಾಗೆ ನನ್ನ ಕಲ್ಪನೆಯಲ್ಲಿ ಮೂಡಿದ್ದೇಕೆ ?

ಅವನು: ರಾಜಕೀಯದ ಒತ್ತಡದಿಂದ: ಅದರ ಹಿನ್ನೆಲೆಯಲ್ಲಿ ಅಧಿಕಾರವನ್ನು ಪಡೆಯಬೇಕೆನ್ನುವ ಗುಂಪುಗಳ ಒತ್ತಡದಿಂದ.

ನಾನು: ಸ್ವಲ್ಪ ಬಿಡಿಸಿ ಹೇಳು.

ಅವನು: ನೀನು ನನ್ನ ಬಗ್ಗೆ ಯೋಚಿಸುತ್ತಲೇ ಇರಲಿಲ್ಲ. ಪ್ರಜಾಪ್ರಭುತ್ವದಲ್ಲಿ ಗುಂಪುಗಳ ಮಹತ್ವ ಬಹಳ. ಹೆಚ್ಚು ಸ್ಥಾನ ಅಂತ ಇರುವುದರಿಂದ ಗುಂಪು ದೊಡ್ಡದಾಗ ಬೇಕಾದರೆ ಎಲ್ಲರನ್ನೂ ಸೇರಿಸಿಕೊಂಡರು. ಲಕ್ಷಾಂತರ ಜನರನ್ನು ಒಟ್ಟಿಗೇ ತಲೆಯಲ್ಲಿ ಕೂಡಿಹಾಕಿಕೊಂಡು ಅವರೆಲ್ಲರ ಸಾಮಾನ್ಯ ಲಕ್ಷಣಗಳನ್ನು ಕೂಡಿಸಿ ಅಮೂರ್ತ ವ್ಯಕ್ತಿಯೊಂದನ್ನು ಸೃಷ್ಟಿಸಿದರು. ಅವನೇ ನಾನು. ಬಹುಪಾಲು ಜನರಿಗೆ ನಾನೇ ಅವರು ಎನ್ನುವ ಭ್ರಮೆ ಹುಟ್ಟಿಸುವದಕ್ಕೆ, ನಾನೊಂದು ಉಪಕರಣ ಅಷ್ಟೆ. ಆದರೆ ನಾನು ಹುಟ್ಟಿದ ಮೇಲೆ ನನಗೊಂದು ಅಸ್ತಿತ್ವ ಬಂತು. ಗಂಡಭೇರುಂಡ, ಸ್ಫಿಂಕ್ಸ್, ನರಸಿಂಹರ ಹಾಗೆ ನನಗೂ ಕಲ್ಪನೆಯಲ್ಲಿ ಒಂದು ಅಸ್ತಿತ್ವ ಇದೆ.

ನಾನು: ನೀನು ಮಾತಾಡುವ ವಿಷಯ ತುಂಬಾ ಅಮೂರ್ತವಾಗಿದೆ. ಪ್ರಚಂಡ ಬುದ್ಧಿವಂತನ ಹಾಗೆ ಮಾತಾಡುತ್ತಿದ್ದೀಯ. ನನಗೆ ಅರ್ಥವಾಗುತ್ತಿಲ್ಲ. ಹೋಗಲಿ ಬಿಡು. ರಾಜಕೀಯ ಕಾರಣವಲ್ಲದೆ. ನೀನು ಹುಟ್ಟಲಿಕ್ಕೆ ಬೇರೆ ಕಾರಣಗಳಿಲ್ಲವೆ ?

ಅವನು: ನೀನೊಬ್ಬ ಲೇಖಕ ಅಲ್ಲವೆ? ನಿನ್ನನ್ನು ಓದುವವರು ಎಷ್ಟು ಜನ ? ಒಂದು ನೂರು ಜನ ಎನ್ನೋಣ. ಇಷ್ಟರಿಂದ ನಿನಗೆ ತೃಪ್ತಿಯಿಲ್ಲ. ಪ್ರತಿಯೊಬ್ಬ ಕನ್ನಡಿಗನೂ ನಿನ್ನ ಕೃತಿಗಳನ್ನು ಓದಬೇಕು ಅಂತ ನಿನ್ನ ಆಸೆ. ಆದರೆ ಇಡೀ ಮೂರು ಕೋಟಿ ಕನ್ನಡಿಗರನ್ನೂ ಉದ್ದೇಶಿಸಿ ಬರೆಯಲಿಕ್ಕೆ ಹೊರಡು. ನಿನಗೆ ಸಾಹಿತ್ಯದ ಸೃಷ್ಟಿಯೇ ಸಾಧ್ಯವಾಗುವುದಿಲ್ಲ. ಏಕೆಂದರೆ ಇಡೀ ಮೂರು ಕೋಟಿಯನ್ನೂ ನೀನು ಒಟ್ಟು ಯೋಚಿಸಿದಾಗ ನಾನು ಹುಟ್ಟಿಕೊಳ್ಳುತ್ತೇನೆ. ನೀನು ನನಗೊಬ್ಬನಿಗೇ ಬರೆಯುತ್ತೀಯ. ಅದು ಸಾಹಿತ್ಯವಾಗುವುದಿಲ್ಲ.

ನಾನು: ಅಂದರೆ ನಿನಗೇ ಅಂತ ಬರೆದಾಗ ನನ್ನ ಸಾಹಿತ್ಯ ಕಳಪೆ ಆಗುತ್ತದೆ ಅಂತೀಯ?

ಅವನು: ಹೌದು.

ನಾನು: ಹಾಗಾದರೆ ನಾನು ಯಾರಿಗೆ ಬರೆಯಬೇಕು ?

ಅವನು: ನೀನು ಹೇಳುವುದನ್ನು ಅರ್ಥ ಮಾಡಿಕೊಳ್ಳುವವರಿಗೆ.

ನಾನು: ನಾನು ಹೇಳುವುದನ್ನು ಯಾರು ಅರ್ಥ ಮಾಡಿಕೊಳ್ಳುತ್ತಾರೆ?

ಅವನು: ಯಾರಾದರೂ ಅರ್ಥ ಮಾಡಿಕೊಳ್ಳುತ್ತಾರೊ ಬಿಡುತ್ತಾರೊ. ಅದು ಆ ಮೇಲಿನ ಪ್ರಶ್ನೆ. ಸದ್ಯಕ್ಕೆ ನಿನಗೆ ಏನನ್ನೋ ಹೇಳುವ ತವಕವಿದೆ. ಅದಕ್ಕೇ ಹೇಳುತ್ತೀಯ?

ನಾನು: ನಾನು ಹೇಳಿದ್ದು ಯಾರಿಗೂ ಅರ್ಥವಾಗದಿದ್ದರೆ?

ಅವನು: ಅರ್ಥವಾಗುವುದಿಲ್ಲ ಎಂದರೆ ನಿನಗೆ ಭಾಷೆಯನ್ನು ಉಪಯೋಗಿಸುವುದು ಬರುವುದಿಲ್ಲ ಎಂದಾಯಿತು. ಆಗ ನೀನು ನಿನ್ನ ಸುತ್ತಮುತ್ತಲಿನವರಿಗೆ ಅರ್ಥವಾಗುವ ಹಾಗೆ ನಿನ್ನ ಭಾಷೆಯನ್ನು ಸಮರ್ಥವಾಗಿ ಉಪಯೋಗಿಸುವುದನ್ನು ಕಲಿಯಬೇಕು.

ನಾನು: ಅಲ್ಲ. ನಾನು ಹೇಳುವುದು ಯಾರಿಗೂ ಅರ್ಥವಾಗುವುದಿಲ್ಲ ಎಂದಲ್ಲ. ಆದರೆ ನನ್ನ ಕವನಗಳನ್ನು ಕೆಲವರು ಮಾತ್ರ ಓದಿದ್ದಾರೆ. ನನ್ನ ಕತೆಗಳನ್ನೂ ಅಷ್ಟೆ. ನನ್ನ ಆಸೆ ಏನೆಂದರೆ ಬಹಳಷ್ಟು ಜನ ಓದಲೇಬೇಕೆನ್ನುವುದು. ಇದಕ್ಕೆ ಏನು ಮಾಡಲಿ ?

ಅವನು: ಅಯ್ಯಾ. ನಿನಗೆ ಉತ್ತಮ ಸಾಹಿತ್ಯವನ್ನು ಬರೆಯಬೇಕೆಂದಿದೆಯೋ ಅಥವಾ ಜನಪ್ರಿಯ ಸಾಹಿತ್ಯ ಬರೆಯಬೇಕು ಅಂತಿದೆಯೊ ?

ನಾನು: ಎರಡನ್ನೂ ಮಾಡಬೇಕು ಅನಿಸುತ್ತದೆ.

ಅವನು: ಸಿನಿಮಾಕ್ಕೆ ಒಂದೆರಡು ಕತೆ ಬರಿ. ಒಂದೆರಡು ಸಿನಿಮಾದಲ್ಲಿ ಆಕ್ಟ್ ಮಾಡು. ನಿನ್ನ ವಿಚಿತ್ರ ಬರಹಗಳನ್ನು ಅತ್ಯುತ್ತಮ ಅಭಿವ್ಯಕ್ತಿಯನ್ನಾಗಿ ಮಾಡು. ಆಗ ಜನಪ್ರಿಯತೆಯೂ ಸಿಗುತ್ತದೆ. ಉತ್ತಮ ಸಾಹಿತಿಗಳಲ್ಲೂ ಸೇರುತ್ತೀಯ.

ನಾನು: ಎಲ್ಲ ಜನರೂ ವಿದ್ಯಾವಂತರಾದರೆ ನಮ್ಮಲ್ಲಿ ಓದುಗರು ಹೆಚ್ಚಾಗುವುದಿಲ್ಲವೆ?

ಅವನು: ಎಲ್ಲರೂ ವಿದ್ಯಾವಂತರಾದರೆ ಓದುಗರು ಹೆಚ್ಚಾಗುತ್ತಾರೆ. ನಿಜ. ಆದರೆ ಉತ್ತಮ ಸಾಹಿತ್ಯಕ್ಕೆ ಓದುಗರು ಯಾವಾಗಲೂ ಕಡಿಮೆ. ಹೆರಾಲ್ಡ್ ರಾಬಿನ್ಸ್ ಓದಿದಷ್ಟು ಜನ ಹರ್ಮನ್ ಮೆಲ್ವಿನ್ ಓದುವುದಿಲ್ಲ. ಪೆರ್ರಿ ಮೇಸನ್ ಓದಿದಷ್ಟು ಜನ ದೋಸ್ತವಸ್ಕಿ ಅಥವಾ ಟಾಲ್‌ಸ್ಟಾಯ್ ಓದುವುದಿಲ್ಲ. ಷೇಕ್ಸ್‌ಪಿಯರ್ ಹೆಸರು ಕೇಳಿದಷ್ಟು ಜನ ಅವನನ್ನು ಓದಿರುವುದಿಲ್ಲ. ಏಸ್ಕಿಲಸ್ ಸೋಫೋಕ್ಲಿಸ್ [illegible] ಪಂಪನನ್ನು, ಕುಮಾರವ್ಯಾಸನನ್ನು ಎಷ್ಟು ಜನ ಓದುತ್ತಾರೆ?

ನಾನು: ಮಾರಾಯ. ನನ್ನ ಪ್ರಶ್ನೆಗೆ ದೊಡ್ಡ ಭಾಷಣವನ್ನೇ ಬಿಗಿಯುತ್ತಿ? ಹೋಗಲಿ ಬಿಡು. ನವ್ಯ ಸಾಹಿತ್ಯ ಅಂದರೆ ನಿನಗೆ ಏನು ಗೊತ್ತು?

ಅವನು: ನಮ್ಮಲ್ಲಿ ಅಡಿಗರ ಕೆಲವು ಕವನಗಳು. ಅನಂತಮೂರ್ತಿ, ಲಂಕೇಶರ ಒಂದೆರಡು ಕತೆಗಳು, ಭೈರಪ್ಪನವರ ಒಂದೆರಡು ಕಾದಂಬರಿಗಳು, ಕಾರಂತರ "ಅಳಿದ ಮೇಲೆ" ರಾವ್‌ಬಹದ್ದೂರರ "ಗ್ರಾಮಾಯಣ". ಎಂ. ಜಿ. ಕೆ. ವಿಮರ್ಶೆ ಬಿಟ್ಟರೆ ಇನ್ನೇನಿದೆ?

ನಾನು: ಅಯ್ಯೋ, ನನ್ನ ಹೆಸರನ್ನು ಬಿಟ್ಟು ಬಿಟ್ಟೆಯಲ್ಲ!

ಅವನು: ನಿನ್ನ ಪ್ರಶ್ನೆಗಳು ಕೇಳಿದ ಮೇಲೆ ಹೇಳಿದಾಗ ನಾನು ಮಾತ್ರ ಹೇಳಿದರೆ ನಿನಗೆ ಸಂಶಯ ಬಂದೀತು. ಬೇರೆಯವರು ಹೇಳಿದ ಮೇಲೆ ನಾನು ಹೇಳುತ್ತೇನೆ.

ನಾನು: ಸರಿ ಮಾರಾಯ. ನಾನು ನಿನ್ನನ್ನು ಯೋಚಿಸಿದ್ದು ಸಾಮಾನ್ಯನಿಗೆ ಸಾಹಿತ್ಯ ಬೇಕೆ ಅಂತ ಕೇಳುವುದಕ್ಕೆ. ಆದ್ದರಿಂದ ದಯವಿಟ್ಟು ಆ ಪ್ರಶ್ನೆಗೆ ಉತ್ತರ ಕೊಡು.

ಅವನು: ಮನುಷ್ಯನಾದವನಿಗೆ ತನ್ನ ಅಂತರ್ಯವೂ ಇನ್ನೊಬ್ಬರ ಅಂತರ್ಯವೂ ತಿಳಿದು ಕೊಳ್ಳುವುದು ಅವಶ್ಯಕ. ಅದನ್ನು ತಿಳಿದು ಕೊಳ್ಳುವುದರಿಂದ ಅವನ ಇಂಗಿತಜ್ಞತೆ ಹೆಚ್ಚಾಗುತ್ತದೆ. ಆಗ ಮನಸ್ಸು ಕಸಿಯಾಗಿ ಸುಸಂಸ್ಕೃತವಾಗುತ್ತದೆ.

ನಾನು: ಅಂತರ್ಯ ಎನ್ನುವ ಬದಲು ಅಂತರಂಗ ಅಥವ ಮನಸ್ಸು ಎಂದರೆ ಆಗಬಹುದೊ?

ಅವನು: ಆಗಬಹುದು.

ನಾನು: ಇಂಗಿತಜ್ಞತೆ ಅನ್ನುವುದರ ಬದಲು ಇನ್ನೊಬ್ಬನ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವುದು ಎನ್ನಲೆ?

ಅವನು: ಆಗಬಹುದು.

ನಾನು: ಈಗ ಹೇಳು, ಜನಸಾಮಾನ್ಯನಿಗೆ ಅಂದರೆ ನನಗೆ ಸಾಹಿತ್ಯ ಬೇಕೆ?

ಅವನು: ಜನಸಾಮಾನ್ಯ ಅನ್ನುವವನಿಗೆ ಸ್ವಂತ ಮನಸ್ಸಿಲ್ಲ ಅಂತ ಆಗಲೇ ಹೇಳಿದೆನಲ್ಲ.

ನಾನು: ಆಯಿತು. ಹೋಗಲಿ ಪ್ರಶ್ನೆಯನ್ನು ಬೇರೆ ರೀತಿ ಕೇಳುತ್ತೇನೆ. ಗುಮಾಸ್ತರಿಗೆ, ಕೂಲಿಕಾರರಿಗೆ, ಕಾರ್ಖಾನೆಯಲ್ಲಿ ದುಡಿಯುವವರಿಗೆ ಹೊಟ್ಟೆ ಬಟ್ಟೆಗೆ ಗತಿಯಿಲ್ಲದವರಿಗೆ, ಫುಟ್‌ಪಾತಿನಲ್ಲಿ ಮಲಗುವವರಿಗೆ ಸಾಹಿತ್ಯ ಬೇಕೆ?

ಅವನು: ಮನುಷ್ಯನಿಗೆ ಮೊದಲು ಅನ್ನ ಬಟ್ಟೆ ಮನೆ ಬೇಕು. ಅದನ್ನು ಗಳಿಸುವ ಸಾಧ್ಯತೆ ಬೇಕು: ಅಂದರೆ ಕೆಲಸ ಬೇಕು. ಆಮೇಲೆ ಸಾಹಿತ್ಯ.

ನಾನು: ಎಂಥ ಸಾಹಿತ್ಯ ಬೇಕು?

ಅವನು: ಮನುಷ್ಯರಲ್ಲಿ ಬುದ್ಧಿವಂತಿಕೆಯ ತಿಳುವಳಿಕೆಯ ಅನೇಕ ಮಟ್ಟಗಳಿವೆ. ಆಯಾ ಮಟ್ಟಕ್ಕೆ ಅರ್ಥವಾಗುವ ಸಾಹಿತ್ಯ ಬೇಕು.

ನಾನು: ಅಂದರೆ ?

ಅವನು: ೩-೬ ವರ್ಷದ ಮಕ್ಕಳಿಗೆ, ೭-೧೪ ವರ್ಷದ ಹುಡುಗ-ಹುಡುಗಿಯರಿಗೆ, ೧೪-೩೦ರ ಯುವಕರಿಗೆ, ೩೧-೬೦ರ ಪ್ರೌಢರಿಗೆ, ೬೧-೧೦೦ರ ವರೆಗಿನ ವೃದ್ಧರಿಗೆ ಬೇರೆ ಬೇರೆ ಮಟ್ಟಗಳಿರುತ್ತವೆ.

ನಾನು: ಇವಿಷ್ಟೇನೊ ಅಥವ ಇನ್ನೂ ಯಾವುದಾದರೂ ಮಟ್ಟಗಳಿವೆಯೊ?

ಅವನು: ಮಟ್ಟಗಳಿವೆ. ಅಭಿರುಚಿಗಳಿವೆ.

ನಾನು: ಸ್ವಲ್ಪ ಬಿಡಿಸಿ ಹೇಳು.

ಅವನು: ೭-೧೪ರಲ್ಲಿ ಮತ್ತು ೧೫-೩೦ರಲ್ಲಿ ಸಾಹಸ ಪ್ರವೃತ್ತಿ ಇರುತ್ತದೆ ಅಂತ ಇಟ್ಟುಕೊ. ಅಂಥವರು ರಾಮಾಯಣ, ಮಹಾಭಾರತ, Moby Dick, Gullivers Travells, War and Peace ಗಳನ್ನು ಓದಬಹುದು, ಅಥವ ಷರ್ಲಾಕ್ ಹೋಮ್ಸ್, ಅಗಾಥಾ ಕ್ರಿಸ್ಟಿ, ಪೆರ್ರಿ ಮೇಸನ್, ಅಲಿಸ್ಟರ್ ಮೆಕ್‌ಲೀನ್ಸ್‌ನ್ನೂ, ಎಂ. ರಾಮಮೂರ್ತಿ, ಎನ್. ನರಸಿಂಹಯ್ಯ, ಚಿಂದೆ ನಂಜುಂಡ ಸ್ವಾಮಿಯವರನ್ನೂ ಓದಬಹುದು. ಆದರೆ ಕೆಲವರು Moby Dick ಕಾನೂರು ಹೆಗ್ಗಡಿತಿ, ಮಲೆಗಳಲ್ಲಿ ಮದುಮಗಳು ಗ್ರಾಮಾಯಣ ಇಂಥ ಕಾದಂಬರಿಗಳನ್ನೇ ಹುಡುಕಿಕೊಂಡು ಹೋಗುತ್ತಾರೆ. ಅದು ಅವರ ಅಭಿರುಚಿ. ಇನ್ನು ಕೆಲವರು ಪತ್ತೇದಾರಿ ಕಾದಂಬರಿಗಳನ್ನು ಬಿಟ್ಟು ಬೇರೆಯದನ್ನು ಓದುವುದೇ ಇಲ್ಲ.

ಸುಕುಮಾರ

“ಓ ಮಗನೆ ಶೀರ್ಷೋದಿ ತಲೆಯು
ಬೆಳೆಸಲು ಬೇಕು”
ತಂದೆಯಾಡಿದ ನುಡಿಗೆ ತಲೆವಾಗಿ ಒಪ್ಪಿ
ಕಾಲೇಜಿನಲಿ ಓದಿ ಫೇಲಾದರೇನಂತೆ
ತಲೆ ಬೆಳಸಿ ಮೆರೆದನು
ಸುಕುಮಾರ ಹಿಪ್ಪಿ

ಶಂ. ಗು. ಬಿರಾದಾರ

ನಾನು: ಮಹಿಳಾ ಲೇಖಕಿಯರ ಬಗ್ಗೆ ಏನು ಹೇಳುತ್ತಿ?

ಅವನು: ಅದೂ ಅಷ್ಟೆ. ಕೆಲವರು ಸ್ತ್ರೀ ಮಹಿಳಾ ಲೇಖಕಿಯರ ಕಾದಂಬರಿಗಳನ್ನೇ ಓದುತ್ತಾರೆ.

ನಾನು: ಏಕೆ?

ಅವನು: ಅವುಗಳಲ್ಲಿ ಹೆಣ್ಣು ಹೃದಯ ತುಂಬಿ ತುಳುಕುತ್ತದೆ. ಆದರ್ಶಗಳ ಹೊಳೆ ಹರಿದಾಡುತ್ತದೆ. ಕಲ್ಪಿತ ಲೋಕದಲ್ಲಿ ಜನರು ಸ್ವಚ್ಛಂದವಾಗಿ ತಿರುಗಾಡುತ್ತಾರೆ. ಬುದ್ಧಿಗೆ ಸ್ವಲ್ಪವೂ ಶ್ರಮವಿಲ್ಲ.

ನಾನು: ಹಾಗಾದರೆ ಹೀಗೆ ಹೇಳೋಣವೆ? ಓದುಗರಲ್ಲಿ ಕೆಲವರು ಸೋಮಾರಿಗಳು. ಅವರಿಗೆ ಶ್ರಮರಹಿತ ಸಾಹಿತ್ಯ ಬೇಕು. ಇನ್ನು ಕೆಲವರ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವುದಕ್ಕೆ ಶ್ರಮ. ಮಹಾ ಲಿಕ್ಕೆ ಹಿಡಿದರಾಗುವರು. ಮೊದಲನೆಯವರಿಗೆ, ಎರಡನೆಯವರಿಗೆ ಬೇಕಾಗುವ ಸಾಹಿತ್ಯ ಬೇಡವೇ ಬೇಡ.

ಅವನು: ಸರಿ.

ನಾನು: ಎಲ್ಲರಿಗೂ ಬೇಕಾದ ಸಾಹಿತ್ಯ ಇಲ್ಲವೆ?

ಅವನು: ಪ್ರಪಂಚದಲ್ಲಿರುವ ಎಲ್ಲರಿಗೂ ಬೇಕಾದ ಅಂದರೆ ರುಚಿಸುವ ಒಂದೇ ಒಂದು ಸಾಹಿತ್ಯ ಕೃತಿ ಇಲ್ಲ. ಆದ್ದರಿಂದ ಅಂಥವನ್ನು ಬರೆಯಲಿಕ್ಕೆ ಹೋಗಬೇಡ.

ನಾನು: ಜನಸಾಮಾನ್ಯರಿಗೆ ಸಾಹಿತ ಬೇಕೆ?

ಅವನು: ಹಾಡಿದ್ದೇ ಹಾಡೋ ಕಿಸುಬಾಯಿ ದಾಸ! ಎಷ್ಟು ಸಾರಿ ಹೇಳ್ಬೇಕು ನಿನಗೆ?

ನಾನು: ಪುಣ್ಯಾತ್ಮ, ಸಿಟ್ಟಾಗಬೇಡ. ಬದ್ಧನಾಗಿ ಬರೆಯುವುದು ಅಂದರೇನು?

ಅವನು: ಕಣ್ಣುಪಟ್ಟಿಯ ಕುದುರೆಯ ಥರ ಒಂದೇ ದಿಕ್ಕಿನಲ್ಲಿ ನೋಡುವುದು.

ನಾನು: ಪ್ರಗತಿಶೀಲರು, ಪ್ರಗತಿಪಂಥದವರು ಹೇಳುವುದು ತಪ್ಪೆ?

ಅವನು: ಅವರು ಹೇಳಿದ್ದಕ್ಕೆಲ್ಲ ನೀನು ತಲೆ ಕೆಡಿಸಿಕೊಳ್ಳಬೇಕೆ ? ಅವರಲ್ಲಿ ಯಾರು "ಚೋಮನ ದುಡಿ" "ಕಾನೂರು ಹೆಗ್ಗಡಿತಿ" "ಮಲೆಗಳಲ್ಲಿ ಮದುಮಗಳು" "ಗ್ರಾಮಾಯಣ"ದಂತಹ ಕಾದಂಬರಿ ಬರೆದಿದ್ದಾರೆ? ಅಥವ ಯಾರು ಬೇಂದ್ರೆ, ಅಡಿಗರ ಹಾಗೆ ಉತ್ತಮ ಕಾವ್ಯವನ್ನು ರಚಿಸಿದ್ದಾರೆ ?

ನಾನು: ನಿನ್ನನ್ನು ಕೇಳುವುದೇ ತಪ್ಪು ಮಾರಾಯ. ಹೋಗಲಿ, ಈ ಪ್ರಶ್ನೆಗೆ ಉತ್ತರ ಹೇಳು ಸಾಹಿತ್ಯದಲ್ಲಿ ಸಾಮಾಜಿಕ ಕಳಕಳಿ ಇರಬೇಡವೆ ?

ಅವನು: ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನ ಜೊತೆ ತನ್ನ ಕನಸು, ಆದರ್ಶ, ಅಂಜಿಕೆ, ಅವಮಾನ, ದಿಗ್ಭ್ರಮೆ, ರೋಷ, ಪಶ್ಚಾತ್ತಾಪಗಳನ್ನು ಮರೆಯಲಾಗದ ರೀತಿಯಲ್ಲಿ ಹೇಳಿಕೊಳ್ಳುವ ಕ್ರಿಯೆಯೇ ಸಾಹಿತ್ಯ. ಆದ್ದರಿಂದಲೇ ಉತ್ತಮ ಸಾಹಿತ್ಯ ಪ್ರತಿಯೊಬ್ಬನಿಗೆ ತನ್ನ ಅಂತರಂಗವನ್ನು ತೆರೆದಿಡುತ್ತ ಅವನಿಗೆ ಆತ್ಮೀಯವಾಗುತ್ತದೆ. ಇನ್ನೊಬ್ಬನಿಗೆ ಆತ್ಮೀಯವಾಗಬೇಕಿದ್ದರೆ, ಅದರಲ್ಲಿ ಮಾನವೀಯತೆ ಮುಖ್ಯವೇ ಹೊರತು ಸಾಮಾಜಿಕ ಸಮಸ್ಯೆಗಳನ್ನು ಪ್ರದರ್ಶಿಸುವ ಕಳಕಳಿಯಲ್ಲ. ಸಾಮಾಜಿಕ ಕಳಕಳಿ ಮಾನವೀಯತೆಯ ಒಂದು ಅಂಶ.

ನಾನು: ನಿನ್ನ ಜೊತೆ ಏನೇನೋ ವಿಷಯ ಹೊರಗೆ ಬಂತೇ ಹೊರತು ಜನ ಸಾಮಾನ್ಯನಿಗೆ ಸಾಹಿತ್ಯ ಬೇಕೆ ಅನ್ನುವುದು ಸ್ಪಷ್ಟವಾಗಲಿಲ್ಲ. ಕರ್ಮವೀರದ ಸಂಪಾದಕರು ಪ್ರಶ್ನೆಗೆ ಕಡ್ಡಿ ಮುರಿದ ಹಾಗೆ ಉತ್ತರ ಹೇಳುವುದು ಹೇಗೆ?

ಅವನು: ಕಡ್ಡಿ ಮುರಿ.

ಇಷ್ಟು ಹೇಳಿ ಜನಸಾಮಾನ್ಯ ಮಾಯವಾದ. ಅವನ ಹತ್ತಿರ ಶೋಷಿತರು, ದಲಿತರು, ಬಂಡವಾಳಶಾಹಿಗಳ ಬಗ್ಗೆ, ಪ್ರತಿಷ್ಠಿತರ ಬಗ್ಗೆ, ವ್ಯವಸ್ಥೆಯ Establishment ಬಗ್ಗ ಏನೇನೋ ಕೇಳಬೇಕೂಂತಿದ್ದೆ. ಅವನು ನನ್ನ ಮನಸ್ಸಿನಲ್ಲೇ ಹುಟ್ಟಿ ಅಲ್ಲೇ ಇರುತ್ತೇನೆಂದು ಹೇಳಿರುವುದರಿಂದ ಇನ್ನೊಮ್ಮೆ ಕಾಣಿಸಿಕೊಂಡಾಗ ಆ ಪ್ರಶ್ನೆಗಳನ್ನು ಕೇಳಿ ಬಿಡುತ್ತೇನೆ. ●

# ಶ್ರೀಸಾಮಾನ್ಯನಿಗೆ ಬೇಕಾದ ಸಾಹಿತ್ಯ ಎಂಥದು?

ಎಸ್. ದಿವಾಕರ

ಮೇಲಿನ ಪ್ರಶ್ನೆಗೆ ಉತ್ತರ ಹೇಳುವ ಮೊದಲು ಈ ಶ್ರೀಸಾಮಾನ್ಯ ಯಾರು ಎಂಬುದು ತೀರ್ಮಾನವಾಗಬೇಕು. ಅಡಿಗರ ಇತ್ತೀಚಿನ "ಸಾಮಾನ್ಯನಂತೆ ಈ ನಾನು!" ಕವನದಲ್ಲಿ ಶ್ರೀಸಾಮಾನ್ಯನ ಕಲ್ಪನೆಗೇ ಕೊಡಲಿ ಏಟು ಬಿದ್ದಿದೆ. "ಹುಟ್ಟಾ ಪರಮಾಣಂ ದೇಹಿ"ಗಳಾದ ವ್ಯಕ್ತಿಯೊಬ್ಬರೂ ಅಸಾಮಾನ್ಯರೇ. ನಿಲುವಿನಲ್ಲಿ, ಚಹರೆಯಲ್ಲಿ, ಮನಸ್ಸಿನಲ್ಲಿ ಒಬ್ಬರಿದ್ದಂತೆ ಇನ್ನೊಬ್ಬರಿಲ್ಲ "ಉಸಿರಿರುವ" ವ್ಯಕ್ತಿಯೊಬ್ಬನಿಗೂ ಬೇರೆ ಬೇರೆ ಇತಿಹಾಸಗಳಿರುವುದರಿಂದ ಸಾಮಾನ್ಯರು ಎಂದು ಕರೆಯುವಂಥ ಜನ ಇಲ್ಲವೇ ಇಲ್ಲ. ಹಾಗಾದರೆ ಮೇಲಿನ ಪ್ರಶ್ನೆಗೆ ಉತ್ತರವೂ ಇಲ್ಲ.

ಚಿತ್ರ, ಶಿಲ್ಪ, ಸಂಗೀತಗಳಂತೆ ಸಾಹಿತ್ಯವೂ ಒಂದು ಕಲಾ ಪ್ರಕಾರ. ಸಾಹಿತ್ಯಕ್ಕೆ ನಾವು ಆಡುವ ಭಾಷೆಯೇ ಬೆನ್ನೆಲುಬು. ಈ ಸಾಹಿತ್ಯ ಎರಡು ರೀತಿಯ ಭಾಷೆಗಳಲ್ಲಿ ಮೂರ್ತಗೊಳ್ಳುತ್ತದೆ. ಒಂದು ಲಿಪಿಗಳಿದ ಭಾಷೆ ಇನ್ನೊಂದು ಲಿಪಿಗಳಿಯದ ಭಾಷೆ. ಶೇಕಡಾ ೭೦ರಷ್ಟು ಜನ ನಿರಕ್ಷರಿಗಳಾಗಿರುವ ಈ ದೇಶದಲ್ಲಿ ಲಿಪಿಗಳಿಯದ ಭಾಷೆ ತೀರ ಮಹತ್ವದ ಪಾತ್ರ ವಹಿಸುತ್ತದೆ. ಹೀಗಿರುವಾಗ "ಶ್ರೀಸಾಮಾನ್ಯನಿಗೆ ಬೇಕಾದ ಸಾಹಿತ್ಯ ಎಂಥದು?" ಎಂಬ ಪ್ರಶ್ನೆಯನ್ನೇ ಇನ್ನೊಂದು ಪ್ರಶ್ನೆ ಪ್ರಶ್ನಿಸುತ್ತದೆ. ಅದೆಂದರೆ "ಲಿಪಿಗಳಿದ ಸಾಹಿತ್ಯವೊ, ಲಿಪಿಗಳಿಯದ ಸಾಹಿತ್ಯವೊ?"

ಸಾಹಿತ್ಯ ಎಲ್ಲರಿಗೂ ಅಲ್ಲ ಎಂದ ಸರ್ವಜ್ಞ. ಆದರೆ ಸಾಹಿತ್ಯವಿಲ್ಲದೆ ಮನುಷ್ಯ ಬದುಕಲಾರ ಎನ್ನಿಸುತ್ತದೆ ನನಗೆ. ಬೆಂಗಳೂರಿನಲ್ಲಿ ಮೊನ್ನೆ ಮೊನ್ನೆ "ಸಾಹಿತ್ಯ ಮತ್ತು ಶ್ರೀಸಾಮಾನ್ಯ" ಎಂಬ ವಿಷಯದ ಮೇಲೆ ಅಖಿಲ ಭಾರತ ಲೇಖಕರ ಒಂದು ವಿಚಾರ ಸಂಕಿರಣ ನಡೆಯಿತು. ಸುಮಾರು ೫೦ ಕಾದಂಬರಿಗಳನ್ನು ಬರೆದ (ಸಂಖ್ಯೆ ಗಮನಿಸಿ) ಒಬ್ಬ ಮಹಿಳಾ ಲೇಖಕಿ 'ನಮ್ಮ ಸಾಹಿತ್ಯ ಅರ್ಥವಾಗುವುದಿಲ್ಲ' 'ಎಲ್ಲರಿಗೂ ಅರ್ಥವಾಗುವ ಹಾಗೆ ಬರೆಯಬೇಕು' ಎಂದೆಲ್ಲ ಅಪ್ಪಣೆ ಕೊಡಿಸಿದರು. ಮತ್ತೆ ಇಂಥ ಮಾತುಗಳನ್ನು ಇಂದು ಮೇಲಿಂದ ಮೇಲೆ ನಾವು ಕೇಳುತ್ತಿದ್ದೇವೆ. ಇದಕ್ಕೆ ಕಾರಣವೇನು? ಶಸ್ತ್ರ ಚಿಕಿತ್ಸೆ ಅಗತ್ಯವಿರುವ ಯಾರೂ ವೈದ್ಯರನ್ನು 'ನನಗೆ ಅರ್ಥವಾಗುವ ಹಾಗೆ ಶಸ್ತ್ರ ಚಿಕಿತ್ಸೆ ಏಕಿಲ್ಲ?' ಎಂದು ಕೇಳುವುದಿಲ್ಲ. ಶಾಸ್ತ್ರೀಯ ಸಂಗೀತ ಕಚೇರಿಗೆ ಹೋಗಿ "ನನಗೆ ಅರ್ಥವಾಗುವ ಹಾಗೆ ಹಾಡಿ" ಎಂದು ಯಾರೂ ಕೇಳುವುದಿಲ್ಲ. ಯಾವುದೋ ಮೊಕದ್ದಮೆಯ ತೀರ್ಮಾನಕ್ಕಾಗಿ ಲಾಯರ ಬಳಿ ಹೋದವನು "ನನಗೂ ಅರ್ಥವಾಗುವ ಹಾಗೆ ಕಾನೂನಿರಬೇಕು" ಎಂದು ಅಪ್ಪಣೆ ಕೊಡುವುದಿಲ್ಲ. ಆದರೆ ಸಾಹಿತ್ಯದ ವಿಷಯದಲ್ಲಿ ಮಾತ್ರ ಎಲ್ಲರಿಗೂ ಅರ್ಥವಾಗಬೇಕು ಎಂದು ಒತ್ತಿ ಹೇಳುವ ಜನರಿದ್ದಾರೆ. ಇದಕ್ಕೆ ಕಾರಣ ಈ ರೀತಿ ಕೇಳುವವರಲ್ಲೇ ಕಾಣಸಿಗುತ್ತದೆ. ಸಾಹಿತ್ಯದ ಬಗೆಗೆ ನಿಖರವಾದ ಕಲ್ಪನೆ ಇಲ್ಲದ ಜನ ಇವರು. ಇವರು ತಿಳಿದಿರುವಂತೆ ಸಾಹಿತ್ಯದಿಂದ ಕ್ರಾಂತಿ ಸಾಧ್ಯ; ಸಾಮಾಜಿಕ ರೂಪಾಂತರ, ಆರ್ಥಿಕ ಸುಧಾರಣೆ ಸಾಧ್ಯ. ಹೇಗೆ ಎಂದು ಕೇಳಿದರೆ ಸಮರ್ಪಕ ಉತ್ತರ ದೊರೆಯುವುದಿಲ್ಲ. ಮತ್ತೆ ಹಾಗೆ ಕೇಳುವವರೂ ಬಹಳಷ್ಟು ಜನ ಇಲ್ಲ. ಸಾಹಿತ್ಯವಿಲ್ಲದೆ ಮನುಷ್ಯ ಬದುಕಲಾರ ಎಂದು ಹೇಳಿದೆ. ಈ ಮಾತನ್ನು ನಾನು ಸಮರ್ಥಿಸಿಕೊಳ್ಳದೇ ಹೋದರೆ ನನ್ನ ವಾದ ಬಿದ್ದು ಹೋಗುತ್ತದೆ. ಒಂದು ಚಿತ್ರ ಬಿಡಿಸಬೇಕಾದರೆ ಕ್ಯಾನ್‌ವಾಸ್ ಬೇಕು; ಬಣ್ಣಗಳು ಬೇಕು. ಇವು ಚಿತ್ರಕಾರನ ಸಾಧನಗಳು. ಅವುಗಳಿಂದ ಅವನು ತನ್ನ ಮನಸ್ಸನ್ನು, ಅನುಭವವನ್ನು ಚಿತ್ರ ಕಟ್ಟಿ ಕೊಡುತ್ತಾನೆ. ಆದರೆ ಸಾಹಿತಿ ಎಲ್ಲ ಮನುಷ್ಯರೂ ಆಡುವ ಭಾಷೆಯನ್ನೇ ಸಾಧನ ಮಾಡಿಕೊಳ್ಳಬೇಕಾಗುತ್ತದೆ. ಈ ಭಾಷೆ ಸಾಹಿತಿಗಷ್ಟೇ ಅಲ್ಲ, ಬೇರೆ ಕಲಾ ಪ್ರಕಾರಗಳ ಕಲಾವಿದರಿಗೂ ತಿಳಿದದ್ದೇ ಎಲ್ಲರೂ ಬಳಸುವ ಈ ಭಾಷೆಯಲ್ಲೇ ಸಾಹಿತ್ಯ ಸೃಷ್ಟಿಯಾಗುವುದರಿಂದ ಸಾಹಿತ್ಯ ಎಲ್ಲರಿಗೂ ಬೇಕು ನಮ್ಮ ದೇಶದಲ್ಲಿ ಭಾಷಣಗಳಿಗೆ, ಹರಿಕಥೆಗಳಿಗೆ, ನಾಟಕಗಳಿಗೆ, ಸಿನಿಮಾಗಳಿಗೆ ಸಾವಿರಗಟ್ಟಲೆ ಜನ ನುಗ್ಗುವುದಕ್ಕೆ ಕಾರಣ ಇದೇ ಇಲ್ಲೆಲ್ಲ ಒಂದಲ್ಲ ಒಂದು ವಿಧದಲ್ಲಿ ಭಾಷೆ ಕೆಲಸ ಮಾಡುತ್ತದೆ ಇದನ್ನು **Sub-literature** ಅಥವಾ ಉಪ-ಸಾಹಿತ್ಯ ಎನ್ನಬಹುದು ಎಲ್ಲರಿಗೂ ಸಾಹಿತ್ಯಬೇಕು ಎಂದು ನಾನು ಹೇಳಿದಾಗ ನನ್ನ ಮನಸ್ಸಿನಲ್ಲಿದ್ದದ್ದು ಈ ಉಪಸಾಹಿತ್ಯವೇ. ಓದು ಬರೆಹ ಬಾರದವರು ಭಾಷಣ, ಹರಿಕಥೆ, ಸಿನಿಮಾ, ನಾಟಕಗಳಿಗೆ ಹೋದರೆ, ಓದು ಬರೆಹ ಬಲ್ಲವರು ಎನ್ ನರಸಿಂಹಯ್ಯ, ಎಂ.ಕೆ ಇಂದಿರಾ, ಅನುಪಮಾ ನಿರಂಜನ, ಎಚ್ ಎಸ್. ಪಾರ್ವತಿ, ಟಿ.ಕೆ ರಾಮರಾವ್ ಮೊದಲಾದವರನ್ನು ಓದುತ್ತಾರೆ ಇಲ್ಲವೆ ಇಂಥವನ್ನೇ ಬರೆಯುತ್ತಾರೆ. ಸದ್ಯ ಸಾಹಿತ್ಯದ ಉದ್ದೇಶದ ಬಗ್ಗೆ ಮಾತನಾಡುತ್ತಿರುವವರು ಇಂಥವರೇ ಆಗಿದ್ದಾರೆಂಬುದನ್ನು ಗಮನಿಸಬೇಕು.

ನಮ್ಮಲ್ಲಿ ಶಾಸ್ತ್ರೀಯ ಸಂಗೀತ ಕಲಿಯಲು ಇರುವಂಥ syllabus ಬೇರೆ ಯಾವ ಕಲಾ ಪ್ರಕಾರಕ್ಕೂ ಇಲ್ಲ ಎನಿಸುತ್ತದೆ. ಸಾಹಿತ್ಯಕ್ಕಂತೂ ಇಲ್ಲವೇ ಇಲ್ಲ. ಹೇಳಿ ಕೇಳಿ ಇದು ಎಲ್ಲರೂ ಆಡುವ ಭಾಷೆಯಾದ್ದರಿಂದ ಓದು- ಬರಹ ಬಲ್ಲವರೆಲ್ಲ ಸಾಹಿತ್ಯದ ಬಗ್ಗೆ ಎಲ್ಲ ತಿಳಿದಿದ್ದೇವೆಂದು ಭಾವಿಸುವುದು ತೀರ ಸಾಮಾನ್ಯವಾಗಿ ಬಿಟ್ಟಿದೆ. ಹಾಗೆಯೇ ಎಲ್ಲವೂ ತಮಗೆ ಅರ್ಥವಾಗಬೇಕೆಂದು ಕೂಗಾಡುವುದೂ ಸ್ವಾಭಾವಿಕವೆನಿಸಿದೆ. ಇದರಿಂದ ಕಲೆಗೆ ಆಗುತ್ತಿರುವ ಅಪಾಯ, ಅಪಚಾರ ಅಷ್ಟಿಷ್ಟಲ್ಲ. ನಮ್ಮ ದೇಶದ ಜನ ತೀವ್ರವಾಗಿ ಸಾಕ್ಷರರಾಗುತ್ತಿರುವುದು ಈ ಶತಮಾನದಲ್ಲಿಯೇ. ಯೂರೋಪಿನಲ್ಲಿ ಸಾಕ್ಷರತಾ ಚಳವಳಿ ಎರಡು ಶತಮಾನಗಳಷ್ಟು ಹಿಂದೆಯೇ ಹುಟ್ಟಿತು. ಸಾಕ್ಷರತೆಯಿಂದ ಮುಖ್ಯವಾಗಿ ಕಲೆಗಳಿಗೆ ಉಂಟಾಗುತ್ತಿರುವ ಅಪಚಾರವನ್ನು ತಿಳಿದುಕೊಳ್ಳ ಬಯಸುವವರು Jose ortegay gassettನ "The Revolt of the Masses ಪುಸ್ತಕ ಓದಬೇಕು.

ಶ್ರೀಸಾಮಾನ್ಯನ ಕಲ್ಪನೆ ಒಪ್ಪಿಕೊಂಡರೆ, ಅಂಥವನಿಗೆ ಎಂಥ ಸಾಹಿತ್ಯ ಬೇಕು ಎಂಬ ಪ್ರಶ್ನೆಗೆ ಈಗಾಗಲೇ ಸೂಚ್ಯವಾಗಿ ಉತ್ತರ ನೀಡಿದ್ದೇನೆ. ಓದು ಬರೆಹ ಬಂದೂ ಬುದ್ಧಿಯನ್ನು ಉಪಯೋಗಿಸದ ಜನರೇ ಬಹಳಷ್ಟು ಇರುವ ದೇಶ ಇದು. ಇಂಥವರನ್ನು ಶ್ರೀಸಾಮಾನ್ಯರು ಎನ್ನಬಹುದೇನೊ. ಬುದ್ಧಿಯನ್ನು ಬಳಸುವ ಚಿಂತಿಸುವ ಜನಕ್ಕೆ ಕಲೆ ಅರ್ಥವಾಗುತ್ತದೆ. ಅದರಿಂದ ಅವರ ಮನಸ್ಸೂ ಸಂಸ್ಕಾರಗೊಳ್ಳುತ್ತದೆ. ಆದರೆ ಚಿಂತನೆಗೇ ಹಿಂಜರಿಯುವ "ಶ್ರೀಸಾಮಾನ್ಯರು?" ನಮ್ಮವರು ನಿರ್ಮಿಸಿಕೊಳ್ಳುವ ಭ್ರಮಾಲೋಕಕ್ಕೆ ಎಲ್ಲೆಯಿಲ್ಲ. ಸದ್ಯಕ್ಕೆ ನಮ್ಮ ದೇಶದಲ್ಲಿ ಬಡತನ ನಿರ್ಮೂಲಗೊಳಿಸಲು ಘೋಷಣೆಗಳು ಕೇಳುತ್ತಿವೆ. ಸಾಹಿತ್ಯದಲ್ಲೂ ಸಹ "ಬಡತನದ ವಿರುದ್ಧ ಹೋರಾಡಲು" "ದಲಿತ ಜೀವನವನ್ನು ಚಿತ್ರಿಸಲು" ಕರೆ ಕೊಡುತ್ತಿದ್ದಾರೆ. ಸರಿ, ಹಾಗೇ ಮಾಡೋಣ. ಆದರೆ ಇಂಥ ಸಾಹಿತ್ಯವನ್ನು ಓದುವವರೆಲ್ಲರೂ ಹೋರಾಟಕ್ಕೆ ಸಿದ್ಧರಾಗುತ್ತಿದ್ದಾರೆಯೆ? ನನಗಂತೂ ನಂಬಿಕೆಯಿಲ್ಲ. ಅಲ್ಲದೆ ಇಂಥ ಕರೆಗೂ ಕಾರಣವಿಲ್ಲದಿಲ್ಲ. ಸಾಹಿತ್ಯದ ಬಗೆಗೆ ಬಹಳಷ್ಟು ಜನರಿಗಿರುವ ಕಲ್ಪನೆ ಅನುಕರಣ ಸಿದ್ಧಾಂತ **Imitative theory** ದಿಂದ ಹುಟ್ಟಿದ್ದು. ಸಾಹಿತ್ಯ ಬದುಕನ್ನು ಪ್ರತಿಫಲಿಸಬೇಕು. ನಮ್ಮಲ್ಲಿ ನೂರಕ್ಕೆ ತೊಂಬತ್ತೆಂಟು ಜನಲೇಖಕರು ಅದನ್ನೇ ಮಾಡುತ್ತಿದ್ದಾರಲ್ಲ? ಸಮಾಜೋದ್ಧಾರ ಮಾಡುವವರು ಸಾಹಿತ್ಯದ ಬಗೆಗೆ ಯಾಕೆ ತಲೆ ಕೆಡಿಸಿಕೊಳ್ಳಬೇಕೋ ತಿಳಿಯುವುದಿಲ್ಲ. ಅಂಥವರಿಗೆ ನನ್ನ ಸಲಹೆ ಇದು: "ಸ್ವಾಮಿ, ಈ ದೇಶದ ಜನ ಯೋಚನಾ ಶಕ್ತಿ ಕಳೆದುಕೊಂಡಿದ್ದಾರೆ. ಅವರಿಗೆ ಓದು ಬರೆಹ ಕಲಿಸಿ; ಆದರ್ಶಗಳನ್ನು ಹೇಳಿಕೊಡಿ. ಮುಖ್ಯವಾಗಿ ನಮ್ಮ ವಾಸ್ತವ ಸ್ಥಿತಿಯನ್ನು ತಿಳಿಸಿ ಹೇಳಿ. ಈ ಸಾಧನೆಗಾಗಿ ಭಾಷೆಯನ್ನೂ ಉಪಯೋಗಿಸಿಕೊಳ್ಳಿ. ಪ್ರಚಾರಕ್ಕಾಗಿ ಲಾವಣಿ ಕಟ್ಟಿರಿ, ನಾಟಕ, ಸಿನಿಮಾ ಮಾಡಿ, ಭಾಷಣ ಮಾಡಿ. ಆದರೆ ಇವನ್ನೇ ಸಾಹಿತ್ಯ ಎಂದು ವಾದಿಸಬೇಡಿ."

ಈ ಸಂದರ್ಭದಲ್ಲಿ ಸಾಹಿತ್ಯದ ಕೆಲಸದ ಬಗೆಗೆ ಒಂದೆರಡು ಮಾತು ಹೇಳಬೇಕೆನಿಸುತ್ತೆ. ಸತ್ಯಶೋಧನೆ ಎಲ್ಲ ಕಲೆಗಳ ಕೆಲಸ. ಹಾಗೇ ಸಾಹಿತ್ಯದ ಕೆಲಸವೂ ಹೌದು. ಆದರೆ ಸತ್ಯ ಯಾವುದು ಒಂದೊಂದು ತಲೆಮಾರಿಗೂ ತನ್ನದೇ ಆದ ಮೌಲ್ಯಗಳಿರುತ್ತವೆ. ಆಯಾ ಮೌಲ್ಯಗಳು ಆಯಾ ಕಾಲಕ್ಕೆ ಸತ್ಯವೇ. ಆದರೆ ಶಾಶ್ವತ ಸತ್ಯಗಳೂ ಕೆಲವಿವೆ. ಇವು ಯಾವ ಕಾಲಕ್ಕೂ, ಯಾವ ತಲೆಮಾರಿಗೂ ಬದಲಾಗುವುದಿಲ್ಲ. ಇವನ್ನು ಹುಡುಕಿ ಪ್ರತಿಪಾದಿ[illegible] [illegible] ಲಿಸ. ಈ ದೃಷ್ಟಿಯಿಂದ ಕಲಾವಿದ ಪ್ರವಾದಿ. ನೂರಕ್ಕೆ ತೊಂಬತ್ತೊಂ

— ೪೮ ನೇ ಪುಟಕ್ಕೆ

# ಶ್ರೀಸಾಮಾನ್ಯ ಸಾಹಿತಿಯಾದಾಗ

ಶಂಕರ ಮೊಕಾಶಿ, ಪುಣೇಕರ

ಶ್ರೀಸಾಮಾನ್ಯನಿಗೆ ಸಾಹಿತಿಯಾಗಲೇಬೇಕೆಂಬ ಹಟ ತರವಲ್ಲ. ಸಾಹಿತ್ಯವನ್ನು ಓದುವವನು ಶ್ರೀಸಾಮಾನ್ಯನಲ್ಲ. ಅವನ ಆರ್ಥಿಕ-ಸಾಮಾಜಿಕ ಪರಿಸರ ಅವನಿಗೆ ಶೈಕ್ಷಣಿಕ ಅನುಕೂಲತೆಗಳನ್ನು ಒದಗಿಸಿರಲಿಕ್ಕಿಲ್ಲ. ಆದರೆ ಅವನಿಗೆ ಸಾಹಿತ್ಯಲಾಲಸೆ ಹುಟ್ಟಿದ್ದರೆ ಅವನನ್ನು ಸರಸ್ವತಿ ಸಾಮಾನ್ಯನೆಂದು ಕರೆಯಬಹುದು. ಸ್ವಾತಂತ್ರ್ಯೋತ್ತರ 'ಪರಿಸರದಲ್ಲಿ ಕಳೆದ ೨೫ ವರುಷಗಳಲ್ಲಿ ಕುಂಟುತ್ತ ಸಾಗಿರುವ ಕನ್ನಡ ಸಾಹಿತ್ಯ ಶವದ ಮೆರವಣಿಗೆಯ ಮೈಮೇಲೆ ಉಗ್ಗಿದ ಚುರಮುರಿಯ ಕಾಳುಗಳಿಂದ ಅವನ ಹೊಟ್ಟೆ ಜೋಳ್ಳಿಸುವ ಸಂಭವವೇ ಹೆಚ್ಚು. ವೃತ್ತಪತ್ರಗಳಲ್ಲಿ ಪ್ರಕಟವಾಗುವ ಸಾಹಿತ್ಯ ವಿಮರ್ಶೆ ಅವನಲ್ಲಿ ದಿಗ್ಭ್ರಮೆ ಹುಟ್ಟಿಸಿದರೆ ದಿಗಿಲು ತಂದರೆ, ತಲೆ ತಿರುಗುವಂತೆ ಮಾಡಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ ಅವನು ಮೆಚ್ಚಿದ ಪುಸ್ತಕಗಳ ಬಗ್ಗೆ ಕಹಿ ವಿಮರ್ಶೆ ಬಂದಿರುತ್ತದೆ. ಅವನು ಅಸಹ್ಯಪಟ್ಟುಕೊಂಡ ಪುಸ್ತಕಗಳ ಬಗ್ಗೆ ಉದಾತ್ತ ಹೊಗಳಿಕೆ ಬಂದಿರುತ್ತದೆ. 'ಹಳದಿ ಮೀನು' 'ಗತಿ-ಸ್ಥಿತಿ'ಗಳನ್ನು ಕೊಂಡ ಶ್ರೀಸಾಮಾನ್ಯ ನಾಲ್ಕು ಪುಟಗಳನ್ನೂ ದಿಗ್ಭ್ರಮೆ ಇಲ್ಲದೆ ಓದಲಾರ. ದುಡ್ಡು ಮರತ ಮಾಡಿರಿ ಎಂದು ಪ್ರಕಾಶಕರಿಗೆ ಕೇಳಲಿಕ್ಕೆ ಹೋದರೆ, ಅವರು ಈ ಉದಾತ್ತ ವಿಮರ್ಶೆಗಳನ್ನು ಸುರುಳಿ ಸುತ್ತಿ ಮೂಗಿಗೆ ಹೊಡೆಯುತ್ತಾರೆ. ಇಂಥ ಪರಿಸ್ಥಿತಿಯಲ್ಲಿ ಆಧುನಿಕ ಕನ್ನಡ ಸಾಹಿತ್ಯದಿಂದ ಶ್ರೀಸಾಮಾನ್ಯ ಬರೆಯಲಿಕ್ಕೆ ಕಲಿಯುವದು ಅಸಾಧ್ಯವಾಗಿದೆ. ತನ್ನ ಜೀವನಕ್ಕೂ ಆಧುನಿಕ ಕಾದಂಬರಿಗಳು ಚಿತ್ರಿಸುವ ಜೀವನಕ್ಕೂ ತಾಳಮೇಳವೇ ಇಲ್ಲವೆಂದಾಗ ತನ್ನ ಜೀವನವೇ ವ್ಯರ್ಥ, ಅದು ಸಾಹಿತ್ಯಕ್ಕೆ ತಕ್ಕ ವಸ್ತುವಾಗಲಾರದು ಎಂಬ ಭಾವನೆ ಶ್ರೀಸಾಮಾನ್ಯನಲ್ಲಿ ಮೂಡದೇ ಇರಲಾರದು.

ಸುದೈವದಿಂದ ಯಾವುದಕ್ಕೆ "ಉಚ್ಚ" ಸಾಹಿತ್ಯವೆನ್ನುತ್ತಾರೋ ಅದಷ್ಟೇ ಪ್ರಕಟವಾಗುತ್ತಿಲ್ಲ. ಕನ್ನಡದಲ್ಲಿ ಚಿಲ್ಲರೆ ಗ್ರಂಥಗಳೂ ಸಾಕಷ್ಟು ಪ್ರಮಾಣದಲ್ಲಿ ಪ್ರಕಟವಾಗುತ್ತಿವೆ. ಇವು ಎಲ್ಲವೂ ರುಚಿಯಾಗಿ ಶುಚಿಯಾಗಿ ಇರುತ್ತವೆಯೆಂದಲ್ಲ. ಆದರೆ ಉಚ್ಚ ಸಾಹಿತ್ಯವೂ ಶುಚಿಯಾಗಿ ರುಚಿಯಾಗಿ ಇದೆಯೆಂದು ಯಾರು ಹೇಳಿದರು? ಆದರೆ ಅಂಥ ಉಚ್ಚ ಸಾಹಿತ್ಯದಿಂದ ಶ್ರೀಸಾಮಾನ್ಯ ಏನನ್ನೂ ಕಲಿಯಲಾರ. ಇಂಥ ಚಿಲ್ಲರೆ ಗ್ರಂಥಗಳಿಂದ ತುಸುವಾದರೂ ಕಲಿಯಬಲ್ಲ. ತನ್ನದೇ ಆದ ನಿರ್ಣಯಗಳನ್ನು ತೆಗೆದುಕೊಳ ಬಲ್ಲ. ಇಂಥ ಚಿಲ್ಲರೆ ಗ್ರಂಥಗಳ ಮೇಲೆ ವಿಮರ್ಶೆಯೇ ಬಾರದ್ದರಿಂದ, ಅವುಗಳ ಬಗ್ಗೆ ಅವನಲ್ಲಿ ಪೂರ್ವಗ್ರಹವೂ ಹುಟ್ಟಲಾರದು. ಅಲ್ಲದೆ, ಚಿಲ್ಲರೆ ಗ್ರಂಥಗಳನ್ನು ಅವನು ಹೆಚ್ಚು ಆತ್ಮವಿಶ್ವಾಸದಿಂದ ಓದಬಲ್ಲ. 2½ ರೂಪಾಯಿಗಿಂತ ಹೆಚ್ಚಿನ ಬೆಲೆಯ ಗ್ರಂಥವನ್ನು ಅವನು ಕೊಳಲೇ ಬಾರದೆಂದು ನನ್ನ ಪ್ರಾಮಾಣಿಕ ಅಭಿಪ್ರಾಯವಿದೆ. ಆದರೆ ಇತ್ತೀಚೆಗೆ ಅರ್ಧ ಶಿಕ್ಷಿತ ರೈತರ ಕೈಯಲ್ಲಿ ತುಸು ಹಣ ಓಡಾಡುತ್ತಿದೆಯಾದ್ದರಿಂದ 3½ ರೂಪಾಯಿಗಳ ವರೆಗೆ ಈ ಸೀಲಿಂಗ ಒಯ್ಯಬಹುದೇನೋ ಅನ್ನಿಸುತ್ತದೆ. ಅದಕ್ಕೂ ಹೆಚ್ಚು ಬೆಲಬಾಳುವ ಗ್ರಂಥವಿದ್ದರೆ, ಅದು ಬಹುತರ, ಯಾವುದೋ ಪ್ರೊಫೆಸರರು ತಮ್ಮ ಆಂತರಿಕ ಮನೋವ್ಯಾಪಾರಗಳ ಸಾಂಕೇತಿಕ ಸೂಕ್ಷ್ಮ ವಿಶ್ಲೇಷಣಾತ್ಮಕವೂ ಇರಬಹುದೆಂದು ನಿರ್ಣಯಿಸಲು ಅಭ್ಯಂತರವಿಲ್ಲ. ಅಂಥ ಚಿತ್ರ ವಿಚಿತ್ರ ಕವುದಿಯನ್ನು ಹೊದ್ದುಕೊಳುವ ಧೈರ್ಯ ಶ್ರೀಸಾಮಾನ್ಯನಿಗೆ ಎಲ್ಲಿಂದ ಬಂದೀತು? ಅದಕ್ಕೆ ೧೨ ರೂಪಾಯಿ ಕೊಟ್ಟು ಮೈಚಳಿ ಅದನ್ನು ಹೊದ್ದುಕೊಂಡಾಗಲೂ ಹೋಗದು. ಎನ್. ನರಸಿಂಹಯ್ಯನವರ ಪತ್ತೇದಾರಿ ಕಾದಂಬರಿಗಳನ್ನು ಓದಿದರೆ ತಾನೇ ಮೈ ಬೆಚ್ಚಗಾಗುತ್ತದೆ. ನಿರರ್ಗಳ ಸುಂದರ ಕನ್ನಡ ಶೈಲಿ, ಸುಂದರ ಪತ್ತೇದಾರ, ಸುಂದರ ಸ್ತ್ರೀಯರು ರಾಗದ್ವೇಷಗಳನ್ನು ಹುಟ್ಟಿಸಬಲ್ಲ ನೈಜ ಖಳನಾಯಕರು, ವಿಕಟಾಟ್ಟಹಾಸದಿಂದ ಅವರು ಮಾಡುವ ದುಷ್ಕರ್ಮಗಳು, ಒಂದೊಂದೂ ನಮ್ಮ ಹಾಸಿಗೆಯನ್ನು ಹೊದ್ದಿಕೆಯಿಲ್ಲದೆ ಬೆಚ್ಚಗೆ ಮಾಡುತ್ತವೆ. ಕನ್ನಡದ್ದೇ ಆದ ಬೆಂಗಳೂರಿನ ಪರಿಸರದಲ್ಲಿ ಎಲ್ಲ ಸಂದರ್ಭಗಳು ರೂಪುಗೊಳುತ್ತವೆ. ಓದುಗನು ಕೊಟ್ಟ 2½ ರೂಪಾಯಿಗಳ ಸರಿ ಮಿಗಿಲೆನಿಸುವ ರಂಜನೆಯನ್ನು ಈ ಗ್ರಂಥಗಳು ಪ್ರಾಮಾಣಿಕವಾಗಿ ಕೊಡುತ್ತವೆ. ಇವುಗಳಿಂದ ಶ್ರೀಸಾಮಾನ್ಯ ಕಲಿಯಬಹುದಾದ ನಿತ್ಯಾನಿತ್ಯ ವಿವೇಕ ಸದಸದ್ವಿಚಾರ, ರಂಜಕ ಗುಣ, ಕನ್ನಡ ವ್ಯಾಕರಣ, ಕಥಾ ರಚನೆಯ ಕಲೆ, ಇವುಗಳನ್ನು ಉಚ್ಚ ಸಾಹಿತ್ಯ ಕೊಡಲಾರದು.

ಆದರೆ ಎನ್. ನರಸಿಂಹಯ್ಯನವರನ್ನು 'ಸಾಹಿತಿ' ಎಂದು ಯಾರೂ ಕರೆಯಲಾರರು. ಅವರಿಗೆ ಸಾಹಿತ್ಯ ಅಕ್ಯಾಡೆಮಿಯ ಬಹುಮಾನ ಸಿಕ್ಕಲಾರದು. ಅವರು ಅದನ್ನು ಅಪೇಕ್ಷಿಸುವದೂ ಇಲ್ಲ. ಯಾವ ಬಹುಮಾನವೂ ಇಲ್ಲದೆ ಅವರು ಸಾಕಷ್ಟು ಹಣ ಗಳಿಸಿದ್ದಾರೆ ಓದುಗರ ಮೇಲೆಯೇ ಅವಲಂಬಿಸಿ ಗಳಿಸಿದ್ದಾರೆ ತಾತ್ಪರ್ಯವಿಷ್ಟೆ-

೧. ಶ್ರೀಸಾಮಾನ್ಯನು ಗ್ರಂಥಕರ್ತನಾಗುವ ಹವ್ಯಾಸ ಇಟ್ಟುಕೊಳ್ಳಬೇಕೇ ಹೊರತು ಸಾಹಿತಿಯಾಗುವ ಹವ್ಯಾಸವನ್ನು ಇಟ್ಟುಕೊಳ್ಳಬಾರದು (ಯಾರ ಗ್ರಂಥಗಳು ಮಾರಾಟವಾಗುತ್ತವೆಯೊ ಅವನು ಗ್ರಂಥಕರ್ತ. ಯಾರ ಗ್ರಂಥಗಳು ಮಾರಾಟವಾಗದೆ ಒಳ್ಳೆಯ ವಿಮರ್ಶೆ ಪಡೆಯುತ್ತವೆಯೋ ಅವನು ಸಾಹಿತಿ. ಯಾವನು ಓದುವವರಿಗೆ ಅರ್ಥವಾಗುವಂತೆ ಬರೆಯುತ್ತಾನೆಯೋ ಅವನು ಗ್ರಂಥಕರ್ತ. ಯಾವನು ವಿಮರ್ಶಕರಿಗಷ್ಟೇ ಅರ್ಥವಾಗುವಂತೆ ಬರೆಯುತ್ತಾನೋ ಅವನು ಸಾಹಿತಿ.)

೨. ಶ್ರೀಸಾಮಾನ್ಯನು ಆಕರ್ಷಕ ಕಥಾನಕವನ್ನು ಕಟ್ಟುವ ಕಲೆ ಬೆಳೆಸಿಕೊಳ್ಳಬೇಕು. ಕಥೆ ಕಟ್ಟುವ ಕಲೆ ಕನ್ನಡದಿಂದ ಕಣ್ಮರೆಯಾಗಿದೆ. ಎಲ್ಲರೂ ಪತ್ತೇದಾರಿ ಕತೆ ಬರೆಯುವುದು ಸಾಧ್ಯವಾಗಲಿಕ್ಕಿಲ್ಲ. ಆದರೆ ಪತ್ತೇದಾರಿ ಕತೆ ಬರೆಯುವವರೇ ಆದರೆ, ಮೊದಲಿನ ಎರಡು ಕಾದಂಬರಿಗಳನ್ನು ತಮಗೆ ಗೊತ್ತಿದ್ದ ತಮ್ಮ ಊರಿನ ಪರಿಸರದಲ್ಲೇ ಜರುಗಿದ ಕೊಲೆ, ದರೋಡೆ ಇಂಥ ವಿಷಯಗಳ ಬಗ್ಗೆ ಅಥವಾ ಗ್ರಾಮ ಪಂಚಾಯತಿ ಇಲೆಕ್ಷನ್ ಅನಂತರ ಜರುಗಿದ ಹೊಡೆದಾಟ, ಇವೇ ಮುಂತಾದ ವಿಷಯಗಳ ಬಗ್ಗೆ ತಮಗೆ ಗೊತ್ತಿದ್ದ ಎಲ್ಲ ಮಾಹಿತಿಯನ್ನೂ (ಊರ ಮತ್ತು ಜನರ ಹೆಸರು ಬದಲಿಸಿ) ಆದ ಸಂಗತಿಯನ್ನು ಕಾಲಾನುಕ್ರಮದಿಂದ ಬರೆಯಬೇಕು. ಇಂಥ ಕತೆಯಲ್ಲಿ ರಹಸ್ಯವೇನೂ ಇಲ್ಲದಿದ್ದರೆ ಅದನ್ನು ರಹಸ್ಯವಿಲ್ಲದೆ ಬರೆದರೂ ನಡೆದೀತು. ರಹಸ್ಯವಿದ್ದರೆ, ಅದನ್ನು ಪತ್ತೇದಾರಿ ಕಾದಂಬರಿಯನ್ನಾಗಿ ಮಾಡಬಹುದು. ತಮಗೆ ಗೊತ್ತಿದ್ದ ಆಯಕಾರರು, ಗುಳೇಕಾರರು, ರೈತರು, ರೈತರ ಹೆಂಡಂದಿರು, ಗೌಡರು, ಶ್ಯಾನುಭೋಗರು, ಡಾಕ್ಟರರಂತೆ ನಟಿಸುವ ಕಂಪೌಂಡರರು, ಇಂಜಕ್ಷನ್ ಕೊಡುವ ಆಯುರ್ವೇದ ವೈದ್ಯರು, ಕೆರೆ ಕಾಯುವವರು ರಾಜಕಾರಣದಲ್ಲಿ ಮಹತ್ವದ ಪಾತ್ರ ವಹಿಸುವ ಪೋಸ್ಟ್‌ಮನ್. ಶಾಲಾ ಮಾಸ್ತರರು ಸುದ್ದಿ ಸೂರಪ್ಪನವರು, ದಿಂಡ ಸತ್ತ ಗೈಯ್ಯಾಳಿಯರು, ಚಾ-ಚುರುಮರಿ ಅಂಗಡಿಯ ಸುದ್ದಿಗಾರರು, ಮುಖಂಡರು, ಪುಢಾರಿಗಳು ಬಣವೆ ಹಿರಿಯರು ಮತ್ತು ದಾಹಕರು ಇವರೆಲ್ಲರು ಆಡುವ ಪಾತ್ರವನ್ನೂ ಬಣ್ಣಿಸಬೇಕು. ಬೆಂಗಳೂರಿನ ಓರ್ವ ಲೇಖಕರು ಬರೆದ "ಕೃತಪುರದ ಯಲಗೂರ" ಕತೆ ಎಂಥ ರಹಸ್ಯ ರಹಿತ ಸುಂದರ ಕೃತಿ, ಮೆಲ್ಲನೆ ರಹಸ್ಯ ತರುವ ಕಲೆ ಕೈಗೂಡುವದು.

೩. ಶ್ರೀಸಾಮಾನ್ಯನು ಸಂದರ್ಭ ಸನ್ನಿವೇಶಗಳನ್ನು ಬಣ್ಣಿಸಬೇಕೇ ಹೊರತು ಮನೋ ವ್ಯಾಪಾರಗಳನ್ನು ವಿಶ್ಲೇಷಿಸುವುದಕ್ಕೆ ಸರ್ವಥಾ ಪ್ರಯತ್ನ ಮಾಡಬಾರದು. ಉದಾಹರಣಾರ್ಥ: ಹೀಗೆ ಬರೆಯಬೇಕು:

"ನೀಲಕ್ಕನು ನವಣೆ ಹಳ ಮಾಡುತ್ತ ಕುಳಿತಿದ್ದಳು. ಕಣ್ಣು ನೋಯತೊಡಗಿದವು. ಗೌರಿ ಇದ್ದಿದ್ದರೆ! ಅವಳದು ಎಳೆ ಕಣ್ಣು. ಬೇಗ ಬೇಗ ನವಣೆ ಹಳ ಮಾಡುತ್ತಿದ್ದಳು. ಅವಳೀಗ ಗಂಡನ ಮನೆಗೆ ಹೋಗಿ ಒಂದು ವರ್ಷ ಆಗಬಹುದು. ಇನ್ನು ಎರಡು ತಿಂಗಳಿಗೆ ಯುಗಾದಿ ಹಬ್ಬಕ್ಕೆ ಮನೆಗೆ ಬರಬೇಕು. ಕಳಿಸಿ ಕೊಡುತ್ತಾರೋ ಅರಿವೆ-ಗುರಿವೆ ಮಾಡುತ್ತಾರೋ ಮನೆಯಲ್ಲಿ ನವಣೆ ಹಳ ಮಾಡುವ ಅವಳ ಚಾತುರ್ಯಕ್ಕೆ ಮೆಚ್ಚುತ್ತಾರೋ ಮೂಗು ಮುರಿಯುತ್ತಾರೋ? ಛೀ ಅವರೇಕೆ ನವಣೆ ತಿನ್ನಬೇಕು? ಈಗಾರು ನವಣೆ ತಿನ್ನುತ್ತಾರೆ? ನಮ್ಮ ಮನೆಯಲ್ಲೋ ನಿರ್ವಾಹವಿಲ್ಲ. ಹಿರಿಯನ ಸಕ್ಕರೆ ಮೂತ್ರಕ್ಕಾಗಿ ಇಷ್ಟೆಲ್ಲ. ಬ್ಯಾಡೋ ಅಂದರೂ ಕೇಳಲಿಲ್ಲ. ಚಾ ಚುರಮರಿ ಅಶಾಕ್ಕ ಕೊಟ್ಟು ಬಸನ ಜೊತೆ ಇಗ್ನಿಶನ್ ಅಂತ ಅಡ್ಡಾಡಿದ. ಈಗ ಬ್ಯಾನಿ ಹೆಚ್ಚಾಗಿ ಬ್ಯಾಂಕಿನ ಸಂದ್ಯಾಗಿಂದ

ಈವು ಸೋಕಲಿಸ್ಕ್ ಹಕ್ಕಿಂತಿ...ಗೌರಿ ಇದ್ದರೆ ಕೆಟ್ಟ ಹಿಡಿದು ಕೂಡಾಸುತ್ತಿದ್ದಳು. ಆಕೆ ಹೋಗಿ ಬಳಿಗ್ಯೆ ಹೇರವಂಗೆ ಆ ಸುತ್ತು...ಛೇ, ಛೇ ಆಕೆ ಗಂಡನ ಮನ್ಯಾಗ ಸುಖದಿಂದ ಇರಲಿ. ಧಾರೆ ಎರೆದು ಕೊಟ್ಟ ಮ್ಯಾಲ ನನಗೆ ಯಾಕ ಈ ಆಶಾ...ನೀಲಕ್ಕ ಕಣ್ಣು ತಿಕ್ಕಿಕೊಂಡಳು."

ಆದರೆ ಹೀಗೆ ಬರೆಯಬಾರದು:—

"ಪ್ರಮೀಳಾ ದೇವಿಯ ಮನಸ್ಸಿನಲ್ಲಿ ತುಮುಲವು ನಡೆದಿತ್ತು. ಒಂದು ಮನಸು: ಗೌರಿ ತನ್ನ ಜೊತೆಗೇ ಇರಬೇಕೆಂದು ಹೇಳುತ್ತಿತ್ತು. ಇನ್ನೊಂದು ಮನಸು: ಗೌರಿ ಗಂಡನ ಮನೆಯಲ್ಲಿ ಸುಖದಿಂದ ಇರಲೆಂದು ಹಾರೈಸುತ್ತಿತ್ತು. ಈ ಎರಡು ಸೆಳೆತಗಳ ನಡುವೆ ಸಿಲುಕಿ ಅವಳ ಮನಸು; ಸೀಳು ಹೋಳಾಗಿ ಛಿದ್ರ ವಿಚ್ಛಿನ್ನವಾಗಿ ಬಿಟ್ಟಿತು. ಒಂದೆಡೆಗೆ ತತ್ವ, ಇನ್ನೊಂದೆಡೆಗೆ ವಾಸ್ತವ. ಒಂದೆಡೆಗೆ ಆದರ್ಶ, ಒಂದೆಡೆಗೆ ಸತ್ಯ. ಸತ್ಯ ಆದರ್ಶಗಳ ದ್ವಂದ್ವ ಬಹು ಪುರಾತನವಾದದ್ದು. ಒಂದೆಡೆಗೆ ego ಇನ್ನೊಂದೆಡೆಗೆ Super Ego."

ಮೇಲೆ ಹೇಳಿದಂತೆ ಯಾರಾದರೂ ಬರೆಯುತ್ತಾರೆಂದು ನಾನು ಭಾವಿಸಿಲ್ಲ. ಆದರೆ ಇವು ಕೇವಲ ಶಿಕ್ಷಣಕ್ಕಾಗಿ ರಚಿಸಿದ ವಾಕ್ಯಗಳು. ಎರಡನೆಯ ತುಂಡಿನಲ್ಲಿ ಅಮೂರ್ತ ಮನೋವ್ಯಾಪಾರ ಹೆಚ್ಚಾಗಿದೆ. ಅದರ ಮಾನಸಿಕ ವಿಶ್ಲೇಷಣೆಯೂ ಸರಿಯಿಲ್ಲ. ಅದು ಯಾವ ಮೂರ್ತ ಸಂದರ್ಭದ ತಳಹದಿಯನ್ನೂ ಕಥೆಗೆ ಕೊಡುವುದಿಲ್ಲ. ಪ್ರಮೀಳಾ ದೇವಿ ಯೆಂಬ ಹೆಸರೂ ಸರಿಯಿಲ್ಲ. ಇಂಥ ಹೆಸರು ಯಾವ ವಯಸ್ಸು, ಯಾವುದೆಂದು ಸ್ಥಳ, ಯಾವುದೊಂದು ಸಂದರ್ಭವನ್ನೂ ಸೂಚಿಸುವದಿಲ್ಲ. ಆದರೆ ಮೊದಲನೆಯ ತುಂಡಿನಲ್ಲಿಯ ನೀಲಕ್ಕನಾ ಇಂಥ ವಯಸ್ಸಿನವಳು, ಇಂಥ ಸ್ಥಳದವಳು (ಹಳ್ಳಿ), ಅವಳು ಗೌರಿಯ ತಾಯಿ, ಅವಳ ಗಂಡನಿಗೆ ಡೈಬಿಟಿಸ್ ಇದೆ, ಅವಳಿಗೆ ವಯಸಾಗಿದೆ ಅವಳು ಹಳೆಯ ಜೀವನ ಸಾಗಿಸಿದವಳು, ಅವಳ ಗಂಡ ಮುದುಕನಾದರೂ ಬದಲುಗೊಂಡ ಪರಿಸರದ ಸೆಳೆತಕ್ಕೆ ಬಿದ್ದವನು, ಇಷ್ಟೆಲ್ಲ ಸೂಚಿಸುತ್ತದೆ. ಅವಳು ನವಣೆ ಹಳ ಮಾಡುವ ಸಂದರ್ಭವು ಅವನ ಸಮಸ್ಯೆಯನ್ನು ಮೂರ್ತವಾಗಿ ಮಾಡುತ್ತದೆ. ಅವಳ ಗಂಡನ ಬೇನೆಯು ಪ್ರತ್ಯಕ್ಷ ಆವಿಷ್ಕಾರವಾಗಿ ಹೆಬ್ಬೆರಳಿನ ಸಂದಿಯಲ್ಲಿ ಸೋರುವ ಕೀವು ಕತೆಯನ್ನು ಮೂರ್ತಗೊಳಿಸುತ್ತದೆ. ಆದ್ದರಿಂದ ಅದು ಜೀವನಕ್ಕೆ ಹೆಚ್ಚು ಸಮೀಪವಾಗುತ್ತದೆ. "ಪ್ರಮೀಳಾದೇವಿ"ಯಂಥ ಹೆಸರು ಬರೆಯುವದೂ ತಪ್ಪು. Ego ಮುಂತಾದ ಶಬ್ದಗಳಿಂದ ಯಾವ ಲಾಭವೂ ಇಲ್ಲ. ಸಲ್ಲದ ತುಮುಲದಿಂದ ಏನು ಪ್ರಯೋಜನ? ಗೌರಿ ಪ್ರಮೀಳಾ ದೇವಿಯ ಮಗಳೆಂಬುದು ಸ್ಪಷ್ಟವಾಗುವುದಿಲ್ಲ. ಅವಳು ಗೆಳತಿಯಾಗಿರಬಹುದು: ಆಳು ಮಗಳಾಗಿರಬಹುದು. ಅವಳು ಇಲ್ಲದಿರುವುದಕ್ಕೇ ಅನೇಕ ಕಾರಣಗಳಿರಬಹುದು.

೪. ಶ್ರೀಸಾಮಾನ್ಯನು ಬಳಸುವ ಭಾಷೆ ತೀರ ಗ್ರಾಂಥಿಕವಾಗಿರಬಾರದು. ತೀರ ಗ್ರಾಮ್ಯವಾಗಿರಬಾರದು. ತೀರ ಗ್ರಾಂಥಿಕಗೊಳಿಸಿದರೆ ತನ್ನ ಭಾಗದ ಓದುಗರಿಗೆ ಅದು ಕೃತ್ರಿಮವೆನ್ನಿಸಬಹುದು ತೀರ ಗ್ರಾಮ್ಯವಾದರೆ ಬೇರೆ ಭಾಗದ ಓದುಗರಿಗೆ ವಿನಾ ಕಾರಣ ಕಷ್ಟ ಕೊಡುವದು. "ಮಾಡಿದಾಗ" ಎಂದು ಬರೆಯುವ ಬದಲು "ಮಾಡಿದ ಹಾಂಗ" ಎಂದು ಬ

ಯುವದು ಒಳ್ಳೆಯದು. ಹೆಚ್ಚು ಓದುಗರ ಕೈ ತಲುಪಿ ಹೆಚ್ಚು ಪ್ರತಿ ಖರ್ಚಾಗುವದು ಶ್ರೀಸಾಮಾನ್ಯನ ಉದ್ದಿಷ್ಟ. ಅವನು ತನ್ನ ಗ್ರಂಥಗಳ ಮೇಲೆಯೇ ಬದುಕ ಬೇಕು. ಅವನಿಗೆ ಸಾರ್ವಜನಿಕ ಸಂಘ ಸಂಸ್ಥೆಗಳಿಂದ ಬೇಗನೆ ಪುರಸ್ಕಾರ ದೊರಕಲಾರದು, ದೊರಕದಿರಲಿ.

೫. ಶ್ರೀಸಾಮಾನ್ಯನು ಕಾಲೇಜ ಯುವಕ ಯುವತಿಯರ ಪ್ರೇಮಕತೆಯನ್ನು ಸುತರಾಂ ಬರೆಯಬಾರದು. ಒಂದು ಇಂಥ ಕಥೆಯನ್ನು ಬರೆದರೂ ಅವನ ಅಧಃಪತನವಾಯಿತು. ಪ್ರೇಮ ಕತೆಗಳನ್ನು ಬರೆಯುವುದೇ ಆದರೆ ತನ್ನಂಥ ಶ್ರೀಸಾಮಾನ್ಯರ ಘಟಿಂಗತನದ ಕತೆಗಳನ್ನೂ ಬೇಕಾದಷ್ಟು ಬರೆಯಬಹುದು.

೬. ಶ್ರೀ ಸಾಮಾನ್ಯನು ಆಯಾ ಸ್ಥಾನಿಕ ಸಂದರ್ಭಗಳ ಮುಖಾಂತರ ಸಾಮಾಜಿಕ ಆರ್ಥಿಕ ಪರಿವರ್ತನೆಗಳನ್ನು ಸೂಚಿಸುವನು. ಉದಾ: "ಹೋದ ಬಾರಿ ಹುಣ್ಣಿವೆಗೆ ಹುಸೇನ ಸಾಬನು ಹದಿನೈದೇ ರೂಪಾಯಿ ಕಡ ಕೊಟ್ಟನು. ಇನ್ನೂ ಹತ್ತಿ ಮಾರಾಟವಾಗಿಲ್ಲ. ಧಾರಣೆ ಇಲ್ಲ ಎಂದನು, ಹದಿನೈದು ರೂಪಾಯಿಯಲ್ಲಿ ಬೆಲ್ಲ ಎಣ್ಣೆ ಖರೀದಿ ಆಯಿತು. ಭಾರತ ಹುಣ್ಣಿಮೆಯ ಎಲ್ಲವ್ವನ ಜಾತ್ರೆ ತಪ್ಪಿ ಹೋಯಿತು. ಈ ಬಾರಿ ಹತ್ತಿ ಮಾರಾಟವಾಗಿ ೨೦೦೦ ರೂಪಾಯಿ ಬಂದಿದೆ. ದುಡ್ಡು ಉಳಿಯುವದಲ್ಲ. ಈ ಬಾರಿ ಹುಣ್ಣಿವೆಗೆ ಎಲ್ಲವ್ವನಿಗೆ ಖಣಾ ತೊಡಿಸಿ ಹುಲಿಗೆವ್ವನಿಗೆ ಕಾಯಿ ಕರ್ಪೂರ ಕೋಳಿ ಮಾಡಿಸಿ ಬರಬೇಕು. ಇತ್ಯಾದಿ. ಇದರಲ್ಲಿ ಹತ್ತಿಯ ದಲಾಲಿ ವ್ಯಾಪಾರ ಆರ್ಥಿಕ ಸುಧಾರಣೆ, ಇವುಗಳ ಸೂಚನೆ, ಇದ್ದೂ, ಸ್ಥಾನಿಕ ಸಂಘ ಸಂಸ್ಥೆ ಪದ್ಧತಿಗಳು ವಾಸ್ತವದ ಒಪ್ಪವನ್ನು ಕೊಡುತ್ತವೆ.

೭. ಶ್ರೀಸಾಮಾನ್ಯನು ವೃತ್ತಪತ್ರ ವಿಮರ್ಶೆಯನ್ನು ಓದಬಾರದು. ಹೊಗಳಿಕೆ ಇದ್ದರೆ ಮಾತ್ರ ಓದಬೇಕು. ಹೊಗಳಿಕೆ ಇದೆಯೋ ಇಲ್ಲವೋ ಇನ್ನೊಬ್ಬರ ಕಡೆಯಿಂದ ತಿಳಿದುಕೊಳ್ಳಬೇಕು. ಮುಖ್ಯ ವಿಮರ್ಶೆ ಪ್ರತಿಗಳ ಮಾರಾಟ. ವಿಮರ್ಶಕರು ಲೇಖಕನಿಗೆ ಕೊಡಬೇಕಾದ ಉಪದೇಶಕ್ಕೆ ಕವಡಿಯ ಕಿಮ್ಮತ್ತೂ ಇರುವದಿಲ್ಲ.

೮. ಶ್ರೀಸಾಮಾನ್ಯನು ಸದ್ಯ ಸ್ಥಿತಿಯಲ್ಲಿ ತಾನೇ ಪ್ರಕಟಿಸಲು ಹೋಗಬಾರದು. ಪ್ರಕಾಶಕರು ಒಳ್ಳೆಯವರೆಂದರೆ ಅವರಿಗೆ ಕಾಗದದ ಖರ್ಚು ಕೊಡಬೇಕು. ಒಂದು ವರ್ಷದ ನಂತರ ಪ್ರತಿಗಳ ಲೆಕ್ಕದ ಮೇಲೆ ತನ್ನ ಹಣ ಮರಳಿ ಪಡೆಯಬೇಕು.

೯. ಸುದೈವದಿಂದ ಕನ್ನಡ ಸಾಹಿತ್ಯ ಪರಿಷತ್ತಿಗೆ ಜಿ. ನಾರಾಯಣರಂಥ ಸಾಹಿತ್ಯ ಪ್ರೇಮಿಗಳೂ ಸಾಕ್ಷರತಾಪ್ರೇಮಿಗಳೂ ಅಧ್ಯಕ್ಷರಾಗಿ ದೊರಕಿದ್ದಾರೆ. ಶ್ರಮವಹಿಸಿ ಸಾಹಿತ್ಯಕರ ಕ್ಯಾಂಪುಗಳನ್ನು ನಡೆಸಿದ್ದಾರೆ. ವಿಮರ್ಶಕರನ್ನು ತರಬೇತುಗೊಳಿಸಲು ಯತ್ನಿಸಿದ್ದಾರೆ. ಗ್ರಂಥಕರ್ತರನ್ನು ತರಬೇತುಗೊಳಿಸಲು ಪರಿಷತ್ತು "ಸೃಜನ ತರಬೇತಿ"ನ (Creative Literature) ವಿಶೇಷತಃ ಕತೆಗಾರರ ತರಬೇತಿನ ವರ್ಗ ಶುರು ಮಾಡಿ ಡಿಪ್ಲೋಮಾ, ಬಹುಮಾನ, ಪ್ರಶಸ್ತಿಗಳನ್ನು ಇಡಬೇಕು. ಇದಕ್ಕಾಗಿ ಕ್ಯಾಂಪ ಅಗತ್ಯವಿಲ್ಲ. ತಿಂಗಳಿಗೆ ಐದೋ ಹತ್ತೋ ರೂಪಾಯಿ ಫೀ ಇಟ್ಟು ಪತ್ರ ವ್ಯವಹಾರದ ಟ್ರೇನಿಂಗ ಕೊಡಬೇಕು. ವಿದ್ಯಾರ್ಥಿಗಳಿಗೆ ನಾನು ಮೇಲೆ ಬರೆದ ತುಣುಕುಗಳಂತಹ ಕತೆಗಳ ಪ್ರಥಮ ಪ್ಯಾರಾ ಕಳಿಸಿಕೊಡಬೇಕು. ಅವರು ಆ ಕತೆಯನ್ನು ಪೂರ್ಣಗೊಳಿಸಿ ಕಳಿಸಬೇಕು. ಅಗಲ ಮಾರ್ಜಿನ ಬಿಟ್ಟು ಕಾಗದದ ಮೇಲೆ ಬರೆಯಬೇಕು. ಪರೀಕ್ಷಕರು ಮಾರ್ಜಿನ ಮೇಲೆ ದೋಷಗಳನ್ನು ತೋರಿಸಬೇಕು. ಒಟ್ಟಿನ ವಿಮರ್ಶೆಯ ಕಾಗದ ಬರೆದು ಅಭಿಪ್ರಾಯ ತಿಳಿಸಬೇಕು. ಅಗತ್ಯ ಕಂಡಲ್ಲಿ ತಿದ್ದಬೇಕು. ಒಂದು ಪ್ರಯೋಗಕ್ಕೆ ಒಂದು ವಾರ ಅವಕಾಶ ಕೊಡಬೇಕು. ತೀರ ಕಚಡಾ ಇದ್ದ ಕತೆಗಳನ್ನು ತಿರುಗಿಸಬೇಕು. ಉತ್ತಮ ಕತೆಗಳನ್ನು ಪ್ರಕಟಿಸಬೇಕು. ಇಂಥ ಕತೆಯ ಪ್ರಥಮ ತುಂಡುಗಳನ್ನು ನಮ್ಮಿಂದ ಬರೆಸಿಕೊಳ್ಳಬಾರದು. ಕಥಾನಕ ರೂಪದ ಪರಿಚಯವುಳ್ಳವರಿಂದಲೇ ಬರೆಸಬೇಕು. ಇಂಥವರನ್ನೇ ಪರೀಕ್ಷಕರನ್ನಾಗಿ ನೇಮಿಸಬೇಕು. ಅಂದರೆ ಶ್ರೀ ಸಾಮಾನ್ಯ ಲೇಖಕರು ಅರಳಿ ಬರುವರು. ●

## ಶ್ರೀಸಾಮಾನ್ಯನಿಗೆ ಬೇಕಾದ ಸಾಹಿತ್ಯ ಎಂಥದು?

(೪೩ ನೇ ಪುಟದಿಂದ)

ಬತ್ತು ಜನ ಇಂಥ ಕಲಾವಿದ ಹೇಳುವ ಭವಿಷ್ಯ ಅರ್ಥ ಮಾಡಿಕೊಳ್ಳುವುದಿಲ್ಲ. ಈ ಉದಾಹರಣೆ ಬೇಕೆ? ೧೯೨೦ ರಷ್ಟು ಹಿಂದೆ ಜರ್ಮನಿಯ ತತ್ವ ಶಾಸ್ತ್ರಜ್ಞ ಕಾರ್ಲ್ ಯಾಸ್ಪರ್ಸ್ ತನ್ನದೊಂದು ಪುಸ್ತಕದಲ್ಲಿ ಜರ್ಮನಿಯಲ್ಲಿ ಮುಂದೆ ಸಂಭವಿಸಬಹುದಾದ ವಿನಾಶದ ಬಗೆಗೆ ಎಚ್ಚರಿಸಿದ. ಆದರೆ ಅವನಿಗೆ ಯಾರೂ ಕಿವಿಗೊಡಲಿಲ್ಲ. ಕಾರ್ಲ್ ಯಾಸ್ಪರ್ಸನನ್ನು ಪ್ರತಿಗಾಮಿ ಎನ್ನೋಣವೆ? ಅಥವಾ ಪ್ರಗತಿಶೀಲ ಎನ್ನೋಣವೆ? ಉಳಿದವರಂತೆ ಇಲ್ಲದ ಈತನಂಥವರು ಬರೆಯಬಾರದೆ?

ಪ್ರಿಯ ಸಂಪಾದಕರೇ, ಸಹಜ ತಿಳಿದ ಮಟ್ಟಿಗೆ ನಿಜವಾದ ಸಾಹಿತ್ಯ ಬಯಸುವವರು, ಬರೆಯುವವರು ಬೆರಳೆಣಿಕೆಯಷ್ಟು ಜನ. ಉಪ ಸಾಹಿತ್ಯ ಬಯಸುವವರರು, ಬರೆಯುವವರು ವಿಪರೀತ ಜನ, ಸಾಹಿತ್ಯ ಕಲೆ; ಉಪ ಸಾಹಿತ್ಯ ಮನೋರಂಜನೆ. ಎರಿಕ್ ಬೆಂಟ್ಲಿ ಹೇಳುವಂತೆ Art explains entertainment exploits ನಮ್ಮ ಕಲ್ಪನೆಯ ಶ್ರೀಸಾಮಾನ್ಯನಿಗೆ ಬೇಕಾದ್ದು sub literature ಅಥವಾ entertainment. ಅದನ್ನು ಅವನಿಗೆ ಧಾರಾಳವಾಗಿ, ಸಮೃದ್ಧವಾಗಿ ಒದಗಿಸುತ್ತಿದ್ದೇವೆ ಅಂದರೆ ಅವನಿಗೆ ಓದು ಬರಹ ಕಲಿಸಿಯೂ ಅವನನ್ನು ಅಂಧಕಾರದಲ್ಲೇ ಇಡುತ್ತಿದ್ದೇವೆ. ಸಾಲದೆ ಸ್ವಾಮಿ? ಏನನ್ನೂ ಸಾಧಿಸದೆ ಜನಪ್ರಿಯರಾಗಬೇಕೆಂಬುದು ಪ್ರಖ್ಯಾತರಾಗಬೇಕೆಂಬುದು ನಮ್ಮ ಜನಕ್ಕೆ ಹತ್ತಿರುವ ವಾಸಿಯಾಗದ ವ್ಯಾಧಿ. ಶ್ರೀಸಾಮಾನ್ಯನನ್ನು ಸೃಷ್ಟಿಸಿ ಅವನ ಬಗೆಗೆ ಕನಿಕರ ತೋರುತ್ತಿರುವವರು ಇಂಥ ಪ್ರಖ್ಯಾತಿ ಪ್ರಿಯರೇ ಇರಬಹುದು ಅಲ್ಲವೆ? ●

# ಸಾಹಿತ್ಯಕ್ಕೆ ಶ್ರೀಸಾಮಾನ್ಯ ಬರುವುದು ಬೇಡವೆ?

ಎಚ್. ಎಂ ಮರುಳಸಿದ್ಧಯ್ಯ

## ಕೆಲವು ಪ್ರಶ್ನೆಗಳು

ಸಾಮಾನ್ಯನಿಗೂ ಸಾಹಿತ್ಯಕ್ಕೂ ಸಂಬಂಧವನ್ನು ಕಲ್ಪಿಸುವಾಗ, ಅಥವಾ ಸಾಮಾನ್ಯನು ಸಾಹಿತ್ಯಕ್ಕೆ ಪ್ರವೇಶಿಸಿದ ಬಗೆ ಹೇಗೆ ಎಂದು ಆಲೋಚಿಸುವಾಗ ಹಲವಾರು ಸೈದ್ಧಾಂತಿಕ ಹಾಗೂ ವ್ಯಾವಹಾರಿಕ (ವಾಸ್ತವಿಕ) ಸಮಸ್ಯೆಗಳು ನಮಗೆ ಇದಿರಾಗುತ್ತವೆ. ಮುಖ್ಯವಾಗಿ ಮೂರು ತೆರನ ಸಮಸ್ಯಾ ವಲಯಗಳನ್ನು ನಾವು ಗುರ್ತಿಸಬಹುದು:

೧. ಶ್ರೀಸಾಮಾನ್ಯನು ಮತ್ತು ಅವನ ಜೀವನ ಪ್ರಸಂಗಗಳು ಸಾಹಿತ್ಯದ ವಸ್ತುವಾಗಲು ಅರ್ಹವೆ?

೨. ಶ್ರೀಸಾಮಾನ್ಯನು ಸಾಹಿತ್ಯ ನಿರ್ಮಾಣಕ್ಕೆ ತೊಡಗಲು ಶಕ್ತನೆ? ಅಥವಾ ಅರ್ಹನೆ?

೩. ಸಾಹಿತ್ಯವು ಶ್ರೀಸಾಮಾನ್ಯನಿಗೆ ಬೇಕೆ? ಬೇಕಾದರೆ ಎಂತಹ ಸಾಹಿತ್ಯ ಬೇಕು, ಹಾಗೂ ಯಾವ ರೀತಿಯಲ್ಲಿ ಅವನಿಗೆ ಅದನ್ನು ನೀಡಬೇಕು?

ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಅದರಲ್ಲೂ ಭಾರತವು ಸರ್ವತಂತ್ರ ಪ್ರಜಾಸತ್ತಾತ್ಮಕ ಗಣರಾಜ್ಯವಾದ ಮೇಲಂತೂ ಶ್ರೀಸಾಮಾನ್ಯನ ಪ್ರಸ್ತಾಪ ಅನೇಕ ಕಡೆ, ವಿವಿಧ ಹಂತಗಳಲ್ಲಿ, ನಾನಾ ಕಾರಣಗಳಿಗಾಗಿ ನಡೆಯುವುದು ಹೆಚ್ಚುತ್ತಿದೆ. ಆದುದರಿಂದ ಸಾಹಿತ್ಯ ಪ್ರಪಂಚದಲ್ಲಿ ಅವನಿಗೆ ಒಂದು ಸ್ಥಾನವಿರಬೇಕೆಂದು ಗಣಿಸಲೇಬೇಕೆಂದು ಕಾಣುತ್ತದೆ.

## ಶ್ರೀಸಾಮಾನ್ಯ-ಯಾರು?

ಆದರೆ "ಶ್ರೀಸಾಮಾನ್ಯ" ಅಂದರೆ ಯಾರು? ಅವನ ಸ್ಥಳವಾವುದು? ಅವನ ವೈಲಕ್ಷಣ್ಯಗಳೇನು? ಎಂದು ವಿಚಾರಿಸ ಹೋದಾಗ ನಮಗೆ ಚೋದ್ಯವೆಂಬಂತೆ ದಿಗ್ಭ್ರಮೆಯಾಗುತ್ತದೆ. 'ಸಾಮಾನ್ಯ ಜನ' ಅಥವಾ 'ಜನ ಸಾಮಾನ್ಯ' ಎಂದು ಒಂದು ರೀತಿಯ ನಿರ್ಲಕ್ಷ್ಯವೊ ಎಂಬ ತೆರದಲ್ಲಿ ಜನರನ್ನು ಗುಂಪಾಗಿಸಿ ಗುರುತಿಸುವುದುಂಟು. ಸಾಮಾನ್ಯನನ್ನು ಖಚಿತವಾದ ಚರ್ಯೆಗಳಿಂದ ತೋರಿಸಲು ತೊಡಗಿಸಿದಾಗ ನಮಗೆ ಸಮಸ್ಯೆಯ ಸಂಕೀರ್ಣತೆಯ ಅರಿವಾಗುತ್ತದೆ. ಯಾಕೆಂದರೆ, ನಮ್ಮ ಊಹಾ ಶಕ್ತಿಯನ್ನು ಮೀರಿದ ಸಿಕ್ಕಿ ಹಾಕಿಕೊಳ್ಳದಂತೆ ನುಣುಚಿಕೊಳ್ಳುವ ವರ್ಣನೆ, ಯಾವುದೋ ಮಸುಕುಮಸುಕಾಗಿರುವ ಶೋಷಣೆಯದುರುದ್ದೇಶದಿಂದ ವಿವರಿಸಿದ ಲಕ್ಷಣಗಳು ಶ್ರೀಸಾಮಾನ್ಯನ ಆಸ್ತಿಯಾಗಿವೆ. ಶ್ರೀಸಾಮಾನ್ಯನು ಯಾರಿರಬಹುದು ಎಂದು ಚಿಂತಿಸುವವನೇ ತಾನೇ ಶ್ರೀಸಾಮಾನ್ಯನಾಗಿರಬಹುದೆ? ಎಂಬಂತಹ, ಛೇ ಛೇ ನಾನಾಗಿರಲಿಕ್ಕಿಲ್ಲ ಎಂಬಂತಹ ಸಂಶಯಗಳಿಗೆ ಒಳಗಾಗುವ ಸಾಧ್ಯತೆಯಿದೆ. ಯಾಕೆಂದರೆ ಶ್ರೀಸಾಮಾನ್ಯನು ಕೈಗೆ ಸಿಗದ ಸುಲಭವಾಗಿ ನುಣುಚಿಕೊಳ್ಳುವ ಇದ್ದಕ್ಕಿದ್ದ ಹಾಗೆ ಎಲ್ಲಿಂದಲೋ ಧುತ್ತೆಂದು ಇಳಿದೋ ಅಥವಾ ನುಗ್ಗಿಯೋ ಇದಿರು ನಿಲ್ಲುವ ತತ್ಕ್ಷಣವೇ ಮಾಯವಾಗುವ , ದೂರದಲ್ಲೆಲ್ಲೋ ಮರೀಚಿಕೆಯಂತೆ ಮಾಯಾಲೋಕದಲ್ಲಿ ಬೆಳುದಿಂಗಳ ನಡುರಾತ್ರಿಯಲ್ಲಿ ಧವಳವಸ್ತ್ರ ಧಾರಣೆಯಾಗಿ ಸುಳಿದಾಡುವ ವಿರಹಿಣಿಯಂತೆ. ಇವಳಿಗೆ ಯಜಮಾನ (ಪ್ರಿಯಕರ) ಇರುವನು ಎಂಬ ಭ್ರಮೆ ಬಂದು ಸೌಂದರ್ಯವನ್ನು ಸೂರೆಗೊಂಡು ಹೋಗುವಂಥ ತಾತ್ಕಾಲಿಕ ನಲ್ಲನನುಭವದಿಂದ ಭ್ರಮನಿರಸನ ಇಂತಹ ಸ್ಥಿತಿ ಸಾಮಾನ್ಯ(ಳ)ನದು. ಇಂಥವನ ಸ್ಥಾನ ಸಾಹಿತ್ಯದಲ್ಲಿ ಇರುವುದಾದರೆ ಎಂತಹದು?

ಬೆಂಗಳೂರು ವಿಶ್ವವಿದ್ಯಾಲಯವು 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ'ಯನ್ನು ೧೯೭೪ರಲ್ಲಿ ಹತ್ತು ಸಂಪುಟಗಳಲ್ಲಿ ನೀಡಿತು. ಆ ಹತ್ತು ಸಂಪುಟಗಳಲ್ಲಿ ಶಾಸನ ಸಾಹಿತ್ಯ, ವಚನ ಸಾಹಿತ್ಯ, ಜನಪದ ಸಾಹಿತ್ಯ ಹಾಗೂ ಶಾಸ್ತ್ರ ಸಾಹಿತ್ಯ ಸೇರಿರುವುದನ್ನು ಗಮನಿಸಿದರೆ ಸಾಹಿತ್ಯಕ್ಕೂ ವಾಙ್ಮಯಕ್ಕೂ ವ್ಯತ್ಯಾಸವಿಲ್ಲವೆ? ಎಂಬ ಸಂಶಯ ಮೂಡುತ್ತದೆ. ಯಾಕೆಂದರೆ ಈ ನಾಲ್ಕು ಅಭಿವ್ಯಕ್ತಿ ಪ್ರಕಾರಗಳು ಶುದ್ಧ ಸಾಹಿತ್ಯ Literature ಅಲ್ಲವೆಂಬ ಒಂದು ವಾದವೂ ಇದೆ. ಈ ನಾಲ್ಕನ್ನು ಸಾಹಿತ್ಯ ಪ್ರಕಾರಗಳಲ್ಲಿ ಸೇರಿಸಿರುವುದು ನಮಗೆ ಒಂದು ದೃಷ್ಟಿಯಲ್ಲಿ ಅನುಕೂಲವೇ ಆಗಿದೆ. ಈ ಮಾತು ಹಾಗಿರಲಿ.

ನಮಗೆ ಸದ್ಯಕ್ಕೆ ಬೇಕಾದುದು ಆ ಸಂಪುಟಗಳ ಸಂಪಾದಕರು ಸಾಮಾನ್ಯನ ಬಗೆಗೆ ತಳೆದ ಅಭಿಪ್ರಾಯದ ಅವಲೋಕನ. "...ಇಲ್ಲಿ ಸಾಮಾನ್ಯರು ಎಂದರೆ, ವಿದ್ವಾಂಸರಲ್ಲದ ಆದರೆ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯ ಬಗೆಗೆ ತಕ್ಕಮಟ್ಟಿಗೆ ಆಸಕ್ತಿ ಅಭಿರುಚಿಯನ್ನುಳ್ಳ ಓದುಗರು ಎಂದು ಅರ್ಥ. ಇಂಥವರಿಗೆ ವಿಸ್ತಾರವಾದ ಕನ್ನಡ ಸಾಹಿತ್ಯವನ್ನು ಪರಿಚಯ ಮಾಡಿಕೊಡಬೇಕಾದರೆ ಬರವಣಿಗೆ ಮುಖ್ಯವಾಗಿ ತಿಳಿಯದಾಗಿರಬೇಕು. ವಿದ್ವತ್‌ಪ್ರಿಯವಾದ ಚರ್ಚೆಗಳನ್ನು ಬದಿಗಿರಿಸಿ, ಮುಖ್ಯ ವಿಷಯಗಳ ಸಾರಾಂಶವನ್ನು ಕೊಡಬೇಕು; ನಿರೂಪಣೆ ವರ್ಣನಾತ್ಮಕವೂ ಕಥಾನಕವೂ ಆಗಿರಬೇಕು; ಪ್ರಾತಿನಿಧಿಕವಾದ ಪ್ರಮುಖ ಕವಿಕಗಳನ್ನು ಕೇಂದ್ರದಲ್ಲಿರಿಸಿಕೊಂಡು ಅವರಿಗೆ ಹಿನ್ನೆಲೆಯಾದ ಯುಗಧರ್ಮದಲ್ಲಿ ಅಂದಂದಿನ ಸಾಹಿತ್ಯಕ್ಕೆ ಒದಗಿದ ಪ್ರೇರಣೆಗಳನ್ನು ಅಂದಂದಿನ ಸಾಹಿತ್ಯಕ ಸಾಧನೆಗಳನ್ನು ಪರಿಚಯ ಮಾಡಿಕೊಡುವಂತಿರಬೇಕು. ಬರವಣಿಗೆ ಪರಿಚಯಾತ್ಮಕವಾಗಿರಬೇಕು ಎಂದರೆ, ಅದು ತಕ್ಕಮಟ್ಟಿನ ವಿಮರ್ಶನ ಪ್ರಯತ್ನಗಳಿಂದಾಗಲಿ, ಮೌಲ್ಯಮಾಪನ ದೃಷ್ಟಿಯಿಂದಾಗಲಿ ಹೊರತಾಗಿರಬೇಕೆಂದು ಅರ್ಥವಲ್ಲ; ಬರವಣಿಗೆ ಸರಳವಾಗಿರಬೇಕು ಎಂದರೆ ವಿಷಯವನ್ನು ತೀರಾ ಸರಳಗೊಳಿಸಬೇಕೆಂದಲ್ಲ, ಹೇಳುವ ಭಾಷೆ ಸರಳವಾಗಿರಬೇಕು. ಒಟ್ಟಿನಲ್ಲಿ ಓದುಗರಿಗೆ ಸಮಗ್ರ ಕನ್ನಡ ಸಾಹಿತ್ಯದ ತಕ್ಕ ಮಟ್ಟಿನ ಪರಿಚಯವಾಗುವುದರ ಜೊತೆಗೆ ಕನ್ನಡ ಕವಿ-ಕೃತಿಗಳನ್ನು ಮೂಲದಲ್ಲಿಯೇ ಓದಬೇಕೆನ್ನುವ ಒಂದು ರುಚಿಯನ್ನು ಹುಟ್ಟಿಸುವಂತಿರಬೇಕು...."

ಸಂಪಾದಕದ್ವಯರ (ಡಾ. ಜಿ. ಎಸ್. ಶಿವರುದ್ರಪ್ಪ ಮತ್ತು ಡಾ. ಎಂ. ಚಿದಾನಂದಮೂರ್ತಿ) ಈ ಮಾತುಗಳು ಬಹು ತೂಕವಾಗಿ ಆಡಿದ , ಎಚ್ಚರಿಕೆಯಿಂದ ನುಡಿದ, ಸಿಕ್ಕರೂ ಸಿಕ್ಕಿಕೊಳ್ಳದ ಹಾಗೆ ವಿವರಿಸಿದ ಮಾತುಗಳು. ಆದರೆ ಒಂದು ಸಂಶಯ: ಸಂಪಾದಕರ ಕನ್ನಡ ಕವಿ-ಕೃತಿಗಳನ್ನು ಮೂಲದಲ್ಲಿಯೇ ಓದಬೇಕೆನ್ನುವ ರುಚಿಯನ್ನು ಹುಟ್ಟಿಸುವ ಸದುದ್ದೇಶವು ನೆರವೇರಿ ಓದುಗನು ಮೂಲ ಕೃತಿಗಳನ್ನು ಓದ ತೊಡಗಿದ ಎಂದಿಟ್ಟುಕೊಳ್ಳೋಣ; ಸಾಮಾನ್ಯನಿಗಾಗಿ ಪ್ರಕಟಿಸಿದ ಸಾಹಿತ್ಯ ಚರಿತ್ರೆಯನ್ನು ಓದುವಾಗ 'ಸಾಮಾನ್ಯನಾಗಿದ್ದವನು' ರುಚಿಯನ್ನು ಬೆಳೆಸಿಕೊಂಡು ಮೂಲ ಕೃತಿಯನ್ನು ಓದತೊಡಗಿದಾಗ ತನ್ನ ಸಾಮಾನ್ಯತ್ವವನ್ನು ಅವನು ಕಳಚಿಕೊಂಡು 'ಪ್ರತಿಷ್ಠಿತ್ವ' ಅಥವಾ 'ಶಿಷ್ಟತ್ವ'ವನ್ನು ಪಡೆಯುತ್ತಾನೆ ಎಂದು ನಾವು ಅರ್ಥೈಸಬೇಕು? ಈ ಇಂತಹ ಅನೇಕ ಪ್ರಶ್ನೆಗಳು ಸಾಮಾನ್ಯನನ್ನು ವರ್ಣಿಸಲು ಹೊರಟ ಆ ವರ್ಣನೆಯನ್ನು ಎಚ್ಚರಿಕೆಯಿಂದ ಓದತೊಡಗಿದ ಯಾರಿಗೂ ಇದಿರಾಗುತ್ತವೆ.

ಆದರೆ ಈ ಮೇಲಿನ ವಿವರಣೆಯಿಂದ ಒಂದು ಅಂಶ ಮನದಟ್ಟಾಗುತ್ತದೆ: 'ಸಾಹಿತ್ಯ ಚರಿತೆಯನ್ನು ಓದುವ ಸಾಮಾನ್ಯನು ಸಾಹಿತ್ಯದಲ್ಲಿ ವಿದ್ವಾಂಸನಾಗಿರುವುದಿಲ್ಲ' ಎಂಬುದು ಸಿದ್ಧವಾಗಬಹುದೇ ಹೊರತು ಇತರೆ ವಿಷಯಗಳಲ್ಲಿ ಅವನು ವಿದ್ವಾಂಸನಲ್ಲ ಅಥವಾ ಇತರೆ ವಿಷಯಗಳಲ್ಲೂ ಅವನು ಸಾಮಾನ್ಯ ಎಂದು ಅನುಮಿತವಾಗುವುದಿಲ್ಲ. ಅಂದರೆ ಸಾಮಾನ್ಯ ಎಂಬ ಪರಿಕಲ್ಪನೆಯು (Concept) ಒಂದು ಸಾಪೇಕ್ಷ ಶಬ್ದವೇ ಹೊರತು ಖಚಿತವಾದ ಕರಾರುವಾಕ್ಕಾದ, ನಿಖರವೂ ನಿಷ್ಕೃಷ್ಟವೂ ಆದ ಅರ್ಥ ಸಂಪನ್ನ ಶಬ್ದವಲ್ಲ.

ಆದುದರಿಂದ "ಶ್ರೀಸಾಮಾನ್ಯ" ಎಂಬ ಶಬ್ದವು ವಿರೋಧಾಭಾಸವಾದದ್ದೇ ಆಗುತ್ತದೆ. ಯಾಕೆಂದರೆ 'ಶ್ರೀ' ಶಬ್ದಕ್ಕೂ 'ಸಾಮಾನ್ಯ' ಶಬ್ದಕ್ಕೂ ಅರ್ಥ ವ್ಯತ್ಯಾಸವಿದೆ; ಒಂದು ಉತ್ತರವಾದರೆ, ಇನ್ನೊಂದು ದಕ್ಷಿಣ. 'ಶ್ರೀ' 'ಅಸಾಮಾನ್ಯ' ಸ್ಥಿತಿಯನ್ನು ಸೂಚಿಸಿದರೆ 'ಸಾಮಾನ್ಯ' 'ಅಶ್ರೀ' ಸ್ಥಿತಿಯನ್ನು ಧ್ವನಿಸುತ್ತದೆ. ಈ ಎರಡನ್ನೂ ಕೂಡಿಸಿದ ವ್ಯಕ್ತಿಗೆ (ಬಹುಶಃ ಕುವೆಂಪು) ಬಡವನಿಗೆ ಸಿರಿವಂತನ ಕುವರಿಯನ್ನೊ ಅಥವಾ ಸಿರಿವಂತನಿಗೆ ಬಡವರ ಮಗಳನ್ನೋ ಜೀವಸಂಗಾತಿಗಳನ್ನಾಗಿಸುವ ಆಶೆಯೊ, ಅವಳ ತೊಡಿಗೆಯನ್ನು ಇವಳಿಗಿಟ್ಟು, ಇವಳ ತೊಡಿಗೆಯನ್ನು ಅವಳಿಗಿಟ್ಟು ನೋಡಿ ಹಾಡುವಂಥ 'ಶ್ರೀ' ಬಯಕೆಯೊ ಇದ್ದೀತು; ಅಥವಾ 'ಸಾಮಾನ್ಯನು' ನಿಜವಾಗಿ ನೋಡಿದರೆ ಸಾಮಾನ್ಯನಲ್ಲ 'ಅಸಾಮಾನ್ಯ' ಎಂಬುದನ್ನು ಅರಿತೊ (ಅಥವಾ ಹಾಗಾಗಲಿ ಎಂಬ ಹಂಬಲದಿಂದಲೊ) ಈ ಶ್ರೀಸಾಮಾನ್ಯನನ್ನು ಸೃಷ್ಟಿಸಿರಬೇಕು. ಈ ಮಾತು ಹಾಗಿರಲಿ.

## ಸಾಪೇಕ್ಷಕ್ಕೆ ಸಿಕ್ಕ ಸಾಮಾನ್ಯ

ಈ ಶಬ್ದವು ಸಾಪೇಕ್ಷ ಎಂಬುದಂತೂ ನಿಶ್ಚಿತ. ಸಾಮಾನ್ಯನನ್ನು ಅಸಾಮಾನ್ಯನಿಂದ ಬೇರ್ಪಡಿಸುವಾಗ ಈ ದೃಷ್ಟಿ ನಮಗಿರಬೇಕಾಗುತ್ತದೆ. ಜನರನ್ನು ಈ

ದೃಷ್ಟಿಯಿಂದ ವಿಂಗಡಿಸುವಾಗ ನಮಗೆ ಎರಡು ವರ್ಗಗಳು ಕಾಣುತ್ತವೆ. ಯಾವುದಾದರೂ ಒಂದು ಮಾನದಿಂದ ವಿಂಗಡಣೆ ಮಾಡುವುದು ಇಲ್ಲಿ ಅಗತ್ಯವಾಗುತ್ತದೆ. ಜನರನ್ನು ಎರಡು ಪಂಗಡಗಳನ್ನಾಗಿ ವಿಂಗಡಿಸಿದಾಗ ಒಂದು ವರ್ಗ ಇನ್ನೊಂದರಿಂದ ಭಿನ್ನವಾದದ್ದು ಎಂದು ಅರ್ಥವಾಗಲೇಬೇಕೇ ಹೊರತು, ಮೊದಲನೆಯದು ಎರಡನೆಯದರ ವಿರೋಧಿ ಎಂದು ನಿರ್ಣಯವಾಗುತ್ತದೆಂದು ಹೇಳಲಾಗದು. ಕೆಲವು ಉದಾಹರಣೆಗಳನ್ನು ತೆಗೆದುಕೊಳ್ಳಬಹುದು. ಲಿಂಗ, ವಯಸ್ಸು, ವಾಸಿಸುವ ಪ್ರದೇಶ, ವೈಯಕ್ತಿಕ ಶಕ್ತಿ, ಆರ್ಥಿಕ ಸ್ಥಿತಿ ಸಾಮಾಜಿಕ ಸ್ಥಾನ, ಇತ್ಯಾದಿ ಅಂಶಗಳಿಂದ ಜನವಿಂಗಡಣೆ ಮಾಡಬಹುದು. ಹೀಗಾಗಿ ಆಳುವವ–ಪ್ರಜೆ, ಯಜಮಾನ–ಆಳು, ಶ್ರೀಮಂತ–ಬಡವ, ಅಧಿಕಾರಿ–ಅರ್ಥಿ, ಗಂಡು–ಹೆಣ್ಣು, ಹಿರಿಯ–ಕಿರಿಯ, ಅಕ್ಷರಸ್ಥ–ಅನಕ್ಷರಸ್ಥ, ವಿದ್ವಾಂಸ–ಅವಿದ್ವಾಂಸ (ಪಂಡಿತ–ಪಾಮರ) ನಗರದವ–ಹಳ್ಳಿಯವ, ಬುದ್ಧಿವಂತ–ದಡ್ಡ, ಉತ್ತಮ ಕುಲಜ–ಹೀನ ಕುಲದವ, ಬಿಳಿಯ–ಕರಿಯ, ಸ್ಪೃಶ್ಯ–ಅಸ್ಪೃಶ್ಯ, ಬಲಾಢ್ಯ–ಶಕ್ತಿ ಹೀನ–ಹೀಗೆ ದ್ವಿವರ್ಗಗಳಲ್ಲಿ ಜನರನ್ನು ವಿಂಗಡಿಸಲು ಸಾಧ್ಯ. ಮೊದಲ ವರ್ಗಕ್ಕೆ ಸೇರಿದ ಆಳುವವ, ಯಜಮಾನ, ಶ್ರೀಮಂತ, ಅಧಿಕಾರಿ, ಗಂಡು, ಹಿರಿಯ, ಅಕ್ಷರಸ್ಥ, ವಿದ್ವಾಂಸ, (ಪಂಡಿತ), ನಗರದವ, ಬುದ್ಧಿವಂತ, ಉತ್ತಮ ಕುಲಜ, ಬಿಳಿಯ, ಸ್ಪೃಶ್ಯ, ಬಲಾಢ್ಯ ಇವರೆಲ್ಲಾ ಮೇಲು ವರ್ಗದ, ಪ್ರತಿಷ್ಠಿತ, ಶಿಷ್ಟ ಗುಂಪಿನ ಸದಸ್ಯರಾದರೆ ಪ್ರಜೆ, ಆಳು, ಬಡವ, ಅರ್ಥಿ, ಹೆಣ್ಣು, ಕಿರಿಯ ಅನಕ್ಷರಸ್ಥ, ಅವಿದ್ವಾಂಸ (ಪಾಮರ) ಹಳ್ಳಿಯವ, ದಡ್ಡ, ಹೀನ ಕುಲದವ, ಕರಿಯ ಅಸ್ಪೃಶ್ಯ ಶಕ್ತಿ ಹೀನ–ಇವರೆಲ್ಲಾ ಅಪ್ರತಿಷ್ಠಿತ, ಕನಿಷ್ಠ, ಸಾಮಾನ್ಯ ವರ್ಗದವರಾಗುತ್ತಾರೆ. ಹೀಗೆ ವರ್ಗೀಕರಿಸುವುದು ಸರಿಯಿರಬಹುದು, ಯಾವುದೋ ಒಂದು ಉದ್ದೇಶದ ದೃಷ್ಟಿಯಿಂದ ಸಮಂಜಸವಾದ ವಿಂಗಡಣೆಯಾಗಬಹುದು.

ಆದರೆ ವರ್ಗೀಕರಣದ ಪ್ರಕ್ರಿಯೆಯಲ್ಲಿ (Process of Division) ಒಗ್ಗೂಡುವಿಕೆಯ. ಪ್ರಕ್ರಿಯೆಯೂ (Process of Combination) ಸೇರುತ್ತದೆ ಎಂಬುದನ್ನು ನಾವು ಗಮನಿಸಬೇಕು. ಅಂದರೆ ಒಂದು ದೃಷ್ಟಿಯಿಂದ ವಿಂಗಡಿಸಿದರೆ ಇನ್ನೊಂದು ದೃಷ್ಟಿಯಿಂದ ಒಟ್ಟುಗೂಡಿಸುವ ಕ್ರಿಯೆಯು ನಡೆಯುತ್ತದೆ. ಸ್ಥಾನ ವ್ಯತ್ಯಯ ಅಥವಾ ಕ್ರಮ ವ್ಯತ್ಯಯದಲ್ಲಿ ವಿಂಗಡಣೆ ಹಾಗೂ ಒಗ್ಗೂಡುವಿಕೆಯ (ವಿರುದ್ಧವೆಂದು ತೋರುವ) ದ್ವಿ ಪ್ರಕ್ರಿಯೆಗಳು ಸಂಚಲನ ಸ್ಥಿತಿಯಲ್ಲಿರುವುದರಿಂದ ಅನೇಕ ಪ್ರಮಾದಗಳಾಗುತ್ತವೆ.

ಉದಾಹರಣೆಗೆ, ಆಳುವವನ ದೃಷ್ಟಿಯಲ್ಲಿ ಪ್ರಜೆಯು ಸಾಮಾನ್ಯನಾಗುತ್ತಾನೆ. ಪ್ರಜೆಗಳು ಸಾಮಾನ್ಯರಾದರೂ ಅವರಲ್ಲಿ ಶ್ರೀಮಂತನು ಪ್ರತಿಷ್ಠಿತನೂ ಬಡವನು ಸಾಮಾನ್ಯನೂ ಆಗುತ್ತಾನೆ. ಆದರೆ ಬಡವನಾಗಿದ್ದರೂ ವಿದ್ವಾಂಸನಾಗಿದ್ದರೆ ಅವನು ಅಸಾಮಾನ್ಯನಾಗಿ ಅವಿದ್ವಾಂಸನಾದ ಶ್ರೀಮಂತನನ್ನು ಸಾಮಾನ್ಯನಾಗುತ್ತಾನೆ. ತಾನು ರಾಜನ ಪತ್ನಿ (ರಾಣಿ) ಯಾಗಿದ್ದರೂ, ಹೀನ ಕುಲದ ಗಂಡಿನ ದೃಷ್ಟಿಯಲ್ಲಿ ಹೆಣ್ಣು ಸಾಮಾನ್ಯಳಾಗಿ ತೋರುತ್ತಾಳೆ. ಹೀಗಾಗಿ ಸಾಮಾನ್ಯನ ವೈಲಕ್ಷಣಗಳನ್ನು ಬಿಡಿಸಿ ನೋಡಿದಾಗ ಇಂತಹ ರೀತಿಯಲ್ಲಿ ವರ್ಗೀಕರಿಸಿದರೆ ನಮಗೆ ಸರಿಯಾದ ಉತ್ತರ ಸಿಗದೇ ಹೋಗುತ್ತದೆ. 'ಸಾಮಾನ್ಯನು ಎಂದರೆ ಇಂಥವನೇ' ಎಂದು 'ಇದಮಿತ್ಥಂ' ಹೇಳಲು ಅಸಾಧ್ಯವಾದುದರಿಂದ ಸಾಹಿತ್ಯದಲ್ಲಿ ಸಾಮಾನ್ಯನ ಸ್ಥಾನಮಾನವನ್ನು ವಿವೇಚಿಸುವುದು ಬಹುಕಠಿಣವಾಗುತ್ತದೆ. ಆದರೆ ಈ ಹಿಂದೆಯೇ ಸೂಚಿಸಿದಂತೆ ಸಾಪೇಕ್ಷ ಮಾರ್ಗದೃಷ್ಟಿ (Approach) ನಮಗೆ ನೆರವಾಗುತ್ತದೆ.

ಕಾಲ, ದೇಶಗಳ ಸಾಮಾಜಿಕ. ಸ್ತರವಿನ್ಯಾಸದ, ಮೌಲ್ಯ ಕಟ್ಟೋಣದ ದೃಷ್ಟಿಯನ್ನು ಮನದ ಮುಂದಿರಿಸಿಕೊಂಡು ಸಾಮಾನ್ಯನನ್ನು ಗುರುತಿಸುವ ಕಾರ್ಯವಾಗಬೇಕು. ಬದಲಾಗುತ್ತಿರುವ ತನ್ನ ವೈಯಕ್ತಿಕ ಹಾಗೂ ಸಾಮಾಜಿಕ –ಅತ್ಯಂತ ಮೌಲ್ಯವೆಂದು ಪರಿಗಣಿತವಾದ ಆವಶ್ಯಕತೆಗಳನ್ನು ನಿರಾತಂಕವಾಗಿ, ನಿರ್ಭೀತನಾಗಿ ಪೂರೈಸಿಕೊಂಡು ಸೊಗಸಿನ ಮಾನವ ಬಾಳನ್ನು ಬದುಕಲು ಸಾಧ್ಯವಿಲ್ಲದಂತಹ, ಅಧಿಕಾರ ವಿಹೀನರಾಗಿ ಧರ್ಮವೇಷದ ಶೋಷಣೆಗೆ ಒಳಗಾದ ಮುಗ್ಧ ಜನರೆಲ್ಲರೂ ಸಾಮಾನ್ಯರೆಂಬುದನ್ನು ಅಸ್ಪಷ್ಟವಾಗಿಯಾದರೂ ಒಪ್ಪಿಕೊಳ್ಳಬೇಕಾಗುತ್ತದೆ. ಸಾಮಾನ್ಯರಲ್ಲಿ ಗಂಡು ಹೆಣ್ಣುಗಳೂ ಇದ್ದಾರೆ. ಬಡವ ಬಲ್ಲಿದರೂ ಇದ್ದಾರೆ. ಆದರೂ ತನ್ನ ಸ್ವಂತಿಕೆಯನ್ನು ತೃಪ್ತಿಕರವಾಗಿ ಪ್ರಕಟಿಸಲು ಸಾಧ್ಯವಾಗದಂತಹವನು ಸಾಮಾನ್ಯನೇ ಆಗಿರುತ್ತಾನೆ. ಯಾರಾದರೂ ಸಾಮಾನ್ಯರಾಗಿದ್ದರೆ ಅದಕ್ಕೆ ಅವರೂ ಕಾರಣ, ಅವರು ಜೀವಿಸುವ ಸಂಕೀರ್ಣ, ಸಾಮಾಜಿಕ ವಾತಾವರಣವೂ ಕಾರಣ. ಜೊತೆಗೆ ಸಾಮಾನ್ಯರು ಕೇವಲ ಒಬ್ಬ ವ್ಯಕ್ತಿಯಲ್ಲ, ಸಾಮಾನ್ಯ ವರ್ಗದ ಸದಸ್ಯ ಎಂಬುದನ್ನು ನಾವು ನೆನಪಿಡಬೇಕು.

## ಸಾಹಿತ್ಯದಲ್ಲಿ ಸಾಮಾನ್ಯನ ಸ್ಥಾನ

ಕನ್ನಡ ಸಾಹಿತ್ಯವನ್ನು ಸ್ಥೂಲವಾಗಿ ಅವಲೋಕಿಸಿದರೆ ಕೆಲವು ಬರೆಹಗಳಲ್ಲಿ, ನಾಲ್ಕಾರು ಸಾಹಿತ್ಯ ಪ್ರಕಾರಗಳಲ್ಲಿ ಸಾಮಾನ್ಯರಿಗೆ ಸ್ಥಾನ ಸಿಕ್ಕಿರುವುದು ಕಾಣುತ್ತದೆ. ಆದರೆ ಸಾಮಾನ್ಯರ ಜೀವನ ಬರೆಹದ ವಸ್ತುವಾಗಲಾರದೆಂಬ ಭಾವನೆಯೇ ಬಹುತೇಕ ಹೆಚ್ಚಾಗಿ ಇದ್ದುದನ್ನು ಕಾಣಬಹುದು.

ಹದಿನಾಲ್ಕನೆಯ ಶತಮಾನದ ಮಧುರನು ತನ್ನ ಧರ್ಮನಾಥ ಪುರಾಣದಲ್ಲಿ ಈ ರೀತಿ ಹೇಳುತ್ತಾನೆ:

ಪಂಡಿತರುಂ ವಿವಿಧ ಕಳಾಮಂಡಿತರುಂ
ಕೇಳತಕ್ಕ ಕೃತಿಯಂ ಕ್ಷಿತಿಯೊಳ್
ಕಂಡರ್ ಕೇಳ್ವೊಡೆ ಗೊರವರ ದುಂಡುಚಿಯೆ,
ಬೀದಿವರೆಯೆ, ಬೀರದ ಕತೆಯೆ?

ಈ ಹೇಳಿಕೆಯಿಂದ ಸಾಮಾನ್ಯನಾದ ಬೀರನು ಪಂಡಿತರೂ, ವಿವಿಧ ಕಲೆಗಳಲ್ಲಿ ಪಾರಂಗತರಾದವರೂ ಕೇಳತಕ್ಕಂಥ ಕತೆಯ ವಸ್ತುವಾಗಲಾರನೆಂದೇ ಅರ್ಥವಾಗುತ್ತದೆ. ಅಂದರೆ ಬೀದಿ ಬೀದಿಗಳಲ್ಲಿ ಸಾಮಾನ್ಯರಿಗಾಗಿಯೇ ಪಾಮರರಾದವನು ಬಾರಿಸುವ ಗೊರವರ ದುಂಡುಚಿಯಂತೆ ಸಾಮಾನ್ಯನ ಕಥಾನಕವು ಪ್ರೌಢ ಸಾಹಿತ್ಯವಾಗಲಾರದು; ರಾಜ ಮಹಾರಾಜರು, ದೇವ ದೇವತೆಗಳು ಮೇಲ್‌ಮಟ್ಟದ ಕೃತಿಗಳಿಗೆ ವಸ್ತುವಾಗಬಲ್ಲರೇ ಹೊರತು ಅನ್ಯರಲ್ಲ.

ಆದರೆ ಪಂಪ ಮಹಾ ಕವಿ (೧೦ನೇ ಶತಮಾನ) ತನ್ನನ್ನು 'ನಾಡೊವಜ' ಎಂದು ಕರೆದುಕೊಂಡಿದ್ದಾನೆ.

ವ್ಯಾಸ ಮುನಿ ಪ್ರಣೀತ ಕೃತಿಯಂ ಸಲೆ ಪೇಳ್ವ
ಪೇವಳ್ವ ಸತ್ಕವಿ ।
ವ್ಯಾಸ ಸಮಾಗಮಾನ್ವಿತಮನ್ ಆದಿ ಪುರಾಣಮನ್
ಎಯ್ದೆ ಪೇಳ್ದವಾ ।
ಕ ಶ್ರೀ ಸುಭಗಂ ಪುರಾಣ ಕವಿಯುಂ ಧರೆಗಾಗಿರೆ
ಉಣ್ಮೆ ಪೊಣ್ಮುವೀ ।
ದೇಶಿಗಳುಂತೆ ನಾಡೊವಜನಾದನೊ ಪೇಳ್
ಕವಿತಾ ಗುಣಾರ್ಣವಂ.

ಈ ಮಾತಿನಿಂದ ಜನ ಸಾಮಾನ್ಯರನ್ನು ಆತನು ಮರೆತಿರಲಿಲ್ಲ ಎಂತಲೂ ಅರ್ಥವಾಗುತ್ತದೆ.

ಸಾಮಾನ್ಯನದು ಸಹಜವಾಗಿಯೇ ಸುಲಭವಾದ ಭಾಷೆ. ತಾನು ಆಡುವುದನ್ನೇ ಕೇಳುವುದರಿಂದ ಅವನಿಗೆ ಅರ್ಥವಾಗುತ್ತದೆ. ಆದರೆ ಸಾಹಿತ್ಯವೆಂದರೆ ಪ್ರೌಢವಾಗಿರಬೇಕು. ಪಂಡಿತರೇ ಕೇಳುವಂಥದಿರಬೇಕು ಎಂದು ಹೊರಟರೆ ಸಂಸ್ಕೃತವೂ ಸಂಸ್ಕೃತಿ ಭೂಯಿಷ್ಠವೂ ಆದ ಭಾಷೆಯೇ ಆಗಿರಬೇಕಾಗುತ್ತದೆ. ಸಾಮಾನ್ಯನಿಗೆ ಅಂಥ ಶ್ರಮಪಡುವ ಶಕ್ತಿಯೂ ಇಲ್ಲ. ವೇಳೆಯೂ ಇಲ್ಲ. ಅನೇಕ ಕಾರಣಗಳಲ್ಲಿ ಈ ಕಾರಣವೂ ಇರಬಹುದು. ಹಿಂದೆ ಮಾರ್ಗ–ದೇಶಿಗಳ ಬಗೆಗೆ ಕಲಹವೇ ನಡೆಯಿತು. ಮಾರ್ಗವೇ ಶ್ರೇಷ್ಠವೆಂದವರು ದೇಶಿಯನ್ನು ಹೀನಾಯವಾಗಿ ಕಂಡರು. ಆದರೆ ಸರಳ ಕನ್ನಡದ ಬಗೆಗೆ ಅಭಿಮಾನ ಪ್ರಕಟಪಡಿಸಿದವರೇನೂ ಹಿಂದೆಯೂ ಕಡಮೆಯಿರಲಿಲ್ಲ. ಶಿವ ಶರಣರು, ಹರಿದಾಸರು, ಸರ್ವಜ್ಞ, ಸಾಂಗತ್ಯ ಕವಿಗಳು ಸಾಮಾನ್ಯರ ಭಾಷೆಯನ್ನು ಬಳಸಿಕೊಂಡರೆಂಬುದು ನಿಜವಾದರೂ ದೇಶಿತರರೂ ಸಂಸ್ಕೃತ –ಕನ್ನಡವನ್ನು ಬೆರೆಸಬಾರದೆಂದೂ ಬೆರೆಸಿದರೆ ತೈಲವುಮಂ ಘೃತಮುಮಂ ಬೆರೆಸಿದಂತೆ ಎಂದೂ ಸುಲಿದ ಬಾಳೆಯ ಹಣ್ಣಿನಂದದಿ ಇರುವ ಕನ್ನಡವನ್ನು ಬಳಸದೆ ಸಂಸ್ಕೃತದಲ್ಲಿನ್ನೇನಿದೆಯೆಂದು ಅದರ ಮೊರೆ ಹೋಗ ಬೇಕು? ಎಂದೂ ಅಂದವರುಂಟು. ಸಂಸ್ಕೃತವು ಶೋಷಣೆಯ ಭಾಷೆ ಎಂಬಂಥ ಮಾತನ್ನು ಆಡಿದವರೂ ಉಂಟು. ಉದಾಹರಣೆಗೆ ಶಿವಶರಣ ನಗೆಯ ಮಾರಿ ತಂದೆ ಹೀಗೆ ಹೇಳುತ್ತಾನೆ. "...ವಾಗದ್ವೈತವ ಕಲಿತು ಸಂಸ್ಕೃತದ ಮಾತಿನ ಪಸರುವ ಮುಂದೆ ಇಕ್ಕಿಕೊಂಡು ಮಂತ್ರದ ವಕ್ತ್ರದಲ್ಲಿ ಗ್ರಾಸವ ಹಾಕುವಂತೆ ಆದೇತರ ನುಡಿ ಮಾತಿನ ಮರೆ..." (೧೨ನೆಯ ಶ.) ದೇಶಿಯನ್ನು ಪುರಸ್ಕರಿಸಲಾರದು ಎಂಬುವವರಿಗೆ, ಪಂಪ ಹೀಗೆ ಕಿವಿ ಮಾತು ಹೇಳಿದ್ದಾನೆ:

ಬಗೆ ಪೊಸತಪ್ಪುದು ಆಗಿ ಮೃದು ಬಂದದೊಳ್
ಒದವುವುದು, ಒಂದಿ ದೇಶಿಯೊಳ್ ।
ಪುಗುವುದು, ಪೊಕ್ಕ ಮಾರ್ಗದೊಳೆ ತಳ್ವುದು
— ತಳ್ತೊಡೆ ಕಾವ ಬಂಧಂ ವೊ।
ಪ್ಪುಗುಂ ಎಳ ಮಾವು ಕಂದೆಳರ ಪೂವಿನ ಬಿಳ್
ಪೊರೆಯಿಂ ಬಳಲ್ದು ತುಂ ।
ಬಿಗಳಿನೆ ತುಂಬಿ ಕೋಗಿಲೆಯೆ ಬಗ್ಗಿಸೆ
ಸುಗ್ಗಿಯೊಳ್ ಒಪ್ಪುವುತೆಪ್ಪಾಲ್ ।

ಮಾರ್ಗ–ದೇಶಿಗಳ ಮದುವೆಯನ್ನು ಎಂತಹ ಸೊಗಸಾಗಿ ಪಂಪನು ಮಾಡಿದ್ದಾನೆ ನೋಡಿ.

ಶುದ್ಧ ಕನ್ನಡದಲ್ಲಿಯೇ ಕಬ್ಬವನ್ನು ಬರೆಯಬಲ್ಲೆನೆಂಬ ಕಬ್ಬನ್ನು ಮೆರೆದವನು ಅಂಡಯ್ಯ (೧೩ನೆಯ ಶತಮಾನ) ಆತನೇ ಹೇಳುತ್ತಾನೆ:

ಸೊಗಯಿಸಿ ಸಕ್ಕದಂ ಬೆರೆಸಿವಲ್ಲದೆ
ಕಬ್ಬಮಂ ಬಗೆಗೊಳೆ ಪೇಳಲಾಱರ್
ಇನಿತುಂ ಸಲೆ ಹುಣ್ಣಿನ ಪಂಪನಾಳ್ದ ಕಬ್ಬಿಗರ್
ಅದು ಮತನಾಡಿದವೊಲ್ ಅಂದಮಾನಾಳ್ದರೆ

ಪೇಳುವ ಬಲ ನೆಟ್ಟನೆ ದೊರೆಕೊಂಡುದು
ಇಂತಿವನಲ್ಲದೆ ಕೇಳ್ದೊರೆಕೊಳದು ಆರೊಳಂ!

ಕಾವ್ಯವು ಕೆಲವು ಕಟ್ಟುಪಾಡುಗಳ ಬಂಧನದೊಳಗೆ ಸಿಕ್ಕಿಕೊಂಡರೇ ಸರಿಯಾದ ಕಾವ್ಯವಾಗುತ್ತದೆ. ಎಂಬುದು ಬಹು ಜನರ ನಂಬುಗೆ. "ಪ್ರಾಸಕ್ಕೆ ದಾಸರಾಗಿ ಭಾವಕ್ಕೆ ಭಂಗಿ ತರುವ" ದೋಷವನ್ನು ಗಣಿಸದೇ ಹೋದುದುಂಟು. ಆಧುನಿಕ ಕವಿಗಳು ಈ ಬಂಧನದಿಂದ ತಪ್ಪಿಸಿಕೊಂಡವರಾದರೂ ಇವರೇ ಮೊದಲಿಗರಲ್ಲ ಎಂಬುದು ಬಸವಣ್ಣನ ಈ ವಚನ ತೋರಿಸುತ್ತದೆ.

ತಾಳಮಾನವ ಸರಿಸವನರಿಯೆ!
ಓಜೆ ಬಜಾವಣೆ ಲೆಕ್ಕವನರಿಯೆ
ಅಮೃತಗಣ ದೇವಗಣವನರಿಯೆ
ಕೂಡಲ ಸಂಗಮದೇವ
ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ.

ಸಾಮಾನ್ಯರು ಸಾಹಿತ್ಯವನ್ನು ಸೃಷ್ಟಿಸಲಾರರು ಎಂಬುದು ಪಂಡಿತರ ಕಲ್ಪನೆ. ಬಹುಶಃ ಇದಕ್ಕೇ ಇರಬೇಕು ಜನಪದ ಸಾಹಿತ್ಯವನ್ನು ಕೆಲವರು ಸಾಹಿತ್ಯವೆಂದು ಗಣಿಸಲು ಹಿಂಜರಿಯುತ್ತಿರುವುದು. ಪಂಡಿತರ ಗಮನ ಸೆಳೆಯುವಂತಿರಲು ಕೃತಿ ಪ್ರೌಢವಾಗಿರಬೇಡವೆ? ಪಾಮರನು ಅಂತಹ ಕೃತಿ ರಚಿಸಬಲ್ಲನೆ? ಆದರೆ ನೃಪತುಂಗನು ತನ್ನ ನಾಡಿನವರ ಹಿರಿಮೆಯನ್ನು ಬಹು ಅಭಿಮಾನದಿಂದ ಆಡಿದ ಈ ಮಾತುಗಳನ್ನು ಕೇಳಿದರೆ ಸಾಮಾನ್ಯರೂ 'ಕಾವ್ಯ ಪ್ರಯೋಗ ಪರಿಣತ ಮತಿಗಳು' ಎಂಬುದನ್ನು ಒಪ್ಪಿಕೊಂಡಂತಲ್ಲವೆ?

ಪದನರಿದು ನುಡಿಯಲುಂ ನುಡಿ।
ದುದನರಿದು ಆರಯಲುಂ ಆರ್ಪರ್ ಆನಾಡವರ್ಗಳ್।
ಚದುರರ್ ನಿಜದಿಂ ಕುರಿತೋ॥
ದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್;

ಇನ್ನೊಂದು ಮುಖ್ಯವಾದ ಅಂಶವೆಂದರೆ ಸಾಹಿತ್ಯ ಯಾತಕ್ಕಾಗಿ? ಸಾಹಿತ್ಯ ಸಾಹಿತ್ಯಕ್ಕಾಗಿಯೆ, ಜನಕ್ಕಾಗಿಯೆ? ಸಾಹಿತ್ಯವೆಂದರೆ ಕೇವಲ ಕೆಲವರಿಗಾಗಿಯೇ ಅಥವಾ ಸರ್ವರಿಗಾಗಿಯೆ ?

ಸಾಮಾನ್ಯರ ಕವಿಯಾಗಿದ್ದರೂ ಸರ್ವಜ್ಞ (೧೫-೧೬ನೆಯ ಶತಮಾನ) 'ಸಾಹಿತ್ಯ ಎಲ್ಲರಿಗೂ ಅಲ್ಲ'ಎಂದು ಹೇಳಿ ನಮ್ಮನ್ನು ದಂಗುಬಡಿಸುತ್ತಾನೆ.

ಎಲ್ಲ ಬಲ್ಲವರಿಲ್ಲ ಬಲ್ಲವರು ಬಹಳಿಲ್ಲ
ಬಲ್ಲಿದರು ಇದ್ದು ಫಲವಿಲ್ಲ ಸಾಹಿತ್ಯ
ಎಲ್ಲರಿಗು ಅಲ್ಲ ಸರ್ವಜ್ಞ.

ಎಂಬುದನ್ನು ಕೇಳಿದರೆ ನಮಗೆ ನಿಜವಾಗಿಯೇ ಸೋಜಿಗವಾಗುತ್ತದೆ. ಸರ್ವಜ್ಞನು ಬರೆದುದು ಸಾಹಿತ್ಯವೆಂದು ಪರಿಗಣಿತವಾದರೆ ಅವನ ಸಾಹಿತ್ಯ ಎಲ್ಲರ ಸಾಹಿತ್ಯ. ಆದರೆ ಅವನು ಯಾವ ಸಂದರ್ಭದಲ್ಲಿ ಈ ಮಾತು ಹೇಳಿದನೊ ಹೇಳುವುದು ಕಷ್ಟ.

ಆದರೆ ಸಾಮಾನ್ಯವಾಗಿ ಸಾಮಾನ್ಯ ಜನರು ಓದದಿದ್ದರೂ ಕೇಳಿ ಸಂತೋಷಪಡಲು ಹಿಂದಣ ಅನೇಕ ಪುರಾಣಕಾರರು ಹೇಳುವಂತೆ ಮುಕ್ತಿಯನ್ನು ಪಡೆಯಲು ಸಾಹಿತ್ಯ ಲಭ್ಯವಾಗಬೇಕೆಂದು ಪ್ರತಿಪಾದಿಸಲಾಗುತ್ತಿತ್ತು. ಕೆಲವು ಕವಿಗಳು "ಜನ ಬದುಕಬೇಕು" ಎಂದು (ರಾಘವಾಂಕ-೧೩ನೆಯ ಶತಮಾನ) ಕಾವ್ಯ ರಚಿಸಿದ್ದುದುಂಟು.

# ಸಾಹಿತ್ಯ ಪ್ರಕಾರಗಳೂ, ಘಟ್ಟಗಳೂ

ಸಾಮಾನ್ಯನು ವಸ್ತುವಾಗಿದ್ದು ಸಾಮಾನ್ಯನೇ ಕರ್ತೃವಾದದ್ದು ಸಾಮಾನ್ಯನಿಗಾಗಿಯೇ ಕೃತಿ ರಚನೆಯಾದದ್ದು –ಈ ಅಂಶಗಳಿಂದ ಕನ್ನಡ ಸಾಹಿತ್ಯವನ್ನು ಅವಲೋಕಿಸಿದರೆ ಕೆಲವು ಕೃತಿಗಳನ್ನು, ಕೆಲವು ಘಟ್ಟಗಳನ್ನು ನಾವು ಗುರುತಿಸಬಹುದು.

ನಾಟಕ ಅಥವಾ ಮೌಖಿಕ ಸಂಪ್ರದಾಯದಿಂದ (Oral tradition) ಬಂದು (ಇತ್ತೀಚೆಗೆ ಗ್ರಂಥಸ್ಥವಾಗಿ ಉಳಿಯುತ್ತಿರುವ) ಜನಪದ ಸಾಹಿತ್ಯ, ಬರೆಹ ರೂಪದಲ್ಲಿ ಬಂದಿರುವ ಶಾಸನ ಸಾಹಿತ್ಯ–ಇವನ್ನು




ಒಂದು ಕಟ್ಟನಲ್ಲಿ ಪರಿಗಣಿಸಬಹುದು. ಗ್ರಾಂಥಿಕ ಸಾಹಿತ್ಯದ ಕಟ್ಟನ್ನು ತೆಗೆದುಕೊಂಡರೆ, ಸಾಮಾನ್ಯರಿಗೆ ಸ್ಥಾನವನ್ನಿತ್ತ ಈ ಕೆಳಗಿನ ಕೃತಿಕಾರರನ್ನು ಮತ್ತು ಅವರ ಕೃತಿಗಳನ್ನು ಗಮನಿಸಬಹುದು:

ಶಿವಕೋಟ್ಯಾಚಾರ್ಯನ ವಡ್ಡಾರಾಧನೆ (೧೦ನೆಯ ಶತಮಾನ), ದುರ್ಗಸಿಂಹನ ಪಂಚತಂತ್ರ ಕಥೆಗಳು (೧೧ನೆಯ ಶ.), ಬ್ರಹ್ಮಶಿವನ ಸಮಯ ಪರೀಕ್ಷೆ (೧೨ನೆಯ ಶ.) ನಯಸೇನನ ಧರ್ಮಾಮೃತ (೧೨ನೆಯ ಶ.) ಶಿವಶರಣರ ವಚನಗಳು (೧೨-೧೩ನೆಯ ಶ.) ಹರಿಹರನ ರಗಳೆಗಳು (೧೩ನೆಯ ಶ.) ಲಕ್ಕಣ್ಣನ ದಂಡೇಶನ ಶಿವತತ್ವ ಚಿಂತಾಮಣಿ (೧೫ನೆಯ ಶ.) ಹರಿದಾಸರ ಕೀರ್ತನೆಗಳು, ಸರ್ವಜ್ಞನ ತ್ರಿಪದಿಗಳು (೧೫-೧೬ನೆಯ ಶ.) ಕುಮಾರ ರಾಮನ ಸಾಂಗತ್ಯ (೧೬ನೆಯ ಶ.) ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮ (೧೭ನೆಯ ಶ), ಮುದ್ದಣನ ರಾಮಾಶ್ವಮೇಧ (೧೯ನೆಯ ಶ.) ಆಧುನಿಕ ಕಾಲದ ನವೋದಯರ, ಪ್ರಗತಿಶೀಲರ, ನವ್ಯರ ಹಾಗು ಅತಿನವ್ಯರ (?) ಕೃತಿಗಳು (೧೯-೨೦ ನೆಯ ಶ.)

ಈ ಪಟ್ಟಿಯಿಂದ ಹಲವಾರು ಪ್ರಮುಖ ಬರೆಹಗಾರರನ್ನು ಕೈಬಿಟ್ಟಿರುವುದನ್ನು ಓದುಗರು ಕಾಣಬಹುದು. ಪಂಪ-ರನ್ನರು, ಕುಮಾರವ್ಯಾಸ-ಲಕ್ಷ್ಮೀಶರು. ರತ್ನಾಕರವರ್ಣಿ-ಷಡಕ್ಷರದೇವರು, ಮೊದಲಾದವರು ಸಂಪೂರ್ಣವಾಗಿ ಸಾಮಾನ್ಯ ಜನರನ್ನು ಕಡೆಗಣಿಸಿದ್ದರೆಂದು ಹೇಳುವ ಉದ್ದೇಶ ನನಗಿಲ್ಲ. ಆದರೆ ಸೀಮಿತವಾದ ನನ್ನ ಈ ಬರೆಹದಲ್ಲಿ ಇಂತಹ ಆಯ್ಕೆ ಅನಿವಾರ್ಯವಾಗುತ್ತದೆ.

## ಜನಪದ ಮತ್ತು ಶಾಸನ ಸಾಹಿತ್ಯ

ವಾಚಿಕ ಸಂಪ್ರದಾಯದ ಜನಪದ ಸಾಹಿತ್ಯವು ಸಾಮಾನ್ಯಜನರ ಸಾಹಿತ್ಯವೇ ಆಗಿದೆ. ಸಾಮಾನ್ಯ ಜನರೇ ವಸ್ತುವಾಗಿರುವ. ಸಾಮಾನ್ಯರೇ. ಕೃತಿಕಾರರಾಗಿರುವ, ಸಾಮಾನ್ಯರಿಗಾಗಿಯೇ ಹಾಡಿಕೊಂಡ ಈ ಸಾಹಿತ್ಯ ವಿಶಿಷ್ಟವಾದದ್ದೇ. * ಶಾಸನಗಳಲ್ಲಿ ಸಾಮಾನ್ಯರ ಬಗೆಗಿನ ಕಿರುಪಾಠಗಳು ಬರೆಹಗಳು ಅಂದಿನ ಕಾಲದ ಸಾಮಾಜಿಕ ದೃಷ್ಟಿ ಮತ್ತು ಸಾಮಾನ್ಯರ ಬಗೆಗೆ ಅಂದಿನ ಪ್ರತಿಷ್ಠಿತರು ತಳೆದಿದ್ದ ನಿಲುವುಗಳ ಬಗ್ಗೆ ಬೆಳಕನ್ನು ಚಲ್ಲುತ್ತವೆ. ರಾಜಾಶ್ರಯವನ್ನು ನೆಚ್ಚಿಕೊಂಡು, ಪಂಡಿತವರ್ಗವನ್ನು ಮೆಚ್ಚಿಸಲೆಂದು. ದೇವರು-ಪ್ರತಿಷ್ಠಿತರಷ್ಟೇ ವಸ್ತುವಾಗಲು ಸೂಕ್ತವೆಂದು ನಂಬಿ ಸಾಹಿತ್ಯ ಸೃಷ್ಟಿಯಲ್ಲಿ ತೊಡಗಿದ್ದವರು ಬಹುಶಃ ಸಾಮಾನ್ಯ ಜನರ ಜೀವನವನ್ನು ಉಪೇಕ್ಷಿಸಿದ್ದಿರಬೇಕು, ಅಥವಾ ಸಾಮಾಜಿಕ ಪ್ರಜ್ಞೆಯನ್ನು ಬೆಳೆಸಿಕೊಂಡಿರದೇ ಹೋಗಿರಬೇಕು. ಆದುದರಿಂದಲೇ, ಸದಾ ತುಡಿಯುವ ಪ್ರಕೃತಿಯ ಪ್ರತಿಯೊಂದು ಘಟನೆಗೆ ಮಾನವನ ಕೃತಿಗೆ ಸ್ಪಂದನಗೊಳ್ಳುವ, ಇಡಿಯ ಸಾಮಾಜಿಕ ರಚನೆಯ ನಿರ್ಮಾಣ ಕ್ರಿಯೆ ಹಾಗೂ ಬದಲಾವಣೆಯಲ್ಲಿ ಕ್ರಿಯಾತ್ಮಕವಾಗಿ ಪಾಲುಗೊಳ್ಳುವ ಜನರ ಬಗೆಗೆ ವಚನಕಾರರನ್ನು, ಹರಿದಾಸರನ್ನು, ಆಧುನಿಕ ಬರೆಹಗಾರರನ್ನು ಬಿಟ್ಟರೆ ಯಾರೂ ಅಷ್ಟಾಗಿ ಕಾಳಜಿಯನ್ನು ವ್ಯಕ್ತಮಾಡದೇ ಹೋದರು,

## ನಯಸೇನ

ನಯಸೇನನಿಗಿಂತ ಹಿಂದಿನವರು (ಶಿವ ಕೋಟ್ಯಾಚಾರ್ಯ, ದುರ್ಗಸಿಂಹ)ಕತೆಗಳ ಮೂಲಕ ಸಾಮಾನ್ಯ ಜನರ ಮೂಢನಂಬಿಕೆಗಳ, ಅವ್ಯವಹಾರಗಳ ತಂತ್ರೋಪಾಯಗಳ ಕುರಿತು ಬರೆದುದುಂಟು. ಆದರೆ ಸಾಮಾನ್ಯ ಜನರ ಜೀವನದ ವಿವಿಧ ಮುಖಗಳ ಪರಿಚಯವನ್ನು ಒಡೆದುಕಾಣುವಂತೆ ನೀಡಿದ ಮೊದಲ ಪ್ರಯತ್ನ

---

* ಜನಪದ ಸಾಹಿತ್ಯದಲ್ಲಿ ಸಾಕಷ್ಟು ಕೃಷಿ ಮಾಡಿದ ಡಾ. ಚಂದ್ರಶೇಖರ ಕಂಬಾರರು ಒಮ್ಮೆ ನನಗೆ ಹೇಳಿದ ಪ್ರಕಾರ ಉತ್ತರ ಕರ್ನಾಟಕದಲ್ಲಿ ಪ್ರಸಿದ್ಧವಾಗಿರುವ "ಸಂಗ್ಯಾ ಬಾಳ್ಯಾ" ನಾಟಕವನ್ನು ಬ್ರಾಹ್ಮಣ ಲಿಂಗಾಯತರಂಥ ಮೇಲ್ ಜಾತಿಯವರು ನೋಡ ಕೂಡದು ಎಂಬ ನಿರ್ಬಂಧ ಇತ್ತೀಚಿನವರೆಗೂ ಇತ್ತಂತೆ! ಅದು ಸಾಮಾನ್ಯರ ನಾಟಕವಲ್ಲವೆ?

ಮಾಡಿದವನು ನಯಸೇನ, ಎನ್ನಿಸುತ್ತದೆ. ಆತನ ಕೃತಿ ಧರ್ಮಾಮೃತದಲ್ಲಿ ತತ್ತ್ವೋಪದೇಶಗಳೇ ಹೆಚ್ಚು ತುಂಬಿದ್ದರೂ ಜನಜೀವನದ ವೈವಿಧ್ಯಮಯ ಚಿತ್ರಗಳನ್ನೊಳಗೊಂಡ ವಿಚಾರ ಮಂಜರಿಗಳು ವಿಪುಲವಾಗಿ ದೊರೆಯುತ್ತವೆ. ಮದುವೆಯ ಸಂಬಂಧವನ್ನು ಹೂಡುವ ಬಗೆಗಿನ ವರ್ಣನೆಯನ್ನು ಸಮಾಜ ಕೆಳ ದರ್ಜೆಯ ಜನರೆಂದು ಪರಿಗಣಿತವಾದ ರೈತ–ಕಾರ್ಮಿಕರನ್ನು ಸಹಾನುಭೂತಿಯಿಂದ ನೋಡಿ ಅವರ ಕಷ್ಟಕ್ಲೇಶಗಳಿಗಾಗಿ ಕವಿಯು ಮರುಗುವುದನ್ನು ನಾವು ಕಾಣಬಹುದು. ಹೊಲೆಯರು ದೂರದಲ್ಲಿ ಕುಳಿತಿದ್ದುದನ್ನು ಮಳೆಯನ್ನಾಶಿಸಿ ಗಗನವನ್ನು ನೋಡುವ ಒಕ್ಕಲಿಗನನ್ನು, ರಾಜನನ್ನು ಭಯ–ವಿಸ್ಮಯಗಳಿಂದ ಕಣ್ಣರಳಿಸಿ ನೋಡುವ ಕುರುಬನನ್ನು (ಬಹುಶಃ) ಬಾಣಂತಿಯಾದೆನಲ್ಲಾ ಎಂದು ಸಿಡಿಮಿಡಿಗೊಳ್ಳುವ ಸೂಳೆಯನ್ನು ಹೀಗೆ ಸಾಮಾನ್ಯರ ಮತ್ತು ಅವರ ಜೀವನ ಪ್ರಸಂಗಗಳ ಚಿತ್ರಣವನ್ನು ತನ್ನ ಕೃತಿಯಲ್ಲಿ ಕಡೆದು ಸಾಮಾನ್ಯರಿಗೆ ಸಾಹಿತ್ಯದಲ್ಲಿ ಪ್ರವೇಶ ನೀಡಿದ ನಯಸೇನ ಗಮನಾರ್ಹ ಕವಿಯೇ ಸರಿ.

## ವಚನ ಸಾಹಿತ್ಯ

ಬಹು ಸ್ಪಷ್ಟವಾದ, ಅಷ್ಟೇ ಏಕೆ, ಬಹು ನಿಷ್ಠುರವಾದ ರೀತಿಯಲ್ಲಿ ಪರಂಪರೆಯಿಂದ ಸಿಡಿದು ಬಹು ದೂರ ನಿಂತ, ಹೊಸ ಜಗತ್ತನ್ನೇ ನಿರ್ಮಿಸಿ ಹಳೆಯದರ ಬೇರುಗಳನ್ನು ಜಾಲಾಡಿದಂಥ ಸಾಮಾನ್ಯರನ್ನು ನಿಜವಾಗಿಯೂ ಶ್ರೀಸಾಮಾನ್ಯರನ್ನಾಗಿ ಕೀಳರಲ್ಲಿ ಕೀಳೆಂದು ಗಣಿತವಾದ ತೀರಾ ಸಾಮಾನ್ಯರನ್ನೂ ದೇವತ್ವಕ್ಕೆ ಏರಿಸಿದ ಕೀರ್ತಿ ಹನ್ನೆರಡನೆಯ ಶತಮಾನದ ಶಿವಶರಣರಿಗೂ ಹದಿಮೂರನೆಯ ಶತಮಾನದ ಹರಿಹರಾದಿ ಕವಿಗಳಿಗೂ ಸಲ್ಲುತ್ತದೆ.

ಒಂದು ಅಂದಾಜಿನ ಪ್ರಕಾರ (ನೋಡಿ: ಡಾ.ಎಂ. ಚಿದಾನಂದಮೂರ್ತಿಯವರ ವಚನ ಸಾಹಿತ್ಯ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೫), ಸಾಮಾನ್ಯರೆಂದು ನಿಕೃಷ್ಟವಾಗಿ ಪರಿಗಣಿತವಾಗಿದ್ದು ಹೊಸ ನೆಲವಿಗೆ ಸಿಲ್ಕಿ ಶಿವಶರಣರಾಗಿ ವಚನಕಾರರಾದವರಲ್ಲಿ ಕೀಳೆಂದು ಭಾವಿಸುತ್ತಿದ್ದ ಉದ್ಯೋಗಗಳಲ್ಲಿ ತೊಡಗಿದ್ದ ೪೭ ಜನರಿದ್ದರು. ಅವರಲ್ಲಿ ಅಂಬಿಗ, ಕಟ್ಟಿಗೆ ಮಾರುವವ, ಕುರಿಕಾಯುವವ, ಕ್ಷೌರಿಕ, ಕೊಟ್ಟಣ ಕಾಯಕದವ, ಚಪ್ಪಲಿ ಹೊಲೆಯುವವ, ಜನಸಾಮಾನ್ಯರನ್ನು ರಂಜಿಸುವಂಥ ಕಿನ್ನರಿಯವ ಕಲಕೇತ, ಇ೦, ದನಗಾಹಿ, ನೇಕಾರ, ಬಡಗಿ, ಮೇದಾರ, ಜೇಡರವ, ಮಡಿವಳ, ಮಾವತಿಗ, ಮೀನುಗಾರ, ಬೇಸಾಯಗಾರ, ಹಗ್ಗ ಹೊಸೆಯುವವ, ಹಳೆಯ ಪಾತ್ರೆಗಳನ್ನು ಸರಿಮಾಡುವವ, ಸಿಂಪಿಗ, ಕೊನೆಗೆ ಹೆಂಡ ಮಾರುವವ ಮತ್ತು ಸೂಳೆ–ಇವರೆಲ್ಲರೂ ಇದ್ದರು; ಇವರೆಲ್ಲರೂ ಚೇತನತುಂಬಿ ವಚನಕಾರರಾಗಿ ಕ್ರಾಂತಿಯ ಘೋಷಣೆಗೆ ನೆರವಾದರು. ಇದನ್ನು ನೋಡಿದರೆ ಸಾಮಾನ್ಯಜನರ ಪ್ರಾತಿನಿಧಿಕ ಸಮುದಾಯವೇ ಶರಣರ ಆ ಕೂಟವಾಗಿತ್ತು, ಎಂದೆನಿಸುತ್ತದೆ.

ಬಸವಣ್ಣ, ಅಕ್ಕಮಹಾದೇವಿ, ಚೆನ್ನಬಸವಣ್ಣ ಇವರಲ್ಲದೆ ಜೇಡರದಾಸಿಮಯ್ಯ, ಸುಲಿಯ ಚಂದಯ್ಯ, ಸೂಳೆ ಸಂಕವ್ವೆ–ಎಲ್ಲರೂ ನವೀನ ಕ್ರಾಂತಿಯಲ್ಲಿ ಪಾಲುಗೊಂಡವರೇ. ಎಲ್ಲ ವಚನಕಾರರೂ ಎಲ್ಲರನ್ನೂ–ಅಂದರೆ ಭಕ್ತರನ್ನು–ಸಮಾನತೆಯಿಂದ ಕಂಡರು, ಯಾರನ್ನೂ ಸಾಮಾನ್ಯ–ಅಂದರೆ ನಿಕೃಷ್ಟ–ಎಂದು ನಿರಾಕರಿಸಲಿಲ್ಲ. ಆದರೆ ಅದರಲ್ಲಿಯೂ ಶಿಷ್ಟ, ಕನಿಷ್ಠಭೇದ ಇತ್ತೆಂದು ತೋರುತ್ತದೆ. ('ಶಿಷ್ಟ ಅಲ್ಪಪ್ರಾಣದ 'ಕನಿಷ್ಠ ಮಹಾಪ್ರಾಣದ ಶಬ್ದಗಳು; ಆದರೆ 'ಶಿಷ್ಟರು ಮಹಾಪ್ರಾಣ, 'ಕನಿಷ್ಠರು ಅಲ್ಪಪ್ರಾಣ ಉಳ್ಳವರು. ಎಂತಹ ಚೋದ್ಯ!) ಅಂಥ ಭೇದವೆಲ್ಲಾದರೂ ಕಂಡರೆ ಅದನ್ನು ಖಂಡಿಸಲಾಗುತ್ತಿತ್ತು. ಬಸವಣ್ಣನ ಈ ಕೆಳಗಿನ ವಚನದಿಂದ ಸಾಮಾನ್ಯರನ್ನು ಹೇಗೆ ನಡೆಸಿಕೊಳ್ಳುತ್ತಿದ್ದರು ಎಂಬುದು ವಿದಿತವಾಗುತ್ತದೆ:

ಕುದುರೆ ಸತ್ತಿಗೆಯವರ ಕಂಡರೆ
ಹೊರಳಿಬಿದ್ದು ಕಾಲಹಿಡಿವರಯ್ಯ,
ಬಡಭಕ್ತರು ಬಂದರೆ ಎಡೆಯಿಲ್ಲ ಅತ್ತ
ಸನ್ನಿ ಎಂಬರು.

ಎನ್ನೊಡೆಯ ಕೂಡಲಸಂಗಯ್ಯನವರ
ತಡೆಗೆಡಹಿ ಮೂಗ ಕೊಯ್ಯದೆ ಮಾಬನೆ?

ಭಾರತೀಯ ಸಮಾಜದ ಕಲಂಕವೆನ್ನಬಹುದಾದ ಜಾತಿ ಭೇದ, ಕುಲಭೇದದ–ಅದರಲ್ಲೂ ಮೇಲುಕೀಳುಗಳೆಂಬ, ಸ್ಪೃಶ್ಯ ಅಸ್ಪೃಶ್ಯವೆಂಬ ಸ್ತರವಿನ್ಯಾಸದ–ಇತಿಹಾಸವು ಹೀನಕುಲದವರನ್ನು ಶೋಷಿಸಲು, ಅವರು ಮೇಲೇರಲು ಬಿಡದಂತೆ ಒದ್ದು ಒತ್ತಿಕ್ಕುವ ಕ್ರಮಗಳ ಇತಿಹಾಸವೂ ಆಗಿದೆ. ಸಾಮಾನ್ಯ ಜನರೆಂದರೆ ಅಂತ್ಯಜರು, ಹಿಂದುಳಿದವರು, ಕೆಳಜಾತಿಯವರು, ಎಂಬಿತ್ಯಾದಿ ಹೆಸರಿಸಲ್ಪಟ್ಟವರೇ ಆಗಿದ್ದುದು. ಇನ್ನೂ ಹಾಗೆಯೇ ಇಂದೂ ಇರುವುದೂ ಉಂಟಲ್ಲವೆ? ಆದಿಕವಿ ಪಂಪನೂ ಈ ಬಗ್ಗೆ ಗಮನ ಹರಿಸಿದ್ದಾನೆ. ದ್ವಿಜರಲ್ಲದ ಶೂದ್ರರನ್ನು ನಡೆಸಿಕೊಂಡ ಪ್ರಸಂಗವೊಂದನ್ನು ಪಂಪ ಚಿತ್ರಿಸಿದ್ದಾನೆ. ಕರ್ಣನು ಸೂತಪುತ್ರ, ಹೀನಕುಲದವ, ಸಾಮಾನ್ಯ ಮನುಷ್ಯ, ಅಂಥವನನ್ನು ಬ್ರಾಹ್ಮಣನ ಕ್ಷತ್ರಿಯನ ಸರಿಸಮನೆಂದು ಪರಿಗಣಿಸಲು ಹೇಗೆ ಸಾಧ್ಯ, ಇತ್ಯಾದಿ ಅಭಿಪ್ರಾಯವನ್ನು ದ್ರೋಣನೂ ಹೊಂದಿದ್ದನೆಂದರೆ, ಅಂಥ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದನೆಂದರೆ 'ಕುಲವು ಎಷ್ಟು ತೆರನಾಗಿ ಸಾಮಾಜಿಕ ವ್ಯಾಕುಲವನ್ನು ಉಂಟುಮಾಡಿರಬಹುದು! ಆದರೆ ಪಂಪಕವಿಯು ನ್ಯಾಯ ಪಕ್ಷಪಾತಿಯೆಂಬುದನ್ನು ಕುಲಮದಕ್ಕೆ ಮನ್ನಣೆ ನೀಡದವನೆಂಬುದನ್ನು ಕರ್ಣನ ಈ ಕೆಳಗಿನ ಮಾತಿನ ಮೂಲಕ ಪ್ರಕಟಪಡಿಸಿದ್ದಾನೆ:

"ಕುಲಂ ಕುಲಮಲ್ತು, ಚಲಂ ಕುಲಂ, ಗುಣಂ
ಕುಲಂ, ಅಭಿಮಾನಂ ಒಂದೆ ಕುಲಂ, ಅಣ್ಣ
ಕುಲಂ, ಬಗೆವಾಗಳ್ ಈಗಳ್ ಈ
ಕಲಹದೊಳ್ ಅಣ್ಣ ಈ ಕುಲವು ಆ–
ಕುಲಮಂ ನಿಮಗುಂಟುಮಾಡುವುದು."

ಆದರೆ ಬಸವಣ್ಣ ನೇರವಾಗಿ ಸ್ಪಷ್ಟವಾದ ಮಾತುಗಳಲ್ಲಿ ತಾನು ಹುಟ್ಟಿದ ಬ್ರಾಹ್ಮಣ ಕುಲ ಕಷ್ಟದಕುಲ, ಮಾದರ ಚೆನ್ನನ ಕುಲ ಚೆಲುವಾದ ಕುಲ ಎಂಬಿತ್ಯಾದಿಯಾಗಿ ಹೇಳಿದ್ದಾನೆ. ಹುಟ್ಟಿನಿಂದ, ಉದ್ಯೋಗದಿಂದ ಹೀನಕುಲದವನಾಗುವುದಿಲ್ಲ, ಸತ್ಕುಲಜನೂ ಆಗುವುದಿಲ್ಲ. ಆದರೆ ಆಚಾರದಿಂದ ಯೋಗ್ಯನಾಗುತ್ತಾನೆ.

ಕೊಲುವವನೇ ಮಾದಿಗ!
ಹೊಲಸ ತಿಂಬವನೇ ಹೊಲೆಯ!
ಕುಲವೇನೊ? ಆವದಿರ ಕುಲವೇನೋ?
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು.

ಇಂತಹ ವಿಚಾರ ಬಹುಶಃ ಭಕ್ತಿಪಂಥದವರಿಗೆಲ್ಲಾ ಸಮನಾದುದಾಗಿತ್ತು. ಮುಂದೆ ಬಂದ ಹರಿದಾಸರು. "ಹೊಲೆಯ ಹೊರಗಿಹನೆ ಊರೊಳಗಿಲ್ಲವೇ?" ಎಂಬಂಥ ಒಳಗನ್ನೇ ಮುಟ್ಟಿಕೊಳ್ಳುವಂಥ ಎಚ್ಚರಿಕೆಯ ಮಾತನ್ನೂ, "ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೆ?" ಎಂಬ ಸರ್ವಜ್ಞನ ನುಡಿಯನ್ನೂ ನಾವು ಗಮನಿಸಬಹುದು.

ಆತ್ಮವಿಶ್ವಾಸದ ಅಂಕುರಾರ್ಪಣವಾದುದರ ಫಲವಾಗಿ "ಅತ್ಯಂತ ಸಾಮಾನ್ಯ ವರ್ಗದ ನೂರಾರು ಪುರುಷರೂ, ಸ್ತ್ರೀಯರೂ ಕನ್ನಡದಲ್ಲಿ ವಚನಗಳನ್ನು ಕಟ್ಟಿ ಹಾಡಿದರು." "ತನ್ನ ಸಮಕಾಲೀನರಿಂದ ಹೇಗೋ ಮುಂದಿನ ಶತ ಶತಮಾನಗಳ ವಿರಕ್ತವರಿಂದ ಕೀರ್ತಿತನಾಗಿರುವ ಅಲ್ಲಮಪ್ರಭು ಕನ್ನಡದ ತೀರ ಕೀಳು ಶೂದ್ರವರ್ಗದ ಪ್ರಪ್ರಥಮ ಯೋಗಿಯೂ ಶ್ರೇಷ್ಠ ಸಾಹಿತಿಯೂ ಆಗಿದ್ದಾನೆ" (ಚಿದಾನಂದಮೂರ್ತಿ.) ಸೂಳೆ ಸಂಕವ್ವೆಯಂಥವರೂ ವಚನ ನಿರ್ಮಾತೃಗಳಾದರೆಂದರೆ, ಅವಳಂಥವರಲ್ಲೂ ಉಚ್ಚ ನೀತಿಯ ಬಗೆಗೆ ಅಪಾರ

ನಿಷ್ಠೆಯೂ ಸ್ಪಷ್ಟವಾಗಿ ಪ್ರಕಟವಾಯಿತೆಂದರೆ ಅಂದಿನ ಸಾಮಾಜಿಕ ಹಾಗೂ ಸಾಹಿತ್ಯ ಕ್ರಾಂತಿಯ ಮಹತಿಯು ಅರಿವಾಗುತ್ತದೆ. ಸೂಳೆ ಸಂಕವ್ವೆಯ ಈ ಮಾತುಗಳನ್ನು ಆಲಿಸಿರಿ.

ಒತ್ತೆಯ ಹಿಡಿದು ಮತ್ತೆ ಒತ್ತೆಯ ಹಿಡಿಯೆ
ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯ,
ವ್ರತಹೀನನನರಿದು ಬೆರೆದಡೆ
ಕಾದಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯ
ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರ.

(ಸಂಕವ್ವೆಯ ಅಂಕಿತ 'ನಿರ್ಲಜ್ಜೇಶ್ವರ' ಎಂಥ ಅರ್ಥಪೂರ್ಣವಾಗಿದೆ, ಅಲ್ಲವೇ?)

ಹರಿಹರ–ರಾಘವಾಂಕರು ಸಾಮಾನ್ಯರ ಜೀವನವನ್ನು ಎಂತಹ ಮನೋಹರ ರೀತಿಯಲ್ಲಿ ಚಿತ್ರಿಸಿದ್ದರೆಂಬುದು ಸಾಹಿತ್ಯ ಪ್ರಿಯರಿಗೆಲ್ಲಾ ತಿಳಿದ ಮಾತೇ. ರಾಜಮಹಾರಾಜರಾದರೂ ಅವರು ಸಾಯುವವರು. ಶಿವನ ಮೆಚ್ಚುಗೆ ಗಳಿಸಿದ ಶರಣರು ಅಮೃತ ಪುತ್ರರು. ಅಂಥವರ ಮೇಲೆಯೇ ಕಾವ್ಯ ರಚಿಸಬೇಕೆಂಬುದು ಹರಿಹರನ ವ್ರತ. ಕನ್ನಡ ಸಾಹಿತ್ಯದಲ್ಲಿ ಮೊಟ್ಟಮೊದಲ ಸಲ ಸಾಮಾನ್ಯ ಮನುಷ್ಯರು ಕಾವ್ಯದ ವಸ್ತುವಾದದ್ದು ಹರಿಹರನ ಮೂಲಕ. ವ್ಯವಸಾಯ, ಸೋರುವ ಮನೆ, ಕಾಯಕಷ್ಟದ ಸ್ಥಿತಿ, ಇತ್ಯಾದಿ ಪ್ರಸಂಗಗಳನ್ನು ಹೃದಯಂಗಮವಾಗಿ ಚಿತ್ರಿಸಿದುದನ್ನು ಆತನ ಕಾವ್ಯಗಳಲ್ಲಿ ನಾವು ಕಾಣಬಹುದು. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಹೊಲತಿಯರ ಪ್ರಸಂಗ, ಸಿದ್ಧರಾಮ ಚರಿತ್ರದಲ್ಲಿ ಬರುವ ಅಂದಿನ ಒಕ್ಕಲು–ಒಡ್ಡರ ಜೀವನ–ರೂಪರೇಖೆಗಳನ್ನು ಗಮನಿಸಬಹುದು.

## ದಾಸ ಸಾಹಿತ್ಯ

ಹರಿದಾಸರು ಕೂಡಾ ಶಿವಶರಣರಂತೆ ಸಾಮಾನ್ಯರ ಜೀವನದ ಬಗ್ಗೆ ಅನುಕಂಪೆಯನ್ನು ತೋರಿ, ಅವರನ್ನು ಮೇಲೆತ್ತುವ ಭಕ್ತಿಪಂಥವನ್ನೇ ಆಯ್ದುಕೊಂಡರು. ಹಾಡುಗಬ್ಬಗಳ ಮೂಲಕ ಜನಸಾಮಾನ್ಯರಲ್ಲಿ ಹೊಸ ವಿಚಾರಗಳನ್ನು ಬಹು ಪರಿಣಾಮಕರವಾಗಿ ಹರಡಿದರು. ಪುರಂದರದಾಸರು 'ಹೊಲೆಯನಾರು?' ಎಂಬುದರಬಗೆಗೆ ಸಾತ್ವಿಕ ವಿವೇಚನೆ ಮಾಡಿದುದನ್ನು ನಾವು ಗಮನಿಸಬೇಕು. ಕೆಳಜಾತಿಯಲ್ಲಿ ಮೂಲೆಯೊಂದರ ಹಳ್ಳಿಯಲ್ಲಿ ಜನಿಸಿದ ಕನಕದಾಸ ಮೇಲೆದ್ದು ಬಂದು ಮೇಲ್‌ಜಾತಿಯವರಿಗೂ ಸರಿಯಾದ ದೃಷ್ಟಿಯನ್ನು ನೀಡಿದನೆಂಬುದನ್ನು ನೆನೆದರೆ ಮೈ ಪುಳಕಿತವಾಗುವುದು.

ಕನಕದಾಸರು ರಾಗಿಯ ಹಿರಿಮೆಯನ್ನು ಸ್ಥಾಪಿಸಲು ಬರೆದ 'ರಾಮಧಾನ್ಯ ಚರಿತೆಯು' ಕನ್ನಡ ಸಾಹಿತ್ಯಕ್ಕೂ ಭಾರತೀಯ ಸಾಮಾಜಿಕ ಶಾಸ್ತ್ರಾವಲೋಕನಕ್ಕೂ ನೀಡಿದ ಗಮನಾರ್ಹ ಕೃತಿ. ಒಮ್ಮೆ ರಾಗಿಗೂ ಭತ್ತಕ್ಕೂ ತಮ್ಮ ತಮ್ಮ ಹಿರಿಮೆಯ ಬಗ್ಗೆ ಕಲಹವಾಗುತ್ತದೆ. ಯಾರು ಉತ್ತಮರು ಎಂಬುದನ್ನು ಶ್ರೀರಾಮನೇ ನಿರ್ಧರಿಸಲಿ ಎಂದು ಆ ಎರಡೂ ಧಾನ್ಯಗಳು ಅವನ ಬಳಿಗೆ ಹೋಗುತ್ತವೆ; ಕುಪಿತನಾದ ರಾಮನು ಆ ಎರಡನ್ನೂ ಒಂದು ವರ್ಷ ಸೆರೆಮನೆಯಲ್ಲಿ ಇಡಿಸುತ್ತಾನೆ; ವರ್ಷಾನಂತರ ರಾಗಿಯು ನಗುನಗುತ್ತ ಗೆಲುವಿನಿಂದಿರುತ್ತದೆ. ಆದರೆ ಭತ್ತ ಬತ್ತಿ ಒಣಗಿರುತ್ತದೆ; ಆದುದರಿಂದ ರಾಗಿಯೇ ಭತ್ತಕ್ಕಿಂತ ಶಕ್ತಿಯುತವಾದದ್ದು, ಶ್ರೇಷ್ಠವಾದದ್ದು ಎಂದು ರಾಘವ (ಶ್ರೀರಾಮಚಂದ್ರ) ತೀರ್ಪಿತ್ತು, ರಾಗಿಯ ಮೇಲಣ ತನ್ನ ಅಭಿಮಾನವನ್ನೂ ವ್ಯಕ್ತಪಡಿಸಲು ತನ್ನ ಹೆಸರನ್ನೇ ಆ ಧಾನ್ಯಕ್ಕೆ ಕೊಟ್ಟ; ಅಂದಿನಿಂದ ಅದಕ್ಕೆ 'ರಾಘವ' ಹೆಸರು ಬಂತು; ಕಾಲಾಂತರದಲ್ಲಿ ಸಾಮಾನ್ಯರ ನಾಲಗೆ ಅದನ್ನು 'ರಾಗಿ'ಯಾಗಿ ಮಾರ್ಪಡಿಸಿತು. ಇದು ರಾಮಧಾನ್ಯ ಚರಿತೆಯ ಸಾರಾಂಶ. ಈ ಕತೆಯ ಮೂಲಕ ಪ್ರತಿಷ್ಠಿತರಿಗೂ ಸಾಮಾನ್ಯರಿಗೂ ಇದ್ದಂಥ ಸಂಬಂಧವನ್ನು, ಸಾಮಾನ್ಯರನ್ನು ಶಿಷ್ಟರು ಕಾಣುತ್ತಿದ್ದಂಥ ರೀತಿಯನ್ನು ಸಾಂಕೇತಿಕವಾಗಿ ಕವಿಯು ಚಿತ್ರಿಸಿದ್ದಾನೆ. ಸಾಮಾನ್ಯರೆಂಬವವರೇ ಶ್ರೇಷ್ಠರು ಎಂಬುದೇ ಆಶಯವಾಗಿರಬೇಕು. ಕನಕದಾಸನ ಯಶಸ್ಸು ರಾಗಿಯು ಭತ್ತದ ಮೇಲೆ ಸ್ಥಾಪಿಸಿದ ವಿಜಯದ ಮೂಲಕ ಸಾಂಕೇತಿಕವಾಗಿ ಅಭಿವ್ಯಕ್ತವಾಗಿದೆಯೆಂದೆನ್ನಲೂ ಬಹುದು.

ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿಯಲ್ಲಿ ಹಳ್ಳಿಗಳ ಹೆಸರು, ಸಾಮಾನ್ಯರ ಸಾಮಾಜಿಕ ಜೀವನ ಚಿತ್ರಗಳೂ, ಕುಮಾರರಾಮನ ಸಾಂಗತ್ಯದಲ್ಲಿ ಸಾಮಾನ್ಯರ ವೀರ ಜೀವನವೂ ಮೂಡಿ ಬಂದಿವೆ.

## ಸರ್ವಜ್ಞ

ಸಾಮಾನ್ಯರ ನಡುವಿನಲ್ಲಿ ಮೂಡಿ ಬಂದು, ಅಸಾಮಾನ್ಯ ಪ್ರಜ್ಞೆಯನ್ನು ಬೆಳೆಸಿಕೊಂಡು, ವಚನ ಪರಂಪರೆಯ ವಿಚಾರದ ಹೊಳೆಯು ಮಹಾಪೂರವಾಗಲು ನೆರವಾದ ಜನತೆಯ ಮಹಾಕವಿ, ಸಾಮಾಜಿಕ ಮಹಾಮಹೋಪಾಧ್ಯಾಯನೆಂದರೆ ಸರ್ವಜ್ಞನೇ. ಅವನು ಕೈ ಹಾಕದೆ ಇದ್ದ ವಸ್ತುವೇ ಇಲ್ಲ. "ವೇಶ್ಯೆಯಿಂದ ವೇದಾಂತಿಯವರೆಗೆ, ಓಜನಿಂದ ರಾಜನವರೆಗೆ, ಭೂಗೋಲದಿಂದ ಖಗೋಲದವರೆಗೆ, ಮೇಟಿಯಿಂದ ರಾಟಿಯವರೆಗೆ, ಊರಗುಡಿಯ ವಿದ್ಯೆಯಿಂದ ವಿಶ್ವವಿದ್ಯಾಲಯದ

ವಿದ್ಯೆಯವರೆಗೆ... ಆತನ ಸಾಹಿತ್ಯದಲ್ಲಿ ಪ್ರಸ್ತಾಪವಿದೆ. (ಸಂ.ಜಿ.ಹಂಡಿ, ಸಾಧನೆಯಲ್ಲಿನ ಲೇಖನವೊಂದರಲ್ಲಿ ಸಂ. ೫ ನಂ.೩, ೧೯೭೭) ಇಂಥ ವಿಸ್ತಾರವಾದ ಮತ್ತು ವೈವಿಧ್ಯವಾದ ವಸ್ತುಗಳನ್ನು ಈತನ ಬರಹವು ಒಳಗೊಂಡಿದ್ದರೂ ಸಾಮಾನ್ಯನ ಜೀವನವೇ ಆತನಿಗೆ ಮೂಲ ಸ್ಫೂರ್ತಿಯೂ, ವಸ್ತುವೂ, ಗುರಿಯೂ ಆಗಿದ್ದುದು ಸುವೇದ್ಯ. ಹಳ್ಳಿಯ ಜೀವನ, ಹಳ್ಳಿಯ ಉದ್ಯೋಗಗಳಲ್ಲಿ ತೊಡಗಿದವರ ಜೀವನ ಚಿತ್ರವು ಅವನ ತ್ರಿಪದಿಗಳಲ್ಲಿ ಹೇರಳವಾಗಿ ಸಿಗುತ್ತದೆ.

## ಸಂಚಿಯ ಹೊನ್ನಮ್ಮ

ಹದಿನೇಳನೆಯ ಮತ್ತು ಹದಿನೆಂಟನೆಯ ಶತಮಾನಗಳು ಕನ್ನಡ ಸಾಹಿತ್ಯದಲ್ಲಿ ಮಹತ್ವದ ಕಾಲವಲ್ಲ. ಸಾಮಾನ್ಯನ ಸ್ಥಾನಕ್ಕೂ ಅಂತಹ ಬೆಲೆ ಇರಲಿಲ್ಲ. ಆದರೂ ಗೋವಿಂದ ಭಟ್ಟ, ಕಂಠೀರವ ನರಸರಾಜ ವಿಜಯ, ತಿರುಮಲಾರ್ಯನ ಚಿಕ್ಕದೇವರಾಜ ವಿಜಯ ಹಾಗೂ ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮ—ಇವು ಹೆಸರಿಸಬೇಕಾದ ಬರೆಹಗಳು. ಮೊದಲಿನ ಎರಡು ಕೃತಿಗಳಲ್ಲಿ ರೈತರು, ಡೊಂಬರು, ಬೇಡರು ಜಾನಪದ ಗಾಯಕರು, ಪ್ರಾಸಂಗಿಕವಾಗಿಯಾದರೂ, ವರ್ಣಿಸಲ್ಪಟ್ಟಿದ್ದಾರೆ. ಆದರೆ ಸಂಚಿಯ ಹೊನ್ನಮ್ಮನು, ಸಾಮಾನ್ಯನ ದೃಷ್ಟಿಯಲ್ಲಿ, ಬಹು ಮಹತ್ವದ ಬರೆಹಗಾರ್ತಿ. ಅಕ್ಕಮಹಾದೇವಿ ಮೊದಲಾದ ವಚನಕಾರ್ತಿಯರನ್ನು ಬಿಟ್ಟರೆ ಕನ್ನಡ ಸಾಹಿತ್ಯದಲ್ಲಿ ಹೆಣ್ಣಿನ ಬಗ್ಗೆ ಗಂಭೀರವಾಗಿ ಆಲೋಚಿಸಿ, ಕಳಕಳಿಯಿಂದ ಬರೆದ ಮೊದಲ ಸ್ತ್ರೀ ಎಂದರೆ ಹೊನ್ನಮ್ಮನೇ. ಹೊನ್ನಮ್ಮ ಉತ್ತಮವೆಂಬಂತಹ ಕುಲದಲ್ಲಿ ಹುಟ್ಟಿದವಳೇನೂ ಅಲ್ಲ; ಆಕೆ ಮಹಾರಾಣಿಯ ಸ್ಥಾನವನ್ನು ಪಡೆದಿರಲಿಲ್ಲ; ಔಪಚಾರಿಕವಾಗಿ ಅಂತಹ ವಿದ್ವತ್ತನ್ನು ಹೊಂದಿದವಳೂ ಅಲ್ಲ; ಅರಮನೆಯಲ್ಲಿ ಕೇವಲ ತಾಂಬೂಲ ತಟ್ಟೆಯನ್ನು ಎತ್ತಿಕೊಂಡು ಶ್ರೇಷ್ಠರಿಗೆ ತಾಂಬೂಲವನ್ನು ನೀಡತಕ್ಕ ಕಾಯಕದಲ್ಲಿ ನಿರತಳಾದವಳು. ಈ ಹಿನ್ನಲೆಯಲ್ಲಿ ನೋಡಿದರೆ ಸಾಮಾನ್ಯಳಾದ ಸ್ತ್ರೀಯು ಸಾಮಾನ್ಯಳೆಂದು ಪರಿಗಣಿತವಾದ ಹೆಣ್ಣಿನ ಬಗ್ಗೆ ಬರೆದದ್ದೂ ಸಾಹಿತ್ಯ ಪ್ರಪಂಚದಲ್ಲಿ ಒಂದು ಗಮನಾರ್ಹ ಸ್ಥಾನಗಳಿಸಿದ್ದು ಗಮನಿಸಬೇಕಾದ ಸಂಗತಿಯೇ. ಹೆಣ್ಣನ್ನು ಗಂಡು ಹೇಗೆ ನಿಕೃಷ್ಟವಾಗಿ ಕಾಣುತ್ತಾನೆ ಎಂಬುದನ್ನು ಬಲ್ಲ ಹೊನ್ನಮ್ಮ

ಹೆಣ್ಣಲ್ಲವೆ ನಮ್ಮನ್ನೆಲ್ಲ ಪಡೆದ ತಾಯಿ
ಹೆಣ್ಣಲ್ಲವೆ ಪೊರೆದವಳು
ಹೆಣ್ಣು ಹೆಣ್ಣೆಂದೇಕೆ ಬೀಳುಗಳೆವರು
ಕಣ್ಣುಕಾಣದ ಗಾವಿಲರು.

ಎಂದು ಬಹು ತೀವ್ರವಾಗಿಯೇ ಹೇಳುತ್ತಾಳೆ. ಹೆಣ್ಣಿನ ಸುಖದುಃಖಗಳ ಆತ್ಮೀಯವೂ ವಾಸ್ತವಿಕವೂ ಆದ ವರ್ಣನೆಯನ್ನು ನೀಡಿ, ಸಾಮಾನ್ಯ ಹೆಣ್ಣಿನ ಪಾತಿವ್ರತದ ಜೀವನಕ್ಕೆ ಬೇಕಾದ ನೀತಿ ಸಂಹಿತೆಯನ್ನು ಒದಗಿಸಿದ ಹೊನ್ನಮ್ಮನು ನಾವು ಈ ಲೇಖನದಲ್ಲಿ ನಿರ್ದೇಶಿಸಿದ ಮೂರು ಅಂಶಗಳ ಐಕ್ಯತೆಯನ್ನು ಸಾಧಿದ್ದಾಳೆ ಎಂದರೆ ತಪ್ಪಾಗಲಿಕ್ಕಿಲ್ಲ.

## ಆಧುನಿಕ ಯುಗ

ಕನ್ನಡ ಸಾಹಿತ್ಯವು ಹೊಸಗಾಳಿಯನ್ನು ಸೇವಿಸತೊಡಗಿದುದು, ಹೊಸಮನ್ವಂತರಕ್ಕೆ ಕಾಲಿಟ್ಟುದುದು ಹತ್ತೊಂಬತ್ತನೆಯ ಶತಮಾನದಲ್ಲಿ. ಬಹುಶಃ ಮುದ್ದಣನೇ ಹರಿಕಾರ. ಬಹು ಸಾಮಾನ್ಯ ಕುಟುಂಬದಲ್ಲಿ ಹುಟ್ಟಿ, ಬಡತನದಲ್ಲಿ ಬದುಕಿ, ಬರೆಹಕ್ಕೆ ಬಹು ವಿನೀತವಾಗಿಯೇ ಕೈಹಾಕಿ, ತನ್ನ ಹೆಸರನ್ನು (ನಂದಳಿಕೆ ನಾರಣಪ್ಪ) ಪ್ರಕಟಿಸಲೂ ಹೆದರಿದ ಮುದ್ದಣ್ಣ ಸಾಮಾನ್ಯನೇ. ಆತನು ತನ್ನ ಕಾವ್ಯಕ್ಕೆ ಪೌರಾಣಿಕ ಕಥಾವಸ್ತುಗಳನ್ನೇ ಆರಿಸಿಕೊಂಡರೂ ಹೇಳುವ ರೀತಿಯಲ್ಲಿ ನಾವೀನ್ಯವಿದೆ. ಏರಿ ಳಿಯದ ಗಂಟಲಲ್ಲಿ ಕಡುಬನ್ನು ತುರುಕಬಾರದೆಂಬ ವಾಸ್ತವಿಕ ಎಚ್ಚರ, ಸಾಮಾನ್ಯ ಪ್ರಜ್ಞೆ ಆತನಿಗಿದೆ. ಮುದ್ದಣ್ಣ–ಮನೋರಮೆಯ ಮನೋಹರ ದಾಂಪತ್ಯದ ಚಿತ್ರಣವನ್ನು ನೀಡುವುದರ ಜೊತೆಗೆ ಬಡಕವಿಗಳ "ಭವತಿ ಭಿಕ್ಷಾಂದೇಹಿ" ಎಂಬ "ಸಪ್ತಾಕ್ಷರೀ ಮಂತ್ರ"ದ ಬಗೆಗೆ ಮಾಡಿದ ವ್ಯಾಖ್ಯಾನದಿಂದ ಮುದ್ದಣನಿಗೆ ಸಾಮಾನ್ಯರ ಜೀವನದ ಪ್ರಜ್ಞೆ ಎಂತಹದಿತ್ತು ಎಂಬುದು ನಮಗೆ ಅರಿವಾಗುತ್ತದೆ.

ಆಧುನಿಕ ಕಾಲದ (೧೯ ಮತ್ತು ೨೦ನೆಯ ಶ.) ಸಾಹಿತ್ಯವನ್ನು ಸಾಮಾನ್ಯವಾಗಿ ನವೋದಯ, ಪ್ರಗತಿಶೀಲರ ಮತ್ತು ನವ್ಯರ ಸಾಹಿತ್ಯವೆಂದು ವಿಭಾಗಿಸಲಾಗುತ್ತದೆ. ಆದರೆ ನಾಲ್ಕನೆಯದಾಗಿ ಮೂಡಿ ಬರುತ್ತಿರುವ ಶೂದ್ರಪ್ರಜ್ಞೆಯ ಅಥವಾ ದಲಿತಪಂಥೀಯ ಸಾಹಿತ್ಯವನ್ನು ನಾವು ಗುರುತಿಸಬೇಕು. ಹಿಂದಿನಂತೆ ಬರಿಯ ಕಾವ್ಯಕ್ಕೇ ಕೈಹಾಕದೆ ಹೊಸ ಪ್ರಕಾರಗಳಾದ ಕತೆ, ಕಾದಂಬರಿ, ನಾಟಕ, ಪ್ರಬಂಧ ಇವುಗಳಿಗೂ ಪ್ರವೇಶ ಮಾಡಿದುದು ಆಧುನಿಕ ಕಾಲದ ವೈಶಿಷ್ಟ್ಯ. ವಚನಗಳಲ್ಲಿ, ಚಂಪೂಕಾವ್ಯಗಳಲ್ಲಿ, ಕೆಂಪುನಾರಾಯಣನ ಕೃತಿಯಲ್ಲಿ ಗದ್ಯ ಕಂಡು ಬಂದರೂ, ಅದು ವಿಪುಲವಾಗಿ

ಬೆಳೆದದ್ದು ಆಧುನಿಕ ಯುಗದಲ್ಲಿ.

ಆಧುನಿಕ ಸಾಹಿತ್ಯದ ಮೊದಲ ಎರಡು ಘಟ್ಟಗಳಲ್ಲಿ ಸಾಮಾನ್ಯನಿಗೆ ಸಿಕ್ಕಂಥ ಸ್ಥಾನ ಮೂರನೆಯ ಘಟ್ಟದಲ್ಲಿ ಸಿಗದೇ ಹೋಯಿತು. ಕನ್ನಡ ಸಾಹಿತ್ಯವು ಆಧುನೀಕರಣಗೊಂಡದ್ದು ಅನೇಕ ಕಾರಣ–ಪ್ರಕ್ರಿಯೆಗಳಿಂದ. ಪಾಶ್ಚಾತ್ಯೀಕರಣ, ಔದ್ಯೋಗೀಕರಣ–ಯಾಂತ್ರೀಕರಣ, ನಗರೀಕರಣ, ಇತ್ಯಾದಿ ಪ್ರಕ್ರಿಯೆಗಳೂ, ಸಮಾಜವಾದ, ಸಮತಾವಾದ ಪ್ರಜಾಪ್ರಭುತ್ವ, ಇತ್ಯಾದಿ ವಿಚಾರಧಾರೆಗಳೂ, ಇಂಗ್ಲೀಷ್ ಭಾಷೆಯಿಂದ, ಬಂಗಾಳೀ ಭಾಷೆಯಿಂದ ಕನ್ನಡಕ್ಕೆ ಅನುವಾದಿತವಾದ ಕೃತಿಗಳೂ, ಸಾಮಾಜಿಕ,ಧಾರ್ಮಿಕ ಆಂದೋಲನ, ಹಾಗೂ ಸ್ವಾತಂತ್ರ್ಯ ಚಳುವಳಿಗಳೂ, ಬ್ರಿಟಿಶರು ತಮ್ಮ ನವೀನ ಆಳ್ವಿಕೆಯ ಮೂಲಕ ಜನಜೀವನದಲ್ಲಿ ಬಿತ್ತಿದ ಬದಲಾವಣೆಗಳೂ, ಮುದ್ರಣಾಲಯಗಳೂ, ನಿಯತ ಕಾಲಿಕೆಗಳೂ ಕನ್ನಡ ಸಾಹಿತ್ಯವು ಹೊಸ ಪ್ರಪಂಚವನ್ನು ಪ್ರವೇಶಿಸಲು ನೆರವಾದವು. "ಹೊಸದೊಂದು ಜೀವಂತ ಮನೋಧರ್ಮದ ದರ್ಶನವಾದದ್ದು... ಹೊಸದೊಂದು ಸಾಹಿತ್ಯದ ಜಗತ್ತೇ ಲಭ್ಯವಾದದ್ದು" (ಎಲ್.ಎಸ್. ಶೇಷಗಿರಿರಾವ್. ಹೊಸ ಕನ್ನಡ ಸಾಹಿತ್ಯ, ಬೆಂಗಳೂರು ವಿಶ್ವವಿದ್ಯಾಲಯ. ೧೯೭೫) ಈ ಕಾಲದಲ್ಲಿ.

## ನವೋದಯ ಸಾಹಿತ್ಯ

ಇದುವರೆಗೂ ಅರಮನೆಯ ಹಾಗೂ ಗುರುಮನೆಯ ಸಾಹಿತ್ಯವಾಗಿದ್ದುದು ಆಧುನಿಕ ಕಾಲದಲ್ಲಿ ಊರು–ಕೇರಿಗಳ, ನೆರೆ–ಹೊರೆಗಳ, ಮನೆ–ಮನೆಯ ಸಾಹಿತ್ಯವಾಗತೊಡಗಿತು. ಸಮಾಜ ವಿಜ್ಞಾನಗಳ–ಅದರಲ್ಲೂ ಮನಃಶಾಸ್ತ್ರ ಮತ್ತು ಸಮಾಜ–ಮಾನವ ಶಾಸ್ತ್ರಗಳ–ಬೆಳವಣಿಗೆಯು ಬರೆಹಗಾರನಲ್ಲಿ ವಾಸ್ತವ ಪ್ರಜ್ಞೆ ಮೂಡಲು ಹಾದಿಮಾಡಿತು. ನವೋದಯದ ಬರೆಹಗಾರರು ದೇವರಿಂದ ಮಾನವನ ಕಡೆಗೆ, ಶಿಷ್ಟರಿಂದ ಸಾಮಾನ್ಯರ ಕಡೆಗೆ, ಸಾಮಾನ್ಯನು ಜೀವಿಸುವ ಪರಿಸರದ ಕಡೆಗೆ ಗಮನ ಹರಿಸಿದರು. ಶ್ರೀ ಶೇಷಗಿರಿರಾಯರ ಮಾತುಗಳಲ್ಲಿ, "ನವೋದಯ ಸಾಹಿತ್ಯ ಗೌಡರ ಮಲ್ಲಿಯಲ್ಲಿ ಘನತೆಯನ್ನು ಗುರುತಿಸಬಲ್ಲದು, ಕರಿಸಿದ್ದನ ಮರಣಕ್ಕೆ ಅವನ ಹೆಂಡತಿಯ ಸಂಕಟಕ್ಕೆ ದುಃಖಿಸಬಲ್ಲುದು, ಹರೆಯದ ರಂಗಪ್ಪನ ಕೋರ್ಟ್ ಷಿಪ್ಪಿನಲ್ಲಿ, ದೀಪಾವಳಿಯಲ್ಲಿ ಆಸಕ್ತಿ ತಳೆಯಬಲ್ಲದು. ಹೊಲೆಯ ಚೋಮನ ನೋವು ಈ ಕಾಲದ ಕಾದಂಬರಿಗೆ ವಸ್ತುವಾಗಬಲ್ಲದು, ಸಂಗೀತಕ್ಕೆ ಬಾಳನ್ನು ಮುಡುಪು ಮಾಡಿದ ಲಕ್ಷ್ಮಣನ ಬಾಳೂ ವಸ್ತುವಾಗಬಲ್ಲದು. ವೈವಿಧ್ಯದಲ್ಲಿ ಬೆಂದು ಹೊರಗೆ ಒರಟಾಗಿ ಕಂಡರೂ ಅಂತಃಕರಣವನ್ನು ಜೀವಂತವಾಗಿಟ್ಟುಕೊಂಡ ಪಾತ್ರನೂ ಇದರ ರಂಗಭೂಮಿಯ ಮೇಲೆ ಕಾಣಿಸಿಕೊಳ್ಳುತ್ತಾಳೆ,... ಜಲಗಾರನೂ ಕಾಣಿಸುತ್ತಾನೆ." (ಹೊಸ ಕನ್ನಡ ಸಾಹಿತ್ಯ)

ಆಧುನಿಕ ಸಾಹಿತ್ಯದ ನಿರ್ಮಾತೃಗಳಲ್ಲಿ ಮೇಲ್ ಜಾತಿಯವರೂ ಇದ್ದಾರೆ, ಕೆಳಜಾತಿಯವರೂ ಇದ್ದಾರೆ; ಮಧ್ಯಮವರ್ಗದವರ ಜೀವನದಂತೆ ಕೆಳ ವರ್ಗದವರ ಜೀವನವನ್ನೂ ವಸ್ತುವಾಗಿ ತೆಗೆದುಕೊಂಡಿದ್ದಾರೆ. ಪಂಜೆ ಮಂಗೇಶರಾಯ. ಬಿ.ಎಂ. ಶ್ರೀಕಂಠಯ್ಯ, ಶಿವರಾಮ ಕಾರಂತ, ಆದ್ಯ ರಂಗಾಚಾರ್ಯ, ಕೆ.ವಿ. ಪುಟ್ಟಪ್ಪ, ದ.ರಾ. ಬೇಂದ್ರೆ, ಅ.ನ. ಕೃಷ್ಣರಾಯ, ಪು.ತಿ. ನರಸಿಂಹಾಚಾರ್ಯ, ಕೆ.ಎಸ್. ನರಸಿಂಹಸ್ವಾಮಿ, ಜಿ.ಪಿ. ರಾಜರತ್ನಂ, ಮುಂತಾದ ಕತೆಗಾರರೂ, ಕವಿಗಳೂ, ನಾಟಕಕಾರರೂ, ಕಾದಂಬರಿಕಾರರೂ ನವೋದಯ ಸಾಹಿತ್ಯವನ್ನು ಬಲಿಷ್ಠಗೊಳಿಸುವುದರಲ್ಲಿ ನಿರತರಾದವರು ಬೇಂದ್ರೆಯವರು ಶರಣರ ಹಾಗೂ ಜಾನಪದ ಕವಿಗಳ ಪರಂಪರೆಯನ್ನು ಜೀವಂತಗೊಳಿಸಿದರು. ಸಾಮಾನ್ಯರ ಮಾತುಗಳನ್ನು ಕಾವ್ಯಗೊಳಿಸಿದರು. ಮಲೆನಾಡವರ ಸಾಮಾನ್ಯ ಜೀವನವನ್ನು ಕಂಡರಿಸಿದವರು ಕುವೆಂಪು. ಹೆಂಡಕುಡುಕನ ಮನೋದೃಷ್ಟಿಯನ್ನು ಇರಿಸಿಕೊಂಡು ಅತಿ ಸಾಮಾನ್ಯರ ಜೀವನ ರೂಪರೇಷೆಗಳನ್ನು ನವೀನವಾಗಿ ನೀಡಿದವರು ರಾಜರತ್ನಂ.

## ಪ್ರಗತಿಶೀಲ ಸಾಹಿತ್ಯ

ನವೋದಯ ಸಾಹಿತ್ಯದ ಬೆನ್ನಿನಲ್ಲೇ ಬಂದದ್ದು ಪ್ರಗತಿಶೀಲ ಸಾಹಿತ್ಯ. ಕಾದಂಬರಿ ಸಾಮ್ರಾಟನೆಂದು ಹೆಸರು ಪಡೆದ. ಅ.ನ.ಕೃ. ಪ್ರಗತಿಶೀಲರ ಆದ್ಯಪುರುಷರಾದರು. "ಎಲ್ಲ ಸಾಹಿತ್ಯ ಕಲೆಗಳ ಉಗಮಕ್ಕೂ ಸಾಮಾನ್ಯ ಜನತೆಯೇ ಮೂಲ... ಉತ್ತಮ ಕಲೆಯ ತಾಯಿಬೇರು. ಸಾಮಾನ್ಯ ಜೀವನದಲ್ಲಿ ಅಡಗಿದೆ." ಎಂಬ ಅ.ನ.ಕೃ. ಅಭಿಪ್ರಾಯವೇ ಪ್ರಗತಿಶೀಲರ ನಂಬುಗೆ. ಆದುದರಿಂದಲೇ ಪ್ರಗತಿಶೀಲ ಸಾಹಿತ್ಯವು ಬಡಜನರ ಕೊಳಗೇರಿವಾಸಿಗಳ ಶೋಚನೀಯ ಜೀವನವನ್ನೂ, ಶ್ರೀಮಂತರ ಹೀನಕಾರ್ಯಗಳನ್ನೂ ರೋಷದಿಂದ ಚಿತ್ರಿಸಹೊರಟು, ಜನ ಜೀವನವನ್ನು ಯಥಾವತ್ತಾಗಿ ನೀಡಲು ಅವರು ಪ್ರಯತ್ನಿಸಿದರು. ಅನೇಕ ಕತೆ, ಕಾದಂಬರಿ, ನಾಟಕಗಳು ಪ್ರಕಟವಾದುವು. ಅ.ನ. ಕೃ. ಬಸವರಾಜ ಕಟ್ಟೀಮನಿ. ನಿರಂಜನ, ಕುಮಾರ ವೆಂಕಣ್ಣ, ಮುಂತಾದವರೆಲ್ಲಾ ಪ್ರಗತಿಶೀಲ ಪ್ರಜ್ಞೆಗೆ ಸಾಕ್ಷೀಭೂತರಾದರು.

ನವೋದಯ ಸಾಹಿತ್ಯವು ಮುಖ್ಯವಾಗಿ ರಮ್ಯ ಸಂಪ್ರದಾಯದ್ದು; ಪ್ರಗತಿಶೀಲ, ವರ್ಗ ಹೋರಾಟದ ಸಾಹಿತ್ಯ; ಆದರೆ ನವ್ಯ ಸಾಹಿತ್ಯ ತನ್ನ ಮೊಗವನ್ನು ಒಳಗೆ ಎಳೆದುಕೊಂಡು ಅಂತರ್ಧ್ಯಾನಸಕ್ತವಾದ ಆಮೆ ಸಾಹಿತ್ಯ. ನವೋದಯದ ರಮ್ಯದ ರಸದಲ್ಲಿಯೇ ಅನುಭವವನ್ನು ಪಡೆದ ನರಸಿಂಹ ಸ್ವಾಮಿ, ಜಿ. ಎಸ್. ಶಿವರುದ್ರಪ್ಪ, ಚೆನ್ನವೀರ ಕಣವಿ, ಹಿ. ಮ. ನಾಗಯ್ಯ, ನಿಸಾರ್ ಅಹಮದ್ ಮೊದಲಾದವರು ನವ್ಯದ ಕಡೆ ಮೊಗವಾದುದನ್ನು ಕಾಣುತ್ತೇವೆ. ವಿನಾಯಕರು ನವೋದಯ ಸಂಪ್ರದಾಯದಲ್ಲಿ ಬೆಳೆದು ನವ್ಯದ ಹಾದಿಯ ಕಡೆ ಬೆಳಕು ತೋರಿಸಿದರು. ಎಂ. ಗೋಪಾಲಕೃಷ್ಣ ಅಡಿಗರು ನವ್ಯ ಸಾಹಿತ್ಯದ ಅಧ್ಯಕ್ಷರಾದರು. ನಡೆದು ಬಂದ ದಾರಿಯ ಕಡೆ ನೋಡದೆ ಹೋಗಬೇಕೆಂದು ಅಡಿಗರು ಕರೆ ಕೊಟ್ಟರು. ಭಾವಕ್ಕೆ ಅನುಭವಕ್ಕೆ ಬೆಲೆಯನ್ನು ನೀಡಿ. ಛಂದಸ್ಸಿಗೆ ಮಾನ್ಯತೆ ನೀಡದೇ ಹೋದದ್ದೂ, ಪದ್ಯವೆಂದಾಕ್ಷಣವೇ ಕಾವ್ಯವಾಗುವುದಿಲ್ಲ,

### ಓವರ್ ಟೈಮ್!

ಮರಾಠಿ ರಂಗಭೂಮಿಯ ಸುಪ್ರಸಿದ್ಧ ನಟ ಕಾಶೀನಾಥ ಘಾಣೇಕರರ ಮನೆಯಲ್ಲಿ ಮೂರು ದಿನಗಳಿಂದಲೂ ಬಣ್ಣ ಬಳಿಯುವ ಕೆಲಸ ನಡೆದಿತ್ತು. ಶನಿವಾರ ಮಧ್ಯಾಹ್ನ ಅವರ ಜನಪ್ರಿಯ ನಾಟಕ ಗಾರಂಬೀಚಾ ಬಾಪೂ ಶಿವಾಜೀ ಮಂದಿರದಲ್ಲಿ ನಡೆಯಲಿತ್ತು. ಘಾಣೇಕರ್ ಬಣ್ಣ ಬಳಿಯುವವರೊಡನೆ– ಶನಿವಾರ ಮಧ್ಯಾಹ್ನದ ನಾಟಕಕ್ಕೆ ನಿಮಗೆ ಪಾಸು ಕೊಡಲೆ?– ಎಂದರು. ಆಗಲಿ ಎಂದರವರು.

ಶನಿವಾರ ನಾಟಕ ನೋಡಿ ರವಿವಾರ ಆ ಕೆಲಸಗಾರರು ಬಿಲ್ ಕಳುಹಿಸಿದಾಗ ಅದರಲ್ಲಿ ಕೆಲಸದ ವಿವರದೊಂದಿಗೆ ಹೀಗೆ ಬರೆಯಲಾಗಿತ್ತು– "ಶನಿವಾರ ಮಧ್ಯಾಹ್ನ ೪ ರಿಂದ ೮ ರ ವರೆಗೆ ಶಿವಾಜೀ ಮಂದಿರದಲ್ಲಿ ಓವರ್ ಟೈಮ್ ಮಾಡಿದೆವು... ಅದರ ಮಜೂರಿ... ರೂಪಾಯಿ!"

ಸವ್ಯಸಾಚಿ

ಗದ್ಯವೂ ಕಾವ್ಯವಾಗಬಹುದು ಎಂದು ನವ್ಯರು ವಾದ ಹೂಡಿದರು. ಪ್ರತಿಮೆ ಸಂಕೇತ ಇತ್ಯಾದಿಗಳ ವಿಪುಲ ಬಳಕೆಯಾಗತೊಡಗಿತು. ಸಾಯುತ್ತಿದ್ದ ಸಾಹಿತ್ಯಕ್ಕೆ ಚೇತನವನ್ನು ನೀಡಿ, ಹೊಸ ತಿರುವನ್ನು ಕೊಟ್ಟವರು ನವ್ಯರೆಂಬುದೇನೋ ನಿಜವೇ. ರಾಮಚಂದ್ರ ಶರ್ಮ, ಯು. ಆರ್. ಅನಂತಮೂರ್ತಿ, ಪಿ. ಲಂಕೇಶ, ಬುದ್ದಣ್ಣ ಹಿಂಗಮಿರೆ, ಪೂರ್ಣಚಂದ್ರ ತೇಜಸ್ವಿ, ಸುಮತೀಂದ್ರ ನಾಡಿಗ–ಹೀಗೆ ಅನೇಕ ಕಿರಿಯರೆಲ್ಲಾ ನವ್ಯ ಪಂಥಿಗಳಾದರು. ಇವರ ಧೋರಣೆಯನ್ನು ಪ್ರತಿಪಾದಿಸಲೆಂದೇ 'ಸಂಕ್ರಮಣ'ದಂತಹ ಪತ್ರಿಕೆಗಳೂ ಆರಂಭವಾದವು. ಆದರೆ ಜನರ ಜೀವನವು ಸುಧಾರಿಸಬೇಕು. ಸಾಮಾನ್ಯ ಜನರೂ ಉತ್ತಮ ಜೀವನ ಮಾಡಬೇಕು ಎಂದು ಹಂಬಲ ಪ್ರಗತಿಶೀಲರಲ್ಲಿದ್ದಂಥ ಕಾಳಜಿ ಇವರಲ್ಲಿ ಅಷ್ಟಾಗಿ ಕಂಡು ಬರಲಿಲ್ಲ.

## ದಲಿತ ಪಂಥೀಯ ಸಾಹಿತ್ಯ

ಆದರೆ ತೀರಾ ಇತ್ತೀಚೆಗೆ ನವ್ಯ ಸಾಹಿತ್ಯಕ್ಕೆ ಹೊಸ ತಿರುವನ್ನು ಕಂಡುಕೊಳ್ಳುವ ಯತ್ನ ನಡೆಯುತ್ತಿದೆ. ದೀನ ದಲಿತರ, ಶೋಷಿತರ, ಅಸ್ಪೃಶ್ಯರ, ಹಿಂದುಳಿದವರ ಅನಕ್ಷರಸ್ಥರ, ಹಳ್ಳಿಗರ, ಜೀವನವು ಹೆಚ್ಚು ಹೆಚ್ಚಾಗಿ ಗಮನ ಸೆಳೆಯುತ್ತಿದೆ. ದೇಶದ ಪ್ರಗತಿಯಲ್ಲಿ ಸಾಮಾನ್ಯರ ಪಾತ್ರ ಅಗಾಧವಾದುದೆಂಬುದನ್ನು ಅರಿತ ನವ ಪೀಳಿಗೆಯು 'ಶೂದ್ರ' ಸಾಹಿತ್ಯವನ್ನು ಕಟ್ಟಲು ಹೊರಟಂತೆ ಕಾಣುತ್ತದೆ. 'ಹೊಲೆ ಮಾದಿಗರ ಹಾಡುಗಳು' (ಸಿದ್ಧಲಿಂಗಯ್ಯ), ದೇವನೂರು ಮಹದೇವರ, ಚಂದ್ರಶೇಖರ ಕಂಬಾರರ, ಚಂದ್ರಶೇಖರ ಪಾಟೀಲರ, ಕೃಷ್ಣ ಆಲನಹಳ್ಳಿಯವರ (ಹೀಗೆಯೇ ಇನ್ನೂ ಅನೇಕ ತರುಣರ) ಬರೆಹಗಳು ದಲಿತಪಂಥವನ್ನು ಹಿಡಿದೆತ್ತಿ ಶಿಷ್ಟರ ಹುಟ್ಟನ್ನು ಅಡಗಿಸಲು ಹೊರಟಂತೆ ಕಾಣುತ್ತದೆ. ಸಾಹಿತ್ಯ ಮನೋಲ್ಲಾಸಕ್ಕಲ್ಲ, ಹೃದಯ ವೈಶಾಲ್ಯಕ್ಕಲ್ಲ, ಮುಕ್ತಿ ಸಂಚಯಕ್ಕಲ್ಲ, ಆದರೆ ಜನರ–ಅದರಲ್ಲೂ ಸಾಮಾನ್ಯ ಜನರ ಜೀವನವು ಸಹ ಪಾಡ, ಸರ್ವತಂತ್ರಸ್ವತಂತ್ರವಾದ ವೈಚಾರಿಕ ಜೀವನವಾಗಬೇಕು ಎಂಬ ಉದ್ದೇಶಕ್ಕಾಗಿ, ಎಂಬುದೇ ಇವರ ಧೋರಣೆಯೆಂದು ಕಾಣುತ್ತದೆ. ಇನ್ನೂ ಐವತ್ತನ್ನೂ ಮೀರದವರೇ ಈ ಪಂಥದ ಪ್ರವರ್ತಕ ಪೋಷಕರಾಗಿರುವುದರಿಂದಲೂ, ಉದ್ವೇಗ, ರೋಷ, ಅತಿಯಾದ ತುಡಿತ ಇವುಗಳನ್ನು ತುಂಬಿಕೊಂಡಿರುವುದರಿಂದಲೂ, ಸಾಮಾನ್ಯರು ಸಾಹಿತ್ಯಕ್ಕೆ ವಸ್ತು ಮಾತ್ರವಾಗದೆ ಸಾಮಾಜಿಕ ಕ್ರಾಂತಿಯ ಪಾಲುಗಾರರೂ ಆಗುವಂತೆ ಇವರು ಯತ್ನಿಸುತ್ತಿರುವ ಸೂಚನೆಗಳಿವೆ.

## ಒಟ್ಟಿನಲ್ಲಿ....

ಜನಪದ ಸಾಹಿತ್ಯದಲ್ಲಿ ಸಾಮಾನ್ಯ ಜನರು ತಮ್ಮ ಜೀವನವನ್ನು ಹೇಗೆ ಕಂಡರೊ ಹಾಗೆ ಹಾಡಿಕೊಂಡರು; ಶಾಸನಗಳಲ್ಲಿ ಸಾಮಾನ್ಯ ವೀರರ, ಮಹಾಸತಿಯರ, ಕಿರು ಜೀವನ ಪರಿಚಯವು ಕಿರು ಪಾಠಗಳ ಪ್ರಕಟವಾಯಿತು, ಚಂಪೂ ಕವಿಗಳು ಮತ್ತಿತರ ಪುರಾಣ ಕವಿಗಳು ಸಾಮಾನ್ಯ ಜನರ ಜೀವನವನ್ನು ಪ್ರಾಸಂಗಿಕವಾಗಿ ಬಳಸಿಕೊಂಡರು. ವಚನಕಾರರೂ ಕೀರ್ತನಕಾರರೂ, ಸಾಂಗತ್ಯ–ತ್ರಿಪದಿಕಾರರು, ಜನಸಾಮಾನ್ಯರ ನೈಜ ಚಿತ್ರಣವನ್ನು ನೀಡುವುದರ ಜೊತೆಗೆ ಅವರ ಜೀವನವು ಉತ್ತಮಗೊಳ್ಳಬೇಕೆಂದು ಕ್ರಾಂತಿಯನ್ನುಂಟು ಮಾಡಿದರು; ದೇವರಿಂದ ಮಾನವನೆಡೆಗೆ ನುಗ್ಗಿದ ಆಧುನಿಕರಲ್ಲಿ ನವೋದಯ ಸಾಹಿತಿಗಳು ರಮ್ಯಕ್ಕೆ ವಶವಾದರು; ಪ್ರಗತಿಶೀಲರು ಕೆಳಸ್ತರದ ಜನರ ಜೀವನವನ್ನು ಉದಾರವಾಗಿ ಬಳಸಿಕೊಂಡರು; ನವ್ಯರು ವೈಯಕ್ತಿಕತೆಯ ನೆವದಲ್ಲಿ ಸಾಮಾನ್ಯರನ್ನು ಮರೆತರು, ಶೂದ್ರ(ದಲಿತ) ಪಂಥೀಯರು ಸಾಮಾನ್ಯರ ನರನಾಡಿಗಳಲ್ಲಿ ಸಂಚರಿಸತೊಡಗಿದರು. ಇದು ಶ್ರೀಸಾಮಾನ್ಯನು ಕ್ರಿ. ಶ. ೯ನೆಯ ಶತಮಾನದಿಂದ ೨೦ನೆಯ ಶತಮಾನದ ಉತ್ತರಾರ್ಧದವರೆಗೆ ಕನ್ನಡ ಸಾಹಿತ್ಯದಲ್ಲಿ ಕೈಕೊಂಡ ಯಾತ್ರೆಯ ಸ್ಥೂಲ ಪರಿಚಯ. ●

# ಮಹಿಳೆಯರು ಮಾತ್ರ ಶ್ರೀಸಾಮಾನ್ಯನಿಗೆ ಬರೆಯುತ್ತಾರೆ

ವೆಂಕಟಲಕ್ಷ್ಮಿ ಬಿ. ಎಸ್.

ನನಗೆ ಬರೆಯುವಂತೆ ಸೂಚಿಸಿರುವುದು—ನಾನು ಈಗಾಗಲೆ ಹಲವೆಡೆ ಬರೆದು ಮಹಿಳಾ ಸಾಹಿತಿಗಳಲ್ಲಿ ಸಾಕಷ್ಟು ಅಸಮಾಧಾನವನ್ನು ಉಂಟು ಮಾಡಿರುವಂತಹ ವಿಷಯ. ಈಚಿನ ವರ್ಷಗಳಲ್ಲಿ ಸಾಹಿತ್ಯ ದಿಗಂತದಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಂಡಿದ್ದಾರೆ ಎಂಬುದು ಎಷ್ಟರ ಮಟ್ಟಿಗೆ ನಿಜವೋ, ಅಷ್ಟೇ ಸತ್ಯ, ಅವರಲ್ಲಿ ಬಹುಪಾಲು ಜನ ತಮ್ಮ ಸಾಹಿತ್ಯ ಸೃಷ್ಟಿಶೀಲವಾಗಬೇಕು ಎಂಬುದರ ಬಗ್ಗೆ ಯಾವೊಂದೂ ಕಾಳಜಿ ವಹಿಸದೆ. ಬರೀ ಲೇಖನದ ಅಥವಾ ಪುಸ್ತಕಗಳ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುವಲ್ಲೇ ಕಾತರರಾಗಿದ್ದಾರೆ ಎಂಬುದು. ವಾಸ್ತವ ಸ್ಥಿತಿ ಹೀಗಿದ್ದರೂ ಈಗ ಒಂದೆರಡು ವರ್ಷಗಳ ಹಿಂದೆ ಲೇಖನಗಳ ಮೂಲಕ, ಮಹಿಳೆಯರು ಸಾಹಿತ್ಯವನ್ನು ಸೃಜನಶೀಲವಾಗಿಸಿಲ್ಲ ಎಂಬುದನ್ನು ತೋರಿಸಿ ಕೊಟ್ಟಾಗ, ಅವರೆಲ್ಲರ ಕಡೆಯಿಂದ ಬಂದ ಪ್ರತಿಕ್ರಿಯೆ—ಅನಾಮಧೇಯ ಬೆದರಿಕೆ ಪತ್ರಗಳು—ಟೀಕೆ ವಿಮರ್ಶೆಗಳನ್ನು ಅವರೆಷ್ಟರ ಮಟ್ಟಿಗೆ ಅವ್ಯಾನಿಸುತ್ತಾರೆ ಎಂಬುದನ್ನು ತಿಳಿಸಿಕೊಟ್ಟಾಗಿನಿಂದ ಅವರನ್ನು ಕುರಿತು ಯಾವ ವಿಷಯವನ್ನು ಬರೆಯುವಾಗಲೂ ಕೈ ಅಲ್ಲಲ್ಲಿ ತಡೆಯುತ್ತದೆ.

"ಶ್ರೀ ಸಾಮಾನ್ಯ"—ಈತ ಈಗಾಗಲೆ ಭಾಷಣಗಳ ಬಿಸಿಯಲ್ಲಿ, ಚರ್ಚೆಗಳ ಕಾವಿನಲ್ಲಿ ಸಿಕ್ಕಿ ನುಗ್ಗಾಗಿರುವ ವ್ಯಕ್ತಿ. ತನಗೆ ಇದರಿಂದಾಗಿ ಯಾರ ಪ್ರಯೋಜನವಾಗಿದೆಯೋ ಇಲ್ಲವೋ, ತನ್ನ ಹೆಸರನ್ನು ಬಳಸಿಕೊಂಡು ಮತ್ತೊಬ್ಬರು ಪಡೆಯುತ್ತಿರುವ ಲಾಭವನ್ನೂ ಪತ್ತೆ ಹಚ್ಚಲಾರದಷ್ಟು ಅಮಾಯಕನಾಗಿರುವ ಭಾರತದ "ಶ್ರೀ ಸಾಮಾನ್ಯ" ಸಾಹಿತ್ಯಕ್ಕೂ ತನ್ನ ಹೆಸರನ್ನು ಬಳಸುವ ಸಿಯವ್ಯಾನಿ ಕೊಟ್ಟು, ಅಲ್ಲಿಯೂ ತನ್ನ ಹೆಸರಿನಲ್ಲಿ ಒಂದಿಷ್ಟು ಸೇವೆ ಸಲ್ಲಲಿ ಎಂದು ಸುಮ್ಮನಿದ್ದಾನೆ. ಸಾಹಿತ್ಯಸೇವೆಗೆ ಸ್ತ್ರೀ ಪುರುಷರು ಎಂಬ ಸೀಮಿತ ಅರ್ಥ ಸಲ್ಲದಿದ್ದು, ಅವರಿಬ್ಬರಿಗೂ "ಶ್ರೀ ಸಾಮಾನ್ಯ" ಇತ್ತಿರುವ ಈ ಅವಕಾಶದಲ್ಲಿ ಸಮಾನ ಪಾಲಿದ್ದರೂ, ಸ್ತ್ರೀಯರೆಷ್ಟರ ಮಟ್ಟಿಗೆ ಈ ಸಂದರ್ಭವನ್ನು ಉಪಯೋಗಿಸಿಕೊಂಡಿದ್ದಾರೆ ಎಂಬುದು ವಾಸಿಲ್ಲಿ ಚರ್ಚಿಸಬೇಕಾದ ವಿಷಯ.

ಮಹಿಳೆಯರು ಮಾತ್ರ ಶ್ರೀ ಸಾಮಾನ್ಯನಿಗಾಗಿ ಬರೆಯುತ್ತಾರೆ ಎಂಬುದು ಸಾಧಾರಣ ಸುಳ್ಳಿಗಿಂತಲೂ ಒಂದು ಪಟ್ಟು ಹೆಚ್ಚಿನ ಸುಳ್ಳು. ಮಹಿಳೆಯರಲ್ಲಿ ಬಹುಪಾಲಿನವರು ತಮ್ಮ ಸಾಹಿತ್ಯದ ಆಯಾಮಗಳನ್ನು ಕತೆ ಕಾದಂಬರಿಗಳಿಗೆ ಸೀಮಿತಗೊಳಿಸಿಕೊಂಡು ಸುತ್ತಮುತ್ತಲಿನ ಆಗುಹೋಗುಗಳಿಗೆ ಬೆನ್ನು ತಿರುಗಿಸಿ ನಿಂತಿರುವವರು; ಸಾಮಾಜಿಕ ವಿಷಯಗಳನ್ನು ತೋರಿಸುವದರಲ್ಲಾಗಲಿ ಅಥವಾ ಜನತೆಯ ಅಭಿಪ್ರಾಯಗಳಿಗೆ ಒಂದು ಮೂಲವನ್ನು ಒದಗಿಸುವದರಲ್ಲಾಗಲಿ ಸೋತಿರುವ ಮಹಿಳಾ ಸಾಹಿತಿ, ಸಾಮಾಜಿಕ ಪ್ರಗತಿಗೆ ಅಳತೆಗೋಲಾದ ಶ್ರೀ ಸಾಮಾನ್ಯನ ಬೇಕು ಬೇಡುಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡು ಬರವಣಿಗೆಯಲ್ಲಿ ತೊಡಗಿರುವುದು ವನದಂತೂ ತಿಳಿಯದ ವಿಷಯ,

ಶ್ರೀ ಸಾಮಾನ್ಯ ಸರ್ಕಾರ—ಸಂಘ ಸಂಸ್ಥೆಗಳು—ನಾಗರಿಕರು ಇವರೆಲ್ಲರ ಕನಿಕರವನ್ನು ಕೆರಳಿಸಿರುವ ವ್ಯಕ್ತಿ. ಶ್ರೀಮಂತಿಕೆಯೆಂಬ ಪದದ ಅರ್ಥವನ್ನೇ ಅರಿಯದ ಅಥವಾ ಶ್ರೀಮಂತಿಕೆಯನ್ನು ತನ್ನ ತಲೆಮಾರಿನಲ್ಲಿ ಕಾಣಲೂ ಅಸಾಧ್ಯ ಎಂಬ ಭರವಸೆಯನ್ನು ಹೊಂದಿರುವ ಈತ ತನಗಾಗಿ ಸಾಹಿತ್ಯ ಕ್ಷೇತ್ರದಿಂದ ಏನನ್ನು ನಿರೀಕ್ಷಿಸುತ್ತಾನೆ ಎಂಬುದನ್ನು ಇಲ್ಲಿ ವಿವೇಚಿಸಲಾಗಿದೆ. ರಾಜಕಾರಣಿಗಳು. ಆರ್ಥಿಕ ತಜ್ಞರು, ಸಮಾಜ ಸುಧಾರಕರು. ಮತ್ತಿತರ ರಂಗಗಳಲ್ಲಿನ ವ್ಯಕ್ತಿಗಳು ಅನೇಕ ಸಂದರ್ಭಗಳಲ್ಲಿ ಶ್ರೀ ಸಾಮಾನ್ಯನನ್ನು ತಮ್ಮ "ಗುರಿ"ಯನ್ನಾಗಿಟ್ಟುಕೊಂಡು ಅವನ ಸುಧಾರಣೆಗಾಗಿ ಪ್ರಯತ್ನಗಳನ್ನು ನಡೆಸುತ್ತ ಬಂದಿದ್ದಾರೆ.

ಮಹಿಳೆಯರು. ಆಗಲೇ ಹೇಳಿದಂತೆ, ತಮ್ಮೆಲ್ಲ ಅಭಿವ್ಯಕ್ತಿಗೆ ಸಾಧಾರಣವಾಗಿ ಆಯ್ದುಕೊಳ್ಳುವುದು ಕತೆ ಕಾದಂಬರಿ ಮಾಧ್ಯಮವನ್ನು ಮಧ್ಯಮ ಅಥವಾ ಅದಕ್ಕೂ ಸ್ವಲ್ಪ ಮೇಲ್ಮಟ್ಟದ ಕುಟುಂಬ. ಅದರೊಳಗಿನ ವ್ಯಕ್ತಿಗಳು ಇತರ ಕಥಾವಸ್ತು. ಸಾಮಾನ್ಯ ಸಂಸಾರಗಳಲ್ಲಿ ಸಂಭವಿಸಬಹುದಾದ ಘಟನೆಗಳು, ಉದ್ಭವಿಸಬಹುದಾದ ಸಮಸ್ಯೆಗಳು, ವ್ಯಕ್ತಿ—ವ್ಯಕ್ತಿಗಳ ದ್ವಂದ್ವ ಉಂಟಾಗಬಹುದಾದ ಸರಸ—ವಿರಸಗಳು, ಗಂಡು—ಹೆಣ್ಣಿನ ಮಧ್ಯೆ ಅಂಕುರಿಸಬಹುದಾದ ಪ್ರೀತಿ—ಪ್ರೇಮ, ಅದನ್ನು ಸಾಧಿಸಲು ಅವರು ಹೂಡುವ ಹಲವಾರು ಪ್ರಸಂಗಗಳು, ಇವೆಲ್ಲ ಕಾದಂಬರಿ-ಕತೆಯ ಚೌಕಟ್ಟಿಗೆ ಒಳಪಡುತ್ತಾರೆ. ಅತ್ತೆ—ಮಾವಂದಿರ ಅತಿ ಒಳ್ಳೆತನ ಅಥವಾ ಅತಿ ದೌರ್ಜನ್ಯ, ಗಂಡು- ಹೆಣ್ಣುಗಳ ಮಧ್ಯ ವಿಪರೀತ ಸಾಮರಸ್ಯ ಇಲ್ಲವೇ ತೀವ್ರ ಮನಸ್ತಾಪ ತುಂಬಿ ತುಳುಕಾಡುವ ಸಿರಿತನ ಇಲ್ಲವೇ ಕಿತ್ತು ತಿನ್ನುವ ಬಡತನ, ಹೀಗೆ ಯಾವುದನ್ನಾದರೂ ಅತಿರೇಕಕ್ಕೆ ಕೊಂಡೊಯ್ದು ಅದಕ್ಕೆ ಬಣ್ಣ ಕಟ್ಟಿ, ಕಾದಂಬರಿಯನ್ನು ಒಂದು ನೂರೈವತ್ತೋ ಇನ್ನೂರೋ ಪುಟಗಳಷ್ಟು ಓಡಿಸುವದಕ್ಕೆ ತಕ್ಕ ಸ್ವಾರಸ್ಯಕರ ಸಾಮಗ್ರಿ ಇಲ್ಲದಿದ್ದರೂ ಅಂತೂ ಅದಕ್ಕೆ ಒಂದು ಕೊನೆ ಕಾಣಿಸುವುದು ಮಹಿಳಾ ಸಾಹಿತಿಗಳ ಜಾಯಮಾನವಾಗಿದೆ. ಒಂದು ಕೃತಿಯಿಂದ ಮತ್ತೊಂದು ಕೃತಿಗೆ ತಮ್ಮ ಬರವಣಿಗೆಯ ಮಟ್ಟ ಹೆಚ್ಚುತ್ತಾ ಹೋಗಬೇಕು ಎಂಬ ಉದ್ದೇಶದಿಂದ ಸಾಹಿತ್ಯ ರಚನೆಯಲ್ಲಿ ತೊಡಗಿರುವವರು ಕೆಲವರು ಮಾತ್ರ ಮತ್ತೆಲ್ಲರಿಗೂ ಕತೆ-ಕಾದಂಬರಿ ರಚನೆ ಕಾಲ ಕಳೆಯುವ ಸಾಧನ. ಸಾಧಾರಣವಾಗಿ ಎಲ್ಲರಿಗೂ ಧಿಡೀರ್ ಪ್ರಸಿದ್ಧಿ ಪಡೆಯುವ ಹಂಬಲ. ಅದರ ಕಾರಣದಿಂದಲೋ ಮಹಿಳೆಯರ ಕಾದಂಬರಿಗಳು ಸಾಧಾರಣ ಮಹಿಳೆಯರಿಂದ ಹೆಚ್ಚು ಹೆಚ್ಚಾಗಿ ಓದಿಸಿಕೊಳ್ಳಲ್ಪಟ್ಟದ್ದು. ಮಹಿಳೆಯರ ಕಾದಂಬರಿಯನ್ನು ಪ್ರಕಟಿಸುವುದು ಲಾಭದಾಯಕ ಎಂಬ ತೀರ್ಮಾನಕ್ಕೆ ಬಂದು ಮಹಿಳಾ ಸಾಹಿತಿಗಳಿಗೆ ಕೆಲವೊಮ್ಮೆ ಮುಂಗಡ ಹಣ ಕೊಟ್ಟು ಅವರಿಂದ ಪುಸ್ತಕಗಳ ಸೃಷ್ಟಿ ಮಾಡಿಸುತ್ತಿರುವ ಪ್ರಕಾಶಕರಿಂದಾಗಿ ಕೆಲವು ಮಹಿಳೆಯರು ಬರವಣಿಗೆಯನ್ನು ಸೀರಿಯಸ್ಸಾಗಿ ತೆಗೆದುಕೊಂಡಿದ್ದಾರೆಯೇ ವಿನಾ ಮತ್ಯಾವ ಉದಾತ್ತ ಉದ್ದೇಶದಿಂದಲೂ ಅಲ್ಲ.

ಇಂತಹ ಹಿನ್ನೆಲೆಯಲ್ಲಿ ಮಹಿಳಾ ಸಾಹಿತಿಗಳು ಕೃತಿ ರಚನೆಗೆ ತೊಡಗಿರುವಾಗ ಅವರು ಮಾತ್ರ ಶ್ರೀಸಾಮಾನ್ಯನಿಗಾಗಿ ಬರೆಯುತ್ತಾರೆ ಎಂಬ ಗ್ರಹಿಕೆ ಅಷ್ಟೇನೂ ಸಮಂಜಸವಲ್ಲ. ಶ್ರೀ ಸಾಮಾನ್ಯನಿಗೆ ಮಿಕ್ಕ ಅಗತ್ಯಗಳ ಜತೆಗೆ ಓದುವ ಹಂಬಲ ಹಾಗೂ ಮನರಂಜನೆ ಪೂರೈಕೆ ಅವಶ್ಯಕ. ಸಾಧಾರಣ ಸ್ಥಿತಿಗತಿಗಳ ಶ್ರೀಸಾಮಾನ್ಯ ಕಚೇರಿಯಲ್ಲೋ ಕಾರ್ಖಾನೆಯಲ್ಲೋ ದಿನವಿಡೀ ದುಡಿದು ತನ್ನ ಕಾರ್ಯಕ್ಷೇತ್ರದಿಂದ ದೂರವಾದ ಯಾವುದೋ ಒಂದು ವಿಷಯದತ್ತ ತನ್ನ ಮನ ಹರಿಸಬಯಸುತ್ತಾನೆ. ಮಿಕ್ಕ ಮನರಂಜನೆ ಸಾಧನೆಗಳಲ್ಲದೆ, ಜ್ಞಾನಾರ್ಜನೆಗಾಗಿ ಅವನು ಪತ್ರಿಕೆ— ಪುಸ್ತಕಗಳನ್ನು ಕೈಗೆತ್ತಿಕೊಂಡಾಗ, ಅವನು ಆಧಾರಗಳಿಂದ ನಿರೀಕ್ಷಿಸುವುದು ತನ್ನ ಪರಿಸರದಲ್ಲಿ ಉಂಟಾಗುತ್ತಿರುವ ಬದಲಾವಣೆಗಳ ಬಗ್ಗೆ ಮಾಹಿತಿ ಹಾಗೂ ತನ್ನ ಜೀವನಕ್ಕೆ ಹತ್ತಿರವಾದ ಅಥವಾ ತನ್ನನ್ನು ತಾನೇ ಅದರಲ್ಲಿ ಏಕೀಭವಿಸಿಕೊಳ್ಳಬಹುದಾದಂತಹ ವಸ್ತು. ಇದನ್ನು ಮಹಿಳಾ ಸಾಹಿತಿಗಳು ಎಷ್ಟರ ಮಟ್ಟಿಗೆ ಪೂರೈಸುತ್ತಾರೆ ?

ಈಗ ಎಲ್ಲೆಲ್ಲೂ ಸಮಾನತೆಯ ಕೂಗು ಹಬ್ಬಿದೆ. ಕಚೇರಿ—ಕಾರ್ಖಾನೆ ಅಲ್ಲದೆ. ಕೆಲವು ಕ್ಲಿಷ್ಟವಾದ ಪರಿಚಿತವೆನಿಸಿರುವ ಕ್ಷೇತ್ರಗಳನ್ನು ಪುರುಷರಷ್ಟೇ ಸಂಖ್ಯೆಯಲ್ಲಿ ಮಹಿಳೆಯರೂ ಪ್ರವೇಶಿಸುತ್ತಿದ್ದಾರೆ. ಬರವಣಿಗೆ ಕ್ಷೇತ್ರಕ್ಕೂ ಮಹಿಳೆಯರು ಸಮಾನ ಸಂಖ್ಯೆಯಲ್ಲಿ ಕಾಲಿರಿಸಿದ್ದರೂ, ಅವರಲ್ಲಿ ಬಹುಪಾಲಿನವರಿಗೆ ಸಾಮಾಜಿಕ ಪರಿಜ್ಞಾನ ಕಡಿಮೆ. ಕಲ್ಪನಾಲೋಕದಲ್ಲೇ ವಿಹರಿಸಿ, ನಾನು ಈಗಾಗಲೇ ಹೇಳಿದಂತೆ ಕತೆ—ಕಾದಂಬರಿಗಳನ್ನು ಹೆಣೆಯುವದರಲ್ಲೇ ಸುಖಿಸುವ ಮಹಿಳೆಯರು ತಾವೂ ಸಮಾಜದ ಅವಿಭಾಜ್ಯ ಅಂಗ ಎಂಬುದನ್ನು ಅರಿತು, ಅಲ್ಲಿ ನಡೆಯುವ ಪ್ರತಿಯೊಂದು ಪ್ರಸಂಗಕ್ಕೂ ತಾವು ಜವಾಬುದಾರರು ಇಲ್ಲವೆ ಅದರ ಪರಿಣಾಮವನ್ನು ಅನುಭವಿಸುವವರು ಎಂದು ಬಹುಶಃ ತಿಳಿದಿಲ್ಲ. ಮನರಂಜನೆಯೆ ಕತೆಕಾದಂಬರಿಗಳ ಮುಖ್ಯ ಉದ್ದೇಶವಾದ್ದರಿಂದ ಸಾಮಾಜಿಕ ಆಗು—ಹೋಗುಗಳನ್ನು ಅವುಗಳಲ್ಲಿ ತುರುಕಲಾಗುವುದಿಲ್ಲ ಎಂಬ ವಾದವನ್ನು ಮುಂದೊಡ್ಡಬಹುದಾದರೂ, ಲೇಖನ ಅಥವಾ ಇತರ ಬರಹಗಳಲೂ ಅವರು ಈ ವಿಷಯವಾಗಿ ಚರ್ಚಿಸುವುದು ಅಪರೂಪ. ಶ್ರೀ ಸಾಮಾನ್ಯ ಎಂದರೆ ಮಧ್ಯಮವರ್ಗದವನು ತಾನೇ? ದಿನನಿತ್ಯ ಜೀವನಕ್ಕೆ ಸಂಬಂಧಪಟ್ಟ ಪದಾರ್ಥಗಳ ಬೆಲೆಗಳ ಏರಿಳಿತ, ಸಾರಿಗೆ—ಸಮಸ್ಯೆ, ಸ್ಕೂಲು ಕಾಲೇಜು ಪ್ರದೇಶದಲ್ಲಿನ ಅಡಚಣೆ, ರಾಜಕೀಯ ಪರಿಸ್ಥಿತಿಯಿಂದ ಉಂಟಾಗಬಹುದಾದ ಪರಿಣಾಮ, ಇವೆಲ್ಲವೂ ಎಲ್ಲರಿಗೂ ಸಂಬಂಧಿಸಿದಂತೆಯೇ ಶ್ರೀಸಾಮಾನ್ಯನಿಗೂ ಸಂಬಂಧಪಟ್ಟವೆ. ಬೆಲೆಗಳಿಗಿಂತ ಈ ಮುಂತಾದ ವಿಷಯಗಳ ಬಗ್ಗೆಯಂತೂ ಅವನಿಗೆ ಹೆಚ್ಚು ಕಾಳಜಿ ಇರುತ್ತದೆ. ಏಕೆಂದರೆ ಶ್ರೀಮಂತರು ಏನೇ ಬಂದರೂ ಜೀವನವನ್ನು

೬೦ ನೇ ಪುಟಕ್ಕೆ

# ಜಗತ್ತಿನ ಪ್ರಥಮ ಡಿಟರ್ಜೆಂಟ್ ಒಗೆಯುವ ಬಾರ್

# ಸುಪರ್ 777



**ಹಣ ಉಳಿಸಿರಿ, ಬಿಳುಪು ಹೆಚ್ಚಿಸಿರಿ**




ಸುಪರ್ 777 ಒಗೆಯುವ ಜಗತ್ತಿನ ಒಂದು ಚಮತ್ಕಾರವಾಗಿದೆ! ಇದನ್ನು ಒಂದು ಹೊಸ ಫಾರ್ಮ್ಯುಲಾದ ಪ್ರಕಾರ ತಯಾರಿಸಲಾಗಿದೆ. ಇದರಲ್ಲಿ ಹೆಚ್ಚಿನ ಒಗೆಯುವ, ಬೆಳಗೊಳಿಸುವ, ಸ್ವಚ್ಛಗೊಳಿಸುವ ಶಕ್ತಿಯಿದೆ—ಕ್ಷಾರಯುಕ್ತ ನೀರಿನಲ್ಲಿಯೂ! ಇದರ ಬೆಲೆಯೋ? ಸಾಮಾನ್ಯ ಬಾರ್ ಸಾಬೂನುಗಳಿಗಿಂತ ಕಡಿಮೆ!

ನೀವು ಹೊಸ ವಿಧದ ಒಗೆಯುವ ಬಾರ್—ಸುಪರ್ 777 ಡಿಟರ್ಜೆಂಟ್ ಒಗೆಯುವ ಬಾರ್—ಉಪಯೋಗಿಸ ತೊಡಗಿರಿ!

Shilpi-HPMA-6A/73 Kan

# ಅಭಿರುಚಿಯ ಪಕ್ಷಿನೋಟ

'ಚಿರಂಜೀವಿ'

ಸಾಹಿತ್ಯ ಎಂಬುದು ಶ್ರೀಸಾಮಾನ್ಯನಿಗೆ ಮೊದಲಿನಿಂದಲೂ ಎಟುಕದ ಅಂಶ. ಪ್ರಾರಂಭಿಕ ಸಾಹಿತ್ಯ ಸೃಷ್ಟಿಯಾದದ್ದೇ ಪಂಡಿತರು, ರಾಜ ಮಹಾರಾಜರುಗಳಿಗಾಗಿ ಎಂದಾಗ ಶ್ರೀಸಾಮಾನ್ಯ ಬುದ್ಧಿಜೀವಿಗಳಿಂದ ಪ್ರತ್ಯೇಕವಾಗಿಯೇ ಉಳಿದುಕೊಂಡ. ಶ್ರೀಸಾಮಾನ್ಯನೂ ಸಾಹಿತ್ಯದಲ್ಲಿ ಅಳವಡಿಸಿಕೊಂಡಿದ್ದು, ಅವನ ಬದುಕಿಗೆ ವಿವಿಧ ಸ್ತರಗಳನ್ನು ಕಲ್ಪನೆ ಮಾಡಿಕೊಂಡು ಸಾಹಿತಿಗಳು ಸೃಷ್ಟಿ ಪ್ರಾರಂಭಿಸಿದಾಗ ಮಾತ್ರ. ಶ್ರೀಸಾಮಾನ್ಯನಿಗೆ ಏನು ಬೇಕು, ಸಾಹಿತ್ಯ ಎಂದರೆ ಅವನೇನು ತಿಳಿದುಕೊಂಡಿದ್ದಾನೆ ಎಂದು ಬರಹಗಾರರು ತಿಳಿದುಕೊಂಡು ಬರೆಯಲು ಪ್ರಾರಂಭಿಸುವ ಹೊತ್ತಿಗೆ, ಶ್ರೀಸಾಮಾನ್ಯನಲ್ಲಿ ಆಗಲೇ ಎಚ್ಚರ ಮೂಡಿಬಿಟ್ಟಿತ್ತು. ತನಗಾಗುತ್ತಿರುವ ಅನ್ಯಾಯ, ತನಗೆ ಸಿಗದಿರುವ ಪ್ರಚಾರದ ಬಗ್ಗೆ ಆತ ಸಿಡಿದೆದ್ದಾಗ ಸಾಹಿತ್ಯ ಸೃಷ್ಟಿಯಲ್ಲಿ ಕವಲೊಡೆದು ವಿವಿಧ ದಿಕ್ಕಿನಲ್ಲಿ ಲೇಖನಿಯ ನ್ನೋಡಿಸುವ ಪ್ರಯತ್ನಗಳು ತೀವ್ರವಾಗಿ ಪ್ರಾರಂಭವಾದವು. ಈ ಎಚ್ಚರ – ಚಡಪಡಿಕೆ ಬುದ್ಧಿಜೀವಿ ಶ್ರೀಸಾಮಾನ್ಯನಲ್ಲಿ ಕಂಡುಬಂದಿದ್ದರೆ, ಹಿಂದುಳಿದಿರುವ ಶ್ರೀಸಾಮಾನ್ಯ ಈ ಬಗ್ಗೆ ಶಾಂತವಾಗಿಯೇ ಉಳಿದುಕೊಂಡಿರುವುದು, ಸಾಹಿತ್ಯದ ಬಗ್ಗೆ ಯಾವ ಕಾಳಜಿಯನ್ನೂ ತೋರದಿರುವುದು ಎದ್ದುಕಾಣುವ ಅಂಶ.

ಶ್ರೀಸಾಮಾನ್ಯರಲ್ಲಿ ಸಾಹಿತ್ಯದ ಬಗ್ಗೆ ತಿಳಿದುಕೊಳಲು ಓಡಾಡಿದಾಗ ಅಕ್ಷರಸ್ಥರಲ್ಲಿ ಮತ್ತು ಅನಕ್ಷರಸ್ಥರಲ್ಲಿ ಕೆಲವೊಮ್ಮೆ ವ್ಯತ್ಯಾಸ ಕಾಣದೆ ಆಶ್ಚರ್ಯವಾಗುತ್ತದೆ. ಏನೂ ಓದದವರು ಸಾಹಿತ್ಯದ ಬಗ್ಗೆ, ಬರವಣಿಗೆಯ ಬಗ್ಗೆ ಅತ್ಯಂತ ಆಸಕ್ತಿ ತೋರಿದಾಗ, ದೊಡ್ಡ ದೊಡ್ಡ ಪದವಿ ಪಡೆದಿರುವ ಅನೇಕರಿಗೆ ಸಾಹಿತ್ಯದ ಬಗ್ಗೆ ಏನೂ ಆಸಕ್ತಿ-ಆಕಾಂಕ್ಷೆಗಳಿಲ್ಲದಿರುವುದು ಕಾಣಿಸುತ್ತದೆ. ರಸ್ತೆಯಲ್ಲಿ ಗಾಡಿ ತಳ್ಳಿಕೊಂಡು ಹೋಗುವವನೋ ಅಥವಾ ತರಕಾರಿ ಮಾರಿಕೊಂಡು ಬೀದಿ ಬೀದಿ- ಮನೆಮನೆ ಅಲೆಯುವವನೋ ಒಮ್ಮೊಮ್ಮೆ, 'ನಮ್ಗೂ ಓದ್ಬೇಕೂಂತ ಆಸೆ ಸ್ವಾಮಿ. ಏನ್ಮಾಡೋದು ಈ ಹಾಳು ಜನ್ಮಕ್ಕೆ ಓದು ಹತ್ಲಿಲ್ಲ; ಕೂಲಿ ಕೆಲ್ಸಾನೇ ಕಾಯಂ ಆಗೋಯ್ತು,' ಎಂದರೆ, ದೊಡ್ಡ ವಿದ್ಯಾವಂತರೆನ್ನಿಸಿ ಕೊಂಡವರು, 'ಊಹೂಂ, ನಂಗೆ ಟೈಮೇ ಇಲ್ಲ,' ಅಂತಲೋ, 'ನಂಗೆ ಅದ್ರಲ್ಲಿಲ್ಲಾ ಇಂಟರೆಸ್ಟ್ ಇಲ್ಲಾರೀ!' ಎಂದೋ ಅಥವಾ, 'ಏನಿದೇರಿ ನಮ್ದೇಶದ ಸಾಹಿತ್ಯದಲ್ಲಿ, ಓದಿದ್ರೆ ಫಾರಿನ್ ಸ್ಟಫ್ ಓದ್ಬೇಕ್ರೀ....' ಎಂದು ಹಗುರವಾಗಿ ಹೇಳಿಬಿಡುವ ಉದಾಹರಣೆಗಳೂ ಇಲ್ಲದಿಲ್ಲ.

ಇಂಥಾ ಕೆಲವು ಅನಿಸಿಕೆಗಳು ಈ ಲೇಖನದಲ್ಲಿ ಸ್ಫುಟವಾಗಿವೆ.

× × ×

ಸರ್ಕಾರಿ ಲೈಬ್ರರಿಯ ಪುಸ್ತಕ ರಾಶಿಗಳ ಮುಂದೆ ಮೈಮರೆತು ಪುಸ್ತಕ ಹುಡುಕುತ್ತ ನಿಂತಿರುವವರನ್ನೇ ಅಥವಾ ಪುಸ್ತಕ ಓದುತ್ತಾ ಕುಳಿತಿರುವವರನ್ನೋ ಗಮನಿಸಿದಾಗ ಸಾಹಿತ್ಯಾರಾಧಕರ ಅಭಿರುಚಿಯ ಒಂದು ಪಕ್ಷಿನೋಟವನು ಕಾಣಬಹುದು. ವಿವಿಧ ಪ್ರಕಾರಗಳ ಪುಸ್ತಕಗಳನ್ನು ಹುಡುಕುತ್ತ, ಏಕಾಗ್ರತೆಯಿಂದ ಯಾವುದೋ ಒಂದು ಪುಟವನ್ನು ದಿಟ್ಟಿಸುತ್ತ ನಿಂತಿರುವವರು ಸಿಗುತ್ತಾರೆ.

ಮೇಜಿನ ಮೇಲೆ ಮೂರು ನಾಲ್ಕು ಪುಸ್ತಕಗಳನ್ನಿಟ್ಟುಕೊಂಡು, ಮುಂದೆ ಒಂದನ್ನು ಹರವಿಕೊಂಡು ಕುಳಿತಿರುವವರು ಕಾಣಿಸುತ್ತಾರೆ. ತ್ರಿವೇಣಿ, ಕಾರಂತ, ಅನಕೃ, ತರಾಸು ಕೃತಿಗಳು ಮೇಜಿನ ಮೇಲಿದ್ದವು. ಅವರು ಓದುತ್ತಿದ್ದದ್ದು ನಿರಂಜನರ ಒಂದು ಕಾದಂಬರಿ "ಚೆನ್ನಾಗಿದಾ?" ಎಂದದ್ದಕ್ಕೆ "ಓ, ಚೆನ್ನಾಗಿದೆ ಇವೆಲ್ಲ ಒಳ್ಳೆಯ ಪುಸ್ತಕಗಳು", ಎನ್ನುತ್ತಾರೆ. "ಒಳ್ಳೆಯ ಪುಸ್ತಕಗಳನ್ನು ಮಾತ್ರ ಓದ್ತೀರಾ?" ಎಂದದ್ದಕ್ಕೆ, "ಹಾಗೇನೂ ಇಲ್ಲ. ಎಲ್ಲವನ್ನೂ ತಿರುವಿ ಹಾಕುತ್ತೇನೆ. ಆದರೆ ಚೆನ್ನಾಗಿರೋದನ್ನ ಮಾತ್ರ ಪೂರ್ತಿ ಓದ್ತೇನೆ. ಎಂದರು. ಅವರು ಇಲ್ಲಿನ ಒಬ್ಬ ಸದಸ್ಯರು. ಸರ್ಕಾರಿ ನೌಕರರು. ದೊಡ್ಡ ವರಮಾನದವರಲ್ಲ. ಬರುವ ಸಂಪಾದನೆ ಸಂಸಾರಕ್ಕೆ ಸಾಕು. ಆದ್ದರಿಂದ ಇಲ್ಲಿ "ಮೆಂಬರಾ"ಗಿ ಆಗಾಗ್ಗ ಬಂದು ಎರಡೆರಡು ಪುಸ್ತಕಗಳನ್ನು ಪಡೆದುಕೊಂಡು ಹೋಗುತ್ತಾರೆ. "ಸಾಹಿತ್ಯ" ಎಂದರೆ, ಬರೆದಿರುವ ಪುಸ್ತಕಗಳು" ಎಂದು ಹೇಳುತ್ತಾರೆ. "ಸೀರಿಯಸ್ಸಾಗಿ ಸಾಹಿತ್ಯ ಅಂತ ಏನೂ ತಿಳ್ಕೊಂಡಿಲ್ಲ. ಆದ್ರೆ ಕನ್ನಡ ಲೇಖಕರ ಹೆಸರು ಗೊತ್ತಿದೆ. ಅವರ ಕಾದಂಬರಿಗಳನ್ನು ಓದಿ ನೆನಪಿನಲ್ಲಿ ಇಟ್ಕೊಂಡಿರ್‍ತೀನಿ. ಪತ್ರಿಕೆಗಳಲ್ಲಿ ಬರೋ ವಿಮರ್ಶೆಗಳನ್ನು ಓದೋ ಅಭ್ಯಾಸವಿದೆ! ಪತ್ರಿಕೆಗಳಲ್ಲಿ "ಚೆನ್ನಾಗಿದೆ" ಎಂದು ಬರೆದಿರುವ ಪುಸ್ತಕಗಳನ್ನು ಓದಲು ಹುಡುಕುತ್ತಾರೆ. ವಿಮರ್ಶೆಯಾದ ಪುಸ್ತಕಗಳು ಕೆಲವೊಮ್ಮೆ ಲೈಬ್ರರಿಯಲ್ಲಿ ಸಿಗುವುದಿಲ್ಲ. ಹಳೇ ಪುಸ್ತಕಗಳೇ ಕೈಗೆ ಸಿಗುತ್ತಿರುತ್ತವೆ. ಪುಸ್ತಕದಂಗಡಿಯಲ್ಲಿ ಕೊಂಡು ಓದುವಷ್ಟು ಚೈತನ್ಯವಿಲ್ಲ. ಗೆಳೆಯರಲ್ಲಿ ಎರವಲು ತಂದು ಹೊಸ ಪುಸ್ತಕಗಳನ್ನು ಒಮ್ಮೊಮ್ಮೆ ಓದುತ್ತಾರೆ. ನವ್ಯಕೃತಿಗಳನ್ನು ಓದಿ ಅರಗಿಸಿಕೊಳ್ಳಲು ಸಾಧ್ಯವಾಗಿಲ್ಲ "ಸಂಸ್ಕಾರ" ಅರ್ಥಮಾಡಿಕೊಳ್ಳುವುದಕ್ಕೆ ಎರಡು ಮೂರುಸಲ ಓದಬೇಕಾಯಿತು. ಭೈರಪ್ಪನವರ ಕಾದಂಬರಿಗಳೆಲ್ಲವನ್ನೂ ಓದುವುದಕ್ಕಾಗದಿದ್ದರೂ ಕೈಗೆ ಸಿಕ್ಕ ಕೆಲವನ್ನಂತೂ ಓದಿ ಮುಗಿಸಿದ್ದಾರೆ. "ಹೈಕ್ಲಾಸು ಕಾದಂಬರಿಗಳು. ಪಸ್ಟ್‌ಕ್ಲಾಸಾಗಿವೆ!" ಕನ್ನಡ ಸಾಹಿತ್ಯವನ್ನು ಇನ್ನೂ ಹೆಚ್ಚಾಗಿ ಅಭ್ಯಾಸ ಮಾಡಬೇಕೆಂಬ ಆಸೆಯಿದೆ. ಆದರೆ ಮಾರ್ಗದರ್ಶನ ಇಲ್ಲ. ಅರ್ಥವಾದಷ್ಟು ತಿಳ್ಕೊಳ್ಳಕ್ಕೆ ಪ್ರಯತ್ನ ಪಡ್ತೀವಿ. ಆದ್ರೆ ಸಾಹಿತ್ಯದ ಅಭ್ಯಾಸಿಗಳಿಗೆ ಇನ್ನೂ ಪುಸ್ತಕಗಳು ಬೇಕು. ಸಾರ್ ಸಾಹಿತ್ಯದ ಎಬಿಸಿಡಿಗಳು ಮೊದಲು ತಿಳೀಬೇಕು. ಆಮೇಲೇನೇ ಅಪ್ರೀಶಿಯೇಟ್ ಮಾಡೋಕ್ಕೆ ಬರೋತ್ತಾಗೋದು! ಬೇಕಾದಷ್ಟು ವರ್ಷಗಳಿಂದ ಓದುತ್ತಿದ್ದರೂ ಬರೆಯಬೇಕೆಂದೆನ್ನಿಸಿಲ್ಲ. ಬರೆಯಲು ಸಾಧ್ಯ ಎಂದೂ ಅನ್ನಿಸಿಲ್ಲ. "ನೆಂಟರಿಗೆ ಒಂದು ಪೋಸ್ಟ್‌ಕಾರ್ಡ್ ಗೀಚೋದೇ ಕಷ್ಟ ಅನ್ಸುತ್ತೆ. ಸ್ವತಂತ್ರವಾಗಿ ಬರ್‍ಯೋದೇನ್ಬಂತು? ಬರ್‍ಯೋದು ಓದೋ ಅಷ್ಟು ಸುಲಭದ ಕೆಲ್ಸ ಅಲ್ಲ..." ಎಂಬ ಉತ್ತರ.

"ಕನ್ನಡದಲ್ಲಿ ಪುಸ್ತಕಗಳು ಸರ್‍ಯಾಗಿ ಖರ್ಚಾಗ್ತಾ ಇಲ್ಲ ಅನ್ನೋ ಕೂಗು ಎಷ್ಟೋ ವರ್ಷಗಳಿಂದ ಇದ್ದೇ ಇದೆ. ಈಗ್ಲೂ ಇದೆ. ಆಗ್ಲೂ ಪುಸ್ತಕಗಳು ಪ್ರಕಟವಾಗ್ತಿದ್ವು. ಈಗಲೂ ಪ್ರಕಟವಾಗ್ತಿವೆ. ಆದ್ರೆ ಈಗ ಬರ್‍ಯೋರು–ಓದೋರು ಜಾಸ್ತಿ ಆಗಿದಾರೆ. ಜೊತೆಗೆ ಕನ್ನಡ ಪುಸ್ತಕಗಳ ಬೆಲೆ ಬೇರೇ ತುಂಬಾ ಜಾಸ್ತಿ. ಕೊಂಡು ಓದೋದು ಸಾಧ್ಯಾನೇ ಇಲ್ಲ. ಅದಕ್ಕೆ ನಮ್ಮಂಥೋರು ಲೈಬ್ರರಿಯ ಮೊರೆ ಹೋಗ್ಬೇಕು. ಇಂಥಾ ಪುಸ್ತಕ ಓದ್ಬೇಕು ಅಂದ್ಕೊಳ್ಳೋಕಿಂಥಾ, ಇಲ್ಲೇನಿದ್ಯೋ ಅದನ್ನೇ ಓದೋದು, ಹೀಗಿರೋವಾಗ ಸೀರಿಯಸ್‌ಆಗಿ ಏನಾದ್ರೂ ಅಭ್ಯಾಸ ಮಾಡೋಕೆ ಸಾಧ್ಯವಾಗೋದೇ ಇಲ್ಲ. ಈಗ ಒಳ್ಳೆ ಪುಸ್ತಕಗಳು ಬರ್‍ತಿದ್ರೂ, ಜೊಳ್ಳು ಸಾಹಿತ್ಯಾನೇ ಜಾಸ್ತಿ. ಹಿಂದಿನ ಕಾಲದ ಪುಸ್ತಕಗಳನ್ನ ಗಮನಿಸಿದ್ರೆ ಗಟ್ಟಿ ಪುಸ್ತಕಗಳೇ ಜಾಸ್ತಿ ಇದ್ವು ಅನ್ಸುತ್ತೆ. ಆಗ ಎಲ್ರೂ ಸಾಹಿತಿಗಳಾಗಿರ್‍ಲಿಲ್ಲ. ಸಾಹಿತಿಯಾಗೋಕೆ ಒಂದು ಯೋಗ್ಯತೆ ಬೇಕಾಗಿತ್ತು", ಎಂದು ನಿರ್ಧಾರದ ದನಿಯಲ್ಲಿ ಹೇಳುತ್ತಾರೆ. "ಶ್ರೀಸಾಮಾನ್ಯನಿಗಾಗಿಯೇ ಪ್ರತ್ಯೇಕ ಸಾಹಿತ್ಯ ಇರ್‍ಬೇಕು ಅಂತೇನೂ ಇಲ್ಲ. ಆದ್ರೆ ಶ್ರೀ ಸಾಮಾನ್ಯನ ಜೀವನ–ಸುಖದುಃಖಗಳು ನಮ್ಮ ಸಾಹಿತಿಗಳ ದೃಷ್ಟಿಗೆ ಹೆಚ್ಚು ಬಿದ್ದಿಲ್ಲ ಅನ್ನೋದಂತೂ ಖಂಡಿತಾ ಅನ್ಸುತ್ತೆ. ಹಿಂದಿನೋರು ಕಷ್ಟಜೀವಿಗಳ ಬಗ್ಗೆ ಒಂದೆರಡನ್ನಾದ್ರೂ ಬರೀತಿದ್ರು (ಚೋಮನದುಡಿ). ಈಚಿನೋರು ಬುದ್ಧಿಜೀವಿ ಬದುಕನ್ನೇ ವಸ್ತುವಾಗಿಸ್ಕೊಂಡು ಬರೀತಾರೆ ಅನ್ಸುತ್ತೆ. ಆದ್ರೆ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಎಲ್ಲ ವಸ್ತುಗಳೂ ಸೃಷ್ಟಿ ಆಗಬೇಕು".

× × ×

"ಸಾಹಿತ್ಯ ಗೀಯಿತ್ಯ ಅಂತೆಲ್ಲ ನಾನು ತಲೆ ಕೆಡಿಸ್ಕೊಂಡಿಲ್ಲ. ಪೇಪರ್‍ನಲ್ಲಿ ಬರೋ ಕಥೆಗಳ್ನ ಓದ್ತೀನಿ. ಧಾರಾವಾಹಿ ಕಾದಂಬರಿಗಳ್ನ ಓದ್ತೀನಿ...", ಎನ್ನುವ ಕಾರ್ಖಾನೆಯ ಕಾರ್ಮಿಕರೊಬ್ಬರು ಪ್ರತಿವಾರ ಒಂದು ವಾರಪತ್ರಿಕೆಯನ್ನು ಕೊಂಡು ಓದುತ್ತಾರೆ. "ಕೊಂಡು ಓದ್ಬೇಕು ಸಾರ್. ಆಗ಼್ೆ ಕನ್ನಡ ಭಾಷೆ ಅಭಿವೃದ್ಧಿ ಹೊಂದೋದು" ಎಂದು ಜಬರ್ದಸ್ತಿನಿಂದ ಹೇಳುತ್ತಾರೆ. ಅವರ ಏಳೆಂಟು ಗೆಳೆಯರು ಸೇರಿ ತಿಂಗಳಿಗೆ ಎರಡೆರಡು ರೂಪಾಯಿ ಹಾಕಿ ಕನ್ನಡ ಪತ್ರಿಕೆಗಳನ್ನು ಕೊಳ್ಳುತ್ತಾರೆ. ಸರದಿಯ ಪ್ರಕಾರ ಓದುತ್ತಾರೆ. ಧಾರಾವಾಹಿ ಕಾದಂಬರಿಗಳೆಂದರೆ ಅತಿ ಪ್ರೀತಿ

ಇವರಿಗೆ ಸಾಹಿತ್ಯ ಎಂದು ಏನೂ ಗೊತ್ತಿಲ್ಲ. "ರೆಗ್ಯು ಲರ್ ಆಗಿ ಕಾದಂಬರಿಗಳನ್ನು ಓದ್ತೀನಿ. ನವ್ಯ ಸಾಹಿತ್ಯದ ತಲೆಬಾಲಾನೇ ಅರ್ಥವಾಗಿಲ್ಲ. ಅನಕೃ ಕಾದಂಬರಿಗ್ಳು ತುಂಬಾ ಇಷ್ಟ."

ಇವರು ತಪ್ಪದೆ ಪತ್ರಿಕೆಗಳಲ್ಲಿ ಕಥೆ–ಕಾದಂಬರಿಗಳನ್ನು ಓದುತ್ತಿದ್ದರೂ ಲೇಖಕರ ಹೆಸರನ್ನು ಗಮನಿಸುವುದು ಅಪರೂಪ. ಆದರೆ ಗೊತ್ತಿರುವ ಲೇಖಕರೊಬ್ಬರ ಕಥೆಯೊಂದು ಅವರೋದುವ ಪತ್ರಿಕೆಯೊಂದರಲಿ ಪ್ರಕಟವಾದಾಗ ಗಮನವಿಟ್ಟು ಓದಿ, "ಚೆನ್ನಾಗಿದೆ" ಅಂತಲೋ, "ಚೆನ್ನಾಗಿಲ್ಲಪ್ಪಾ..." ಎಂದೋ ಹೇಳಿರುವುದುಂಟು. ಕಥೆ ಚೆನ್ನಾಗಿದೆ ಅನ್ನಿಸಿಕೊಳ್ಳಬೇಕಾದರೆ, "ಅದು ಚೆನ್ನಾಗಿ ಓದಿಸ್ಕೊಂಡು ಹೋಗ್ಬೇಕು. ಸುಲಭವಾಗಿ ಅರ್ಥ ಆಗ್ಬೇಕು. ಎಲ್ಲೂ ಬೋರು ಹೊಡೀಬಾರ್ದು" ಎನ್ನುವಷ್ಟು ಗೊತ್ತಿದೆ. ಅತಿ ಸಹಜವಾದ ಪ್ರತಿಕ್ರಿಯೆ ಇದು. ಒಂದು ರೀತಿಯ ಅನುಭವದ ಮಾತು. "ನಿಮ್ಮ ಕಥೆ ಎಲ್ಲೋ ಪ್ರಾರಂಭವಾಗಿ ಎಲ್ಲೋ ಎಂಡ್ ಆಗತ್ತೆ. ಕಥೆ ಏನೂಂತಾನೇ ಅರ್ಥ ಆಗ್ಲಿಲ್ಲಪ್ಪ. ಒಳೆ ಸರ್ಕಸ್ ಮಾಡಿದ ಹಾಗೆ ಕಾಣ್ಸತ್ತೆ..." ಎಂದುಬಿಡುತ್ತಾರೆ. "ನಮ್ಮಲ್ಲಿ ಇನ್ನೂ ಒಳ್ಳೊಳೆಯ ಧಾರಾವಾಹಿಗಳು ಬರ್ಬೇಕು" ಎಂದು "ಒಳೆಯದು–ಕೆಟ್ಟದ್ದು"ಗಳನ್ನು ಎತ್ತಿ ಹೇಳುವುದು ಅಭ್ಯಾಸವಾಗಿದೆ.

ಕಥೆ-ಕಾದಂಬರಿಗಳಲಿ ಸೆಕ್ಸ್ ಇರಬೇಕು. ಆದರೆ ಅದೇ ಪ್ರಧಾನವಾಗಿರಬೇಕಾಗಿಲ್ಲ. ಕೆಟ್ಟ ಹೆಸರುಗಳನ್ನು ಹೊತ್ತ ಅಶ್ಲೀಲ ಪುಸ್ತಕಗಳನ್ನು ಕಂಡರೆ ಕೋಪ. ಇವು ಮಕ್ಕಳ ಕೈಗೆ ಸಿಕ್ಕರೇನು ಗತಿ ಎನ್ನುವ ಕಳಕಳಿ. ಪತ್ರಿಕೆಗಳಲ್ಲಿ ಪ್ರವಾಸ ಮತ್ತು ಸಾಹಸ ಪ್ರಧಾನ ಲೇಖನಗಳು ಬರಬೇಕು ಎನ್ನುತ್ತಾರೆ.

ಕನ್ನಡ ಕೃತಿಗಳು ಸಿನಿಮಾ ಆಗುತ್ತಿರುವುದು ಬಹಳ ಸಂತೋಷ ಇವರಿಗೆ. "ಆಗ್ಬೇಕು ಸಾರ್. ಆಗ್ಲೆ ಸಾಹಿತ್ಯವು ಇಂಪ್ರೂವ್ ಆಗೋದು. ಕನ್ನಡ್ದಲ್ಲಿ ಇಂಥಾ ಕಥೆಗ್ಳಿವೆ ಅಂತ ನಾಕ್ಜನಕ್ಕೆ ಗೊತ್ತಾಗೋದು" ಎನ್ನುತ್ತಾರೆ.

× × ×

ಶಾಲೆಯಲ್ಲೋ, ಕಾಲೇಜಿನಲ್ಲೋ ಪುಸ್ತಕಗಳನ್ನ ಓದಿದ್ದು ಅಷ್ಟೇ ಉದ್ಯೋಗವೊಂದನ್ನು ದೊರಕಿಸಿಕೊಂಡ ಮೇಲೆ ಹಣ ಸಂಪಾದನೆಯ ಮೇಲೆ ಗುರಿ: ಚೆನ್ನಾಗಿ ಕೆಲಸ ಕಲಿತು ಮೇಲೆ ಮೇಲೆ ಹೋಗುವ ಆಸೆ. ಸಾಧ್ಯವಾದರೆ ಇನ್ನೊಂದು ಕ್ವಾಲಿಫಿಕೇಶನ್ ಮಾಡಿಕೊಳ್ಳುವ ಬಯಕೆ. ಇದರಿಂದ ಸೋಪಾನಗಳನ್ನು ಮೇಲೇರಬಹುದೆಂಬ ಒಂದು ಆಸೆ. ಹೀಗೆಂದ ಮಾತ್ರಕ್ಕೆ ಓದುವ ಅಭ್ಯಾಸವೇ ಇಲ್ಲವೆಂದಲ್ಲ. "ಆಫೀಸ್ನಲ್ಲಿ ಪೇಪರುಗ್ಳೆಲ್ಲ ಬಂದು ಬಿದ್ದಿರತ್ವೆ. ಆಗಾಗ ತಿರುವಿಹಾಕ್ತೀನಿ. ಸೀರಿಯಸ್ ಆಗಿ ಯಾವ್ದನ್ನೂ ಓದೊಲ್ಲ. ಏನಾದ್ರೂ ಇಂಟರೆಸ್ಟಿಂಗ ಅನ್ಸಿದ್ರೆ ಒಂದೆರಡು ಸಾಲು ಓದ್ತೀನಿ, ಇಲ್ದಿದ್ರೆ ಅದೂ ಇಲ್ಲ. ಅದೂ ಅಲ್ದೆ ಓದೋಕೆ ಪ್ರಾರಂಭಿಸಿದ ಸ್ವಲ್ಪ ಹೊತ್ಗೇನೇ ಬೋರು ಹೊಡ್ಸತ್ತೆ!"

ಆಗಾಗ ಒಂದೊಂದು ಇಂಗ್ಲೀಷ 'ನಾವಲ್' ಓದುವುದಕ್ಕೆ ಪ್ರಾರಂಭಿಸುತ್ತಾರೆ. ಪೂರ್ತಿ ಓದಿ ಮುಗಿಸುವುದು ಅಪರೂಪ. ಕನ್ನಡ ಕಾದಂಬರಿಗಳನ್ನು ಓದುವುದೇ ಇಲ್ಲ; ಕವಿತೆ ಅರ್ಥವೇ ಆಗುವುದಿಲ್ಲ ('ಅದೇನು ಬರೀತಾರೋ ದೇವ್ರಿಗೇ ಪ್ರೀತಿ ಆಗ್ಬೇಕು'). 'ನಾಟಕ ನೋಡಬಹುದೇ ಹೊರ್ತು ಓದಿದ್ರೆ ಅರ್ಥವೇ ಆಗೋಲ್ಲ'.

ವರಮಾನದಲ್ಲಿ ಎಷ್ಟು ರೂಪಾಯಿ ಪುಸ್ತಕ ಕೊಳಲು ಹೋಗುತ್ತದೆ? 'ಊಹೂಂ, ನಾನು ದುಡ್ಡು ಕೊಟ್ಟು ಕಾದಂಬರಿ ಕೊಂಡ್ಕೊಳ್ಳೊಲ್ಲ; ಸುಮ್ನೆ ವೇಸ್ಟು. ಅದೂ ಅಲ್ದೇ ಅವು ತುಂಬಾ ಕಾಸ್ಟ್ಲಿ. ಪೇಪರ್ ಓದಿ ಮುಗ್ಸೋದೇ ದೊಡ್ಡ ಕಷ್ಟ, ಇನ್ನು ಈ ದಪ್ಪದಪ್ಪ ಪುಸ್ತಕಗಳ್ನ ಯಾರು ಓದ್ತಾರೆ? ಇಂಗ್ಲಿಷ್ನಲ್ಲಿ ಫಸ್ಟ್ ಕ್ಲಾಸ್ ಬುಕ್ಸ್ ಇವೆ. ಕನ್ನಡ್ದಲ್ಲಿ ಅಂಥಾ ಸ್ಟ್ಯಾಂಡರ್ಡ್ ಬುಕ್ಸೇ ಇಲ್ಲ. (ಅದೇನು ಬರೀತಾರೋ ದೇವ್ರಿಗೇ ಪ್ರೀತಿ ಆಗ್ಬೇಕು).

"ಚಂದಮಾಮ ಒಳ್ಳೇ ಚೆನ್ನಾಗಿರತ್ತೆ, ಅದ್ರ ಕಥೆಗಳ್ನ ಓದೋಕ್ಕೆ ಪ್ರಾರಂಭಿಸ್ಬಿಟ್ರೆ ಮುಗ್ಸೋವರ್ಗೂ ಸುಮ್ನಿರೋಕಾಗೊಲ್ಲ. ನಮ್ಮ ಪೇಪರುಗಳಲ್ಲಿ ಅಂಥಾ ಕಥೆಗ್ಳೇ ಬರೊಲ್ಲ..."

ಅದರೆ ಸಾಹಿತ್ಯದ ಗತಿ?

"ನಂಗೆ ಓದೋಕ್ಕೆ ಟೈಮೂ ಇಲ್ಲ. ಆಫೀಸು ಕೆಲ್ಸ, ಫ್ರೆಂಡ್ಸು, ಫ್ಯಾಮಿಲಿ ಇವುಗಳ ಮಧ್ಯೆ ಓದೋಕೆ ಛಾನ್ಸೇ ಸಿಗೊಲ್ಲ. ಅದೂ ಅಲ್ದೇ ಯಾವಾಗ್ಲೂ ಪುಸ್ತಕ ಹಿಡ್ಕೊಂಡು ಕೂತಿರೋಕಾಗುತ್ತಾ? ಸಾಹಿತ್ಯ ಅನ್ನೋದು ತುಂಬಾ ಸೀರಿಯಸ್ ಸಬ್ಜೆಕ್ಟ್. ಇದನ್ನು ಸೀರಿಯಸ್ಸಾಗೇ ಓದ್ಬೇಕು, ಅರ್ಥಮಾಡ್ಕೋಬೇಕು.

ಅದೆಲ್ಲ ನಂಗೆ, ಸಾಧ್ಯವಿಲ್ಲ. ಷಸ್ಟ ಹಾಟ್ಟಯೇ ನಂಗೆ ಬೇಕಾದಷ್ಟಿದೆ..."

\+ \+ \+

ಮನೆ ಮುಂದೆ, ರಸ್ತೆಗಳಲ್ಲಿ ಕೂಗುಹಾಕುತ್ತ ಮಾರಿ ಬರುವ ಶ್ರೀ ಸಾಮಾನ್ಯರನ್ನು ಕಂಡಾಗ ಇವರಿಗೆ ಇದನ್ನು ಬಿಟ್ಟರೆ ಬೇರಿನ್ನೇನೂ ಚಟುವಟಿಕೆಗಳಿಲ್ಲವೇ ಅನ್ನಿಸುತ್ತದೆ.

ಮನೆಗೆ ತರಕಾರಿ ಹಾಕಲು ಬಂದವನಿಗೆ "ಸಾಹಿತ್ಯ"ದ ವಿಷಯ ಕೇಳಿದಾಗ ಅವನು ಬಿದ್ದು ಬಿದ್ದು ನಗುತ್ತಾನೆ. "ಅಯ್ಯೋ, ನಂಗೆ ಅ ಆ ಇ ಈ ಗೊತ್ತಿಲ್ಲ ಸ್ವಾಮಿ. ಇನ್ನು ಅವೆಲ್ಲ ಎಲ್ಲಿ ತಿಳೀತದೆ. ಇಷ್ಟೇ ಸ್ವಾಮಿ, ನಮ್ಮ ಜನ ಇಷ್ಟೇನೇ: ಬುಟ್ಟಿ ತುಂಬಾ ತುಂಬ್ಕೊಳ್ಳೋದು, ತಲೆ ಮೇಲಿಟ್ಕಂಡು ಬೀದಿ ಬೀದಿ ಕೂಗ್ತಾ ಹೋಗೋದು..."

"ಓದಕ್ಕೆ ಬರ್ದಿರೋದು ದೊಡ್ಡನಷ್ಟಾನೇ ಸ್ವಾಮಿ. ಆದ್ರೆ ಈಗ ವ್ಯಾಪಾರ ಮುಖ್ಯ. ಈಗ ಓದೋ ವಯಸ್ಸಾಗೋಯ್ತು. ಸುಮ್ನೆ ಖರ್ಚು. ಆದ್ರೆ ಓದ್ಲಿಲ್ಲಾ ಅನ್ಸತ್ತೆ. ಚಿಕ್ಕಂದಲ್ಲಿ ಅಪ್ಪನ ಜೊತೆ ಬೀದಿ ಬೀದಿ ಅಲೀತಿದ್ದೆ. ತರ್ಕಾರಿ ಹೆಸ್ರು ಕೂಗ್ತಿದ್ದೆ... ಇದೇ ನಾನು ಕಲಿತ ವಿದ್ಯೆ!"

ತನಗಾದ ನಷ್ಟವನ್ನು ತಮ್ಮ ಮುಂದಿನ ತಲೆಮಾರಾದರೂ ತಪ್ಪಿಸಿಕೊಳ್ಳಬೇಕೆಂಬ ಆಸೆ ಇದೆ. ತಮ್ಮ ಮಕ್ಕಳು ತುಂಬಾ ಓದಿ ಬುದ್ಧಿ ಜೀವಿಗಳಾಗಬೇಕೆಂಬ ಯೋಚನೆ. ದುಡಿದದ್ದರಲ್ಲಿ ಚೂರುಪಾರು ಮಕ್ಕಳ ವಿದ್ಯೆಗೆ ಖರ್ಚಾಗುತ್ತಿದೆ. ಆದರೆ, ಇವರು ನೆನೆಸಿಕೊಂಡಷ್ಟು ಮಕ್ಕಳು ಬುದ್ಧಿವಂತರಾಗುತ್ತಿಲ್ಲ ಎಂಬ ಕೊರಗಿನ ಜೊತೆಗೆ ಖರ್ಚು ಮಾಡಿದ್ದು ಅನ್ಯಾಯವಾಗುತ್ತಿದೆಯಲ್ಲ ಎಂಬ ದುಃಖ ಬೇರೆ.

ಆದರೆ ತಮಗೆ ಓದಲು ಬರದಿದ್ದರೂ, ಅವರೆಲ್ಲ ಒಂದೆಡೆ ಕಲಿತು ಓದು ಬರುವವನೊಬ್ಬನನ್ನು ಮುಂದೆ ಕೂಡಿಸಿಕೊಂಡು ಸುದ್ದಿ–ಸಮಾಚಾರಗಳನ್ನು ಓದಿಸಿ ಕೇಳುತ್ತಾರೆ. ಎಲ್ಲರೂ ಸೇರಿ ಆ ಬುದ್ಧಿವಂತನಿಗೆ ಪುಡಿಕಾಸು ಕೊಡುತ್ತಾರೆ. ದೇಶದ ಪ್ರಪಂಚದ ಸಮಾಚಾರಗಳೆಲ್ಲ ತಿಳಿಯುತ್ತವೆ. ಕಥೆ–ಕವಿತೆ ಕೇಳಿದಾಗ ಬಹಳ ಸಂತೋಷವಾಗುತ್ತದೆ. ಓದಿದ ಜನ ಎಷ್ಟು ಚೆನ್ನಾಗಿ ಬರೆಯಲು ಕಲಿತಿದ್ದಾರೆ ಅನ್ನಿಸುತ್ತದೆ.

"ಇದ್ಬಿಟ್ರೆ ನಮ್ಗೆ ಸಿನೇಮಾನೆ ಗತಿ. ಸಿನಿಮಾ ನೋಡ್ದಾಗ ನಮ್ಗೆ ಬೇಕಾದಷ್ಟು ಸಮಾಚಾರ ಗೊತ್ತಾಗ್ತದೆ" ಎನ್ನುತ್ತಾರೆ ಕಡೆಗೆ.

× × ×

ಮಹಿಳಾ ಸಾಹಿತ್ಯ ಎಂದಿನಂತೆ ಇಂದಿಗೂ ಚರ್ಚಾಸ್ಪದ. ಅವರ ಸಾಹಿತ್ಯದ ಮಟ್ಟದ ಬಗ್ಗೆಯೊ ಸೀಮಿತ ಶೈಲಿಯ ಬಗ್ಗೆಯೋ ವಾದ ವಿವಾದಗಳು ಅಲ್ಲಲ್ಲಿ ನಡೆದ ಕಿಡಿಗಳು ಹಾರುತ್ತಲೇ ಇರುತ್ತವೆ. ಮಹಿಳಾ ಲೇಖಕಿಯರಲ್ಲಿ ಯಾವ ಪ್ರಗತಿಯೂ ಆಗಿಲ್ಲ, ಹಿಂದಿನ ಲೇಖಕಿಗೂ ಈಗಿನ ಲೇಖಕಿಗೂ ಹೆಚ್ಚು ವ್ಯತ್ಯಾಸ ಕಾಣುತ್ತಿಲ್ಲ ಎನ್ನುವ ತೀವ್ರವಾದಿಗಳಾಗಿದ್ದಾರೆ.

ಆದರೆ ದೊಡ್ಡ ಓದನ್ನು ಮುಗಿಸಿ, ಭಾಷಾಜ್ಞಾನ ಸಾಹಿತ್ಯಜ್ಞಾನದ ಬಗ್ಗೆ ತೀವ್ರ ಅಭಿಲಾಷೆ ವ್ಯಕ್ತಪಡಿಸುವ ಮಹಿಳೆಯರ ಸಂಖ್ಯೆ ಜಾಸ್ತಿ ಆಗುತ್ತಾ ಹೋಗುತ್ತ ಲೇಖಕರೊಂದಿಗೆ ಸ್ಪರ್ಧೆ ಹೂಡುವ ಹಾಗೆ ಸಾಹಿತ್ಯದ ಶೈಲಿ ಬದಲಾಯಿಸುತ್ತಿದೆ. ಬಿಚ್ಚು ಮನಸ್ಸಿನ ಬರವಣಿಗೆ ಅಭಿವ್ಯಕ್ತಿಯಲ್ಲಿ ಆಳ, ಉತ್ತಮವಾದ ಭಾವನೆಗಳು, ಇದನ್ನು ಬರೀ ಮಹಿಳಾ ಸಾಹಿತ್ಯವನ್ನಾಗಿ ಉಳಿಸದೆ ಸಾರ್ವತ್ರಿಕ ಸಾಹಿತ್ಯವನ್ನಾಗಿಸುತ್ತಿದೆ ಎಂದು ಅನೇಕರು ಅಭಿಪ್ರಾಯಪಡುವಂತಾಗಿದೆ.

ಕನ್ನಡ ಎಂ. ಎ. ಮುಗಿಸಿ ಭವಿಷ್ಯದ ನಿರ್ಧಾರಕ್ಕಾಗಿ ಕಾಯುತ್ತಾ ಕುಳಿತಿರುವ ಮಹಿಳಾ ಬುದ್ಧಿಜೀವಿಯೊಬ್ಬರನ್ನು ಮಹಿಳಾ ಸಾಹಿತ್ಯದ ಬಗ್ಗೆ ಕೇಳಿದಾಗ ಇದನ್ನು ಮಹಿಳಾ ಸಾಹಿತ್ಯ ಎಂದೇಕೆ ಕರೆಯಬೇಕು. ಗಂಡಸರ ಸಾಹಿತ್ಯವನ್ನು ಗಂಡು ಸಾಹಿತ್ಯ ಎಂದು ಕರೆಯುತ್ತಾರೆಯೇ? ಎಂದು ಕೋಪಿಸಿಕೊಂಡರು. ಗಂಡಸರು ಅಥವಾ ಉಳಿದವರು ಇಷ್ಟಪಡಲಿ ನಾವಂತೂ ಬರೆಯುವುದನ್ನು ನಿಲ್ಲಿಸುವುದಿಲ್ಲ. ಉಳಿದ 'ಸಾಹಿತ್ಯ'ದೊಂದಿಗೆ ನಮ್ಮ ಸಾಹಿತ್ಯವನ್ನೂ ಹೋಲಿಸಲಿ! ಎಂದರು.

ಒಂದು ಸೀಮಿತ ಚೌಕಟ್ಟಿನಲ್ಲಿಯೇ ಮಹಿಳಾ ಸಾಹಿತ್ಯ ಸೃಷ್ಟಿಯಾಗುತ್ತಿದೆ. ಇದರಿಂದ ಲೇಖಕಿ ಹೊರ ಬಂದು ಸಾಹಿತ್ಯದಲ್ಲಿ ವೈವಿಧ್ಯತೆಗಳನ್ನು ಸಾಧಿಸಬೇಡವೇ? ಎಂಬ ಪ್ರಶ್ನೆಗೆ, ಈ ದಿಕ್ಕಿನಲ್ಲಿ ಬೇಕಾದಷ್ಟು ಪ್ರಯತ್ನಗಳು ನಡೀತಿವೆ. ಮಹಿಳೆಗೆ ತನ್ನ ಸುತ್ತಮುತ್ತ ಆಗುತ್ತಿರುವ ವಿಮರ್ಶೆ-ಟೀಕೆಗಳ ಅರಿವಾಗಿದೆ. ಬೌದ್ಧಿಕವಾಗಿ ಸಾಮಾಜಿಕವಾಗಿ ಮೇಲೇರುತ್ತಿರುವ ಮಹಿಳೆಯಿಂದ ಖಂಡಿತಾ ಮೇಲ್ಮಟ್ಟದ ಸಾಧನೆಯನ್ನು ಎದುರು ನೋಡಬಹುದು, ಎಂಬ ಉತ್ತರ.

ಮಹಿಳಾ ಸಾಹಿತ್ಯವೇ ಮಾರುಕಟ್ಟೆಯಲ್ಲಿ ಹೆಚ್ಚು ಖರ್ಚಾಗುತ್ತಿದೆ. ಲೈಬ್ರರಿಗಳಲ್ಲಿ ಅವರ ಪುಸ್ತಕಗಳನ್ನೇ ಓದುಗರು ಹೆಚ್ಚು ಓದುತ್ತಿದ್ದಾರೆ ಇದೇಕೆ? ಹೆಂಗಸರ ಪುಸ್ತಕಗಳು ಹೆಚ್ಚು ಹೆಚ್ಚು ಪ್ರಕಟವಾಗುತ್ತಿರುವುದೇ ಇದಕ್ಕೆ ಕಾರಣವಾಗಿರಬಹುದು ಎಂದು ಹೇಳಿ ಕೂಡಲೇ ಈ ಅತಿ ಹೆಚ್ಚಿನ ಉತ್ಪಾದನೆಯಿಂದಲೇ ಲೇಖಕಿಯರ ಬರಹಗಳು ತೀವ್ರ ಟೀಕೆಗೆ ಗುರಿಯಾಗುತ್ತಿದೆ. ಎಲ್ಲರೂ ಜನಪ್ರಿಯತೆಯನ್ನೇ ಬಯಸುತ್ತಿರುವುದರಿಂದ ಗಟ್ಟಿ ಸಾಹಿತ್ಯಕ್ಕೆ ಹೆಚ್ಚು ಲೇಖಕಿಯರು ಪ್ರಯತ್ನಪಡುತ್ತಿಲ್ಲ ಎಂದರು ಅಕೆ. ಇಂಗ್ಲಿಷಿನಲ್ಲಿ ಅನೇಕ ಲೇಖಕಿಯರು ಅಂತಾರಾಷ್ಟ್ರೀಯ ಮಟ್ಟ ಮುಟ್ಟಿದ್ದಾರೆ ಗೊತ್ತೇನಿ ಎಂಬ ಒಂದು ಸಮಾಧಾನದ ಪ್ರತಿಕ್ರಿಯೆ ಅವರದು.

---

## ಕುರಿಗಳು, ಸಾರ್, ಕುರಿಗ್ಳು.....

'ನೀವೇನೇ ಹೇಳಿ ಸಾರ್' ಬೇರೆ ಭಾಷೆಗಳಿಂದ ಅನುವಾದವಾಗಿ ಕನ್ನಡಕ್ಕೆ ಸಾಹಿತ್ಯ ಬರ್ತಿರೋ ಹಾಗೆ, ಕನ್ನಡ ಸಾಹಿತ್ಯ ಬೇರೆ ಭಾಷೆಗೆ ಹೋಗ್ತಿಲ್ಲ, ಸಾರ್. ಇಂಥಾ ಸಾಹಿತ್ಯ ಬರೀ ಒನ್‌ವೇ ಆಗಿದ್ಯೇ ಹೊರ್ತು ಕನ್ನಡದ ಅತ್ಯುತ್ತಮ ಕೃತಿಗಳು ಅನುವಾದವಾಗ್ದೇನೇ ಉಳ್ಕೊಂಡಿದೆ. ಕನ್ನಡದೋರು ಕುರಿಗ, ಸಾರ್ ಕುರಿಗ್ಳು, ಎಲ್ಲಾನೂ ಸಹಿಸ್ಕೊಂಡಿರ್ತಾರ....' ಗೆಳೆಯರೊಬ್ಬರ ಕೋಪದ ಪ್ರತಿಕ್ರಿಯೆ.

ಚಿರಂಜೀವಿ

---

# ಮಹಿಳೆಯರು ಮಾತ್ರ ಶ್ರೀಸಾಮಾನ್ಯನಿಗೆ ಬರೆಯುತ್ತಾರೆ

( ೫೭ ನೆಯ ಪುಟದಿಂದ )

ಸುಲಭವಾಗಿ ತೂಗಿಸಬಹುದಾದರೆ, ನಾಗರಿಕರಿಗೆ ಉಂಟಾಗುವ ಪ್ರತಿಯೊಂದು ಸಂದರ್ಭವೂ ಆರ್ಥಿಕ ಮುಗ್ಗಟ್ಟಿನಿಂದ ಬಳಲಿರುವ ಈತನಿಗೆ ಹೊಸ ತೊಡಕನ್ನು ಕಲ್ಪಿಸುತ್ತದೆ. ಇಂತಹ ವಿಷಯಗಳ ಬಗ್ಗೆ ತನ್ನ ತಿಳಿವಳಿಕೆಯನ್ನು ಹೆಚ್ಚಿಸಬಹುದಾದಂತಹ ಸಾಹಿತ್ಯವನ್ನು ಆತ ನಿರೀಕ್ಷಿಸುತ್ತಾನೆ. ಪರಿಸ್ಥಿತಿಯನ್ನು ಸಂಪೂರ್ಣವಾಗಿ ಮನದಟ್ಟು ಮಾಡಿಕೊಂಡು ಅದರಲ್ಲಿ ತನ್ನ ಪಾತ್ರವೇನು ಎಂಬುದನ್ನು ತಿಳಿಯಲು ಕಾತರನಾಗಿರುವ ಆತನ ಅವಶ್ಯಕತೆಯನ್ನು ಪೂರೈಸುವದು ಬರಹಗಾರರ ಹೊಣೆಯಾಗಿರುತ್ತದೆ. ಮಹಿಳೆಯರ ಲೇಖನಿಯಿಂದ ಇಂತಹ ಸಾಹಿತ್ಯ ಮೂಡಿ ಬರುತ್ತಿಲ್ಲ, ಕಾರಣ: ಒಂದು, ಪರಿಸ್ಥಿತಿಯನ್ನು ಚೆನ್ನಾಗಿ ಅರಿತಿರುವ ಮಹಿಳೆಯರು ಬರವಣಿಗೆಯಲ್ಲಿ ತೊಡಗಲಾರರು; ಎರಡು, ಬರವಣಿಗೆ ಅಭ್ಯಾಸವಿರುವ ಮಹಿಳೆಯರು ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲಾರರು. ಹೀಗಾಗಿ ಮಹಿಳಾ ಸಾಹಿತಿಗಳು, ಶ್ರೀ ಸಾಮಾನ್ಯನನ್ನು ತಮ್ಮ ಬರವಣಿಗೆಯ ಮೂಲಕ ಆಕರ್ಷಿಸುವುದರಲ್ಲಿ ಸೋತಿದ್ದಾರೆ.

ಒಮ್ಮೊಮ್ಮೆ ತಮ್ಮ ಕಾದಂಬರಿಗಳಲ್ಲಿ ಬಡವ-ಶ್ರೀಮಂತರ ಅಂತರವನ್ನು ಗುರುತಿಸಿ, ಬಡತನದಲ್ಲೂ ಒಳ್ಳೆತನವಿರಬಹುದು ಎಂಬುದನ್ನು ಪ್ರತಿಪಾದಿಸುವ ಪ್ರಯತ್ನದಲ್ಲೂ ಅವರ ಬರವಣಿಗೆ ಒಂದು ನಿರ್ದಿಷ್ಟ ನಿಲುವನ್ನು ತಾಳದೆ ಕಲಸುಮೇಲೋಗರವಾಗಿ ಪರಿಣಮಿಸುತ್ತಿದೆ. ಮಹಿಳೆಯಂತವರಿಗೆ ಅರಿವಿಲ್ಲದೆಯೇ ಶ್ರೀಮಂತಿಕೆಯ ಕಡೆ ಒಲಲ್ಪಟ್ಟು, ಸಿರಿತನದ ಸಂಭ್ರಮವನ್ನು ಅಲ್ಲಿ ಪಸರಿಸುತ್ತಾರೆ; ಬಡತನವನ್ನು ತಾವು ಸೃಷ್ಟಿಸ ಹೊರಟಿದ್ದೇವೆ ಅನ್ನುವುದನ್ನೇ ಮರೆಯುತ್ತಾರೆ.

ಕುಂದು–ಕೊರತೆಗಳನ್ನು ತೋರಿಸಿಕೊಟ್ಟಾಗ ಮೊನಚಾದ ಪ್ರತಿಕ್ರಿಯೆ ಬರುವುದು ಸಹಜವೇ ಆಗಿದ್ದೂ, ಮಹಿಳೆಯರೂ ಲೇಖನದತ್ತ ಸೆಟೆದು ನಿಂತಲ್ಲಿ ಆಶ್ಚರ್ಯವೇನಿಲ್ಲ: ಆದರೆ ಅವರೆಲ್ಲರಲ್ಲೂ ಒಂದು ವಿನಂತಿ; ಇನ್ನು ಮುಂದಾದರೂ ಅವರು ತಮ್ಮ ಲೇಖನಿಯನ್ನು ಬೇರೆ ದಿಕ್ಕಿನಲ್ಲಿ ಆಡಿಸಿ, ಸಮಾಜಕ್ಕೆ ಶ್ರೀಸಾಮಾನ್ಯನಿಗೆ ಉಪಯುಕ್ತವಾಗುವಂತಹ ಬರಹಗಳಲ್ಲಿ ತೊಡಗಲೆಂದು. ●

# ಹುಚ್ಚ ಮತ್ತು ರಾತ್ರಿ

ಹುಚ್ಚ: ಎಲೆ ರಾತ್ರಿ,
ನಿನ್ನೊಲು ಕರಾಲ ದಿಗಂಬರ ನಾನು!
ಹಗಲಂಗನಸಂಗಳ ಆಚೆ ಆಚೆಗಿನ
ಉರಿದಾರಿಯಲಿ ಎನ್ನ ಹಾದಿ ಸಾಗಿದೆ
ಎನ್ನ ನಿಕ್ಷೇಪ ಪದತಲದಲೊಂದೊಂದು
ಭೀಮ ವಟತರು ಭುಲ್ಲಯಿಸುತಿದೆ!

ರಾತ್ರಿ: ಛೀ, ಹುಚ್ಚಾ,
ನೀನೆನ್ನ ಅನುರೂಪನಲ್ಲ, ಬಿಡು!
ಹುಡಿಯುಲೊರಗಿದ ಅಡಿಯ
ಗುರುತಿನಗಲವನರಿಯೆ,
ಇನ್ನೂ
ಹೊರಳಿ ನಿರುಕುವೆ ನೀನು!

ಹುಚ್ಚ: ಎಲೆಲೆ ಕತ್ತಲೆ,
ಮೌನಿ ಘನ ಗಂಭೀರನಹೆ ನಾನು,
ನಿನ್ನ ಬಗೆ!
ಎನ್ನೀ ಮೂಕ ಬಗೆಯಾಳದಲಿ
ಹಸುಳೆತನದ ದೇವತೆಯೋರ್ವನಿಹ
ಅವನೊಳು ನಾಕ ನರಕದೊಡನೆ
ಮುಟ್ಟಾಟವಾಡುವುದು!

ರಾತ್ರಿ: ಛಿಹ್ಹಿ, ಪೆಚ್ಚೆ
ನೀನಿನ್ನೂ
ನೋವಿನದುರು ನಲುಗುವೆ
ಪಾತಾಲ ಗೀತವನಾಲಿಸಲು
ಬೆಚ್ಚುತಿಹೆ ನೀನು!
ನಿನ್ನ ನನ್ನ ಹೋಲಿಕೆ ಎಂತುಟು
ಮರುಳಾ?

ಹುಚ್ಚ: ಆಹಾ, ಇರುಳೆ
ನಿನ್ನೊಲು ಘೋರ ಭೀಕರ ನಾನು
ನಿಮಿರಿದ ಕಿವಿಗಳಲಿ,
ಜಿತ ದೇಶಗಳ ರೋದನ,
ಜೀವನ್ಮೃತ ಭೂಮಿಗಳ ನಿಟ್ಟುಸಿರು
ಸಂತೆ ಹೂಡಿವೆ!

ರಾತ್ರಿ: ಇಲ್ಲ, ಹುಚ್ಚಾ, ಇಲ್ಲ!
ಎನ್ನೊಡನೆ ತವ ತುಲನೆ ಹೊಲ್ಲ!
ನೀನಿನ್ನೂ
ಕಳೆದುಳಿದ ಜೀವಾಣುವನು
ಕೆಳಗೆ ಳಸುವೆ
ಆದರ್ಶ
ನಿನ್ನೀ ವೇತಾಳ ಜೀವವು
ಗೆಳೆಯನಾಗಲು ಸೋಲುತಿದೆ

ಹುಚ್ಚ: ಎಲೆಲೆ ಕತ್ತಲೆ,
ನಿನ್ನೊಲು ನಾನು ಕಟುಕ ಮತ್ತು
ಭೀಷಣನಿಹೆ.
ಕಡಲಲಿ ಉರಿವ ಹಡಗುಗಳಿಂದ
ಎನ್ನೆದೆ ಬೆಳಕುವಡೆದಿದೆ!
ಎನ್ನಧರದಳೊ......
ಹತರಾದ ಭಟರ ಕಣ್ಣೀರಿನಲಿ
ಮಜ್ಜನಗೈದಿವೆ!

ರಾತ್ರಿ: ಛಿಹಿ, ಉನ್ಮಾದೀ,
ಸೋದರೀ ಭಾವವೊಂದು ನಿನ್ನೆದೆಯ
ಕೆಣಕುವುದ ಬಲ್ಲೆ ನಾನು
ನಿನ್ನೊಳೆ, ನೀನಿನ್ನೂ
ನಿಯಮವಾಗಿಲ್ಲ!
ಎಂತು ಹೋಲುವೆಯೆನ್ನ?

ಹುಚ್ಚ: ಎಲೆ ಇರುಳೆ,
ನಿನ್ನೊಲು ಸಂತೋಷಿ ನಾನು!
ಹರುಷ ತುಳುಕಿದ ಒಡಲ
ಎನ್ನ ನೆಳಲೊಳು ತಂಗಿದವನೀಗ
ಮಧುಮತ್ತನಹ!
ಎನ್ನ ಅನುಚರಳೋ......
ನಗುನಗುತೆ ಹೊಲೆಯನೆಸಗುವಳು!

ರಾತ್ರಿ: ಅಹಹಾ, ಮರುಳಾ,
ಹೊಂಬುರಿಯಂದ ತುಲನೆ ನಿನ್ನದು!
ನಿನ್ನುಸಿರು,
ಏಳು ಪದರುಗಳ ಹೊದಿಕೆಯಲಿ
ಅಡಗಿದ
ಮಾನವ ಕೈಯೊಳು ಹಿಡಿಯಬಲ್ಲೆಯ ನೀನು?
......ಉಹುಂ ಉಹುಂ ಉಹುಂ,

ಹುಚ್ಚ: ಓಹೋ, ನಿಶೆಯೆ,
ನಿನ್ನ ತರ ಎನ್ನೊಳು
ಸಹನೆ ಸಿಡುಕುಗಳನು
ಅಳವಡಿಸಿಹೆ!
ಎನ್ನೀ ಹರದೆದೆಯೊಳಗೆ
ಸಾಸಿರ ಮೃತ ಪ್ರೇಮಿಗಳು
ಕಮರಿದ ಮುಗ್ಧೆಗಳು ಪದ

ಪ್ರೇತ ವಸನದಲಿ
ಹುದುಗಿಹರು !

ರಾತ್ರಿ: ಹೇಹೇಹೇ, ಪೆದ್ದಾ,
ನೀನೆನ್ನ ಹೋಲುವೆಯ? ನೀನೆನ್ನ ಹೋಲುವೆಯ?
ಎಲಾ, ನೀನು, ಬಿರುಗಾಳಿಯನೆ
ಕಾಳಗದ ಹಯವನಾಗಿಸಿ
ಸವಾರಿ ಮಾಡುವದಿಲ್ಲವೆ ?......ಹಾಂ !
ಸಿಡಿಲನೆ ಖಡುಗವನ್ನಾದಿ
ತಿಳಿದಿಲ್ಲವೋ...?

ಹುಚ್ಚ: ಎಲೈ ಕಾಳ,
ನಿನ್ನೊಲು ನಾನು,
ಬಲಯುತ ವರ್ಣ್ ಉನ್ನತನಹೆ !
ಶಪಿತ ದೇವತೆಗಳ ರಾಶಿಯ ಮೇಲೆ
ನನ್ನ ಸಿಂಹಾಸನವು ಏರಿ ನಿಂತಿದೆ,
ಮತ್ತೆ ದಿನಗಳೋ...
ಎನ್ನ ತೊಡುಗೆಯ ಸೆರಗಿಗೆ
ಮುತ್ತನಿಡಲು ತೆರಳುತಿವೆ !
ಆದರೆ,
ನನ್ನ ಮುಖಾವಲೋಕನವ
ಅನಿತೂ ಅರಿಯವು !

ರಾತ್ರಿ: ಓಹೊ...ಎಲೆಲೆ,
ಎನ್ನ ನೀಲತಮ ಹೃದಯದ ಶಿಶುವೆ,
ನೀನೆನ್ನ ಹೋಲುವೆಯ ?
ನನ್ನೀ ಕಲುಷಿತ ವಿಚಾರಗಳನೇ
ಚಿಂತಿಸುವೆಯಲಾ...?
ಎನ್ನೀ ವಿಶಾಲ ಭಾಷೆಯ
ನುಡಿಯಬಲ್ಲೆಯ...? ಹಾಂ !

ಹುಚ್ಚ: ಹೊ ಹೋ ಹೋ !
ಎಲೆ ರಾತ್ರಿ...
ಯಮಳರು ಕಣಾ ನಾವೀರ್ವರು !
ನೀನೊ...
ನಿನ್ನೊಳವಕಾಶವನೆ ತೆರೆದಿರಿಸಿಹೆ !
ನಾನೋ...
ನನ್ನಾತ್ಮವನೆ ತೆರೆದು ಹರವಿಹೆ !

ಚಿದಂಬರ ದೀಕ್ಷಿತ

(ಕಲಿಲ್ ಗಿಬ್ರಾನ್‌ರ ಕವಿತೆಯೊಂದನ್ನೋದಿ)

---

## ಬ್ರಹ್ಮಚರ್ಯ

ಯಮ—ಯಮಿಯ ಸಂವಾದ
ಈಡಿಪಸ್‌ನ ಕಾಂಪ್ಲೆಕ್ಸ್
ಫ್ರಾಯ್ಡನ ವಿಕೃತಿಗಳೊಡನೆ
ಸೆಣಸಾಡಿ ಬೆವರಿದ ಎಳೆರಾತ್ರಿ
ಪ್ಲೇಟೋನ ಪ್ರಣಯ ಸಂಧಾನಕ್ಕೆ
ಸುಮ್ಮನಾದ ಬ್ರಹ್ಮಚರ್ಯ,
ಸಂಗ ನಿಸ್ಸಂಗ
ನಿಸ್ಸಂಗದಾಚೆಯ ಸಂಗೆ
ನಿಸ್ಸಂಗನೆಂದರೂ ಶೂನ್ಯವಲ್ಲ
ಎಂದೂ ಮುಕ್ತಸಂಗಕ್ಕೂ
ಎಳಸದ ಅಡ್ಡಹಚ್ಚಿದ
ಸಂಜೆ ಬ್ರಹ್ಮಚರ್ಯ,
ಒಂದೂ ವಿರಾಟ ಸ್ವಪ್ನದಲಿ
ಪಿಂಡಾಂಡ ಬ್ರಹ್ಮಾಂಡ
ಕ್ಷೇತ್ರದರ್ಶನವಾದಾಗ
ನಿರ್ವೀರ್ಯತೆಯ
ಷಂಡ ಮೃತ್ಯುವಿಗೆ ಹೆದರಿ
ತಂಗಳ ತುಂಬಿಟ್ಟ
ತಾಮ್ರದ ತಂಬಿಗೆಯ
ನೀರು ಕುಡಿದು
ಸಾಮು ಹೊಡೆದ
ಬ್ರಹ್ಮಚರ್ಯ,

## ನೇರಿಳೆ ಮಂಜು

ಕಾರು ಚೀರುವ ಬ್ರೇಕ್ಸು
ಟ್ರಕ್ಕು ಹಾಂಕುವ ಹಾರ್ನು
ಬಿಸಿ ಒದರುವ
ಚನಾ ಗಡಿಗೆ
ಎರಡೂ ದಿಕ್ಕು ಹರಿದ
ಜನ ಜಂಗುಳಿ
ರಾತ್ರಿ ಸಪ್ತಾ ತಿರುಗುವ
ಕಾಮಂದ ಗಸ್ತು
ನಿಹಿಲಿಸ್ಟರ ಕಾಲನಿಯಿಂದ
ಚೀರಿ ಬಂದ ಮೃತ್ಯು
ಟಿಮಿ ಟಿಮಿಗುಟ್ಟುವ
ನಕ್ಷತ್ರದಾಚೆ ಹಬ್ಬಿದ
ನೀಲಿ ದಟ್ಟ ಕಾಡು
ಇವಕ್ಕೆಲ್ಲ ಹೊದಿಸುತ್ತಿತ್ತು
ನಿಯಾನ್ ಸೈನಿನ
ನೇರಿಳೆ ಮಂಜು
ನಿರ್ವಾಣದ ನೆರಳು
ಹೆದರಿ ಸತ್ತ ಹೆಣದ
ಬಿಳಚಿದ ಮುಖಕ್ಕೆ
ಸಮಾಧಾನ ಹೇಳಿದಂತೆ

ಡಾ|| ಹೊಸಕೇರಿ ಗೋವಿಂದ

# ಹಬ್ಬಗಳು

ಭಾರತೀಯ ಪರಂಪರೆಯ ಸುಂದರ ಅಂಗ




ಸ್ವಸ್ತಿಕ್ **ಶಿಕಾಕಾಯಿ** ಶಂಪೂ ಸೋಪ್

ಭಾರತೀಯ ಮಹಿಳೆಯ
ಅಂದವಾದ ತಲೆಗೂದಲಿನ ಪರಂಪರಾಗತ ರಹಸ್ಯ




ಜ್ಯೋತಿಷಿ :

ಎನ್. ಕೆ. ಜೋಗಳೇಕರ

ಜ್ಯೋತಿಷ್ಯ ಕಾರ್ಯಾಲಯ :

ರವಿವಾರಪೇಟೆ, ಧಾರವಾಡ-೧

(ದೂರವಾಣಿ : ೭೭೪೪)


**ವಿಕ್ರಮ ಸಂವತ್ಸರದ ೨೦೩೩ ರ ಭವಿಷ ಅರ್ಥಾತ್ ಶ್ರೀ ನೃಪ ಶಾಲಿವಾಹನ ಶಕೆ ೧೮೯೮ ನೆಯ ನಳ ಸಂವತ್ಸರದ ಕಾರ್ತಿಕ ಶುದ್ಧ ಪ್ರತಿಪದೆಯಿಂದ ೧೮೯೯ ನೆಯ ಪಿಂಗಲ ಸಂವತ್ಸರದ ಆಶ್ವಿನ ಬಹುಳ ಅಮಾವಾಸ್ಯೆಯವರೆಗೆ ಅಂದರೆ ಕ್ರಿಸ್ತಶಕೆ ೧೯೭೬ ನೇ ಅಕ್ಟೋಬರ ೨೨ ರಿಂದ ೧೯೭೭ ನೆಯ ನವ್ಹಂಬರ ೧೦ ರ ವರೆಗೆ. ಅರ್ಥಾತ್ ಈ ದೀಪಾವಳಿ-ಯಿಂದ ಮುಂದಿನ ದೀಪಾವಳಿಯ ವರೆಗಿನ ವರ್ಷ ಭವಿಷ್ಯ.**



## ಮೇಷ

ಈ ರಾಶಿಯ ಎಲ್ಲ ವರ್ಗದವರಿಗೂ ಈ ವರ್ಷ ಎಲ ದೃಷ್ಟಿಯಿಂದಲೂ ಪ್ರೋತ್ಸಾಹದಾಯಕವಾಗಿದೆಯಲ್ಲದೆ ಕಳೆದವರುಷದಲ್ಲಿದ್ದ ತೊಂದರೆ ಹಾಗೂ ಅಸ್ಥಿರತೆಗಳು ದೂರಾಗುವವು.

ಈ ರಾಶಿಯವರಿಗೆ ಕಳೆದ ವರುಷದಿಂದ ಇದ್ದ ಅನಿಷ್ಟ ಫಲದಾಯಕ ಚತುರ್ಥ ಶನಿಯು ಈ ವರುಷವೂ ಅದೇ ಸ್ಥಾನದಲ್ಲಿ ಮುಂದುವರೆದರೂ ವರುಷದ ಪ್ರಾರಂಭ ಹಾಗೂ ಮಧ್ಯದಲ್ಲಿ ಬರುವ ದ್ವಿತೀಯ ಹಾಗು ಅತ್ಯಂತ ಶುಭ ಫಲದಾಯಕ ಗುರು, ಚೈತ್ರದಿಂದ ಆರನೇ ಲಾಭದಾಯಕ ರಾಹುವಿನ ಆಗಮನದಿಂದ ಈ ವರುಷ ಪ್ರೋತ್ಸಾಹದಾಯಕವಾಗಿದ್ದು ಶನಿಯ ಪ್ರಖರತೆ ಕಡಿಮೆಯಾಗುತ್ತದೆ. ವರುಷದ ಮುಕ್ಕಾಲು ಅವಧಿಯವರೆಗೆ ಆರೋಗ್ಯ ಉತ್ತಮವಿದ್ದು ನವ್ಹಂಬರ ೧೫ರಿಂದ ಡಿಶೆಂಬರ ೧೫, ಮಾರ್ಚ ೧೫ ರಿಂದ ಮೇ ೧೫ ಹಾಗೂ ಜುಲೈ ೧೫ರಿಂದ ಅಗಸ್ಟ ೧೫ರ ವರೆಗಿನ ನಾಲ್ಕು ತಿಂಗಳುಗಳ ಕಾಲ ಮಾತ್ರ ಅಲ್ಪ ಸ್ವಲ್ಪ ಶಾರೀರಿಕ ಪೀಡೆ ಉಂಟಾಗಬಹುದಾಗಿದೆ. ಆರ್ಥಿಕ ದೃಷ್ಟಿಯಿಂದ ಈ ವರುಷ ನೀವು ಸುದೈವಿಗಳಿದ್ದು ವರುಷವಿಡೀ ಆರ್ಥಿಕ ಸ್ಥಿತಿ ತೃಪ್ತಿಕರವಿರುವದು. ಅದರಲ್ಲಿಯೂ ಡಿಶೆಂಬರ ೧೫ರಿಂದ ಮಾರ್ಚ ೧೫, ಮೇ ೧೫ರಿಂದ ಜುಲೈ ೧೫, ಅಗಸ್ಟ ೧೫ರಿಂದ ಅಕ್ಟೋಬರ ೧೮ರವರೆಗಿನ ಈ ಏಳು ತಿಂಗಳಕಾಲ ಹಣಕಾಸಿನ ದೃಷ್ಟಿಯಿಂದ ಅನುಕೂಲವಿದ್ದು ಈ ಅವಧಿಯಲ್ಲಿ ನಿರೀಕ್ಷಿಸಿದ ಮೂಲದಿಂದ ಹಣ ಬರುವದಲ್ಲದೆ ದತ್ತಕ ವಾರಸಾ ಸಟ್ಟಾ, ಲಾಟರಿ, ಬಹುಮಾನ, ಬಕ್ಷೀಸ್, ಕಮೀಶನ್ನ ಮೊದಲಾದ ಮೂಲದಿಂದ ಆಕಸ್ಮಿಕ ಧನಲಾಭಯೋಗ ಉಂಟು.

ವಾದ, ಸ್ಪರ್ಧೆ, ಕೋರ್ಟು ಕಚೇರಿಗಳ ಕೆಲಸದಲ್ಲಿ ಖಂಡಿತವಾಗಿಯೂ ಜಯಲಕ್ಷ್ಮಿ ನಿಮ್ಮ ಕೊರಳಿಗೆ ಮಾಲೆ ಹಾಕುವದರಲ್ಲಿ ಸಂದೇಹವಿಲ್ಲ. ಅದರಲ್ಲಿಯೂ ಫೌಜದಾರಿ ವ್ಯಾಜ್ಯಗಳಿಗೆ ಪೂರ್ವಾರ್ಧವೂ ರಾಜಕೀಯ ಹಾಗೂ ನೌಕರರಿಗೆ ಸಂಬಂಧಿಸಿದ ವ್ಯಾಜ್ಯಗಳಿಗೆ ಮಧ್ಯದಲ್ಲಿಯೂ ದಿವಾಣಿ ವ್ಯಾಜ್ಯಗಳಿಗೆ ಉತ್ತರಾರ್ಧವೂ ಯಶೋದಾಯಕವಿದೆ.

ಈ ರಾಶಿಯ ನೌಕರ ವರ್ಗದವರಿಗೆ ದ್ವಿತೀಯ ಗುರುವಿನಿಂದಾಗಿ ಈ ವರುಷ ಅತ್ಯಂತ ಶುಭದಾಯಕವಾಗಿದೆ. ಕಳೆದಕೆಲ ವರುಷಗಳಿಂದ ನೌಕರಿಯ ಬೇಟೆಯಾಡುತ್ತಿದ್ದ ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವದು. ಡಿಶೆಂಬರ ೧೫ರಿಂದ ಮಾರ್ಚ ೧೫, ಮೇ ೧೫ರಿಂದ ಜುಲೈ ೧೫, ಅಗಸ್ಟ ೧೫ರಿಂದ ಅಕ್ಟೋಬರ ೧೮ರ ವರೆಗಿನ ಈ ಏಳು ತಿಂಗಳಕಾಲ ಅತ್ಯಂತ ಶುಭದಾಯಕವಾಗಿದ್ದು ಈ ಅವಧಿಯಲ್ಲಿ ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವದು. ನೌಕರದಾರರಿಗೆ ಬಡತಿ, ಹಂಗಾಮಿ ನೌಕರದಾರರಿಗೆ ನೌಕರಿಯಲ್ಲಿ ಕಾಯಂ ಆಗುವಿಕೆ ಇಚ್ಛಿತ ಸ್ಥಳಕ್ಕೆ ಬದಲಿ ಮೊದಲಾದ ಶುಭ ಘಟನೆಗಳು ಜರುಗುವವು. ಈ ರಾಶಿಯ ಬಾಹ್ಯ ಹಾಗು ತಾಂತ್ರಿಕ ಕೆಲಸಗಾರ, ಸಂಚಾರಿ ಕೆಲಸಗಾರ, ಗಿರಣಿ, ಕಾರಖಾನೆಗಳ ಕಾರ್ಮಿಕ ವರ್ಗಕ್ಕೆ ವರುಷದ ಪೂರ್ವಾರ್ಧವು ಪ್ರೋತ್ಸಾಹದಾಯಕವಾಗಿದೆ. ತಮ್ಮೆಲ್ಲ ಬೇಡಿಕೆಗಳಿಗೆ ಒತ್ತಾಯ ಮಾಡದೆ ಸಂಧಾನ ಮನೋಭಾವನೆಯಿಂದ ವರ್ತಿಸಿದಲ್ಲಿ ಪೂರ್ವಾರ್ಧದಲ್ಲಿ ಯಶಸ್ಸು ದೊರೆಯುತ್ತದೆ. ದ್ವಿತೀಯ ಗುರುವಿನಿಂದಾಗಿ ಈ ರಾಶಿಯ ಬುದ್ಧಿಜೀವಿಗಳಾದ ಪತ್ರಿಕೋದ್ಯಮಿ, ಕಲಾವಿದ, ಡಾಕ್ಟರ, ವಕೀಲ, ಶಿಕ್ಷಕ, ನ್ಯಾಯಾಧೀಶ, ಕಾರಕೂನ ಮೊದಲಾದವರಿಗೆಲ್ಲ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಡಿಶೆಂಬರ ೧೫ರಿಂದ ಮಾರ್ಚ ೧೫, ಮೇ ೧೫ರಿಂದ ಜುಲೈ ೧೫, ಅಗಸ್ಟ ೧೫ರಿಂದ ಅಕ್ಟೋಬರ ೧೮ರವರೆಗಿನ ಈ ಏಳು ತಿಂಗಳ ಕಾಲ ಅತ್ಯಂತ ಶುಭ ಹಾಗೂ ಅನುಕೂಲವಿದ್ದು ಈ ಅವಧಿಯಲ್ಲಿ ಉದ್ಯೋಗದಲ್ಲಿ ಉತ್ಕರ್ಷವಿದ್ದು ಸರಕಾರ ಹಾಗೂ ಸಂಸ್ಥೆಗಳಿಂದ ಮಾನಸನ್ಮಾನ ಮನ್ನಣೆ ಪ್ರಶಸ್ತಿ ಪದಕ ದೊರೆತು ದ್ರವ್ಯಾನುಕೂಲತೆಯಾಗಿ ಹಿಂದಿನ ಸಾಲಗಳೆಲ್ಲ ತೀರುವವು. ವಾಹನ, ಸೌಖ್ಯ, ಪರದೇಶ ಪರ್ಯಟನಗಳಂಥ ಶುಭಘಟನೆಗಳು ಜರಗುವವು. ಆದರೆ ನವ್ಹಂಬರ ೧೫ ರಿಂದ ಡಿಶೆಂಬರ ೧೫, ಮಾರ್ಚ ೧೫ ರಿಂದ ಎಪ್ರಿಲ್ ೧೨, ಜುಲೈ ೧೫ರಿಂದ ಅಗಸ್ಟ ೧೫ರ ವರೆಗಿನ ಮೂರು ತಿಂಗಳಕಾಲ ಪ್ರತಿಕೂಲವಿದ್ದು ಉದ್ಯೋಗದಲ್ಲಿ ಹಾನಿ, ಶತ್ರುಗಳ ಕಾಟ ಆರ್ಥಿಕ ಮುಗ್ಗಟ್ಟನ್ನು ಎದುರಿಸಬೇಕಾಗುತ್ತದೆ.

ಈ ರಾಶಿಯ ಸ್ವತಂತ್ರ ಉದ್ಯೋಗ ವ್ಯಾಪಾರಸ್ಥ

ಲೋಕ ವ್ಯಾಪಾರಸ್ಥ ಉದ್ಯಮದಾರ, ಲೋಕ ಕಮಿಶನ ಏಜೆಂಟ, ಹಂಚಿಕೆದಾರ, ಗಿರಣಿ, ಕಾರಖಾನೆ, ಹೋಟೆಲ ಟಾಕೀಜ, ಚಾಳುಗಳ ಮಾಲಕ ವರ್ಗದವರಿಗೆಲ್ಲ ಈ ವರುಷ ಪ್ರೋತ್ಸಾಹದಾಯಕ. ಕಳೆದ ವರುಷ ಎದುರಾದ ನೌಕರರ ಸಮಸ್ಯೆಗಳಿಗೆ ಪರಿಹಾರ ದೊರೆಯುವದಲ್ಲದೆ ಸರಕಾರದ ನಿಬಂಧನೆಗಳು ದೂರಾಗುವವು. ಅಲ್ಲದೆ ಕಳೆದ ವರುಷದ ಅಸ್ಥಿರತೆ ದೂರಾಗಿ ಉದ್ಯೋಗದಲ್ಲಿ ಸ್ಥಿರತೆ ಉಂಟಾಗಿ ಉತ್ಕರ್ಷವಾಗುವದು. ಅದರಲ್ಲಿಯೂ ಡಿಶೆಂಬರ ೧೫ರಿಂದ ಮಾರ್ಚ, ೧೫, ಎಪ್ರಿಲ್ ೧೨ರಿಂದ ಜುಲೈ ೧೫ರವರೆಗಿನ ಈ ಆರು ತಿಂಗಳಕಾಲ ಉದ್ಯೋಗದಲ್ಲಿ ದ್ವಿಗುಣ ಲಾಭವಾಗಿ ಹೇರಳಹಣ ಸಂಪಾದಿಸಿ ಹೊಸ ಉದ್ಯೋಗ ಪ್ರಾರಂಭಿಸಬಹುದು. ಇಲ್ಲವೇ ಹೊಸ ಶಾಖೆಗಳನ್ನು ಪ್ರಾರಂಭಿಸಬಹುದಾಗಿದೆ. ಈ ರಾಶಿಯ ಕೃಷಿವರ್ಗ ಹಾಗೂ ಶ್ರಮಜೀವಿಗಳಿಗೆ ಈ ವರುಷ ಮಿಶ್ರ ಫಲವಿದೆ. ಗುರು–ರಾಹು ಶುಭ ಫಲದಾಯಕರಾಗಿದ್ದರೆ ಶನಿ ಅಶುಭ ಫಲದಾಯಕನಾಗಿರುವನು. ಪೂರ್ವಾರ್ಧವು ಶುಭದಾಯಕವಾಗಿದ್ದರೆ ಉತ್ತರಾರ್ಧವು ಅಶುಭದಾಯಕ. ಶ್ರಮಕ್ಕೆ ತಕ್ಕ ಫಲ ದೊರೆಯದು. ಪೂರ್ವಾರ್ಧದಲ್ಲಿ ನಿರೀಕ್ಷೆಗಿಂತ ಅಧಿಕ ಬೆಳೆ ಬಂದು ಹಿಂದಿನ ಸಾಲವೆಲ್ಲ ತೀರಿ ಹೋಗಿ ಹೊಸ ಜಾಗ, ಮನೆ ದನಕರು ಪಂಪಸೆಟ್ಟ, ಟ್ರಕ್‌ಟ್ರ್ಯಾಕ್ಟರ ಮೊದಲಾದ ಬೇಸಾಯಕ್ಕೆ ಬೇಕಾಗುವ ಉಪಕರಣಗಳನ್ನು ಕೊಳುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಬರುವದು. ಆದರೆ ಉತ್ತರಾರ್ಧವು ತೀರ ಪ್ರತಿಕೂಲ ಇದ್ದು ಸಾಲಗಾರರ ಕಾಟ, ದನ ಕರುಗಳ ಬೇನೆ, ಬೇಸಾಯಕ್ಕೆ ಬೇಕಾಗುವ ಉಪಕರಣಗಳು ಕೆಡುವಿಕೆ ಮೊದಲಾದ ಅಶುಭ ಘಟನೆಗಳು ಜರುಗಿ ಬೇಸಾಯ ಮುಂದುವರಿಸುವದೇ ಕಠಿಣವಾಗುವದು.

ಕಳೆದ ವರುಷದಿಂದ ಗೃಹಸ್ಥಾಶ್ರಮಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ ವಧೂವರರಿಗೆ ಈ ವರುಷ ಅವರ ಮನೋರಥ ಈಡೇರುವದು. ಡಿಶೆಂಬರ ೧೫ ರಿಂದ ಮಾರ್ಚ ೧೫, ಮೇ ೧೫ರಿಂದ ಜುಲೈ ೧೫ರವರೆಗಿನ ಮೂರು ತಿಂಗಳ ಕಾಲದಲ್ಲಿ ವಿವಾಹ ಜರುಗುವದು. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೆಲ್ಲ ಈ ವರುಷ ಪ್ರೋತ್ಸಾಹದಾಯಕವಾಗಿದ್ದು ಒಡೆದು ಹೋಗಿದ್ದ ಏಕತ್ರ ಕುಟುಂಬ ಮತ್ತೆ ಒಂದುಗೂಡುವದಲ್ಲದೆ ಆಪ್ತೇಷ್ಟರಲ್ಲಿ ಉಂಟಾಗಿದ್ದ ತಪ್ಪು ತಿಳುವಳಿಕೆ ದೂರವಾಗಿ ಮತ್ತೆ ಪ್ರೀತಿ ವಿಶ್ವಾಸ ಕಂಡುರುವದು. ಡಿಶೆಂಬರ ೧೫ರಿಂದ ಮಾರ್ಚ ೧೫ ಹಾಗೂ ಮೇ ೧೫ರಿಂದ ಜುಲೈ ೧೫ರ ವರೆಗಿನ ಈ ಆರು ತಿಂಗಳ ಕಾಲ ಅತ್ಯಂತ ಶುಭದಾಯಕವಾಗಿದ್ದು ಈ ಅವಧಿಯಲ್ಲಿ ಬೆಲೆಯುಳ್ಳ ವಸ್ತು ಒಡವೆಗಳ ಖರೀದಿ ಸಾವರ ಇಸ್ಟೇಟ ಸಂಪಾದನೆ, ಹೊಸಮನೆ ಖರೀದಿ ಇಲ್ಲವೆ ಕಟ್ಟೋಣ, ತೀರ್ಥಯಾತ್ರೆ, ಧಾರ್ಮಿಕ ಕಾರ್ಯ ನೆರವೇರಿಸುವ ಇವೇ ಮೊದಲಾದ ಶುಭ ಘಟನೆಗಳು ಜರುಗುವವು. ಈ ರಾಶಿಯ ಗರ್ಭಿಣಿಯರ ಹೆರಿಗೆಯು ಡಿಶೆಂಬರ ೧೫ರಿಂದ ಮಾರ್ಚ ೧೫, ಅಗಸ್ಟ ೧೫ ರಿಂದ ವರುಷಾಂತ್ಯದ ವರೆಗೆ ಹಾಗೂ ಮೇ ೧೫ ರಿಂದ ಜುಲೈ ೧೫ರ ವರೆಗಿನ ಅವಧಿಯಲ್ಲಾದರೆ ಸುಖ ಪ್ರಸೂತಿಯಾಗುವವಲ್ಲದೆ ಗಂಡು ಸಂತಾನವಾಗುವದು. ಅದರೆ ಹೆರಿಗೆಯು ನವ್ಹಂಬರ ೧೫ರಿಂದ ಡಿಶೆಂಬರ ೧೫, ಮಾರ್ಚ ೧೫ರಿಂದ ಮೇ ೧೫, ಜುಲೈ ೧೫ರಿಂದ ಅಗಸ್ಟ ೧೫ರ ಅವಧಿಯಲ್ಲಾದರೆ ಕಷ್ಟ ಪ್ರಸೂತಿ ಹಾಗೂ ಶಸ್ತ್ರಕ್ರಿಯೆ ಅನಿವಾರ್ಯವಾಗುವದು.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷ ಪ್ರಗತಿದಾಯಕವಾಗಿದೆ. ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸಿ ಅನೇಕ ಸಂಘ ಸಂಸ್ಥೆಗಳ ಸದಸ್ಯತ್ವ ಹಾಗೂ ಪದಾಧಿಕಾರಿಗಳಾಗಿ ಸ್ಥಾನಮಾನ ಅಧಿಕಾರ ಪಡೆಯುವರು. ರಾಜ್ಯಮಟ್ಟದ ರಾಷ್ಟ್ರಮಟ್ಟದ ಕಡಿಮೆ ಪಕ್ಷ ಜಿಲ್ಲಾ ಮಟ್ಟದ ಗಣ್ಯ ವ್ಯಕ್ತಿಗಳಾಗುವದರಲ್ಲಿ ಸಂದೇಹವಿಲ್ಲ. ಅದರಲ್ಲಿಯೂ ಡಿಶೆಂಬರ ೧೫ರಿಂದ ಮಾರ್ಚ ೧೫, ಮೇ ೧೫ರಿಂದ ಜುಲೈ ೧೫, ಅಗಸ್ಟ ೧೫ರಿಂದ ಅಕ್ಟೋಬರ ೧೭ರ ವರೆಗಿನ ಅವಧಿಯಲ್ಲಿ ಸ್ಥಾನ ಮಾನ ಅಧಿಕಾರ ಪಡೆಯುವರು. ಇದೇ ಅವಧಿಯಲ್ಲಿ ಜರುಗಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೂ ಯಶಸ್ಸು ಖಂಡಿತ. ಅತ್ಯಧಿಕ ಮತಗಳಿಂದ ಆಯ್ಕೆ ಆಗಿ ಎದುರಾಳಿಯ ಇಡುಗಂಟು ಜಪ್ತವಾಗುವದು. ಅವಿರೋಧ ಆಯ್ಕೆಯೂ ಆಗಬಹುದಾಗಿದೆ. ಆದರೆ ನವ್ಹಂಬರ ೧೫ರಿಂದ ಡಿಶೆಂಬರ ೧೫ ಮಾರ್ಚ ೧೫ರಿಂದ ಮೇ ೧೪, ಜುಲೈ ೧೫ರಿಂದ ಅಗಸ್ಟ ೧೪ರ ವರೆಗಿನ ಕಾಲದಲ್ಲಿ ಚುನಾವಣೆಗಳು ಜರುಗಿದರೆ ಆಯ್ಕೆಯಾದರೂ ನಿಖರದ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ದ್ವಿತೀಯ ಶುಭ ಫಲದಾಯಕ ಗುರುವಿನಿಂದಾಗಿ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಕಳೆದು ಹೋದ ವಿದ್ಯಾರ್ಥಿವೇತನ, ಶಿಷ್ಯವೇತನ ಪುನಃ ಈ ವರುಷ ದೊರೆಯುವದು. ಡಿಶೆಂಬರ ೧೫ರಿಂದ ಮಾರ್ಚ ೧೫, ಮೇ ೧೫ ರಿಂದ ಜುಲೈ ೧೫, ಹಾಗೂ ಅಗಸ್ಟ ೧೫ರಿಂದ ಅಕ್ಟೋಬರ ೧೭ರ ನಡುವೆ ಜರುಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಅನಾಯಾಸವಾಗಿ ತೇರ್ಗಡೆ ಆಗುವರಲ್ಲದೇ ದರ್ಜೆ, ಶ್ರೇಣಿ ಪಡೆದು ಪ್ರಶಸ್ತಿ ಪದಕ ಪಡೆಯುವರು. ಹೆಚ್ಚಿನ ವ್ಯಾಸಂಗಕ್ಕಾಗಿ ಇಲ್ಲವೇ ಸಂಶೋಧನೆಗಾಗಿ ವಿದೇಶ ಪರ್ಯಟನ ಕೈಕೊಳ್ಳುವ ಸುಯೋಗ ಉಂಟು. ಆದರೆ ನವಂಬರ ೧೫ರಿಂದ ಡಿಶೆಂಬರ ೧೫, ಮಾರ್ಚ ೧೫ರಿಂದ ಮೇ ೧೪, ಜುಲೈ ೧೫ರಿಂದ ಅಗಸ್ಟ ೧೪ರವರೆಗಿನ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ತೇರ್ಗಡೆ ಆಗಲು ಹೆಣಗಬೇಕಾಗುತ್ತದೆ.



## ವೃಷಭ

ಈ ರಾಶಿಯವರಿಗೆ ಈ ವರುಷ ಆರೋಗ್ಯ ಆರ್ಥಿಕ ದೃಷ್ಟಿಯಿಂದ ತೃಪ್ತಿಕರವಿದ್ದರೂ ಉದ್ಯೋಗದಲ್ಲಿ ಮಾತ್ರ ಅಸ್ಥಿರತೆ ಹಾಗೂ ಬದಲಾವಣೆಯುಂಟು. ಪೂರ್ವಾರ್ಧ ಪ್ರಗತಿದಾಯಕವಿದ್ದರೆ ಉತ್ತರಾರ್ಧ ತಾಪದಾಯಕವಾಗಿದೆ.

ಈ ರಾಶಿಯವರಿಗೆ ಕಳೆದ ವರುಷದಿಂದ ಅಶುಭ ಫಲದಾಯಕನಾಗಿದ್ದ ಹನ್ನೆರಡನೇ ಗುರು ಈ ವರುಷ ಜನ್ಮಸ್ಥನಾಗಲಿರುವುದರಿಂದ ಅಶುಭಫಲ ಕಡಿಮೆ. ಆದರೂ ಶುಭ ಫಲವನ್ನೇನೂ ಆತ ನೀಡದೆ ಮಧ್ಯಮ ಫಲದಾಯಕನಾಗಿರುವನು. ಕಳೆದ ವರುಷದಿಂದಲೂ ಶುಭದಾಯಕನಾಗಿರುವ ತೃತೀಯ ಶನಿಯು ಈ ವರುಷವೂ ಕೂಡ ಶುಭ ಫಲವನ್ನೇ ಕೊಡುವನು. ಕಳೆದ ವರುಷದಿಂದ ಲಾಭದಾಯಕನಾಗಿದ್ದ ಆರನೇ ರಾಹು ನಾಳಿನ ಚೈತ್ರದಿಂದ ಐದನೆಯವನಾಗಲಿದ್ದು, ಮಧ್ಯಮ ಫಲದಾಯಕನಾಗಿರುವನು. ಹೀಗಾಗಿ ಈ ವರುಷ ಹೇಳಿಕೊಳ್ಳುವಷ್ಟು ಪ್ರಗತಿ ಇರದಿದ್ದರೂ ಕಳೆದ ವರುಷದಷ್ಟು ಪ್ರತಿಕೂಲ ಸನ್ನಿವೇಶವಿರದು. ಆರೋಗ್ಯದೃಷ್ಟಿಯಿಂದ ಕಳೆದ ವರುಷದಷ್ಟು ತೊಂದರೆಯದಾಗಿರದೆ ಕ್ರಮಶಃ ಚೇತರಿಸುವದಾದರೂ ಡಿಶೆಂಬರ ೧೫ರಿಂದ ಫೆಬ್ರುವರಿ ೧೨, ಎಪ್ರಿಲ ೧೨ರಿಂದ ಮೇ ೧೪, ಅಗಸ್ಟ ೧೫ರಿಂದ ಸಪ್ಟೆಂಬರ ೧೭ರ ವರೆಗಿನ ಈ ನಾಲ್ಕು ತಿಂಗಳ ಅವಧಿಯಲ್ಲಿ ಆರೋಗ್ಯ ಕೆಡುವುದಲ್ಲದೇ ಅಪಘಾತದ ಭಯವೂ ಉಂಟು. ಆದರೆ ಇನ್ನುಳಿದ ಅವಧಿಯಲ್ಲಿ ಆರೋಗ್ಯ ಉತ್ತಮ. ಆರ್ಥಿಕ ದೃಷ್ಟಿಯಿಂದ ನೀವು ಸುದೈವಿಗಳೇ ಸರಿ! ವರುಷವಿಡೀ ಆರ್ಥಿಕ ಸ್ಥಿತಿ ತೃಪ್ತಿಕರವಿರುವದಲ್ಲದೆ ಅಕ್ಟೋಬರ ೨೪ರಿಂದ ಡಿಶೆಂಬರ ೭, ಜನೇವರಿ ೧೪ರಿಂದ ಎಪ್ರಿಲ್ ೧೨ರವರೆಗಿನ ಅವಧಿಯಲ್ಲಿ ನಿರೀಕ್ಷಿಸಿದ ಮೂಲದಿಂದ ಹಣ ಬರುವದು. ದತ್ತಕ ವಾರಸಾ, ಸಟ್ಟಾ, ಲಾಟರಿ, ಭಕ್ಷೀಸ್, ಬಹುಮಾನ ಕಮೀಶನ್ ಮೊದಲಾದ ಮೂಲದಿಂದ ಆಕಸ್ಮಿಕ ಧನಲಾಭ ಯೋಗವೂ ಉಂಟು. ಕಳೆದ ಅನೇಕ ವರುಷಗಳಿಂದ ಅರ್ಧಕ್ಕೆ ನಿಂತ ಕಾರ್ಯಗಳು ಈ ವರುಷದ ಪೂರ್ವಾರ್ಧದಲ್ಲಿ ಈಡೇರುವವು.

ವಾದ ಸ್ಪರ್ಧೆಯ ಕೆಲಸಗಳಲ್ಲಿ ಜಯಲಕ್ಷ್ಮಿಯು ನಿಮ್ಮ ಕೊರಳಿಗೆ ಮಾಲೆ ಹಾಕುವದರಲ್ಲಿ ಸಂದೇಹವಿಲ್ಲ. ಅದರಲ್ಲಿಯೂ ನೌಕರಿಯ ಹಾಗೂ ರಾಜಕೀಯ ವ್ಯಾಜ್ಯಗಳಿಗೆ ಪೂರ್ವಾರ್ಧವೂ ಯಶೋದಾಯಕ. ಫೌಜದಾರಿ ವ್ಯಾಜ್ಯಗಳಿಗೆ ಮಧ್ಯದಲ್ಲಿಯೂ ದಿವಾಣಿ ವ್ಯಾಜ್ಯಗಳಿಗೆ ಉತ್ತರಾರ್ಧದಲ್ಲಿಯೂ ಜಯಲಭಿಸುವದು.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಬಹುವಿಚಿತ್ರವಾಗಿದೆ. ಹನ್ನೆರಡು ವರುಷಕ್ಕೊಮ್ಮೆ ಬರುವ ಜನ್ಮಸ್ಥ ಗುರುವಿನಿಂದಾಗಿ ನೌಕರಿಯಲ್ಲಿ ಸ್ಥಿರತೆ ಇರದು. ಸ್ಥಳ ಸಂಸ್ಥೆ, ಕಛೇರಿ. ಹುದ್ದೆ ಶಾಖೆ ದಪ್ತರಗಳು ಮೇಲಿಂದ ಮೇಲೆ ಬದಲಾಗುತ್ತವೆ. ಸಾಮಾನ್ಯವಾಗಿ ನೌಕರದಾರರಿಗೆ ಮೂರು ವರುಷಕ್ಕೊಮ್ಮೆ ಬದಲಿಯಾದರೆ ಜನ್ಮಸ್ಥ ಗುರುವಿನಿಂದಾಗಿ ಮೂರು ಸಾರಿ ಬದಲಿಯ ಸಂಭವ. ಗಂಟು ಮೂಟೆ ಕಟ್ಟಿಕೊಂಡು ಯಾವಾಗಲೂ ಸಿದ್ಧರಾಗಿರಬೇಕಾಗುತ್ತದೆ. ಅಥವಾ ವರುಷವಿಡೀ ಅಲೆದಾಟವೇ ಇರುತ್ತದೆಂದು ಹೇಳಿದರೆ ತಪ್ಪಾಗದು. ಈ ರಾಶಿಯವರಿಗೆ ಈ ವರುಷದ ಇನ್ನೊಂದು ವೈಶಿಷ್ಟ್ಯವೆಂದರೆ ಅಫೀಸಿಯೇಟಿಂಗ ಇನ್‌ಚಾರ್ಜ ಆಗಿ ಹಂಗಾಮಿ ಕಛೇರಿಗಳಲ್ಲಿ ಕಾರ್ಯ ನಿರ್ವಹಿಸಬೇಕಾದ ಪ್ರಸಂಗಗಳು ಈ ವರ್ಷದಲ್ಲಿವೆ. ಈ ವ್ಯವಸ್ಥೆಯು ಕೃತ್ತಿಕಾ ಹಾಗೂ ರೋಹಿಣಿ ನಕ್ಷತ್ರದ ವೃಷಭ ರಾಶಿಯವರಿಗೆ ಅನುಕೂಲಕರ. ಅಂದರೆ ಬಡತಿಯೊಂದಿಗೆ ಬದಲಿ ಇಲ್ಲವೆ ಅನುಕೂಲ ಜಾಗೆಗೆ ಬದಲಿಯಾಗಬಹುದು. ಆದರೆ ಮೃಗಶಿರಾ ರಾಶಿಯವರಿಗೆ ಪ್ರತಿಕೂಲ ಸ್ಥಳಕ್ಕೆ ಬದಲಿ ಆಗುತ್ತದೆ, ಈ ರಾಶಿಯ ನಿರುದ್ಯೋಗಿಗಳಿಗೆ ಈ

ವರುಷ ಆಶಾದಾಯಕವಾಗಿದೆ. ಒಂದು ಸ್ವಾರಸ್ಯಕರ ವಿಷಯುವೆಂದರೆ ಅನೇಕ ಕಡೆಗಳಿಂದ ಸಂದರ್ಶನಕ್ಕೆ ಕರೆ, ಹಾಗೂ ನೇಮಣೂಕಿ ಆಜ್ಞೆಗಳು ಬರುತ್ತದೆ. ಆದರೆ ಯಾವ ನೌಕರಿ, ಹುದ್ದೆ ಹಿಡಿದರೆ ಸರಿಹೋದೀತು ಎಂಬ ಚಿಂತೆ ವರ್ಷಾಂತ್ಯದವರೆಗೂ ಇರುವದು. ಹಂಗಾಮಿ ನೌಕರರಿಗೆ ಈ ವರುಷವೂ ಸಹ ನೌಕರಿಯಲ್ಲಿ ಸ್ಥಿರತೆ ಇರದು. ಈ ರಾಶಿಯ ಬಾಹ್ಯ ಹಾಗು ತಾಂತ್ರಿಕ ಸಿಬ್ಬಂದಿ ಮತ್ತು ಗಿರಣಿ ಕಾರಖಾನೆಗಳ ಕಾರ್ಮಿಕರಿಗೆ ತೃತೀಯ ಶುಭ ಫಲದಾಯಕ ಶನಿಯು ಮೂಲಕ ಪ್ರೋತ್ಸಾಹದಾಯಕವಿದ್ದು ಅವರ ಅನೇಕ ಬೇಡಿಕೆಗಳು ಈಡೇರುತ್ತವೆ. ಆದರೆ ಬೇಡಿಕೆಗಳಿಗಾಗಿ ಒತ್ತಾಯ ಮಾಡದೇ ರಾಜೀ ಸಂಧಾನ ಮನೋಭಾವನೆಯಿಂದ ವರ್ತಿಸಬೇಕಾಗುತ್ತದೆ. ಈ ರಾಶಿಯ ಬುದ್ಧಿಜೀವಿಗಳಾದ ಅಧ್ಯಾಪಕ, ಕಲಾವಿದ, ಡಾಕ್ಟರ, ವಕೀಲ. ನ್ಯಾಯಾಧೀಶ, ಪತ್ರಿಕೋದ್ಯಮಿ, ಕರಣಿಕ ಲೇಖಕ ಮೊದಲಾದ ವರ್ಗದವರಿಗೆಲ್ಲ ಆರ್ಥಿಕದೃಷ್ಟಿಯಿಂದ ಪ್ರಗತಿದಾಯಕ, ಆದರೆ ಉದ್ಯೋಗದಲ್ಲಿ ಸ್ಥಿರತೆ ಇರದು. ಒಟ್ಟಿನಲ್ಲಿ ಈ ರಾಶಿಯ ನೌಕರವರ್ಗದವರಿಗೆ ಆಕ್ಟೋಬರ ೨೪ರಿಂದ ಡಿಶೆಂಬರ ೧೫, ಜನೇವರಿ ೧೪ರಿಂದ ಎಪ್ರಿಲ್ ೧೨ರವರೆಗಿನ ಕಾಲ ಅತ್ಯಂತ ಶುಭದಾಯಕವಿದ್ದು ನಿರುದ್ಯೋಗಿಗಳಿಗೆ ನೌಕರಿ ಲಭಿಸುವಿಕೆ ಬಡತಿ, ಅನುಕೂಲ ಜಾಗೆಗೆ ಬದಲಿ, ವಾಹನ ಸೌಖ್ಯ, ಪರದೇಶ ಪರ್ಯಟನ. ಸ್ಥಾವರ ಇಸ್ಟೇಟ ಸಂಪಾದನೆ. ಪ್ರಶಸ್ತಿ ಪದಕ ಪಡೆಯುವಿಕೆ ಮೊದಲಾದ ಸ್ಮರಣೀಯ ಘಟನೆಗಳು ಜರಗುವವು; ಆದರೆ ಡಿಶೆಂಬರ ೧೫ರಿಂದ ಜನೇವರಿ ೧೪, ಎಪ್ರಿಲ್ ೧೨ ರಿಂದ ಜೂನ ೧೫, ಆಗಸ್ಟ ೧೫ರಿಂದ ಸಪ್ಟೆಂಬರ ೧೬ರವರೆಗಿನ ನಾಲ್ಕು ತಿಂಗಳ ಕಾಲ ತೀರ ಪ್ರತಿಕೂಲ. ಈ ಅವಧಿಯಲ್ಲಿ ಅನಪೇಕ್ಷಿತ ಸ್ಥಳಕ್ಕೆ ಬದಲಿ, ವರಿಷ್ಠರ ಅಸಹಕಾರ ಮುಂತಾದ ಅಹಿತಕರ ಘಟನೆಗಳು ಜರುಗುವವು. ಈ ರಾಶಿಯ ಕೃಷಿವರ್ಗದವರಿಗೆ ಈ ವರುಷ ಪ್ರಗತಿದಾಯಕ ನಿರೀಕ್ಷೆಗಿಂತ ಅಧಿಕ ಬೆಳೆ ಬರುವದರಿಂದ ಕಳೆದ ವರುಷ ಉಂಟಾಗಿದ್ದ ಸಾಲಗಳೆಲ್ಲ ತೀರಿ ಒತ್ತೆ ಇಟ್ಟ ಹೊಲ ಮನೆ ಬಿಡಿಸಿಕೊಳ್ಳ ಬಹುದಾಗಿದೆ. ಟ್ರಕ್, ಟ್ರ್ಯಾಕ್ಟರ ಪಂಪಸೆಟ್ಟ, ದನಕರು, ಚಕ್ಕಡಿ ಮೊದಲಾದ ಬೇಸಾಯಕ್ಕೆ ಬೇಕಾಗುವ ಉಪಕರಣಗಳನ್ನು ಕೊಂಡುಕೊಳ್ಳುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಉಂಟಾಗುತ್ತದೆ.

ಈ ರಾಶಿಯ ಸ್ವತಂತ್ರ ಉದ್ಯೋಗ ವ್ಯಾಪಾರಸ್ಥ ಉದ್ಯಮದಾರ, ಠೋಕ ವ್ಯಾಪಾರಸ್ಥ, ಹಂಚಿಕೆದಾರ ಕಮಿಶನ್ ಏಜೆಂಟ. ಗಿರಣಿ, ಟಾಕೀಜ, ಕಾರಖಾನೆ, ಚಹಾ ಹೋಟೆಲಗಳ ಮಾಲಕ ವರ್ಗದವರಿಗೆಲ್ಲ ಮಿಶ್ರಫಲವಿದೆ. ಪೂರ್ವಾರ್ಧವು ಅಂದರೆ ಆಕ್ಟೋಬರ ೨೪ರಿಂದ ಏಪ್ರಿಲ್ ೧೨ರ ವರೆಗಿನ ಅವಧಿ ಪ್ರಗತಿದಾಯಕವಿದ್ದು ಉದ್ಯೋಗದಲ್ಲಿ ಪ್ರಗತಿ ಸಾಧಿಸಿ ಆರ್ಥಿಕ ಸ್ಥಿತಿ ಸುಧಾರಿಸುವುದು ಕಳೆದ ವರುಷದ ಸಾಲಗಳೆಲ್ಲ ತೀರಿ ಹೊಸ ಉದ್ಯೋಗದ ಪ್ರಾರಂಭ ಇಲ್ಲವೆ ಶಾಖೆಗಳನ್ನು ತೆರೆಯಬಹುದಾಗಿದೆ. ಆದರೆ ಏಪ್ರಿಲ್ ೧೨ರ ನಂತರ ಅಂದರೆ ಉತ್ತರಾರ್ಧವೆಲ್ಲ ತೀರ ಪ್ರತಿಕೂಲ. ಸರಕಾರದ ನಿಬಂಧನೆ ಹಾಗು ನೌಕರವರ್ಗದವರ ಸಮಸ್ಯೆ ಯಾಂತ್ರಿಕ ತೊಂದರೆಯನ್ನು ಎದುರಿಸಬೇಕಾಗುತ್ತದೆ.

ಈ ರಾಶಿಯ ವಧೂವರರಿಗೆ ಈ ವರುಷ ಕಂಕಣ ಬಲ ಕೂಡಿ ಬಂದಿರುವದು. ಆಕ್ಟೋಬರ ೨೪ರಿಂದ ಡಿಶೆಂಬರ ೧೫, ಜನೇವರಿ ೧೪ರಿಂದ ಏಪ್ರಿಲ್ ೧೨ರವರೆಗಿನ ಅವಧಿಯಲ್ಲಿ ವಿವಾಹ ಜರಗುವದು. ವಿವಾಹಿತ ಸ್ತ್ರೀ ಪುರುಷರಿಗೆ ಈ ವರುಷ ಮಿಶ್ರಫಲವಿದೆ. ಆಕ್ಟೋಬರ ೧೨ರಿಂದ ಏಪ್ರಿಲ್ ೧೨ರವರೆಗಿನ ಕಾಲ ಮಾತ್ರ ಶುಭವೂ ಅನುಕೂಲವೂ ಆಗಿದ್ದು ಈ ಕಾಲದಲ್ಲಿ ಬೆಲೆಯುಳ್ಳ ವಸ್ತು ಒಡವೆಗಳ ಖರೀದಿ ಸ್ಥಾವರ ಇಸ್ಟೇಟ ಸಂಪಾದನೆ, ತೀರ್ಥಯಾತ್ರಾ ಸಂದರ್ಶನ, ನೂತನ ಗೃಹಪ್ರವೇಶ ಕದಡಿದ ವಾತಾವರಣ ತಿಳಿಯಾಗುವಿಕೆ, ಮೊದಲಾದ ಶುಭ ಘಟನೆಗಳು ಜರುಗುವವು; ಆದರೆ ಉಳಿದ ಕಾಲವೆಲ್ಲ ತೀರ ಪ್ರತಿಕೂಲ ಹಾಗು ತಾಪದಾಯಕವಿದೆ. ಅದರಲ್ಲಿಯೂ ಡಿಶೆಂಬರ ೨ರಿಂದ ಫೆಬ್ರುವರಿ, ೧೨, ಏಪ್ರಿಲ್ ೧೨ರಿಂದ ಮೇ ೧೪, ಜುಲೈ ೧೫ರಿಂದ ಸಪ್ಟೆಂಬರ ೧೬ರವರೆಗಿನ ಕಾಲವಂತೂ ತೀರ ತಾಪದಾಯಕವಾಗಿದ್ದು ಆಪ್ತೇಷ್ಟರಲ್ಲಿ ಭಿನ್ನಾಭಿಪ್ರಾಯ ಉಂಟಾಗುವದು. ಚಾಡಿಯ ಪ್ರಭಾವದಿಂದಾಗಿ ದಾಂಪತ್ಯಜೀವನ ಕಲುಷಿತಗೊಳ್ಳುವದು. ಏಕತ್ರಕುಟುಂಬ ಒಡೆಯಬಹುದಾಗಿದೆ. ಈ ರಾಶಿಯ ಗರ್ಭಿಣಿಯರ ಹೆರಿಗೆಯು ಆಕ್ಟೋಬರ ೨೪ರಿಂದ ಡಿಶೆಂಬರ ೭ ಹಾಗೂ ಫೆಬ್ರುವರಿ ೧೨ರಿಂದ ಎಪ್ರಿಲ್ ೧೪ ಅವಧಿಯಲ್ಲಾದರೆ ಸುಖ ಪ್ರಸೂತಿ. ಮಿಕ್ಕ ಅವಧಿಯಲ್ಲಿ ಆದರೆ ತೊಂದರೆದಾಯಕ. ಅದರಲ್ಲಿಯೂ ಡಿಶೆಂಬರ ೧೫ರಿಂದ ಫೆಬ್ರುವರಿ ೧೨ ಏಪ್ರಿಲ್ ೧೨ರಿಂದ ಮೇ ೧೪ ಜುಲೈ ೧೪ರಿಂದ ಸಪ್ಟೆಂಬರ ೧೬ರ ಅವಧಿಯಲ್ಲಿ ತೀರ ತೊಂದರೆ. ಹಾಗೂ ಶಸ್ತ್ರಕ್ರಿಯೆ ಅನಿವಾರ್ಯವಾಗುವದು.

ಈ ರಾಶಿಯ ರಾಜಕೀಯ. ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷ ಅತ್ಯಂತ ಶುಭದಾಯಕ, ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸಿ ಅನೇಕ ಸಂಘಸಂಸ್ಥೆಗಳ ಕಾರ್ಪೋರೇಶನ್ನಿನ ಪದಾಧಿಕಾರಿಗಳಾಗಿ ಗೌರವ ಸ್ಥಾನಮಾನಗಳನ್ನು ಅಲಂಕರಿಸುವರು. ಅಲ್ಲದೇ ಜಿಲ್ಲೆಯ, ರಾಜ್ಯದ, ರಾಷ್ಟ್ರಮಟ್ಟದ ಗಣ್ಯ ವ್ಯಕ್ತಿಗಳಾಗುವದರಲ್ಲಿ ಸಂದೇಹವಿಲ್ಲ. ಶತ್ರುಗಳೆಲ್ಲ ಮಿತ್ರರಾಗುವ ಕಾರಣ ಈ ವರುಷದಲ್ಲಿ ಜರಗಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೂ ಅತ್ಯಧಿಕ ಬಹುಮತ ಇಲ್ಲವೇ ಅವಿರೋಧ ಆಯ್ಕೆ ಆಗಬಹುದಾಗಿದೆ. ಆದರೆ ಈವರುಷದ ಒಂದು ವೈಶಿಷ್ಟ್ಯವೆಂದರೆ ಜನ್ಮಸ್ಥ ಗುರುವಿನಿಂದಾಗಿ ಮತಕ್ಷೇತ್ರದಲ್ಲಿ ಬದಲಾವಣೆ ಇಲ್ಲವೇ ಜನತಾ ಪ್ರತಿನಿಧಿಯ ಸದಸ್ಯತ್ವದಲ್ಲಿ ಬದಲಾವಣೆ ಆಗಬಹುದಾಗಿದೆ. ಪೂರ್ವಾರ್ಧವು ಪ್ರಗತಿದಾಯಕವಾದರೆ ಉತ್ತರಾರ್ಧ ತುಸು ತೊಂದರೆದಾಯಕ.

ಈ ರಾಶಿಯ ವಿದ್ಯಾರ್ಥಿಗಳಿಗೆ ಹನ್ನೆರಡನೆಯ ಗುರುವಿನಿಂದಾಗಿ ಕಳೆದ ವರುಷ ಉಂಟಾಗಿದ್ದ ಶಿಕ್ಷಣದ ತೊಂದರೆಗಳು ದೂರವಾಗುವವು. ಅರ್ಧಕ್ಕೆ ನಿಂತ ಶಿಕ್ಷಣ ಮುಂದುವರೆಯುವದು. ವಿದ್ಯಾರ್ಥಿಗಳ ಜೀವನದಲ್ಲಿಯ ಈ ವರುಷವೆಂದರೆ ಒಂದು ಬದಲಾವಣೆಯ ಕಾಲ (ಕ್ರಾಸ ರೋಡ) ಶಾಲೆ, ಕಾಲೇಜ, ವಿಶ್ವವಿದ್ಯಾಲಯ, ಇಲ್ಲವೆ ವಿಷಯಗಳನ್ನು ಅನಿವಾರ್ಯವಾಗಿ ಬದಲಿಸಬೇಕಾದ ಸನ್ನಿವೇಶ ಪ್ರಾಪ್ತವಾಗುವದು. ಆಕ್ಟೋಬರ ೨೪ ರಿಂದ ಡಿಶೆಂಬರ ೭, ಫೆಬ್ರುವರಿ ೧೨ ರಿಂದ ಏಪ್ರಿಲ್ ೧೨ರ ಅವಧಿಯಲ್ಲಿ ಜರಗುವ ಪರೀಕ್ಷೆಗೆ ಕಟ್ಟುವವರು ದರ್ಜೆ, ಶ್ರೇಣಿ ಪಡೆದು ತೇರ್ಗಡೆಯಾಗುವರು. ಪ್ರಶಸ್ತಿ ವಿದ್ಯಾರ್ಥಿವೇತನವನ್ನು ಪಡೆಯುವರಲ್ಲದೇ ಹೆಚ್ಚಿನ ಶಿಕ್ಷಣ ಮುಂದುವರಿಸುವರು. ವಿದೇಶ ಯಾತ್ರೆ ಇಲ್ಲವೇ ಸಂಶೋಧನೆ ಕೈಕೊಳ್ಳುವ ಯೋಗ ಉಂಟು. ಆದರೆ ಡಿಶೆಂಬರ ೭ರಿಂದ ಫೆಬ್ರುವರಿ ೧೨, ಏಪ್ರಿಲ್ ೧೨ರಿಂದ ಮೇ ೧೪, ಜುಲೈ ೧೫ ರಿಂದ ಸಪ್ಟೆಂಬರ ೧೬ವರೆಗಿನ ಅವಧಿಯಲ್ಲಿ ಜರುಗಲಿರುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಉತ್ತೀರ್ಣರಾಗಲು ಬಹುಪರಿಶ್ರಮ ಪಡಬೇಕಾಗುವದು.



# ಮಿಥುನ

**ಈ ವರುಷ ಈ ರಾಶಿಯವರಿಗೆ ಉದ್ಯೋಗ ಆರ್ಥಿಕ ದೃಷ್ಟಿಯಿಂದ ತೃಪ್ತಿಕರವಿರುವ ದಾದರೂ ಆರೋಗ್ಯ ಹಾಗೂ ಕೌಟುಂಬಿಕ ದೃಷ್ಟಿಯಿಂದ ತಾಪದಾಯಕ. ಬುದ್ಧಿಜೀವಿ ಹಾಗು ಶ್ರಮಜೀವಿಗಳಿಗೆ ಅನುಕೂಲ.**

ಈ ರಾಶಿಯವರಿಗೆ ಕಳೆದ ಏಳುವರುಷದಿಂದಿದ್ದ ಸಾಡೇಸಾತಿಯ ಅನಿಷ್ಟತೆ ಕಡಿಮೆಯಾಗುವದು ಅದರಲ್ಲಿಯೂ ಮೃಗಶಿರಾ ಹಾಗೂ ಆರಿದ್ರಾ ನಕ್ಷತ್ರದ ಮಿಥುನ ರಾಶಿಯುವರು ಸಾಡೇಸಾತಿಯಿಂದ ಮುಕ್ತರಾಗಿ ಮೂರನೇ ಶನಿಯ ಶುಭಫಲವನ್ನು ಪಡೆಯುವರು. ಅದರಂತೆ ಈ ರಾಶಿಯವರಿಗೆ ಹನ್ನೆರಡನೇ ಗುರುವಿನ ಅಶುಭಫಲ ದೊರೆತರೂ ಪುನರ್ವಸು ನಕ್ಷತ್ರದ ಮಿಥುನರಾಶಿಯುವರಿಗೆ ಹನ್ನೊಂದನೆಯ ಗುರುವಿನ ಶುಭಫಲ ವರುಷಾಂತ್ಯದವರೆಗೆ ದೊರೆಯುವದು. ಆದರೆ ನಾಳಿನ ಚೈತ್ರದಿಂದ ಬರುವ ಚತುರ್ಥ ರಾಹುವಿನ ಅನಿಷ್ಟತೆ ವರುಷಾಂತ್ಯದವರೆಗೂ ಇರುವದು. ಗ್ರಹಗತಿ ಹೀಗಿರುವದರಿಂದ ಈ ವರುಷ ಮಿಶ್ರಫಲ ದೊರಯಬಹುದಾಗಿದೆ. ಆರೋಗ್ಯದ ದೃಷ್ಟಿಯಿಂದ ನೋಡಿದರೆ ಹೇಳಿಕೊಳ್ಳುವಷ್ಟು ಸುಧಾರಣೆ ಇಲ್ಲದಿದ್ದರೂ ಕಳೆದ ವರುಷದಲ್ಲಿದ್ದಷ್ಟು ಪ್ರಖರತೆ ಇರುವದಿಲ್ಲ. ಆದರೂ ಜನೇವರಿ ೧೪ರಿಂದ ಫೆಬ್ರುವರಿ ೧೭, ಮೇ ೧೫ರಿಂದ ಜುಲೈ, ೧೫, ಸಪ್ಟೆಂಬರ ೧೫ರಿಂದ ಅಕ್ಟೋಬರ ೧೬ರವರೆಗಿನ ಅವಧಿಯಲ್ಲಿ ಶಾರೀರಿಕ ಪೀಡೆ ಹೆಚ್ಚಿ ರೋಗ ಉಲ್ಬಣಿಸಬಹುದಾಗಿದೆ. ಅಂತೆಯೇ ಈ ಅವಧಿಯಲ್ಲಿ ಹೆಚ್ಚು ಜಾಗರೂಕರಾಗಿರಬೇಕು. ಚಾಲಕ ವರ್ಗ, ಯಾಂತ್ರಿಕ ಕೆಲಸಗಾರರು ಈ ಅವಧಿಯಲ್ಲಿ ಮುಂಜಾಗ್ರತೆ ವಹಿಸುವದು ಒಳ್ಳೆಯದು. ಆರ್ಥಿಕ ದೃಷ್ಟಿಯಿಂದ ಈ ವರುಷ ಮಿಶ್ರ ಫಲವಿದೆ. ನವ್ಹೆಂಬರ ೧೫ರಿಂದ ಜನೇವರಿ ೧೪, ಫೆಬ್ರುವರಿ ೧೭ರಿಂದ ಮೇ ೧೫, ಅಗಸ್ಟ ೧೫ರಿಂದ ಸಪ್ಟೆಂಬರ ೧೫ರವರೆಗಿನ ಈ ಆರು ತಿಂಗಳ ಕಾಲದಲ್ಲಿ ಬರತಕ್ಕ ಹಣ ಬರುವದಲ್ಲದೆ ವಾರಸಾ, ಬಕ್ಷೀಸು, ಬಹುಮಾನ, ಲಾಟರೀ ಮೊದಲಾದ ಮೂಲದಿಂದ ಧನಪ್ರಾಪ್ತಿಯಾಗಿ ಆರ್ಥಿಕ ತೃಪ್ತಿಕರವಿಲ್ಲದಿದ್ದರೂ ಹಿಡಿತದಲ್ಲಿರುವದು; ಆದರೆ ಅಕ್ಟೋಬರ ೨೪ರಿಂದ ನವಂಬರ ೧೪ ಜನೇವರಿ ೧೪ರಿಂದ ಫೆಬ್ರುವರಿ ೧೭, ಮೇ ೧೫ರಿಂದ ಅಗಸ್ಟ ೧೫. ಸಪ್ಟೆಂಬರ ೧೬ರಿಂದ ಅಕ್ಟೋಬರ ೧೬ರವರೆಗಿನ ಈ ಆರು ತಿಂಗಳುಗಳು ತೀರ ಪ್ರತಿಕೂಲ. ಬರತಕ್ಕ ಹಣ ಸಮಯಕ್ಕೆ ಬಾರದೇ ಕೊಡತಕ್ಕ ಹಣಕ್ಕಾಗಿ ಪರದಾಡಬೇಕಾಗುವದು. ಆರ್ಥಿಕ ತೊಂದರೆ ಹೆಚ್ಚುವದಲ್ಲದೆ ಸಾಲಗಾರರಿಂದ ಅವಮಾನಿತರಾಗಬೇಕಾದ ಸಂದರ್ಭವುಂಟು. ಮನೆಯಲ್ಲಿ ಜರುಗಲಿರುವ ಮಂಗಲಕಾರ್ಯಕ್ಕಾಗಿ ಹೊಸ ಸಾಲಕ್ಕೆ ಮೊರೆ ಹೋಗುವ ಪ್ರಸಂಗವೂ ಇದೆ. ಆದುದರಿಂದ ಆ ಗುರುದತ್ತಾತ್ರಯನನ್ನು ಆರಾಧಿಸಿರಿ, ಅವನ ಕೃಪೆಯಿಂದ ತೊಂದರೆಗಳು ದೂರಾಗುವವು.

ವಾದ, ಸ್ಪರ್ಧೆ, ಕೋರ್ಟ ಕಚೇರಿಯ ಕೆಲಸಗಳನ್ನು ಈ ವರುಷ ಕೈಕೊಳ್ಳದಿರುವುದೇ ಹಿತಕರವು. ವ್ಯಾಜ್ಯಗಳು ಅನಿವಾರ್ಯವಿದ್ದಲ್ಲಿ ದಾಖಲು ಮಾಡಿ ಮುದ್ದತ್ತನ್ನು ತೆಗೆದುಕೊಳ್ಳುತ್ತ ಹೋಗುವದು ಹಿತಕರ. ಅಥವಾ ರಾಜಿ ಮಾಡಿಕೊಂಡರೆ ಲಾಭವಾಗಬಹುದು. ಮೊಕದ್ದಮೆಗಳ ಬಗೆಗೆ ವಿವರವಾಗಿ ಬರೆಯಬೇಕೆಂದರೆ ರಾಜಕೀಯ ಹಾಗೂ ನೌಕರಿಗೆ ಸಂಬಂಧಿಸಿದ ದಾವ್ಯಗಳಿಗೆ ವರುಷದ ಪೂರ್ವಾ... ರ್ಧವೂ ದಿವಾಣಿಯ ವ್ಯಾಜ್ಯಗಳಿಗೆ ... ಫೌಜದಾರಿ ವ್ಯಾಜ್ಯಗಳಿಗೆ ಮಧ್ಯದ ಕಾಲವು ಯಶ... ದಾಯಕ.

ಈ ರಾಶಿಯ ನೌಕರ ವರ್ಗದವರಿಗೆ ಈ ವರು... ಮಿಶ್ರಫಲವಿದೆ. ನವ್ಹಂಬರ ೧೫ ರಿಂದ ಜನೇವರಿ, ೧೪, ಫೆಬ್ರುವರಿ ೧೭ರಿಂದ ಮೇ ೧೫ ಹಾಗೂ ಅಗಸ್ಟ ೧೫ರಿಂದ ಸಪ್ಟೆಂಬರ ೧೬ರ ವರೆಗಿನ ... ಆರು ತಿಂಗಳ ಮಾತ್ರ ಶುಭ ಹಾಗೂ ಅನು... ಕೂಲವಿದ್ದು ಈ ಕಾಲದಲ್ಲಿ ನಿರುದ್ಯೋಗಿಗಳಿಗೆ ನೌಕರಿ ಲಭಿಸುವಿಕೆ, ಹಂಗಾಮಿ ನೌಕರರಿಗೆ ಕಾಯ... ಆಗುವಿಕೆ, ಇಚ್ಛಿತ ಸ್ಥಳಕ್ಕೆ ಬದಲಿ, ನೌಕರಿಯು... ಬಡತಿ ಮೊದಲಾದ ಶುಭ ಹಾಗೂ ಅನುಕೂಲಕ... ಘಟನೆಗಳು ಜರುಗುವವು. ಆದರೆ ಅಕ್ಟೋಬರ ೨೪ರಿಂ... ನವಂಬರ ೧೪, ಜನೇವರಿ ೧೪ರಿಂದ ಫೆಬ್ರುವರಿ ೧... ಮೇ ೧೫ರಿಂದ ಅಗಸ್ಟ ೧೪ ಹಾಗೂ ಸಪ್ಟೆಂಬ... ೧೫ರಿಂದ ಅಕ್ಟೋಬರ ೧೬ರವರೆಗಿನ ಅವ... ತೀರ ತೊಂದರೆದಾಯಕ. ಅನಪೇಕ್ಷಿತ ಸ್ಥಳ... ಬದಲಿ, ವರಿಷ್ಠರ ಅಸಹನೀಯ ಕಿರುಕುಳವ... ಎದುರಿಸಬೇಕಾಗುತ್ತದಲ್ಲದೆ ನೌಕರಿಗೆ ರಾಜೀನಾ... ನೀಡುವಷ್ಟರ ಮಟ್ಟಿಗೆ ತಾಪದಾಯಕವಾಗಿ... ಬಾಹ್ಯ ಹಾಗು ಪ್ರವಾಸಿಕೆಲಸಗಾರ, ತಾಂತ್ರಿ... ಕೆಲಸಗಾರ ಗಿರಣಿ ಕಾರಖಾನೆಗಳ ಕಾರ್ಮಿ... ವರ್ಗ ಹಾಗು ಶ್ರಮಜೀವಿಗಳಿಗೆಲ್ಲ ಈ ವರು... ಪ್ರೋತ್ಸಾಹದಾಯಕ. ಅವರ ಅನೇಕ ಬೇಡಿ... ಗಳು ಈ ವರುಷ ಈಡೇರುವವು. ಆದರೆ ಕರ... ಶಿಕ್ಷಕ, ಅಧ್ಯಾಪಕ, ವಕೀಲ, ಡಾಕ್ಟರ, ನ್ಯಾಯಾಧೀ... ಪತ್ರಿಕೋದ್ಯಮಿ ಕಲಾವಿದ ಮೊದಲಾದ ಬುದ್ಧಿಜೀ... ಗಳಿಗೆ ಅಶುಭಫಲದಾಯಕ. ಹನ್ನೆರಡನೇ ಗುರು... ನಿಂದಾಗಿ ಈ ವರುಷ ಪ್ರತಿಕೂಲವಿದೆ. ಇದ್ದು... ಲ್ಲಿಯೇ ನವ್ಹಂಬರ ೧೪ರಿಂದ ಜನೇವರಿ ೧... ಫೆಬ್ರುವರೀ ೧೭ರಿಂದ ಮೇ ೧೪ರವರೆಗಿನ ಕಾ... ಮಾತ್ರ ಪ್ರೋತ್ಸಾಹದಾಯಕವಾಗಿದ್ದು ಈ ಅವ... ಧಿಯಲ್ಲಿ ಅವರ ಅನೇಕ ಬೇಡಿಕೆಗಳು ಈಡೇರುವ... ಪ್ರಶಸ್ತಿ, ಪರದೇಶ ಪರ್ಯಟನ, ವಾಹನ ಸೌ... ಸ್ಥಾವರಇಸ್ಟೇಟ ಸಂಪಾದಿಸುವಿಕೆ, ಮಾನ ಸನ್ಮಾ... ಮೊದಲಾದ ಶುಭ ಘಟನೆಗಳು ಜರುಗುವ... ಆದರೆ ಇನ್ನುಳಿದ ಏಳು ತಿಂಗಳುಗಳ ಅವ... ಯಲ್ಲಿ ಹಣಕಾಸಿನ ಮುಗ್ಗಟ್ಟು ಸರಕಾರದ ನಿಬಂ... ಹಾಗೂ ಕೌಟುಂಬಿಕ ತೊಂದರೆಗಳಿಂದ ಮನಸ್ಸಿ... ತುಂಬ ನೋವಾಗುವದು.

ಈ ರಾಶಿಯ ಸ್ವತಂತ್ರ ಉದ್ಯೋಗ ವ್ಯಾಪಾರ... ಉದ್ಯಮದಾರ ಹಂಚಿಕೆದಾರ, ಕಮೀಶನ್ ಏಜೆಂ... ಗಿರಣಿ ಟಾಕೀಜ ಕಾರಖಾನೆ, ಹೋಟೆಲ ಮಾ... ವರ್ಗದವರಿಗೆ ಈ ವರುಷ ನಿರುತ್ಸಾಹದಾಯಕವಾ... ಇದ್ದುದರಲ್ಲಿಯೇ ನವ್ಹಂಬರ ೧೪ರಿಂದ ಜನೇ... ೧೪, ಫೆಬ್ರುವರಿ ೧೭ರಿಂದ ಮೇ ೧೫ರ ವರೆ... ಈ ಐದು ತಿಂಗಳ ಕಾಲ ಅವರ ಕೆಲ ಆಶೆ- ಆ... ಕ್ಷೆಗಳು ಈಡೇರುತ್ತವೆ. ಇನ್ನುಳಿದ ಏಳು ತಿ... ತಿಂಗಳು ತಾಪದಾಯಕವಿದ್ದು ಈ ಕಾಲದಲ್ಲಿ ... ಸಮಸ್ಯೆಗಳನ್ನು ಸರಕಾರದ ನಿಬಂಧನೆಗಳನ್ನು ... ರಿಸಬೇಕಾಗುತ್ತದೆ. ತನ್ಮೂಲಕ ಉದ್ಯೋ... ಅಸ್ತಿತ್ವವನ್ನೇ ಪ್ರಶ್ನಿಸುವ ಮಟ್ಟಿಗೆ ಕಾಲ ... ಕೂಲವಿರುತ್ತದೆ. ಈ ಅವಧಿಯಲ್ಲಿ ನವಗ್ರಹಶಾ... ಮಾಡಿಸಿರಿ, ಅಂದರೆ ಎಲ್ಲವೂ ಸರಿ ಹೋಗುವ...

ಈ ರಾಶಿಯ ಕೃಷಿಕರಿಗೆ ಈ ವರುಷ ಮಿಶ್ರ ಫಲವಿದೆ. ಪೂರ್ವಾರ್ಧವು ಪ್ರಗತಿದಾಯಕವಾಗಿದ್ದು, ಕಳೆದ ವರುಷ ಅರ್ಧಕ್ಕೆ ನಿಂತ ಕಾರ್ಯಗಳೆಲ್ಲವೂ ಕೈಗೂಡುವವು. ಇದೂ ಅಲ್ಲದೆ ನಿರೀಕ್ಷಿಸಿದಂತೆ ಅಧಿಕ ಬೆಳೆ ಬಂದು ಆರ್ಥಿಕ ಸ್ಥಿತಿ ಚೇತರಿಸುವದು. ಬೇಸಾಯಕ್ಕೆ ಬೇಕಾಗಬಹುದಾದ ಟ್ರ್ಯಾಕ್ಟರ, ಪಂಪ್ ಸೆಟ್, ಚಕ್ಕಡಿ, ದನಕರುಗಳನ್ನು ಕೊಳ್ಳುವ ಇಲ್ಲವೆ ನವೀಕರಿಸುವ ಸಾಮರ್ಥ್ಯ ಬರುತ್ತದೆ. ಆದರೆ ಉತ್ತರಾರ್ಧವು ತೀರ ತಾಪದಾಯಕವಾಗಿದ್ದು ಸಾಲಗಾರರ ಕಾಟ, ಕಳವು ತುಡುಗುಗಳಿಂದ ಹಾನಿ ದನಕರುಗಳು ಬೇನೆಗೆ ತುತ್ತಾಗುವಿಕೆ, ಬೇಸಾಯದ ಉಪಕರಣಗಳು ಕೆಡುವಿಕೆ ಮೊದಲಾದ ಪ್ರತಿಕೂಲ ಸನ್ನಿವೇಶಗಳಿಂದಾಗಿ ಬೇಸಾಯವನ್ನು ಮುಂದುವರಿಸುವದೇ ಕಠಿಣವಾಗುತ್ತದೆ.

ಈ ರಾಶಿಯ ವಧೂವರರಿಗೆ ವಿವಾಹಿತ ಸ್ತ್ರೀ ಪುರುಷರಿಗೆ ಈ ವರುಷ ಮಿಶ್ರಫಲವಿದೆ. ನವ್ಹಂಬರ ೧೫ರಿಂದ ಜನೇವರಿ, ೧೩, ಹಾಗೂ ಫೆಬ್ರುವರಿ ೧೭ರಿಂದ ಮೇ ೧೪ ರವರೆಗಿನ ಕಾಲ ಶುಭ ಹಾಗೂ ಅನುಕೂಲವಿದೆ. ಈ ಕಾಲದಲ್ಲಿ ವಧೂವರರಿಗೆ ಕಂಕಣಬಲಕೂಡಿ ಬಂದಿದ್ದು ವಿವಾಹ ಸಾಂಗವಾಗುತ್ತದೆ. ಇದೇ ಅವಧಿಯಲ್ಲಿ ವಿವಾಹಿತ ಸ್ತ್ರೀ ಪುರುಷರಿಗೆ ಬೆಲೆಯುಳ್ಳ ವಸ್ತು ಒಡವೆಗಳನ್ನು ಖರೀದಿಸುವ ಸ್ಥಾವರ ಎಸ್ಟೇಟ ಸಂಪಾದನೆ, ವಾಹನ ಸೌಖ್ಯ, ಪರದೇಶ ಪರ್ಯಟನ, ನೂತನ ಗೃಹ ಪ್ರವೇಶ. ತೀರ್ಥಯಾತ್ರಾ ದರ್ಶನ ಮೊದಲಾದ ಶುಭಘಟನೆಗಳು ಜರುಗುವವು. ಆದರೆ ಅಕ್ಟೋಬರ ೧೭ ರಿಂದ ನವ್ಹಂಬರ ೨೪, ಜನೇವರಿ ೧೪ರಿಂದ ಫೆಬ್ರುವರಿ ೧೭ ಹಾಗೂ ಮೇ ೧೫ರಿಂದ ಅಕ್ಟೋಬರ ೧೮ರ ವರೆಗಿನ ಅವಧಿ ಹನ್ನೆರಡನೆಯ. ಗುರುವಿನಿಂದಾಗಿ ತೀರ ತಾಪದಾಯಕವಿದೆ. ಆಪ್ತೇಷ್ಟರಲ್ಲಿ ಭಿನ್ನಾಭಿಪ್ರಾಯ, ತಪ್ಪು ತಿಳುವಳಿಕೆ, ಚಾಡಿಯ ಪ್ರಭಾವದ ಮೂಲಕ ನಂದನ ವನದಂತಿದ್ದ ದಾಂಪತ್ಯಜೀವನ ಕಲುಷಿತಗೊಳ್ಳುವದು. ಪ್ರತಿ ದಿನದ ಗೃಹ ಕಲಹದಿಂದಾಗಿ ಮನಸ್ಸಿಗೆ ನೆಮ್ಮದಿ ಇರದು. ಏಕತ್ರ ಕುಟುಂಬ ಒಡೆಯುವದು. ನಿಶ್ಚಯವಾಗಿದ್ದ ವಧೂವರರ ವಿವಾಹ ಮುಂದೂಡಬೇಕಾಗುವದು. ಇಲ್ಲವೇ ಮುರುಗಡೆ ಆಗುವದು. ಆದುದರಿಂದ ಈ ಅವಧಿಯಲ್ಲಿ ಗುರು ಪಿನ ಜಪ ಇಲ್ಲವೆ ಶಾಂತಿ ಮಾಡಿಸಿದಲ್ಲಿ ತೊಂದರೆ ಕಡಿಮೆ ಆಗುವವು. ಈ ರಾಶಿಯ ಗರ್ಭಿಣಿಯರ ವರಿಗೆ ನವಂಬರ ೧೫ರಿಂದ ಜನೇವರಿ ೧೩, ಫೆಬ್ರುವರೀ ೧೭ರಿಂದ ಮೇ ೧೪ ರ ಅವಧಿಯಲ್ಲಾದರೆ ಸುಖ ಪ್ರಸವ, ಉಳಿದ ಅವಧಿಯಲ್ಲಾದರೆ ತೊಂದರೆದಾಯಕ ಅದರಲ್ಲಿಯೂ ಜನೇವರಿಯಿಂದ ಫೆಬ್ರುವರಿ ೧೭, ಅಗಸ್ಟ ೧೪ರಿಂದ ಸಪ್ಟೆಂಬರ ೧೬ರ ಅವಧಿ ತೀರ ತಾಪದಾಯಕವಿದ್ದು ಶಸ್ತ್ರಕ್ರಿಯೆ ಅನಿವಾರ್ಯವಾಗುವದು.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಹನ್ನೆರಡನೇ ಗುರುವಿನಿಂದಾಗಿ ಈವರುಷ ನಿರುತ್ಸಾಹದಾಯಕವಾಗಿದೆ. ಪ್ರಾಮಾಣಿಕ ಬುದ್ಧಿವಂತರೆಂದು ಕೀರ್ತಿ ಪಡೆದ ನಿಮ್ಮನ್ನು ಜನರು ತಿರಸ್ಕಾರ ದೃಷ್ಟಿಯಿಂದ ಕಾಣುವರು. ಬದಲಾದ ಪರಿಸ್ಥಿತಿಯನ್ನು ಧೈರ್ಯದಿಂದ ಎದುರಿಸಬೇಕಲ್ಲದೆ ನಿರಾಸೆ ಸಲ್ಲದು. ಚುನಾವಣೆ ಮೊದಲಾದ ಜಂಜಾಟದಿಂದ ಈ ವರುಷ ದೂರವಿರುವದೇ ಹಿತಕರವು ಚುನಾವಣೆಗಳಲ್ಲಿ ಭಾಗವಹಿಸುವದು ಅನಿವಾರ್ಯವಿದ್ದಲ್ಲಿ ನವ್ಹಂಬರ ೧೫ರಿಂದ ಜನೇವರಿ ೧೩, ಫೆಬ್ರುವರಿ ೧೭ರಿಂದ ಮೇ ೧೫ರವರೆಗಿನ ಅವಧಿಯಲ್ಲಿ ಮಾತ್ರ ಸ್ಪರ್ಧಿಸಿರಿ ಮಿತ್ರರೇ ಶತ್ರುಗಳಾಗುವರು. ಖರದ ಸ್ಪರ್ಧೆಯನ್ನು ಎದುರಿಸಬೇಕಾಗುತ್ತದೆ. ಅತ್ಯಲ್ಪಮತದಿಂದ ಆರಿಸಿಬರಬಹುದಾಗಿದೆ. ಆದರೆ ಅಕ್ಟೋಬರ ೨೪ರಿಂದ ನವ್ಹಂಬರ ೧೩, ಜನೇವರಿ ೧೪ರಿಂದ ಫೆಬ್ರುವರೀ ೧೭, ಮೇ ೧೫ ರಿಂದ ಅಕ್ಟೋಬರ ೧೬ರವರೆಗಿನ ಅವಧಿ ತೀರ ಪ್ರತಿಕೂಲವಿದ್ದು ವಿಶ್ವಾಸ ವ್ಯಕ್ತಪಡಿಸುವದರಿಂದ ಅಧಿಕಾರ ಗದ್ದುಗೆಯಿಂದ ಕೆಳಗಿಳಿಯುವ ಪ್ರಸಂಗ ಬರಬಹುದಾಗಿದೆ. ಅವಮಾನಕರ ಸನ್ನಿವೇಶವನ್ನು ಎದುರಿಸಬೇಕಾಗುತ್ತದೆ. ಈ ಸಮಯದಲ್ಲಿ ಚುನಾವಣೆಗಳು ಜರುಗಿದರೆ ಭಾಗವಹಿಸದಿರುವದೇ ಹಿತಕರವು. ಭಾಗವಹಿಸಿದಲ್ಲಿ ಇಡುಗಂಟು ಜಪ್ತವಾಗುತ್ತದೆ. ಕೋರ್ಟಿನ ಕಟ್ಟೆಯನ್ನು ಏರುವ ಪ್ರಸಂಗ ಬರಬಹುದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಹನ್ನೆರಡನೇ ಗುರುವಿನಿಂದಾಗಿ ಈ ವರುಷ ನಿರುತ್ಸಾಹದಾಯಕವಾಗಿದೆ. ನವಂಬರ ೧೫ ರಿಂದ ಜನೇವರಿ ೧೩, ಫೆಬ್ರುವರಿ ೧೭ರಿಂದ ಮೇ ೧೪ರ ಅವಧಿಯಲ್ಲಿ ಜರುಗುವ ಯಾವುದೇ ಪರೀಕ್ಷೆಗೆ ಕಟ್ಟಿದಲ್ಲಿ ತೇರ್ಗಡೆ ಆಗುವರು ನಿಜ. ಆದರೆ ಶ್ರೇಣಿ ದರ್ಜೆ ದೊರೆಯುವದಿಲ್ಲ. ಕಳೆದ ವರುಷ ದೊರೆತ ವಿದ್ಯಾರ್ಥಿವೇತನ ಉಳಿಸಿಕೊಳ್ಳುವುದೇ ದೊಡ್ಡ ಸಾಹಸ. ಆದರೆ ಅಕ್ಟೋಬರ ೨೪ ರಿಂದ ನವ್ಹಂಬರ ೧೭, ಜನೇವರಿ, ೧೪ ರಿಂದ ಫೆಬ್ರುವರಿ ೧೭ ಮತ್ತು ಮೇ ೧೫ರಿಂದ ವರುಷಾಂತ್ಯದವರೆಗಿನ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟಿದ ವಿದ್ಯಾರ್ಥಿಗಳಿಗೆ ಫಲಿತಾಂಶ ಸಂಶಯಾಸ್ಪದ. ವಿದ್ಯಾರ್ಥಿ ವೇತನ ಶಿಷ್ಯವೇತನಕ್ಕೆ ಎರವಾಗಬೇಕಾಗುತ್ತದೆ. ಅಲ್ಲದೇ ಶಿಕ್ಷಣ ಮುಂದುವರಿಸುವುದೇ ಸಾಧ್ಯವಾಗದು.



## ಕರ್ಕ

ಹನ್ನೊಂದನೆಯ ಗುರು ಹಾಗು ತೃತೀಯ ರಾಹುವಿನಿಂದಾಗಿ ಈ ವರ್ಷ ಈ ರಾಶಿಯ ಎಲ್ಲ ವರ್ಗದವರಿಗೂ ಎಲ್ಲ ದೃಷ್ಟಿಯಿಂದ ಯಶೋದಾಯಕ ಹಾಗು ಪ್ರಗತಿದಾಯಕವಾಗಿದೆ.

ಈ ರಾಶಿಯವರಿಗೆ ಹನ್ನೊಂದನೆಯ ಶುಭ ಫಲದಾಯಕ ಗುರು ವರುಷಾದ್ಯಂತ್ಯದವರೆಗೂ ಇರುವನಲ್ಲದೆ ನಾಳಿನ ಚೈತ್ರದಿಂದ ಬರುವ ತೃತೀಯ ಲಾಭದಾಯಕ ರಾಹುವಿನಿಂದಾಗಿ ಸಾಡೇ ಸಾತೀಯ ಅನಿಷ್ಟ ಪ್ರಭಾವ ಕಡಿಮೆಯಾಗುವದು. ಅನೇಕ ದೃಷ್ಟಿಯಿಂದ ಪ್ರೋತ್ಸಾಹದಾಯಕವಾಗಿದೆ. ಆರೋಗ್ಯವು ಈ ವರುಷದ ಮುಕ್ಕಾಲು ಅವಧಿಯವರೆಗೆ ಉತ್ತಮವಿರುವದಾದರೂ ಜನೇವರಿ ೧೪ರಿಂದ ಮಾರ್ಚ ೧೫, ಜೂನ ೧೫ರಿಂದ ಅಗಸ್ಟ ೧೫ರ ವರೆಗಿನ ಈ ನಾಲ್ಕು ತಿಂಗಳ ಕಾಲ ಮಾತ್ರ ಕಿಂಚಿತ್ ಶಾರೀರಿಕ ಪೀಡೆ ಉಂಟಾಗಬಹುದಾಗಿದೆ. ಕಳೆದ ವರುಷ ಗಂಭೀರವಾಗಿದ್ದ ಆರ್ಥಿಕಸ್ಥಿತಿ ಹನ್ನೊಂದನೆಯ ಗುರುವಿನ ಮೂಲಕ ಚೇತರಿಸಿಕೊಳ್ಳುವದು. ಡಿಶೆಂಬರ ೧೫ರಿಂದ ಜನೇವರಿ ೧೪. ಮಾರ್ಚ ೧೫ ರಿಂದ ಜೂನ ೧೫ ಅಗಸ್ಟ ೧೫ರಿಂದ ಅಕ್ಟೋಬರ ೧೬ರವರೆಗಿನ ಈ ಆರು ತಿಂಗಳ ಕಾಲ ನಿರೀಕ್ಷಿಸಿದ ಮೂಲಕ ಹಣ ಬರುವದು. ದತ್ತಕ ವಾರಸಾ. ಲಾಟರಿ. ಬಕ್ಷೀಸ್ ಮೊದಲಾದ ಮೂಲದಿಂದ ಆಕಸ್ಮಿಕ ಧನಪ್ರಾಪ್ತಿ ಆಗಿ ಆರ್ಥಿಕ ಮುಗ್ಗಟ್ಟು ದೂರಾಗುವದು. ಕಳೆದ ವರುಷದಿಂದ ಬಾಕಿ ಉಳಿದಿದ್ದ ಡಾಕ್ಟರ ವಕೀಲರ ಬಿಲ್ಲು ಹಾಗು ಸಾಲಗಾರರ ಕಾಟದಿಂದಲೂ ಮುಕ್ತರಾಗುವಿರಿ.

ಕಳೆದ ಅನೇಕ ವರುಷಗಳಿಂದ ನನೆಗುದಿಗೆ ಬಿದ್ದಿದ್ದ ಕೋರ್ಟು ಕಛೇರಿಗಳ ಕೆಲಸಗಳ ನಿರ್ಣಯ ಹೊರಬಿದ್ದು ಜಯಪ್ರಾಪ್ತಿಯಾಗುವದು. ಮೊಕದ್ದಮೆಗಳ ಬಗೆಗೆ ವಿವರವಾಗಿ ಹೇಳಬೇಕೆಂದರೆ ಫೌಜದಾರಿ ವ್ಯಾಜ್ಯಗಳು ವರುಷದ ಪೂರ್ವಾರ್ಧದಲ್ಲಿಯೂ ರಾಜಕೀಯ ಹಾಗೂ ನೌಕರರಿಗೆ ಸಂಬಂಧಿಸಿದ ಮೊಕದ್ದಮೆಗಳಿಗೆ ಮಧ್ಯಕಾಲದಲ್ಲಿಯೂ ದಿವಾಣಿ ವ್ಯಾಜ್ಯಗಳಿಗೆ ಉತ್ತರಾರ್ಧದಲ್ಲಿಯೂ ಯಶಸ್ಸು ಲಭಿಸುತ್ತದೆ.

ಈ ರಾಶಿಯ ನೌಕರ ವರ್ಗದವರಿಗೆ ಹನ್ನೊಂದನೆಯ ಶುಭಫಲದಾಯಕ ಗುರುವಿನಿಂದಾಗಿ ಈ ವರುಷ ಪ್ರಗತಿದಾಯಕವಿದೆ. ನವ್ಹೆಂಬರ ೧೫ರಿಂದ ಜನೇವರಿ ೧೪, ಮಾರ್ಚ ೧೫ರಿಂದ ಜೂನ ೧೫, ಅಗಸ್ಟ ೧೫ರಿಂದ ಅಕ್ಟೋಬರ ೧೬, ರವರೆಗಿನ ಈ ಏಳು ತಿಂಗಳುಗಳು ಅತ್ಯಂತ ಶುಭದಾಯಕವಾಗಿದ್ದು, ಈ ಕಾಲದಲ್ಲಿ ನಿರುದ್ಯೋಗಿಗಳಿಗೆ ನೌಕರಿ ಲಭಿಸುವಿಕೆ, ಹಂಗಾಮಿ ನೌಕರರಿಗೆ ಕಾಯಂ ಆಗುವಿಕೆ, ನೌಕರಿಯಲ್ಲಿ ಬಡತಿ, ಅನುಕೂಲ ಜಾಗೆಗೆ ಬದಲಿ. ಎರಡು ಹುದ್ದೆಗಳ ಕಾರ್ಯ ನಿರ್ವಹಿಸುವಿಕೆ ಮೊದಲಾದ ಶುಭಘಟನೆಗಳು ಜರಗುವವು. ಆದರೆ ಜನೇವರಿ ೧೪ರಿಂದ ಮಾರ್ಚ ೧೫ ಜೂನ ೧೫ರಿಂದ ಅಗಸ್ಟ ೧೪ರವರೆಗಿನ ಅವಧಿ ಕಿಂಚಿತ್ ಪ್ರತಿಕೂಲವಿದ್ದು, ಈ ಅವಧಿಯಲ್ಲಿ ವರಿಷ್ಠರೊಂದಿಗೆ ಭಿನ್ನಾಭಿಪ್ರಾಯ ಉಂಟಾಗಬಹುದು. ಈ ರಾಶಿಯ ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರ, ಪ್ರವಾಸಿ ಕೆಲಸಗಾರ ಹಾಗೂ ಗಿರಣಿ ಕಾರಖಾನೆಗಳ ಕಾರ್ಮಿಕ, ಮಶೀನರಿ ಸಂಬಂಧಿಸಿದ ಕೆಲಸಗಾರರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಪೂರ್ವಾರ್ಧಕ್ಕಿಂತ ಉತ್ತರಾರ್ಧವು ಹೆಚ್ಚು ಉತ್ತಮ. ಅದರಲ್ಲಿಯೂ ಮಾರ್ಚ ೧೫ರಿಂದ ಜೂನ ೧೫, ಅಗಸ್ಟ ೧೫ರಿಂದ ಅಕ್ಟೋಬರ ೧೬ ರವರೆಗಿನ ಈ ಐದು ತಿಂಗಳುಗಳಲ್ಲಿ ಅವರ, ಎಲ್ಲ ಆಶೆ-ಆಕಾಂಕ್ಷೆಗಳು ಈಡೇರುತ್ತವೆ.

ಹನ್ನೊಂದನೇ ಗುರುವಿನ ಮೂಲಕ ಈ ರಾಶಿಯ ಶಿಕ್ಷಕ, ಅಧ್ಯಾಪಕ ಕರಣಿಕ, ಕಲಾವಿದ, ಲೇಖಕ ಪತ್ರಿಕೋದ್ಯಮಿ, ನ್ಯಾಯಾಧೀಶ, ಡಾಕ್ಟರ ವಕೀಲ ಮೊದಲಾದ ಬುದ್ಧಿಜೀವಿಗಳಿಗೆ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಉದ್ಯೋಗದಲ್ಲಿ ಉತ್ಕರ್ಷವಾಗಿ ಕಳೆದ ವರುಷ ಆಗದೇ ಉಳಿದ ಕಾರ್ಯಗಳು ಪೂರ್ತಿ ಆಗುವವು. ನವ್ಹೆಂಬರ ೧೫ ರಿಂದ ಜನೇವರಿ ೧೩ ಮಾರ್ಚ ೧೫ರಿಂದ ಜೂನ ೧೫, ಅಗಸ್ಟ ೧೫ ರಿಂದ

ಅಕ್ಟೋಬರ ೧೬ವರೆಗಿನ ಈ ಆರುತಿಂಗಳ ಕಾಲ ಅತ್ಯಂತ ಶುಭದಾಯಕ. ಈ ಕಾಲವಲ್ಲಿ ಸರಕಾರ ಹಾಗೂ ಸಂಘ ಸಂಸ್ಥೆಗಳಿಂದ ಮನ್ನಣೆ ದೊರೆಯುವುದು. ವಾಹನ ಸೌಖ್ಯ, ಪರದೇಶ ಪರ್ಯಟನ. ಸ್ಥಾವರ ಇಸ್ಟೇಟ ಸಂಪಾದನೆ ಮೊದಲಾದ ಶುಭ ಘಟನೆಗಳು ಜರಗುವವು.

ಈ ರಾಶಿಯ ಸ್ವತಂತ್ರ, ಉದ್ಯೋಗ ವ್ಯಾಪಾರಸ್ಥರು ಕಮೀಶನ ಏಜೆಂಟ, ಹಂಚಿಕೆದಾರ, ಗಿರಣಿ ಕಾರಖಾನೆ, ಟಾಕೀಜ, ಚಾಳ. ಹೋಟೆಲ ಮಾಲಕ ವರ್ಗದವರಿಗೆಲ್ಲ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಅದರಲ್ಲಿಯೂ ಚೈತ್ರದಿಂದ ಬರುವ ಶುಭಫಲದಾಯಕ ರಾಹುವಿನಿಂದಾಗಿ ಅತ್ಯಂತ ಲಾಭದಾಯಕವಾಗಿದೆ. ಕಳೆದ ವರುಷ ಕುಂಠಿತವಾಗಿದ್ದ ಉದ್ಯೋಗ ಈ ವರುಷ ಚೇತರಿಸಿಕೊಳ್ಳುವದು. ನೌಕರರ ಸಮಸ್ಯೆ ಹಾಗೂ ಸರಕಾರದ ನಿರ್ಬಂಧನೆಗಳಿಂದ ಕಳೆದ ವರುಷ ಜರ್ಜರಿತರಾದ ನೀವು ಈ ಈ ವರುಷ ಮಧ್ಯದಿಂದ ಪ್ರಗತಿ ಸಾಧಿಸುವಿರಿ. ಈ ವರ್ಷ ಎಲ್ಲ ಸಮಸ್ಯೆಗಳೂ ಪರಿಹಾರವಾಗುವವು.

ಮಾರ್ಚ ೧೫ರಿಂದ ಜೂನ ೧೫ರವರೆಗಿನ ಈ ಮೂರುತಿಂಗಳ ಕಾಲದಲ್ಲಿ ಹೊಸ ಉದ್ಯೋಗದ ಪ್ರಾರಂಭ ಇಲ್ಲವೆ ಇದ್ದ ಉದ್ಯೋಗದ ಶಾಖೆಯನು ತೆರೆಯುಬಹುದಾಗಿದೆ. ಈ ರಾಶಿಯ ಕೃಷಿಕ ವರ್ಗದವರಿಗೆ ಈ ವರುಷ ಮಿಶ್ರ ಫಲವಿದೆ. ಪೂರ್ವಾರ್ಧ ಪ್ರತಿಕೂಲವಿದ್ದರೆ ಉತ್ತರಾರ್ಧವು ಪ್ರೋತ್ಸಾಹದಾಯಕ. ಮುಂಗಾರಿ ಬೆಳೆ ಕೈಕೊಟ್ಟರೆ ಹಿಂಗಾರಿ ಬೆಳೆ ಕೈ ಹಿಡಿಯುತ್ತದೆ. ಕಳೆದ ವರುಷ ಒತ್ತಿ ಹಾಕಲ್ಪಟ್ಟ ಹೊಲ ಮನೆಗಳನು ಈ ವರುಷ ಬಿಡಿಸಿಕೊಳ ಬಹುದಾಗಿದ ಮಾರ್ಚ ೧೫ ಂಂದ ಜೂನ ೧೫ರವರೆಗಿನ ಈ ಮೂರುತಿಂಗಳ ಕಾಲದಲ್ಲಿ ಹೊಸದಾಗಿ ದನ ಕರುಗಳ ಕೊಳ್ಳುವಿಕೆ, ಟ್ರಕ್ ಟ್ರ್ಯಾಕ್ಟರ. ಪಂಪಸೆಟ್ಟ ಮೊದಲಾದ ಕೃಷಿಗೆ ಬೇಕಾಗುವ ಉಪಕರಣಗಳನ್ನು ಖರೀದಿಸುವ ಇಲ್ಲವೇ ನವೀಕರಿಸುವ ಸಾಮರ್ಥ್ಯವಿರುವದು.

ಕಳೆದ ವರುಷದಿಂದ ಪ್ರಯತ್ನಿಸುತ್ತಿರುವ ಈ ರಾಶಿಯ ವಧೂವರರಿಗೆ ಹನ್ನೊಂದನೆಯ ಗುರುವಿನಿಂದಾಗಿ ಕಂಕಣ ಬಲ ಕೂಡಿ ಬಂದಿದೆ. ನವ್ಹೆಂಬರ ೧೪ ರಿಂದ ಜನೇವರಿ ೧೩, ಮಾರ್ಚ ೧೫ರಿಂದ ಜೂನ ೧೩, ಅಗಸ್ಟ ೧೫ ರಿಂದ ಅಕ್ಟೋಬರ ೧೬ರವರೆಗಿನ ಅವಧಿಯಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗುವದು. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೂ ಹನ್ನೊಂದನೆಯ ಗುರುವಿನ ಮೂಲಕ ಈ ವರ್ಷ ಪ್ರೋತ್ಸಾಹದಾಯಕವಾಗಿದೆ. ತಪ್ಪು ತಿಳುವಳಿಕೆಯಿಂದ ಒಡೆದು ಹೋದ ಏಕತ್ರ ಕುಟುಂಬ ಮತ್ತೆ ಒಂದುಗೂಡುವದು. ಆಪ್ತೇಷ್ಟರು ಹಾಗೂ ನೆರೆಹೊರೆಯವರೊಂದಿಗೆ ಸ್ನೇಹವಿಶ್ವಾಸ ಕುದುರುವದು. ನವ್ಹೆಂಬರ ೧೫ ರಿಂದ ಜನೇವರಿ ೧೪. ಹಾಗೂ ಮಾರ್ಚ ೧೫ ರಿಂದ ಜೂನ ೧೫ರವರೆಗಿನ ಈ ಐದು ತಿಂಗಳ ಕಾಲದಲ್ಲಿ ಸ್ಥಾವರ ಇಸ್ಟೇಟ ಸಂಪಾದನೆ ಬೆಲೆಯುಳ ವಸ್ತು ಒಡವೆ ಖರೀದಿ. ನೂತನ ಗೃಹ ಪ್ರವೇಶ ಮೊದಲಾದ ಅವರ ಬಹುದಿನದ ಆಶೆ ಆಕಾಂಕ್ಷೆಗಳು ಈಡೇರುವವು. ಈ ರಾಶಿಯ ಗರ್ಭಿಣಿಯರಿಗೆ ಅಕ್ಟೋಬರ ೨೪ ರಿಂದ ನವ್ಹೆಂಬರ ೧೪. ಜನೇವರಿ ೧೪ರಿಂದ ಮಾರ್ಚ ೧೫. ಜೂನ ೧೫ರಿಂದ ಅಗಸ್ಟ ೧೪ರವರೆಗಿನ ಅವಧಿಯಲ್ಲಾದರೆ ಪ್ರಸೂತಿ ಕಷ್ಟಕರ ಹಾಗು ಶಸ್ತ್ರಕ್ರಿಯೆ ಅನಿವಾರ್ಯವಾಗುವದು. ಉಳಿದ ಅವಧಿಯಲ್ಲಿ ಆದರೆ ಸುಖ ಪ್ರಸವ ಆಗುತ್ತದೆ.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಹನ್ನೊಂದನೆಯ ಶುಭಫಲದಾಯಕ ಗುರುವಿನಿಂದಾಗಿ ಈ ವರುಷ ಪ್ರೋತ್ಸಾಹದಾಯಕ. ಶತ್ರುಗಳು ಮಿತ್ರರಾಗುವರು. ಸಲ್ಲದ ಅಪವಾದಕ್ಕೆ ಗುರಿಯಾಗಿದ್ದ ನೀವು ಈ ವರುಷ ದೋಷಮುಕ್ತರಾಗುವಿರಿ. ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸಿ ಅನೇಕ ಸಂಘ ಸಂಸ್ಥೆಗಳ ಪದಾಧಿಕಾರಿಗಳಾಗುವದರಲ್ಲಿ ಸಂದೇಹವಿಲ್ಲ. ಜಿಲ್ಲಾಮಟ್ಟದ ರಾಷ್ಟ್ರಮಟ್ಟದ ಗಣ್ಯವ್ಯಕ್ತಿಗಳಾಗುವಿರಿ. ಈ ವರುಷ ಜರುಗಬಹುದಾದ ಚುನಾವಣೆಗಳಲ್ಲಿ ಸ್ಪರ್ಧಿಸಿದಲ್ಲಿ, ಆಯ್ಕೆ ನಿಶ್ಚಿತ. ಆದರೆ ನವ್ಹೆಂಬರ ೧೫ರಿಂದ ಜನೇವರಿ ೧೪. ಮಾರ್ಚ ೧೫ರಿಂದ ಜೂನ ೧೫. ಅಗಸ್ಟ ೧೫ರಿಂದ ಅಕ್ಟೋಬರ ೧೬ರವರೆಗಿನ ಅವಧಿಯಲ್ಲಿ ಜರುಗುವ ಚುನಾವಣೆಯಲ್ಲಿ ಸ್ಪರ್ಧಿಸಿದಲ್ಲಿ ಅತ್ಯಧಿಕ ಮತಗಳಿಂದ ಇಲ್ಲವೆ ಅವಿರೋಧ ಆಯ್ಕೆಯ ಯೋಗವೂ ಉಂಟು. ಆದರೆ ಜನೇವರಿ ೧೪ರಿಂದ ಮಾರ್ಚ ೧೫, ಜೂನ ೧೫ರಿಂದ ಅಗಸ್ಟ ೧೪ ರವರೆಗಿನ ಅವಧಿಯಲ್ಲಿ ಜರುಗಲಿರುವ ಚುನಾವಣೆಯಲ್ಲಿ ಸ್ಪರ್ಧಿಸಿದರೆ ಚುನಾವಣೆ ತುರುಸಿನದಾಗುವದಾದರೂ ಅತ್ಯಲ್ಪ ಮತಗಳಿಂದ ಆಯ್ಕೆಯಾಗಬಹುದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಹನ್ನೊಂದನೇಯ ಗುರುವಿನ ಮೂಲಕ ಈ ವರುಷ ಪ್ರೋತ್ಸಾಹ ದಾಯಕವಾಗಿದೆ. ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರೆಯುವದು. ಕಳೆದುಕೊಂಡಿದ್ದ ವಿದ್ಯಾರ್ಥಿ ವೇತನ, ಶಿಷ್ಯವೃತ್ತಿ ಪುನಃ ಲಭಿಸುವದು. ಇದು ಅಲ್ಲದೇ ಸಂಶೋಧನೆಗಾಗಿ ಇಲ್ಲವೇ ಹೆಚ್ಚಿನ ಶಿಕ್ಷಣಕ್ಕಾಗಿ ವಿದೇಶ ಪ್ರವಾಸ ಕೈಕೊಳಬಹುದಾಗಿದೆ. ನವ್ವೆಂಬರ ೧೫ರಿಂದ ಡಿಶೆಂಬರ ೧೫, ಮಾರ್ಚ ೧೫ರಿಂದ ಜೂನ ೧೫ ಮತ್ತು ಅಗಸ್ಟ ೧೫ರಿಂದ ಅಕ್ಟೋಬರ ೧೭ರ ವರೆಗಿನ ಅವಧಿಯಲ್ಲಿ ಜರಗುವ ಪರೀಕ್ಷೆಗೆ ಕಟ್ಟುವವರು ದರ್ಜೆ ಶ್ರೇಣಿ ಪಡೆದು ತೇರ್ಗಡೆಯಾಗುವರು. ಪ್ರಶಸ್ತಿ ಪದಕ. ವಿದ್ಯಾರ್ಥಿ ವೇತನ, ಶಿಷ್ಯವೇತನ ಪಡೆಯುವರು. ಆದರೆ ಜನೇವರಿ ೧೪ ರಿಂದ ಮಾರ್ಚ ೧೪, ಜೂನ ೧೫ರಿಂದ ಅಗಸ್ಟ ೧೪ರ ಅವಧಿಯಲ್ಲಿ ಜರಗುವ ಪರೀಕ್ಷೆಗಳಿಗೆ ಕಟ್ಟುವ ವಿದ್ಯಾರ್ಥಿಗಳು ತೇರ್ಗಡೆ ಆಗಲು ಬಹಳ ಪರಿಶ್ರಮ ಪಡಬೇಕಾಗುತ್ತದೆ.



## ಸಿಂಹ

ಈ ರಾಶಿಯ ಎಲ್ಲ ವರ್ಗದವರಿಗೂ ಎಲ್ಲ ದೃಷ್ಟಿಯಿಂದಲೂ ಈ ವರುಷ ಯಾವ ಹೆಚ್ಚಿನ ಮಹತ್ವದ ಶುಭಾಶುಭಫಲಗಳು ದೊರೆಯದೇ ಯಥಾಸ್ಥಿತಿ ಮುಂದುವರಿಯುವದು. ವರುಷದ ಮಧ್ಯದ ಆರು ತಿಂಗಳುಗಳ ಕಾಲ ಮಾತ್ರ ಪ್ರೋತ್ಸಾಹದಾಯಕವಾಗಿದೆ. ಮಘಾ ನಕ್ಷತ್ರದ ಸಿಂಹರಾಶಿಯವರಿಗೆ ಕ್ಲೇಶದಾಯಕ ವರುಷವಾದರೆ ಪೂರ್ವಾ ಹಾಗೂ ಉತ್ತರಾ ನಕ್ಷತ್ರದ ಸಿಂಹರಾಶಿಯವರಿಗೆ ಪ್ರಗತಿದಾಯಕ ವರುಷವಾಗಿದೆ.

ಈ ರಾಶಿಯವರಿಗೆ ಕಳೆದ ವರುಷದಿಂದ ಪ್ರಾರಂಭವಾದ ಹನ್ನೆರಡನೆಯ ಅನಿಷ್ಟ ಶನಿಯು ಈ ವರುಷವೂ ಮುಂದುವರಿಯುತ್ತಾನೆ. ಒಂಭತ್ತನೆಯ ಗುರುವಿನ ಶುಭಫಲವೂ ಡಿಶೆಂಬರ್ ಫೆಬ್ರುವರಿ ಕೊನೆಯವರೆಗೆ ಮಾತ್ರ ದೊರೆಯುವದು. ಆದರೆ ಪೂರ್ವಾ ಉತ್ತರಾ ನಕ್ಷತ್ರದವರಿಗೆ ಒಂಭತ್ತನೆಯ ಗುರುವಿನ ಶುಭ ಫಲ ದೊರೆಯುವದು. ವರುಷದ ಪ್ರಾರಂಭ ಹಾಗೂ ಫೆಬ್ರುವರಿ ಕೊನೆಯ ವಾರದಿಂದ ಪ್ರಾರಂಭವಾಗುವ ಹತ್ತನೆಯ ಗುರುವು ಶುಭ ಫಲವನ್ನು ಕೊಡಲಾರ. ಕಳೆದ ವರುಷದಿಂದ ಶುಭ ಫಲಕೊಡುತ್ತಿದ್ದ ತೃತೀಯ ರಾಹು ಚೈತ್ರದಿಂದ ದ್ವಿತೀಯನಾಗಲಿದ್ದು ಅಶುಭದಾಯಕನಾಗುವನು. ಗ್ರಹಗತಿ ಹೀಗಿರುವದರಿಂದ ಯಾವ ಹೆಚ್ಚಿನ ಏರಿಳಿತವಿರದೇ ಯಥಾಸ್ಥಿತಿ ಮುಂದುವರೆಯುವದು.

ಆರೋಗ್ಯದಲ್ಲಿ ಹೇಳಿಕೊಳುವಷ್ಟು ಸುಧಾರಣೆ ಇಲ್ಲದಿದ್ದರೂ ಕಳೆದ ವರುಷದಷ್ಟು ತೀವ್ರ ಪ್ರಖರತೆ ಇರುವದಿಲ್ಲ. ಆದಾಗ್ಯೂ ಕೂಡ ನವ್ವೆಂಬರ ೧೪ರಿಂದ ಡಿಶೆಂಬರ ೧೫, ಮಾರ್ಚ ೧೪ರಿಂದ ಏಪ್ರಿಲ್ ೧೨, ಜುಲೈ ೧೫ರಿಂದ ಅಕ್ಟೋಬರ್ ೧೭ರವರೆಗಿನ ಈ ನಾಲ್ಕು ತಿಂಗಳ ಕಾಲದಲ್ಲಿ ಶಾರೀರಿಕ ಪೀಡೆ ಹೆಚ್ಚುವದಲ್ಲದೇ ಶತ್ರುಗಳ ಕಾಟ ಹೆಚ್ಚಾಗಿ ರೋಗ ಉಲ್ಬಣಿಸಬಹುದಾಗಿದೆಯಲ್ಲದೆ ಅಫಘಾತದ ಭಯವೂ ಉಂಟು. ಆದುದರಿಂದ ಈ ರಾಶಿಯ ಚಾಲಕ ವರ್ಗ, ಮಶಿನರಿ ಕೆಲಸಗಾರರು ತಾಂತ್ರಿಕ ವರ್ಗದವರು ಈ ಅವಧಿಯಲ್ಲಿ ಜಾಗ್ರತಿ ವಹಿಸುವದು ಒಳೆಯದು. ಈ ಕಾಲದಲ್ಲಿ ಶನಿಜಪ, ಶಾಂತಿ, ಮಾರುತಿ ದರ್ಶನಗಳನ್ನು ಮಾಡಿರಿ. ತೊಂದರೆಗಳು ಕಡಿಮೆಯಾಗುವವು. ಆರ್ಥಿಕದೃಷ್ಟಿಯಿಂದ ಈ ರಾಶಿಯವರಿಗೆ ಈ ವರುಷ ಮಿಶ್ರಫಲ ದೊರೆಯುವವು. ಡಿಶೆಂಬರ್ ೧೫ರಿಂದ ಮಾರ್ಚ ೧೫, ಏಪ್ರಿಲ್ ೧೨ರಿಂದ ಜುಲೈ ೧೫ ರವರೆಗಿನ ಈ ಆರು ತಿಂಗಳು ಹಣಕಾಸಿನ ದೃಷ್ಟಿಯಿಂದ ಅನುಕೂಲವಿದ್ದು ಈ ಅವಧಿಯಲ್ಲಿ ನಿರೀಕ್ಷಿಸಿದೆಡೆಯಿಂದ ಹಣ ಬರುವದಲ್ಲದೇ ಆಕಸ್ಮಿಕ ಧನಲಾಭವೂ ಯೋಗವೂ ಉಂಟು. ತನ್ಮೂಲಕ ಆರ್ಥಿಕಸ್ಥಿತಿ ಹಿಡಿತದಲ್ಲಿ ಬರುವದು. ಕಳೆದ ವರುಷ ಹಣದ ತೊಂದರೆಯಿಂದ ಅರ್ಧಕ್ಕೆ ನಿಂತ ಕಾರ್ಯಗಳೆಲ್ಲವೂ ಈ ಅವಧಿಯಲ್ಲಿ ನೆರವೇರುವವು. ಆದರೆ ನವ್ವೆಂಬರ ೧೫ರಿಂದ ಡಿಶೆಂಬರ ೧೫, ಮಾರ್ಚ ೧೫ರಿಂದ ಏಪ್ರಿಲ್ ೧೨ ಮತ್ತು ಜುಲೈ ೧೫ರಿಂದ ಅಕ್ಟೋಬರ ೧೭ರವರೆಗಿನ ಈ ಐದು ತಿಂಗಳ ಕಾಲ ತೀರ ಪ್ರತಿಕೂಲವಿದ್ದು, ಈ ಕಾಲವಲ್ಲಿ ಬರತಕ್ಕ ಹಣ ಸಮಯಕ್ಕೆ ಬರದೆ ಕೊಡತಕ್ಕ ಹಣಕ್ಕಾಗಿ ತೊಂದರೆಯಾಗುವದು. ಆರ್ಥಿಕ ತಾಪತ್ರಯ ಪರಾಕಾಷ್ಟಕ್ಕೆ ತಲುಪುವುದು. ಸಾಲಗಾರರಿಂದ ಅವಮಾನಿತರಾಗಬೇಕಾಗುವದು, ಮತ್ತು ಮನೆಯಲ್ಲಿ ಜರುಗಲಿರುವ ಮಂಗಲಕಾರ್ಯಕ್ಕಾಗಿ ಹೊಸ ಸಾಲಕ್ಕೆ ಮೊರೆಹೋಗುವ ಪ್ರಸಂಗವೂ ಇದೇ ಸಮಯದಲ್ಲಿ ಬರಬಹುದು. ಧೈರ್ಯ ಹಾಗು ತಾಳ್ಮೆಯಿಂದ ಪರಿಸ್ಥಿತಿಯನ್ನು ಎದುರಿಸಿ, ಆ ಶ್ರೀ ಗುರುದತ್ತನ ಅನುಗ್ರಹದಿಂದ ಪಾರಾಗುವಿರಿ.

ವಾದ ಸ್ಪರ್ಧೆ ಕೋರ್ಟು ಕಚೇರಿಗಳ ವ್ಯವಹಾರಗಳಿಗಾಗಿ ಈ ವರುಷ ಕೈ ಹಾಕದಿರುವದೇ ಹಿತಕರವು. ಇಲ್ಲವೇ ಸಂಧಾನ ರಾಜೀ ಮನೋಭಾವನೆಯಿಂದ ವರ್ತಿಸಿ ಲಾಭ ದೊರೆಯಬಹುದಾಗಿದೆ.

ಈ ರಾಶಿಯ ನೌಕರವರ್ಗ ಹಾಗೂ ನಿರುದ್ಯೋಗಿಗಳಿಗೆ ಈ ವರುಷ ಹೇಳಿಕೊಳ್ಳುವಷ್ಟು ಪ್ರೋತ್ಸಾಹದಾಯಕವಾಗಿರುವದಿಲ್ಲ. ಆದಾಗ್ಯೂ ಸಹ ಡಿಶೆಂಬರ ೧೫ರಿಂದ ಮಾರ್ಚ ೧೫ ಹಾಗೂ ಮೇ ೧೨ರಿಂದ ಜುಲೈ ೧೫ರವರೆಗಿನ ಈ ಐದು ತಿಂಗಳ ಕಾಲ ಇದ್ದುದರಲ್ಲಿಯೇ ಶುಭವೂ ಅನುಕೂಲವೂ ಆಗಿದ್ದು ಈ ಅವಧಿಯಲ್ಲಿ ಬಡತಿ, ಇಚ್ಛಿತ ಸ್ಥಳಕ್ಕೆ ಬದಲಿ ವರಿಷ್ಠರ ಸಹಕಾರ, ನಿರುದ್ಯೋಗಿಗಳಿಗೆ ಬಹುಪ್ರಯಾಸದಿಂದ ತಾತ್ಪೂರ್ತಿಕ ಉದ್ಯೋಗ ಲಭಿಸುವಿಕೆ ಮೊದಲಾದ ಶುಭಘಟನೆಗಳು ಜರುಗುವವು ಆದರೆ ನವಂಬರ ೧೫ರಿಂದ ಡಿಶೆಂಬರ ೧೫, ಮಾರ್ಚ ೧೫ರಿಂದ ಮೇ ೧೫, ಜುಲೈ ೧೫ರಿಂದ ಅಕ್ಟೋಬರ ೧೭ರವರೆಗಿನ ಈ ಆರು ತಿಂಗಳು ಕಾಲ ತೀರ ಪ್ರತಿಕೂಲವಿದ್ದು ಈ ಕಾಲದಲ್ಲಿ ಬೇಡವಾದ ಸ್ಥಳಕ್ಕೆ ಬದಲಿ, ಹಿಂಬಡತಿ, ವರಿಷ್ಠರ ಕಿರುಕುಳಗಳಿಂದಾಗಿ ನೌಕರಿಗೆ ತಿಲಾಂಜಲಿಯನ್ನೀಯುವ ಮಟ್ಟಿಗೆ ಸನ್ನಿವೇಶ ಅಸಹನೀಯವಾಗುವದು. ತಾಳಿದವನೇ ಬಾಳಿಯಾನು ಎಂಬುದನ್ನು ಮಾತ್ರ ಮರೆಯದಿರಿ. ಈ ರಾಶಿಯ ಬಾಹ್ಯ ಕೆಲಸಗಾರ, ಸಂಚಾರಿ ಕೆಲಸಗಾರ, ತಾಂತ್ರಿಕ ವರ್ಗ, ಗಿರಣಿ, ಮಶೀನರಿಗೆ ಸಂಬಂಧಿಸಿದ ಕೆಲಸಗಾರರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿಲ್ಲವಾದರೂ ಡಿಶೆಂಬರ ೧೫ರಿಂದ ಮಾರ್ಚ ೧೫, ಹಾಗೂ ಏಪ್ರಿಲ್ ೧೨ ರಿಂದ ಜುಲೈ ೧೫ರವರೆಗಿನ ಈ ಆರು ತಿಂಗಳ ಕಾಲ ಇದ್ದುದರಲ್ಲಿಯೇ ಅನುಕೂಲವಾಗಿದ್ದು ಅವರ ಕೆಲ ಬೇಡಿಕೆಗಳು ಈಡೇರುವವು. ಬೇಡಿಕೆಗಳಿಗಾಗಿ ಒತ್ತಾಯ ಮಾಡಿ ಎಲ್ಲವನ್ನೂ ಕಳೆದುಕೊಳುವದಕ್ಕಿಂತ ರಾಜೀ ಮನೋಭಾವನೆಯಿಂದ ವರ್ತಿಸಿ ಕೆಲವಾದರೂ ಬೇಡಿಕೆಗಳನ್ನು ಈಡೇರಿಸಿಕೊಳುವದು ಹಿತಕರ.

ಈ ರಾಶಿಯ ಸಾಹಿತಿ, ಲೇಖಕ, ಕಲಾವಿದ, ಶಿಕ್ಷಕ, ಅಧ್ಯಾಪಕ, ಪತ್ರಿಕೋದ್ಯಮಿ, ಡಾಕ್ಟರ ವಕೀಲ, ನ್ಯಾಯಾಧೀಶ, ಕರಣಿಕ, ಮೊದಲಾದ ಬುದ್ಧಿಜೀವಿಗಳಿಗೆ ಈ ವರುಷ ಮಿಶ್ರಫಲವಿದೆ. ಮಘಾ ನಕ್ಷತ್ರದವರಿಗೆ ಪೂರ್ವಾರ್ಧದಲ್ಲಿಯೂ ಪೂರ್ವಾದವರಿಗೆ ಮಧ್ಯಕಾಲದಲ್ಲಿಯೂ ಉತ್ತರಾದವರಿಗೆ ಉತ್ತರಾರ್ಧದಲ್ಲಿಯೂ ಪ್ರಗತಿ ಇದ್ದು ಈ ಅವಧಿಯಲ್ಲಿ ಸರಕಾರ ಸಂಘ ಸಂಸ್ಥೆಗಳಿಂದ ಮನ್ನಣೆ ಪ್ರಶಸ್ತಿ ಪದಕ ಪುರಸ್ಕಾರ ದೊರೆಯುವವು. ಅಲ್ಲದೆ ದ್ರವ್ಯಾನುಕೂಲತೆಯಾಗುವದು. ಈ ರಾಶಿಯ ಕೃಷಿಕರಿಗೆ ಈ ವರುಷದ ಮುಂಗಾರು ಬೆಳೆ ನಿರೀಕ್ಷೆಗಿಂತ ಹೆಚ್ಚು ಬಂದು ಆರ್ಥಿಕ ಸ್ಥಿತಿ ಚೇತರಿಸಿ, ಹೊಸ ಜಾಗೆ, ಮನೆ, ದನ ಕರುಗಳು ಬೇಸಾಯದ ಉಪಕರಣಗಳ ಖರೀದಿ ಇಲ್ಲವೇ ನವೀಕರಿಸುವ ಸಾಧ್ಯತೆ ಉಂಟು; ಆದರೆ ಹಿಂಗಾರಿ ಬೆಳೆ ಕೈಕೊಡುವದರಿಂದ ಲೆಕ್ಕ ಸಂಪೂರ್ಣ ತಪ್ಪುತ್ತದೆ. ಆದರಲ್ಲಿಯೂ ಜುಲೈ ೧೫ ರಿಂದ ಅಕ್ಟೋಬರ ೧೭ರವರೆಗಿನ ಈ ಮೂರುತಿಂಗಳ ಕಾಲ ತೀರ ತಾಪದಾಯಕವಾಗಿದ್ದು ಸಾಲಗಾರರ ಕಾಟ ಹೆಚ್ಚಿ ಹೊಸ ಸಾಲಕ್ಕಾಗಿ ಪರದಾಡಬೇಕಾಗುತ್ತದೆ. ಮನೆ ವಸ್ತು ಒಡವೆಗಳನ್ನು ಒತ್ತೆ ಹಾಕಬೇಕಾಗುವದು ಇಲ್ಲವೆ ಮಾರಾಟ ಮಾಡಿ ಋಣಮುಕ್ತರಾಗಬೇಕಾದ ಸನ್ನಿವೇಶ ಪ್ರಾಪ್ತವಾಗುತ್ತದೆ.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರು, ಉದ್ದಿಮೆದಾರರು, ಏಜೆಂಟ, ಹಂಚಿಕೆದಾರ, ಗಿರಣಿ ಕಾರಖಾನೆ ಟಾಕೀಜ ಚಾಳ ಹೋಟೆಲಗಳ ಮಾಲಕ ವರ್ಗದವರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿರುವದಿಲ್ಲ. ಇದ್ದುದರಲ್ಲಿಯೇ ಡಿಶೆಂಬರ ೧೫ರಿಂದ ಮಾರ್ಚ ೧೫. ಏಪ್ರಿಲ್ ೧೨ ರಿಂದ ಜುಲೈ ೧೫ರ ವರೆಗಿನ ಕಾಲದಲ್ಲಿ ತುಸು ಪ್ರಗತಿ ಸಾಧಿಸಿ ಆರ್ಥಿಕ ಸ್ಥಿತಿ ಚೇತರಿಸುತ್ತದೆ. ನವ್ವೆಂಬರ ೧೫ರಿಂದ ಡಿಶೆಂಬರ ೧೫ ಮಾರ್ಚ ೧೩ರಿಂದ ಏಪ್ರಿಲ್ ೧೨, ಜುಲೈ ೧೫ರಿಂದ ಅಕ್ಟೋಬರ ೧೭ರವರೆಗಿನ ಈ ಐದು ತಿಂಗಳ ಕಾಲ ತೀರ ಪ್ರತಿಕೂಲ. ಉದ್ಯೋಗದಲ್ಲಿ ಹಿನ್ನಡೆ, ಆರ್ಥಿಕ ಮುಗ್ಗಟ್ಟು ಸರಕಾರದ ನಿಬಂಧನೆಗಳಿಂದಾಗಿ ಉದ್ಯೋಗ ಸಾಗಿಸುವದೇ ಸಮಸ್ಯೆಯಾಗುತ್ತದೆ. ತಿರುಪತಿ ವೆಂಕಟೇಶನನ್ನು ಪ್ರಾರ್ಥಿಸಿರಿ ಎಲ್ಲವೂ ಸರಿಯಾಗುವದು.

ಈ ರಾಶಿಯ ವಧೂವರರಿಗೆ ಈ ವರುಷ ಕಂಕಣ ಬಲ ಕೂಡಿ ಬಂದಿದೆ. ಆದರಲ್ಲಿಯೂ ಡಿಶೆಂಬರ ೧೫ರಿಂದ ಮಾರ್ಚ ೧೫ ಹಾಗೂ ಏಪ್ರಿಲ್

೧೨ರಿಂದ ಜುಲೈ ೧೫ ರವರೆಗಿನ ಆರು ತಿಂಗಳ ಕಾಲನಲ್ಲಿ ವಿವಾಹ ನೆರವೇರುವದು. ವಿವಾಹಿತ ಸ್ತ್ರೀ ಪುರುಷರಿಗೆ ಈ ವರುಷ ಮಿಶ್ರಫಲವುಂಟು. ಡಿಶೆಂಬರ ೧೬ರಿಂದ ಮಾರ್ಚ ೧೫ ಹಾಗೂ ಮೇ ೧೫ ರಿಂದ ಜುಲೈ ೧೬ರವರೆಗಿನ ಈ ಐದು ತಿಂಗಳುಗಳ ಕಾಲ ಪ್ರಗತಿದಾಯಕವಿದ್ದು ಈ ಅವಧಿಯಲ್ಲಿ ಬೆಲೆಯುಳ್ಳ ವಸ್ತು ಒಡವೆ ಖರೀದಿಸುವ ನೂತನ ಗೃಹಪ್ರವೇಶ. ತೀರ್ಥಯಾತ್ರಾ ಸಂದರ್ಶನ, ಮೊದಲಾದ ಶುಭಘಟನೆಗಳು ಜರುಗುವವು. ನವ್ಹಂಬರ ೧೬ರಿಂದ ಡಿಶೆಂಬರ ೧೫, ಮಾರ್ಚ ೧೬ರಿಂದ ಮೇ ೧೫. ಹಾಗೂ ಜುಲೈ ೧೬ರಿಂದ ಅಕ್ಟೋಬರ ೧೬ರವರೆಗಿನ ಅವಧಿ ತೀರ ಪ್ರತಿಕೂಲವಾಗಿದ್ದು ಈ ಕಾಲದಲ್ಲಿ ಆರ್ಥಿಕ ಮುಗ್ಗಟ್ಟಿನೊಂದಿಗೆ ಗೃಹಕಲಹವನ್ನು ಎದುರಿಸಬೇಕಾಗುತ್ತದೆ. ತಪ್ಪು ತಿಳುವಳಿಕೆಯಿಂದಾಗಿ ಏಕತ್ರ ಕುಟುಂಬ ಒಡೆಯಬಹುದಾಗಿದೆ. ಹೀಗಾಗಿ ಮಾನಸಿಕ ವ್ಯಥೆ ಬಹಳ. ಈ ರಾಶಿಯ ಗರ್ಭಿಣಿಯರ ಹೆರಿಗೆಯು ನವ್ಹಂಬರ ೧೬ರಿಂದ ಡಿಶೆಂಬರ ೧೫, ಮಾರ್ಚ ೧೬ರಿಂದ ಮೇ ೧೫, ಹಾಗೂ ಜುಲೈ ೧೬ ರಿಂದ ಸಪ್ಟೆಂಬರ ೧೬ ರ ಅವಧಿಯಲ್ಲಾದರೆ ಪ್ರಸೂತಿ ಕಷ್ಟದಾಯಕ ಹಾಗು ಶಸ್ತ್ರಕ್ರಿಯೆ ಅನಿವಾರ್ಯವಾಗುವದು. ಮಿಕ್ಕ ಅವಧಿಯಲ್ಲಾದರೆ ಹೆರಿಗೆ ಸುಖಪ್ರದ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷ ಹೇಳಿಕೊಳ್ಳು ವಂಥದಾಗಿಲ್ಲ. ಚುನಾವಣೆಗಳಿಂದ ದೂರ ಉಳಿದು ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸದಿರುವುದೇ ಹಿತಕರವು. ಇದು ವರಲ್ಲಿ ಮೇ ಡಿಶೆಂಬರ ೧ ರಿಂದ ಮಾರ್ಚ ೧೫, ಮೇ ೧೬ರಿಂದ ಜುಲೈ ೧೫ ರವರೆಗಿನ ಈ ಐದು ತಿಂಗಳು ಮಾತ್ರ ಪ್ರಗತಿದಾಯಕವಾಗಿದು. ಈ ಕಾಲದಲ್ಲಿ ಕೆಲ ಆಶೆ ಆಕಾಂಕ್ಷೆಗಳು ಈಡೇರುವವು. ಇದೇ ಅವಧಿಯಲ್ಲಿ ಚುನಾವಣೆಯು ಜರುಗಿದರೆ ಸ್ಪರ್ಧಿಸುವದು ಅನಿವಾರ್ಯವಾಗಿ ಸ್ಪರ್ಧಿಸಬಹುದು. ನಿಕರದ ಹೋರಾಟ. ದಿಂದ ಆಯ್ಕೆ ಆಗುವದು. ನವ್ಹಂಬರ ೧೫ ರಿಂದ ಡಿಶೆಂಬರ ೧೫. ಮಾರ್ಚ ೧೬ರಿಂದ ಮೇ ೧೫. ಜುಲೈ ೧೬ರಿಂದ ಸಪ್ಟೆಂಬರ್ ೧೬ರವರೆಗಿನ ಕಾಲ ತೀರ ಪ್ರತಿಕೂಲವಿದೆ. ಮಿತ್ರರು ಶತ್ರುಗಳಾಗುವರು. ಅವಿಶ್ವಾಸ ಸೂಚನೆಗೆ ಗುರಿಯಾಗಿ ಅಧಿಕಾರಕ್ಕೆ ಚ್ಯುತಿ. ಇದೇ ಸಮಯದಲ್ಲಿ ಚುನಾವಣೆಗಳು ಜರುಗಿದರೆ ಸ್ಪರ್ಧಿಸದಿರುವುದೇ ಹಿತಕರವು.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರುಷ ಮಿಶ್ರಫಲವುಂಟು. ಕುಂಠಿತವಾಗಿದ್ದ ಶಿಕ್ಷಣವೇನೋ ಮುಂದುವರಿಯುವದು. ಆದರೆ ಮನೆಯಲ್ಲಿಯ ವಿಷಮ ಪರಿಸ್ಥಿತಿ ಹಾಗು ಆರ್ಥಿಕ ಮುಗ್ಗಟ್ಟು ಮತ್ತು ಶಿಕ್ಷಕರ ಅಸಹಕಾರವನ್ನು ಎದುರಿಸಬೇಕಾಗುತ್ತದೆ. ವಿನಾಯಕನನ್ನು ಭಕ್ತಿಯಿಂದ ಆರಾಧನೆ ಮಾಡಿರಿ. ತೊಂದರೆಗಳು ದೂರಾಗುವವು. ಡಿಶೆಂಬರ ೧೬ರಿಂದ ಮಾರ್ಚ ೧೬ರ ಒಳಗೆ ಹಾಗೂ ಮೇ ೧೬ರಿಂದ ಜುಲೈ ೧೬ರವರೆಗಿನ ಅವಧಿಯಲ್ಲಿ ಜರಗುವ ಪರೀಕ್ಷೆಗಳಿಗೆ ಕಟ್ಟುವವರು ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಪ್ರಶಸ್ತಿ ಪದಕ ಪಡೆಯುವರು. ನವ್ಹಂಬರ ೧೬ರಿಂದ ಡಿಶೆಂಬರ ೧೫, ಮಾರ್ಚ ೧೬ರಿಂದ ಸಪ್ಟೆಂಬರ ೧೬ ಅವಧಿಯಲ್ಲಿ ಜರಗುವಪರೀಕ್ಷೆಗಳಿಗೆ ಕಟ್ಟುವವರ ಫಲಿತಾಂಶ ಸಂಶಯಾಸ್ಪದವೆಂದೇ ಹೇಳಬಹುದು.



## ಕನ್ಯಾ

ಹನ್ನೊಂದನೆಯ ಶನಿ ಒಂಭತ್ತನೆಯ ಗುರುವಿನಿಂದಾಗಿ ಈ ವರುಷ, ಈ ರಾಶಿಯವರಿಗೆ ಅವರ ಜೀವನದಲ್ಲಿಯೇ ಸುವರ್ಣ ಕಾಲವಾಗಿದ್ದು, ಎಲ್ಲ ದೃಷ್ಟಿಯಿಂದಲೂ ಎಲ್ಲ ವರ್ಗದವರಿಗೂ ಅತ್ಯಂತ ಯಶೋದಾಯಕವಾಗಿದೆ.

ಈ ರಾಶಿಯವರ ಗ್ರಹಗತಿಯನ್ನು ಅವಲೋಕಿಸಲಾಗಿ ವಸಂತ ಮಾಸವು ಅವರ ಜೀವನದಲ್ಲಿ ಹಣಿಕಿಕ್ಕುವಂತಿದೆ. ವರುಷದ ಮುಕ್ಕಾಲು ಅವಧಿ ಅತ್ಯಂತ ಶುಭ ಫಲದಾಯಕ. ನವಮ, ಗುರುವಿನ ಫಲದೊರೆಯುದಲ್ಲದೇ ವರುಷಾಂತ್ಯದವರೆಗೂ ಲಾಭದಾಯಕ ಹನ್ನೊಂದನೆಯ ಶನಿಯ ಶುಭಫಲವಂತೂ ದೊರೆಯುವದು. ಹೀಗೆ ಎರಡು ಪ್ರಬಲ ಗ್ರಹಗಳ ಬೆಂಬಲ ಪಡೆದ ಈ ರಾಶಿಯವರು ತುಂಬ ಸುದೈವಿಗಳೇ ಸರಿ; ಬಹುದಿನಗಳ ಅವರ ಆಶೆ-ಆಕಾಂಕ್ಷೆಗಳು ಈಡೇರುವವು. ಆರೋಗ್ಯ, ವರುಷದ ಮುಕ್ಕಾಲು ಅವಧಿಯವರೆಗೆ ಚನ್ನಾಗಿರುವದಾದರೂ ಡಿಶೆಂಬರ ೧೬ರಿಂದ ಫೆಬ್ರುವರಿ ೧೨, ಏಪ್ರಿಲ್ ೧೨ ರಿಂದ ಮೇ ೧೪ ಹಾಗೂ ಅಗಸ್ಟ ೧೬ರಿಂದ ಸಪ್ಟೆಂಬರ ೧೬ರವರೆಗಿನ ಈ ನಾಲ್ಕು ತಿಂಗಳ ಕಾಲ ಮಾತ್ರ ಶಾರೀರಿಕ ಪೀಡೆ, ಉಂಟಾಗಬಹುದಾಗಿದೆ. ಆರ್ಥಿಕ ಸ್ಥಿತಿ ತೃಪ್ತಿಕರವಿದ್ದು ಬರಬೇಕಾಗಿದ್ದ ಹಣವು ನಿರೀಕ್ಷೆಯಂತೆ ಸಾಕಷ್ಟು ಪ್ರಮಾಣದಲ್ಲಿ ಬರುವದಲ್ಲದೇ ಅಕ್ಟೋಬರ ೨೪ ರಿಂದ ಡಿಶೆಂಬರ ೧೫. ಫೆಬ್ರುವರಿ ೧೨ರಿಂದ ಏಪ್ರಿಲ್ ೧೨ ಹಾಗೂ ಮೇ ೧೬ರಿಂದ ಅಗಸ್ಟ ೧೪ರವರೆಗಿನ ಕಾಲವಲ್ಲಿ ದತ್ತಕ, ವಾರಸಾ, ಬಕ್ಷಿಸ. ಬಹುಮಾನ. ಸಟ್ಟಾ ಲಾಟರಿ, ಕಮೀಶನ್ ಮೊದಲಾದ ಮೂಲದಿಂದ ಆಕಸ್ಮಿಕ ಧನಲಾಭವುಂಟು. ಕಳೆದ ಅನೇಕ ವರುಷಗಳಿಂದ ಅರ್ಧಕ್ಕೆ ನಿಂತ ಕಾರ್ಯಗಳೆಲ್ಲವೂ ವೇಲ್ಯಾಣಿಸಿದ ಅವಧಿಯಲ್ಲಿ ನೆರವೇರಿ ಸುಖ ಸೌಭಾಗ್ಯಗಳು ಬೆಂಬತ್ತಿ ಬರುವವು

ದಾವೆ, ಫಿರ್ಯಾದೆ, ಸ್ಪರ್ಧೆ ಕೋರ್ಟ ಕಛೇರಿಗಳ ಕಾರ್ಯದಲ್ಲಿ ಖಂಡಿತವಾಗಿಯೂ ಈ ರಾಶಿಯವರಿಗೆ ಈ ವರುಷ ಜಯ ಕಟ್ಟಿಟ್ಟದ್ದು. ಅದರಲ್ಲಿಯೂ ಫೌಜದಾರಿ ವ್ಯಾಜ್ಯಗಳಿಗೆ ಪೂರ್ವಾರ್ಧದಲ್ಲಿಯೂ ದಿವಾಣಿವಾಜ್ಯಗಳಿಗೆ ಉತ್ತರಾರ್ಧದಲ್ಲಿಯೂ ರಾಜಕೀಯ ಹಾಗೂ ನೌಕರರಿಗೆ ಸಂಬಂಧಿಸಿದ ವ್ಯಾಜ್ಯಗಳಿಗೆ ವರುಷದ ಮಧ್ಯದಲ್ಲಿಯೂ ಜಯ ಲಭಿಸುವದು.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಪ್ರಗತಿದಾಯಕವಿರುವದಲ್ಲದೆ ಕಳೆದ ವರುಷದ ಅಸ್ಥಿರತೆ ದೂರಾಗುವದು. ವರಿಷ್ಠರ ಸಹಾಯ ಸಹಕಾರ ಪೂರ್ಣ ಲಭಿಸುವದಲ್ಲದೆ. ನವ್ಹಂಬರ ೧೪ರಿಂದ ಡಿಶೆಂಬರ ೧೫. ಫೆಬ್ರುವರಿ ೧೨ ರಿಂದ ಏಪ್ರಿಲ್ ೧೨. ಮೇ ೧೬ರಿಂದ ಅಗಸ್ಟ ೧೬ರ ವರೆಗಿನ ಈ ಆರು ತಿಂಗಳ ಕಾಲ ಅತ್ಯಂತ ಶುಭ ಹಾಗೂ ಅನುಕೂಲವಾಗಿದೆ. ಈ ಅವಧಿಯಲ್ಲಿ ನೌಕರಿಯಲ್ಲಿ ಬಡತಿ. ಅನಕೂಲ ಜಾಗೆಗೆ ಬದಲಿ. ಎರಡು ಹುದ್ದೆಗಳ ಕಾರ್ಯ ನಿರ್ವಹಿಸುವಿಕೆ. ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ. ಹಂಗಾಮಿ ನೌಕರರಿಗೆ ಕಾಯಂ ಆಗುವಿಕೆ ಮೊದಲಾದ ಶುಭಘಟನೆಗಳು ಜರುಗುವವು. ಈ ರಾಶಿಯ ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರ, ಪ್ರವಾಸಿ ಕೆಲಸಗಾರ, ಶ್ರಮಜೀವಿ. ಮಶಿನರಿ ಕೆಲಸಗಾರ, ಗಿರಣಿ ಕಾರಖಾನೆಗಳ ಕೆಲಸಗಾರರಿಗೆಲ್ಲ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಅದರಲ್ಲಿಯೂ ನವ್ಹಂಬರ ೧೬ರಿಂದ ಡಿಶೆಂಬರ ೧೫, ಫೆಬ್ರುವರಿ ೧೨ರಿಂದ ಏಪ್ರಿಲ್ ೧೨ ಹಾಗೂ ಮೇ ೧೬ರಿಂದ ಅಗಸ್ಟ ೧೬ರ ವರೆಗಿನ ಈ ಆರು ತಿಂಗಳ ಕಾಲ ಶುಭದಾಯಕವಿದ್ದು ಈ ಅವಧಿಯಲ್ಲಿ ಅವರ ಅನೇಕ ಬೇಡಿಕೆಗಳು ಈಡೇರುವವು. ಹೆಚ್ಚಿನ ಪ್ರಮಾಣದ ಬೋನಸ್, ಸಿಗುವದಲ್ಲದೆ ಇನಕ್ರೀಮೆಂಟದಲ್ಲಿ ಹೆಚ್ಚಳವಾಗುವದು.

ಈ ರಾಶಿಯ ಲೇಖಕ, ಕಲಾವಿದ, ಸಾಹಿತಿ, ಪತ್ರಿಕೋದ್ಯಮಿ. ಶಿಕ್ಷಕ. ಅಧ್ಯಾಪಕ, ಡಾಕ್ಟರ ವಕೀಲ ನ್ಯಾಯಾಧೀಶ, ಕರಣಿಕ. ಮೊದಲಾದ ಬುದ್ಧಿಜೀವಿಗಳಿಗೆ ನವಮಗುರುವಿನಿಂದಾಗಿ ಈ ವರುಷ ಪ್ರಗತಿದಾಯಕವಿದೆ. ಉದ್ಯೋಗದಲ್ಲಿ ಪ್ರಗತಿ, ಸ್ಥಿರತೆಯುಂಟು. ಅಕ್ಟೋಬರ ೨೪ರಿಂದ ಡಿಶೆಂಬರ ೧೫, ಜನೇವರಿ ೧೪ರಿಂದ ಏಪ್ರಿಲ್ ೧೨, ಮೇ ೧೬ರಿಂದ ಅಗಸ್ಟ ೧೬ರ ವರೆಗಿನ ಅವಧಿ ಅತ್ಯಂತ ಶುಭದಾಯಕ. ಈ ಕಾಲವಲ್ಲಿ ಸರಕಾರ ಹಾಗು ಸಂಘ ಸಂಸ್ಥೆಗಳಿಂದ ಪ್ರಶಸ್ತಿ ಪದಕ ಬಿರುದುಗಳು ಲಭಿಸುವವು. ವಿಶೇಷ ಧನಪ್ರಾಪ್ತಿಯಾಗಿ ವಾಹನ ಸೌಖ್ಯ, ಪರದೇಶ ಪರ್ಯಟನ ಸ್ಥಾವರ ಇಸ್ಟೇಟ ಸಂಪಾದನೆ ಇವೇ ಮೊದಲಾದ ಸ್ಮರಣೀಯ ಘಟನೆಗಳು ಜರುಗುತ್ತವೆ.

ಈ ರಾಶಿಯ ಸ್ವತಂತ್ರ ಉದ್ಯೋಗ ವ್ಯಾಪಾರಸ್ಥರು ಉದ್ಯಮದಾರ. ಚಾಳ. ಟಾಕೀಜ. ಹೋಟೇಲ ಗಿರಣಿ, ಕಾರಖಾನೆಗಳ ಮಾಲಕ ವರ್ಗದವರಿಗೆ ನವಮ ಗುರು ಹಾಗು ಹನ್ನೊಂದನೆಯ ಶನಿಯ ಮೂಲಕ ಪ್ರೋತ್ಸಾಹದಾಯಕವಾಗಿದೆ. ಕಳೆದ ವರುಷ ಎದುರಾಗಿದ್ದ ನೌಕರರ ಸಮಸ್ಯೆಗೆ ಪರಿಹಾರ ದೊರೆತು ಸರಕಾರದ ನಿಬಂಧನೆಗಳು ದೂರಾಗುವವು. ಇದೂ ಅಲ್ಲದೆ ಅಕ್ಟೋಬರ ೨೪ರಿಂದ ಡಿಶೆಂಬರ್ ೧೫, ಫೆಬ್ರುವರಿ ೧೨ರಿಂದ ಏಪ್ರಿಲ್ ೧೨ ಹಾಗೂ ಮೇ ೧೬ರಿಂದ ಅಗಸ್ಟ ೧೬ರವರೆಗಿನ ಕಾಲದಲ್ಲಿ ಉದ್ಯೋಗದಲ್ಲಿ ಲಾಭವಾಗಿ ಹೇರಳ ಹಣ ಸಂಪಾದನೆಯಾಗುವದು. ಹೊಸ ಉದ್ಯೋಗ ಕೈಕೊಳ್ಳುವಿಕೆ, ಅಥವಾ ಇದ್ದ ಉದ್ಯೋಗದಲ್ಲಿ ಶಾಖೆಗಳನ್ನು ಪ್ರಾರಂಭಿಸುವ ಉದ್ಯೋಗಕ್ಕೆ ಬೇಕಾಗುವ ಹೊಸ ಉಪಕರಣಗಳನ್ನು ಕೊಳ್ಳುವ ಇಲ್ಲವೇ ನವೀಕರಿಸುವ ಮೊದಲಾದ ಪ್ರಗತಿದಾಯಕ ಸಂಗತಿಗಳು ಜರುಗುವವು. ಈ ರಾಶಿಯ ಕೃಷಿಕ ವರ್ಗದವರಿಗೆ ಈ ವರ್ಷ ಅತ್ಯಂತ ಪ್ರಗತಿದಾಯಕವಾಗಿದೆ. ಹನ್ನೊಂದನೆಯ ಶನಿಯು ಪ್ರೋತ್ಸಾಹದಾಯಕನಿದ್ದು ನಿರೀಕ್ಷೆಗಿಂತಲೂ ಅಧಿಕ ಬೆಳೆ ಬರುವದರಿಂದ ಹಿಂದಿನ ಸಾಲಗಳೆಲ್ಲ ತೀರಿಹೋಗಿ ಹೊಸದಾಗಿ ಹೊಲ, ಮನೆ, ಟ್ರಕ್, ಟ್ರಾಕ್ಟರ್, ಪಂಪಸೆಟ್, ದನ ಕರುಗಳನ್ನು ಕೊಳ್ಳುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಬರುವದು.

ಕಳೆದ ಅನೇಕ ವರುಷಗಳಿಂದ ಗೃಹಸ್ಥಾಶ್ರಮಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ ವಧೂ

ವರೆಗೆ ನವಮ ಗುರುವಿನಿಂದಾಗಿ ಈ ವರುಷ ಅವರ ಮನೋರಥ ಈಡೇರುವವುದು. ಅದರಲ್ಲಿಯೂ ಅಕ್ಟೋಬರ ೨೪ರಿಂದ ಡಿಶೆಂಬರ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨ ಹಾಗೂ ಮೇ ೧೫ರಿಂದ ಅಗಸ್ಟ ೧೫ರ ಅವಧಿಯಲ್ಲಿ ವಿವಾಹ ಜರಗುವದು. ಗೃಹಿಣಿಯರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿದ್ದು ಒಡೆದು ಹೋದ ಏಕತ್ರ ಕುಟುಂಬ ಮತ್ತೆ ಒಂದಾಗುವದು. ಆಪ್ತೇಷ್ಟರಲ್ಲಿ ಉಂಟಾಗಿದ್ದ ತಪ್ಪು ತಿಳುವಳಿಕೆ ದೂರಾಗಿ ಮತ್ತೆ ಪ್ರೀತಿ ವಿಶ್ವಾಸ ಕುದುರುವುದು. ಇದೂ ಅಲ್ಲದೇ ಅಕ್ಟೋಬರ ೨೪ರಿಂದ ಡಿಶೆಂಬರ್ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨ ಮತ್ತು ಮೇ ೧೫ರಿಂದ ಅಗಸ್ಟ ೧೫ರ ಅವಧಿಯಲ್ಲಿ ಬೆಲೆಯುಳ್ಳ ವಸ್ತು ಒಡವೆಗಳನ್ನು ಖರೀದಿಸುವ, ತೀರ್ಥಯಾತ್ರಾ ಸಂದರ್ಶನ, ನೂತನ ಗೃಹಪ್ರವೇಶ, ಮಂಗಲ ಕಾರ್ಯ ಜರಗುವ ಮತ್ತು ಪರದೇಶ ಪರ್ಯಟನಗಳಂಥ ಸ್ಮರಣೀಯ ಘಟನೆಗಳು ಸಂಭವಿಸುವವು. ಈ ರಾಶಿಯ ಗರ್ಭಿಣಿಯರಿಗೆ ಈ ವರುಷದ ಮುಕ್ಕಾಲು ಅವಧಿ ಶುಭದಾಯಕವಿದೆ. ಡಿಶೆಂಬರ್ ೧೫ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಮೇ ೧೪, ಹಾಗೂ ಅಗಸ್ಟ ೧೫ರಿಂದ ಸಪ್ಟೆಂಬರ ೧೬ರ ಅವಧಿಯಲ್ಲಿ ಹೆರಿಗೆಯಾದರೆ ಕಷ್ಟಕರ, ಹಾಗು ಶಸ್ತ್ರಕ್ರಿಯೆ ಅನಿವಾರ್ಯವಾಗುವದು. ಉಳಿದ ಎಂಟು ತಿಂಗಳ ಕಾಲದಲ್ಲಿ ಹೆರಿಗೆ ಆದರೆ ಸುಖಪ್ರಸವ ಆಗುವದು.

ಅನೇಕ ಗ್ರಹಗಳ ಬೆಂಬಲ ಪಡೆದ ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷ ಅತ್ಯಂತ ಸ್ಮರಣೀಯವಾದುದು. ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸಿ ಅನೇಕ ಸಂಘ ಸಂಸ್ಥೆಗಳ ಪದಾಧಿಕಾರಿಗಳಾಗ ಬಲ್ಲರೇ ಗೌರವಾನ್ವಿತ ಸ್ಥಾನ ಮಾನ ಅಧಿಕಾರ ಪಡೆದು ಜಿಲ್ಲಾ, ರಾಜ್ಯ, ರಾಷ್ಟ್ರಮಟ್ಟದ ಗಣ್ಯ ವ್ಯಕ್ತಿಗಳಾಗುವದರಲ್ಲಿ ಸಂದೇಹವಿಲ್ಲ. ಶತ್ರುಗಳ ಮಿತ್ರರಾಗುವದರಿಂದ ಈ ವರುಷದಲ್ಲಿ ಜರುಗಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದಲ್ಲಿ ಅವಿರೋಧ ಆಯ್ಕೆ ಇಲ್ಲವೇ ಅತ್ಯಧಿಕ ಬಹುಮತದಿಂದ ಆಯ್ಕೆಯಾಗುವರು. ಆದರೆ ಡಿಶೆಂಬರ ೧೫ ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಮೇ ೧೪ ಮತ್ತು ಅಗಸ್ಟ ೧೫ರಿಂದ ಸಪ್ಟೆಂಬರ ೧೬ರವರೆಗಿನ ಈ ನಾಲ್ಕು ತಿಂಗಳ ಕಾಲದಲ್ಲಿ ಚುನಾವಣೆಗೆ ಸ್ಪರ್ಧಿಸಿದರೆ ಸ್ಪರ್ಧೆ ತೀವ್ರವಾದರೂ ಜಯ ಖಂಡಿತ.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರುಷದ ನವಮ ಗುರುವಿನ ಮೂಲಕ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಕಳೆದ ವರುಷ ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರಿಯುವದು. ಕಳೆದು ಕೊಂಡ ಶಿಷ್ಯವೃತ್ತಿ ಮತ್ತೆ ಲಭಿಸುವದು. ಹೆಚ್ಚಿನ ಶಿಕ್ಷಣಕ್ಕಾಗಿ ಇಲ್ಲವೇ ಸಂಶೋಧನೆಗಾಗಿ ವಿದೇಶ ಪ್ರವಾಸ ಕೈಕೊಳ್ಳಬಹುದಾಗಿದೆ. ಅಕ್ಟೋಬರ ೨೪ರಿಂದ ಡಿಶೆಂಬರ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨ ಹಾಗೂ ಮೇ ೧೫ರಿಂದ ಅಗಸ್ಟ ೧೫ರ ನಡುವೆ ಜರಗುವ ಪರೀಕ್ಷೆಗೆ ಕಟ್ಟುವವರು ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣರಾಗುವರು. ಆದರೆ ಡಿಶೆಂಬರ ೧೫ರಿಂದ ಫೆಬ್ರುವರಿ ೧೨, ಹಾಗೂ ಎಪ್ರಿಲ್ ೧೨ರಿಂದ ಮೇ ೧೪ ಮತ್ತು ಅಗಸ್ಟ ೧೫ರಿಂದ ಸಪ್ಟೆಂಬರ ೧೬ರ ಒಳಗೆ ಜರಗುವ ಪರೀಕ್ಷೆಗೆ ಕಟ್ಟುವವರು ತೇರ್ಗಡೆಯಾಗಲು ಪರಿಶ್ರಮ ಪಡಬೇಕಾಗುವದು.



## ತುಲಾ

ಈ ರಾಶಿಯವರಿಗೆ ಈ ವರುಷ ಉದ್ಯೋಗ ಆರ್ಥಿಕ ದೃಷ್ಟಿಯಿಂದ ಪ್ರಗತಿದಾಯಕವಾದರೆ ಕೌಟುಂಬಿಕ, ಶೈಕ್ಷಣಿಕ ದೃಷ್ಟಿಯಿಂದ ನಿರುತ್ಸಾಹದಾಯಕವಾಗಿದೆ. ಆರೋಗ್ಯ ದೃಷ್ಟಿಯಿಂದ ಶಾರೀರಿಕ ಪೀಡೆಗಿಂತ ಮಾನಸಿಕ ತೊಂದರೆಗಳು ಬಹಳ.

ಈ ರಾಶಿಯವರಿಗೆ ಕಳೆದ ವರುಷದಿಂದ ಇರುವ ಅತ್ಯಂತ ಶುಭಫಲದಾಯಕ ಹತ್ತನೆಯ ಶನಿಯು ಈ ವರುಷವೂ ಶುಭಫಲವನ್ನು ಕೊಡುತ್ತಾನೆ. ಆದರೆ ಕಳೆದ ವರುಷದಿಂದ ಬಂದ ಅಷ್ಟಮ ಗುರುವಿನ ಅನಿಷ್ಟತೆ ಈ ವರುಷದ ಮುಕ್ಕಾಲು ಅವಧಿಯವರೆಗೂ ಮುಂದುವರಿಯುತ್ತದೆ. ಹೀಗೆ ಎರಡು ಪ್ರಬಲ ಗ್ರಹಗಳಾದ ಗುರು ಶನಿಯರಲ್ಲಿ ಒಬ್ಬನು ಅತ್ಯಂತ ಶುಭದಾಯಕನಾದರೆ ಮತ್ತೊಬ್ಬ ಅತ್ಯಂತ ಅಶುಭಫಲದಾಯಕನಾಗಿರುವದರಿಂದ ಈ ರಾಶಿಯವರಿಗೆ ಈ ವರುಷ ಮಿಶ್ರಫಲವಿದೆ. ಈ ರಾಶಿಯವರ ಆರೋಗ್ಯ, ವರುಷದ ಮುಕ್ಕಾಲು ಅವಧಿಯವರೆಗೆ ಚೆನ್ನಾಗಿರುವದಾದರೆ ಅಕ್ಟೋಬರ್ ೨೪ರಿಂದ ನವ್ಹಂಬರ ೧೪, ಜನೇವರಿ ೧೪ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಜೂನ ೧೫, ಹಾಗೂ ಸಪ್ಟೆಂಬರ ೧೬ರಿಂದ ಅಕ್ಟೋಬರ ೧೬ರವರೆಗಿನ ಈ ನಾಲ್ಕು ತಿಂಗಳು ಮಾತ್ರ ಕಿಂಚಿತ್ ತೊಂದರೆಯಾಗಬಹುದಾಗಿದೆ. ಇದು ಶಾರೀರಿಕ ಪೀಡೆಯಾಗಿರದೆ ಶತ್ರುಗಳ ಕಾಟದಿಂದ ಉಂಟಾಗುವ ಮನೋವೇದನೆ ಎನ್ನಬಹುದು. ಅಪಘಾತದ ಭಯವಿರುವದರಿಂದ ಚಾಲಕ ವರ್ಗ ಹಾಗು ಮಶೀನರಿ ಕೆಲಸಗಾರರು ಈ ಕಾಲದಲ್ಲಿ ಎಚ್ಚರಿಕೆ ವಹಿಸಬೇಕು. ಆರ್ಥಿಕ ದೃಷ್ಟಿಯಿಂದ ಪರಿಸ್ಥಿತಿ ತೃಪ್ತಿಕರವಿರುವದಲ್ಲದೆ ನವ್ಹಂಬರ ೧೫ ರಿಂದ ಜನೇವರಿ ೧೪ ಫೆಬ್ರುವರಿ ೧೨ ರಿಂದ ಎಪ್ರಿಲ್ ೧೨ ಹಾಗೂ ಜೂನ ೧೫ರಿಂದ ಸಪ್ಟೆಂಬರ ೧೫ರವರೆಗಿನ ಈ ಏಳು ತಿಂಗಳುಗಳ ಅವಧಿಯಲ್ಲಿ ನಿರೀಕ್ಷಿಸಿದ ಮೂಲದಿಂದ ಹಣ ಬರುವದಲ್ಲದೇ ದತ್ತಕ, ವಾರಸಾ, ಬಕ್ಷೀಸ, ಬಹುಮಾನ, ಲಾಟರಿ, ಕಮೀಶನ, ಮೊದಲಾದ ಮೂಲದಿಂದ ಆಕಸ್ಮಿಕ ಧನಲಾಭವಾಗಿ ಸಾಲ ಶೂಲ ತೀರುವವು.

ಅಷ್ಟಮಗುರು ಹಾಗೂ ಹನ್ನೆರಡನೆ ರಾಹುವಿನಿಂದಾಗಿ ಈ ವರುಷ ವಾದ ಸ್ಪರ್ಧೆ ಕೋರ್ಟಿನ ವ್ಯವಹಾರದಿಂದ ದೂರ ಇದ್ದಷ್ಟು ಕ್ಷೇಮ; ಇಲ್ಲವೇ ರಾಜೀ ಮನೋಭಾವನೆಯಿಂದ ವರ್ತಿಸಿದಲ್ಲಿ ಲಾಭವಾಗುವದು. ವ್ಯಾಜ್ಯಗಳು ಅನಿವಾರ್ಯವಾದಲ್ಲಿ ದಾಖಲ ಮಾಡಿ ಮುದ್ದತೆ ತೆಗೆದುಕೊಳ್ಳುತ್ತ ಹೋಗುವದು ಹಿತಕರ.

ಈ ರಾಶಿಯ ನೌಕರವರ್ಗದವರಿಗೆ ಆರ್ಥಿಕ ದೃಷ್ಟಿಯಿಂದ ಈ ವರುಷ ಶುಭದಾಯಕವಾದರೆ ಸ್ಥಾನ ಮಾನ ಅಧಿಕಾರ, ದೃಷ್ಟಿಯಿಂದ ಪ್ರತಿಕೂಲವಿದೆ. ನವ್ಹಂಬರ ೧೫ರಿಂದ ಜನೇವರಿ ೧೪, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨ ಹಾಗೂ ಜುಲೈ ೧೫ರಿಂದ ಸಪ್ಟೆಂಬರ ೧೬ರವರೆಗಿನ ಈ ಆರು ತಿಂಗಳುಗಳು ಯಶೋದಾಯಕ. ಈ ಅವಧಿಯಲ್ಲಿ ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ, ನೌಕರಿಯಲ್ಲಿ ಬಡತಿ ಸ್ಥಾನ ಮಾನ ದೊರೆಯುವಿಕೆ, ಇಚ್ಛಿತ ಸ್ಥಳಕ್ಕೆ ಬದಲಿ ಮೊದಲಾದ ಶುಭ ಘಟನೆಗಳು ಜರಗುವವು. ಹಂಗಾಮಿ ನೌಕರದಾರರಿಗೆ ಈ ವರುಷವೂ ಅಸ್ಥಿರತೆಯುಂಟು. ಜನೇವರಿ ೧೪ರಿಂದ ಫೆಬ್ರುವರಿ ೧೨ ಎಪ್ರಿಲ್ ೧೨ ರಿಂದ ಜೂನ ೧೪, ಸಪ್ಟೆಂಬರ ೧೬ರಿಂದ ಅಕ್ಟೋಬರ ೧೬ರವರೆಗಿನ ಅವಧಿಯಲ್ಲಿ ಈ ರಾಶಿಯ ನೌಕರದಾರರಿಗೆ ತೀರ ಪ್ರತಿಕೂಲವಿದೆ. ಅನಪೇಕ್ಷಿತ ಸ್ಥಳಕ್ಕೆ ಬದಲಿ, ಹಿಂಬಡತಿ, ಅಪಘಾತಾದಿಗಳು ಸಂಭವಿಸುವಿಕೆ, ವರಿಷ್ಠರ ಅಸಹನೀಯ ಕಿರುಕುಳದಿಂದ ನೌಕರಿಗೆ ತಿಲಾಂಜಲಿ ಕೊಡುವಷ್ಟರಮಟ್ಟಿಗೆ ಪ್ರತಿಕೂಲ ಸನ್ನಿವೇಶವನ್ನು ಎದುರಿಸಬೇಕಾಗುತ್ತದೆ. ತಾಳಿದವ ಬಾಳಿಯಾನು ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳುವದು ಕ್ಷೇಮಕರ. ಶನಿ ಶುಭದಾಯಕನಿರುವದರಿಂದ ಈ ರಾಶಿಯ ಗಿರಣಿ ಕಾರಖಾನೆಗಳ ಕಾರ್ಮಿಕರು, ಶ್ರಮಜೀವಿ, ತಾಂತ್ರಿಕ ಕೆಲಸಗಾರ, ಸಂಚಾರಿ ಕೆಲಸಗಾರರಿಗೆಲ್ಲ ಈ ವರುಷ ಪ್ರಗತಿದಾಯಕವಿದೆ. ಅದರಲ್ಲಿಯೂ ನವ್ಹಂಬರ ೧೫ರಿಂದ ಜನೇವರಿ ೧೪, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨ ಹಾಗೂ ಜುಲೈ ೧೫ರಿಂದ ಸಪ್ಟೆಂಬರ ೧೬ರವರೆಗಿನ ಅವಧಿಯಂತೂ ಅತ್ಯಂತ ಶುಭದಾಯಕವಾಗಿದ್ದು. ಈ ಕಾಲದಲ್ಲಿ ಅವರ ಅನೇಕ ಬೇಡಿಕೆಗಳು ಈಡೇರುವವು ಇಮ್ಮಡಿ ಇನ್‌ಕ್ರೀಮೆಂಟ್ ಹೆಚ್ಚಿನ ಬೋನಸ್ಸು ದೊರೆತು ದ್ರವ್ಯಾನುಕೂಲತೆಯಾಗಬಹುದಾಗಿದೆ.

ಈ ರಾಶಿಯ ಕರಣಿಕ, ಶಿಕ್ಷಕ, ಅಧ್ಯಾಪಕ, ಸಾಹಿತಿ, ಕಲಾವಿದ, ವಕೀಲ, ಡಾಕ್ಟರ, ಪತ್ರಿಕೋದ್ಯಮಿ, ನ್ಯಾಯಾಧೀಶ ಮೊದಲಾದ ಬುದ್ಧಿಜೀವಿಗಳಿಗೆ ಎಂಟನೆಯ ಗುರುವಿನಿಂದಾಗಿ ಹೇಳಿಕೊಳ್ಳುವಷ್ಟು ಪ್ರಗತಿದಾಯಕವಾಗಿಲ್ಲ. ಆರ್ಥಿಕ ದೃಷ್ಟಿಯಿಂದ ಹಾನಿಕರವಲ್ಲವಾದರೂ ಸ್ಥಾನಮಾನ ಅಧಿಕಾರಕ್ಕೆ ಎರವಾಗಬೇಕಾಗುತ್ತದೆ. ಸರಕಾರ ಹಾಗೂ ಸಂಸ್ಥೆಗಳಿಂದ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಈ ರಾಶಿಯ ಕೃಷಿಕರಿಗೆ ಈ ವರುಷ ಅತ್ಯಂತ ಉತ್ತಮವಾಗಿದ್ದು ನಿರೀಕ್ಷೆಗಿಂತ ಅಧಿಕ ಬೆಳೆ ಬಂದು ಹಿಂದಿನ ಸಾಲವೆಲ್ಲ ತೀರಿ ಹೋಗಿ ಹೊಸದಾಗಿ ಜಾಗೆ, ಮನೆ, ಹೊಲಗಳನ್ನು ಖರೀದಿಸಬಹುದಾಗಿದೆಯಲ್ಲದೆ ಬೇಸಾಯಕ್ಕೆ ಬೇಕಾಗುವ ದನ-ಕರು, ಟ್ರ್ಯಾಕ್ಟರ್, ಪಂಪಸೆಟ್ಟು ಮೊದಲಾದ ಕೃಷಿ ಉಪಕರಣಗಳನ್ನು ಖರೀದಿಸುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಬರುತ್ತದೆ.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರು, ಕಮೀಶನ್ ಏಜೆಂಟ, ಹಂಚಿಕೆದಾರ, ಗಿರಣಿ ಕಾರಖಾನೆ ಚಾಳ, ಟಾಕೀಜ, ಹೋಟೆಲುಗಳು ಮಾಲಕ ವರ್ಗದವರಿಗೆ ಆರ್ಥಿಕ ದೃಷ್ಟಿಯಿಂದ ಪ್ರಗತಿದಾಯಕವಿದ್ದರೂ ಅಷ್ಟಮ ಗುರುವಿನಿಂದಾಗಿ

ನೌಕರರ ಸಮಸ್ಯೆಗಳೊಂದಿಗೆ ಸರಕಾರದ ನಿರ್ಬಂಧನೆ ಗಳನ್ನು ಎದುರಿಸಬೇಕಾಗುವದು.

ಈ ರಾಶಿಯ ವಧೂವರರಿಗೆ ಅಷ್ಟಮ ಗುರು ಪ್ರೋತ್ಸಾಹದಾಯಕನಾಗಿಲ್ಲ. ನವ್ಹಂಬರ ೧೫ ರಿಂದ ಜನೇವರಿ ೧೪ ಫೆಬ್ರುವರಿ ೧೨ರಿಂದ ಏಪ್ರಿಲ್ ೧೨ರವರೆಗಿನ ಅವಧಿ ಮಾತ್ರ ಶುಭದಾಯಕ. ಈ ಅವಧಿಯಲ್ಲಿ ಕಂಕಣಬಲ ಕೂಡಿ ಬಂದು ವಿವಾಹ ಸಾಂಗವಾಗುವದು. ಈ ನಾಲ್ಕು ತಿಂಗಳ ಹೊರತಾಗಿ ಮಿಕ್ಕ ಕಾಲದಲ್ಲಿ ವಿವಾಹ ನಿಶ್ಚಯ ವಾಗಿದ್ದರೆ ಮುರಿದುಹೋಗಬಹುದಾಗಿದೆ. ಇಲ್ಲವೆ ಮುಂದೂಡಬಹುದಾಗಿದೆ. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೆ ಅಷ್ಟಮ ಗುರುವಿನಿಂದಾಗಿ ಅಪ್ರೇಷ್ಟರಲ್ಲಿ, ವಿರಸ, ಪ್ರತಿನಿತ್ಯದ ಗೃಹಕಲಹ ದಿಂದಾಗಿ ಮಾನಸಿಕ ನೆಮ್ಮದಿ ದೊರೆಯದು. ಅದ ರಲ್ಲಿಯೂ ಅಕ್ಟೋಬರ ೨೪ರಿಂದ ನವ್ಹಂಬರ ೨೪. ಏಪ್ರಿಲ್ ೧೨ರಿಂದ ಜೂನ ೧೫ ಹಾಗೂ ಸಪ್ಟೆಂಬರ ೧೫ರಿಂದ ವರುಷಾಂತ್ಯದ ವರೆಗಿನ ಅವಧಿಯಲ್ಲಿ ಮನೆಯ ಪರಿಸ್ಥಿತಿ ಹದಗೆಡಬಹು ದಾಗಿದೆ. ಏಕತ್ರ ಕುಟುಂಬ ಒಡೆಯಬಹುದಾಗಿದೆ. ಆದರೆ ಆರ್ಥಿಕ ದೃಷ್ಟಿಯಿಂದ ಈ ವರುಷ ಪ್ರಗತಿ ದಾಯಕವಿದ್ದು, ಅದರಲ್ಲಿಯೂ ನವ್ಹಂಬರ ೨೪ರಿಂದ ಜನೇವರಿ ೧೩, ಫೆಬ್ರುವರಿ ೧೨ರಿಂದ ಏಪ್ರಿಲ್ ೧೨, ಮತ್ತು ಜುಲೈ ೧೫ರಿಂದ ಸಪ್ಟೆಂಬರ ೧೫ರವರೆಗಿನ ಅವಧಿಯಲ್ಲಿ ಬೆಲೆಯುಳ್ಳ ವಸ್ತುಗಳನ್ನು ಖರೀದಿ ಸುವ, ನೂತನಗೃಹಪ್ರವೇಶ ಮೊದಲಾದ ಶುಭ ಘಟನೆಗಳು ಜರಗುವವು. ಈ ರಾಶಿಯ ಗರ್ಭಿಣಿಯರಿಗೆ ಈ ವರುಷ ಅಷ್ಟಮ ಗುರುವಿನಿಂದಾಗಿ ಪ್ರತಿಕೂಲ ವಿದ್ದು ಹೆರಿಗೆಯು ನವ್ಹಂಬರ ೧೪ ರಿಂದ ಜನೇ ವರಿ ೧೪, ಫೆಬ್ರುವರಿ ೧೨ ರಿಂದ ಏಪ್ರಿಲ್ ೧೨ರವರೆಗಿನ ಅವಧಿಯಲ್ಲಾದರೆ ಮಾತ್ರ ಸುಖ ಪ್ರಸೂತಿ. ಮಿಕ್ಕ ಎಂಟು ತಿಂಗಳುಗಳಲ್ಲಾದರೆ ಹೆರಿಗೆ ತೊಂದರೆಯದು. ಶಸ್ತ್ರಕ್ರಿಯೆ ಅನಿವಾರ್ಯ ವಾಗಬಹುದು.

ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯ ಕರ್ತರಿಗೆ ಎಂಟನೆಯ ಗುರುವಿನಿಂದಾಗಿ ನಿರು ತ್ಸಾಹ. ಆದಾಗ್ಯೂ ನವ್ಹಂಬರ ೧೪ರಿಂದ ಜನೇವರಿ ೧೪, ಫೆಬ್ರುವರಿ ೧೨ರಿಂದ ಏಪ್ರಿಲ್ ೧೨, ಜುಲೈ ೧೫ರಿಂದ ಸಪ್ಟೆಂಬರ ೧೬ರ ವರೆಗಿನ ಆರು ತಿಂಗಳ ಕಾಲ ಇದ್ದುದರಲ್ಲಿಯೇ ಅನುಕೂಲ. ಗೌರವಾನ್ವಿತ ಸ್ಥಾನಮಾನ ಅಧಿಕಾರ ಪಡೆಯ ಬಹುದು. ಇದೇ ಅವಧಿಯಲ್ಲಿ ಚುನಾವಣೆ ನಡೆದರ ಸ್ಪರ್ಧೆ ತುರುಸಿನದಾದರೂ ಆಯ್ಕೆ ಖಂಡಿತ. ಆದರೆ ಜನೇವರಿ ೧೪ ರಿಂದ ಫೆಬ್ರುವರಿ ೧೨. ಏಪ್ರಿಲ್ ೧೨ ರಿಂದ ಜೂನ ೧೪, ಸಪ್ಟೆಂಬರ ೧೫ರಿಂದ ಅಕ್ಟೋಬರ ೧೬ರವರೆಗಿನ ಅವಧಿ ತೀರ ಪ್ರತಿಕೂಲ. ಮಿತ್ರರು ಶತ್ರುಗಳಾಗಿ ಮಿಥ್ಯಾಪವಾದಕ್ಕೆ ಗುರಿ ಯಾಗಬಹುದು. ಇಲ್ಲವೆ ಅವಿಶ್ವಾಸ ಸೂಚನೆಗೆ ಒಳಗಾಗಿ ಅಧಿಕಾರ ಗದ್ದುಗೆಯಿಂದ ಕೆಳಗೆ ಇಳಿಯ ಬಹುದಾಗಿದೆ. ಇದೇ ಅವಧಿಯಲ್ಲಿ ಜರಗಬಹು ದಾದ ಚುನಾವಣೆಯಲ್ಲಿ ಸ್ಪರ್ಧಿಸಿದಲ್ಲಿ ಇಡ ಗಂಟು ಕಳೆದುಕೊಂಡು ಅವಮಾನಕರ ಸನ್ನಿವೇಶವನ್ನು ಎದು ರಿಸಬೇಕಾಗುತ್ತದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಆರ್ಥಿಕ ದೃಷ್ಟಿ ಯಿಂದ ಪ್ರಗತಿದಾಯಕವಾಗಿದ್ದರೂ ಎಂಟನೆಯ ಗುರುವಿನಿಂದಾಗಿ ಮನೆಯ ವಾತಾವರಣ ಕಲು ಷಿತಗೊಳ್ಳುವದು. ಶಿಕ್ಷಕರ ಅವಕೃಪೆಯಿಂದಾಗಿ ಶಿಕ್ಷಣ ಮುಂದುವರಿಸುವದೇ ಕಠಿಣವಾಗುತ್ತದೆ. ನವ್ಹಂಬರ ೧೪ರಿಂದ ಜನೇವರಿ ೧೪. ಹಾಗೂ ಫೆಬ್ರುವರಿ ೧೨ರಿಂದ ಏಪ್ರಿಲ್ ೧೨ರ ವರೆಗಿನ ಈ ನಾಲ್ಕು ತಿಂಗಳ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟು ವವರು ಉಚ್ಚಶ್ರೇಣಿಯಲ್ಲಿ ತೇರ್ಗಡೆಯಾಗಿ ಪ್ರಶಸ್ತಿ ಪದಕ ಪಡೆಯಬಹುದಾದರೆ ಜನೇವರಿ ೧೪ರಿಂದ ಫೆಬ್ರುವರಿ ೧೨. ಏಪ್ರಿಲ್ ೧೨ರಿಂದ ಜೂನ್ ೧೫. ಸಪ್ಟೆಂಬರ ೧೬ರಿಂದ ಅಕ್ಟೋಬರ ೧೬ರ ವರೆಗಿನ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳ ಫಲಿತಾಂಶ ಸಂಶಯಾಸ್ಪದ.



## ವೃಶ್ಚಿಕ

ಶುಭ ಫಲದಾಯಕ ಏಳನೆಯ ಗುರು ಒಂಭತ್ತನೆಯ ಶನಿ ಹನ್ನೊಂದನೆಯ ರಾಹುವಿನಿಂದಾಗಿ ಈ ವರುಷ ಈ ರಾಶಿ ಯವರ ಜೀವನದಲ್ಲಿಯೇ ಸುವರ್ಣ ಕಾಲವಾಗಿದ್ದು ಎಲ್ಲ ದೃಷ್ಟಿಯಿಂದಲೂ ಅತ್ಯಂತ ಯಶೋದಾಯಕ. ಅವರೆಲ್ಲರ ಆಶೆ–ಆಕಾಂಕ್ಷೆಗಳು ಈಡೇರುತ್ತವೆ. ವಿಶಾಖಾ ಹಾಗೂ ಅನುರಾಧಾ ನಕ್ಷತ್ರದವರಿಗೆ ಶುಭ ಫಲದ ಪ್ರಮಾಣ ಹೆಚ್ಚಾದರೆ ಜ್ಯೇಷ್ಠಾ ದವರಿಗೆ ಕಡಿಮೆ.

ಈ ರಾಶಿಯವರ ಗ್ರಹಗತಿಯನ್ನು ಪರಾಮರ್ಶಿ ಸಿದಾಗ ಕಳೆದ ವರುಷದಿಂದಲೂ ಇರುವ ಒಂಭ ತ್ತನೆಯ ಶನಿ ಈ ವರುಷವೂ ಅದೇ ಸ್ಥಾನದಲ್ಲಿ ಮುಂದುವರೆದರೂ ವಿಶಾಖಾ ಅನೂರಾಧಾ ನಕ್ಷತ್ರ ದವರಿಗೆ ಹತ್ತನೇ ಶನಿಯಂತೆ ಹೆಚ್ಚು ಶುಭ ಫಲ ಕೊಡುವನು. ಈ ವರುಷದಲ್ಲಿರುವ ಏಳನೆಯ ಶುಭಗುರುವಿನ ಫಲವಂತೂ ವರುಷಾಂತ್ಯದವರೆಗೆ ಇರುವದು. ಇದೂ ಅಲ್ಲದೇ ಚೈತ್ರದಿಂದ ಅತ್ಯಂತ ಲಾಭದಾಯಕ ರಾಹುವಿನ ಆಗಮನವಾಗುವುದು. ಹೀಗೆ ಅನೇಕ ಗ್ರಹಗಳ ಬೆಂಬಲ ಪಡೆದ ಈ ರಾಶಿ ಯವರು ಸುದೈವಿಗಳೇ ಸರಿ. ಆದುದರಿಂದ ಬಹು ದಿನಗಳ ಆಶೆ– ಆಕಾಂಕ್ಷೆಗಳು ಈಡೇರುವವು. ಆರೋ ಗ್ಯವು ವರುಷದ ಮುಕ್ಕಾಲು ಅವಧಿಯವರೆಗೆ ಚೆನ್ನಾಗಿ ಇರುವದಾದರೂ ಅಕ್ಟೋಬರ ೨೪ರಿಂದ ಡಿಶೆಂಬರ ೧೫, ಫೆಬ್ರುವರಿ. ೧೨ರಿಂದ ಮಾರ್ಚ ೧೫, ಹಾಗೂ ಜೂನ ೧೫ರಿಂದ ಆಗಸ್ಟ ೧೫ರವರೆಗಿನ ಅವಧಿಯಲ್ಲಿ ಮಾತ್ರ ಕಿಂಚಿತ್ ಶಾರೀರಿಕ ಪೀಡೆ ಉಂಟಾಗಬಹುದಾಗಿದೆ. ಆರ್ಥಿಕ ಸ್ಥಿತಿ ಅತ್ಯಂತ ತೃಪ್ತಿಕರವಾಗಿದೆ. ಅದರಲ್ಲಿಯೂ ನವ್ಹಂಬರ ೧೫ರಿಂದ ಫೆಬ್ರುವರಿ ೧೨. ಏಪ್ರಿಲ್ ೧೨ರಿಂದ ಜೂನ ೧೫, ಅಗಸ್ಟ ೧೫ರಿಂದ ಅಕ್ಟೋಬರ ೧೬ರವರೆಗಿನ ಅವಧಿಯಲ್ಲಿ ದತ್ತಕ ವಾರಸಾ. ಬಕ್ಷೀಸ್. ಬಹುಮಾನ. ಸಟ್ಟಾ. ಲಾಟರಿ. ಕಮೀಶನ್ ಮೊದಲಾದ ಮೂಲದಿಂದ ಆಕಸ್ಮಿಕ ಧನಲಾಭವಾಗುವದರಿಂದ ಆರ್ಥಿಕ ಸ್ಥಿತಿ ಅತ್ಯಂತ ತೃಪ್ತಿಕರ. ಕಳೆದ ಅನೇಕ ವರುಷಗಳಿಂದ ಅರ್ಧಕ್ಕೆ ನಿಂತ ಕಾರ್ಯಗಳೆಲ್ಲ ಮೇಲ್ಕಾಣಿಸಿದ ಅವಧಿಯಲ್ಲಿ ಪೂರ್ತಿಗೊಳ್ಳುವವು. ಅದರಿಂದಾಗಿ ಮನಸ್ಸು ಸಂತಸದಿಂದ ಉಲಿಯುವುದು.

ದಾವೆ. ಫಿರ್ಯಾದ. ಸ್ಪರ್ಧೆ. ಕೋರ್ಟು ಕಚೇರಿ ಗಳ ಕಾರ್ಯದಲ್ಲಿ ಖಂಡಿತವಾಗಿಯೂ ಈ ರಾಶಿಯವ ರಿಗೆ ಈ ವರುಷ ಜಯ ಕಟ್ಟಿಟ್ಟದ್ದು. ಅದರಲ್ಲಿಯೂ ಫೌಜದಾರಿ. ವ್ಯಾಜ್ಯಗಳಿಗೆ ಪೂರ್ವಾರ್ಧದಲ್ಲಿಯೂ ದಿವಾಣಿ ವ್ಯಾಜ್ಯಗಳಿಗೆ ಮಧ್ಯದಲ್ಲಿಯೂ ರಾಜಕೀಯ

ಹಾಗೂ ನೌಕರಿಗೆ ಸಂಬಂಧಿಸಿದ ವ್ಯಾಜ್ಯಗಳಿಗೆ ಉತ್ತರಾರ್ಧದಲ್ಲಿಯೂ ಜಯ ಲಭಿಸುವದು.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಪ್ರಗತಿದಾಯಕವಿರುವದಲ್ಲದೆ ಕಳೆದ ವರುಷದ ಅಸ್ಥಿರತೆ ದೂರಾಗುವುದು. ವರಿಷ್ಠರ ಸಹಾಯ, ಸಹಕಾರ ಪೂರ್ಣ ಲಭಿಸುವವು. ನವ್ಹಂಬರ ೧೫ರಿಂದ ಫೆಬ್ರುವರಿ ೧೧. ಎಪ್ರಿಲ್ ೧೨ರಿಂದ ಮೇ ೧೪ ಜುಲೈ ೧೫ರಿಂದ ಅಕ್ಟೋಬರ ೧೬ರ ವರೆಗಿನ ಈ ಏಳು ತಿಂಗಳುಗಳ ಕಾಲ ಅತ್ಯಂತ ಶುಭ ಹಾಗೂ ಅನುಕೂಲಕರ. ಈ ಅವಧಿಯಲ್ಲಿ ನೌಕರಿಯಲ್ಲಿ ಬಡತಿ, ಅನುಕೂಲ ಜಾಗೆಗೆ ಬದಲಿ, ಎರಡು ಹುದ್ದೆಗಳ ಕಾರ್ಯ ನಿರ್ವಹಿಸಬಹುದಾದ ಸುಯೋಗವಿದೆ. ನಿರುದ್ಯೋಗಿಗಳಿಗೆ ಉದ್ಯೋಗ ಲಭ್ಯ. ಹಂಗಾಮಿ ನೌಕರರಿಗೆ ಕಾಯಂ ಆಗುವದು. ಇವೇ ಮೊದಲಾದ ಶುಭಘಟನೆಗಳು ಜರುಗುವವು.

ಈ ರಾಶಿಯ ಬಾಹ್ಯ ಮತ್ತು ತಾಂತ್ರಿಕ ಕೆಲಸಗಾರ. ಪ್ರವಾಸಿ ಕೆಲಸಗಾರ, ಗಿರಣಿ ಕಾರಖಾನೆಗಳ ಕಾರ್ಮಿಕರಿಗೆಲ್ಲ ಈ ವರುಷ ಪ್ರೋತ್ಸಾಹದಾಯಕವಿದೆ. ಅದರಲ್ಲಿಯೂ ನವ್ಹಂಬರ ೧೫ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಮೇ ೧೪. ಆಗಸ್ಟ ೧೫ರಿಂದ ಅಕ್ಟೋಬರ ೧೬ರ ವರೆಗಿನ ಈ ಆರು ತಿಂಗಳ ಕಾಲ ಅತ್ಯಂತ ಶುಭದಾಯಕವಾಗಿದ್ದು, ಈ ಅವಧಿಯಲ್ಲಿ ಅವರ ಅನೇಕ ಬೇಡಿಕೆಗಳು ಈಡೇರುವವು. ಹೆಚ್ಚಿನ ಪ್ರಮಾಣದಲ್ಲಿ ಬೋನಸ್ ಇಮ್ಮಡಿ ಇನ್‌ಕ್ರೀಮೆಂಟ ದೊರೆಯಬಹುದಲ್ಲದೆ ಅಧಿಕಾರಿಗಳ ಹಾಗು ಮಾಲಕರ ಸ್ನೇಹ ಸಹಕಾರ ವರ್ಧಿಸಿ ಪ್ರೀತಿ ವಿಶ್ವಾಸ ಕುದುರುವದು.

ಈ ರಾಶಿಯ ಸಾಹಿತಿ, ಲೇಖಕ, ಕಲಾವಿದ, ಕರಣಿಕ, ಪತ್ರಿಕೋದ್ಯಮಿ, ಶಿಕ್ಷಕ. ಅಧ್ಯಾಪಕ. ಡಾಕ್ಟರ, ವಕೀಲ, ನ್ಯಾಯಾಧೀಶ ಮೊದಲಾದ ಬುದ್ಧಿಜೀವಿಗಳಿಗೆ ಏಳನೆಯ ಗುರುವಿನಿಂದಾಗಿ ಈ ವರುಷ ಪ್ರಗತಿದಾಯಕವಿದೆ. ಉದ್ಯೋಗದಲ್ಲಿ ಸ್ಥಿರತೆ, ಮನ್ನಣೆ ದೊರೆಯುವದಲ್ಲದೇ ನವ್ಹಂಬರ ೧ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಮೇ ೧೪. ಜುಲೈ ೧೫ರಿಂದ ಅಕ್ಟೋಬರ ೧೬ರ ವರೆಗಿನ ಈ ಕಾಲದಲ್ಲಿ ಸರಕಾರ ಹಾಗೂ ಸಂಘ ಸಂಸ್ಥೆಗಳಿಂದ ಪ್ರಶಸ್ತಿ ಪದಕ ಬಿರುದು ಬಾವಲಿಗಳು ಲಭಿಸುವವು. ವಿಶೇಷ ಧನ ಪ್ರಾಪ್ತಿಯಾಗಿ. ವಾಹನ ಸೌಖ್ಯ, ಪರದೇಶ ಪರ್ಯಟನ. ಸ್ಥಾವರ ಇಸ್ಟೇಟ ಸಂಪಾದನೆ. ಮೊದಲಾದ ಸ್ಮರಣೀಯ ಘಟನೆಗಳು ಜರುಗುವವು.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥರು. ಕಮೀಶನ್ ಏಜಂಟ. ಹಂಚಿಕೆದಾರ, ಚಾಳ. ಟಾಕೀಜ. ಹೋಟೆಲ. ಗಿರಣಿ. ಕಾರಖಾನೆಗಳ ಮಾಲಕ ವರ್ಗದವರಿಗೆಲ್ಲ ಅನೇಕ ಗ್ರಹಗಳ ಬೆಂಬಲವಿದ್ದು, ಈ ವರುಷ ಪ್ರೋತ್ಸಾಹದಾಯಕವಿದೆ. ಕಳೆದ ವರುಷ ಎದುರಾಗಿದ್ದ ನೌಕರರ ಸಮಸ್ಯೆಗೆ ಪರಿಹಾರ ದೊರೆಯುವದಲ್ಲದೆ ಸರಕಾರದ ನಿಬಂಧನೆಗಳು ದೂರಾಗುವವು. ಅಕ್ಟೋಬರ ೨೪ರಿಂದ ಫೆಬ್ರುವರಿ ೧೨. ಮಾರ್ಚ ೧೫ ರಿಂದ ಜೂನ ೧೫. ಆಗಸ್ಟ ೧೫ರಿಂದ ಅಕ್ಟೋಬರ ೧೬ರ ವರೆಗಿನ ಅವಧಿಯಲ್ಲಿ ಉದ್ಯೋಗದಲ್ಲಿ ಲಾಭವಾಗಿ ಹೇರಳ ಹಣ ಸಂಪಾದನೆ ಸಾಧ್ಯ. ಹೊಸ ಉದ್ಯೋಗ ಪ್ರಾರಂಭಿಸುವ ಇಲ್ಲವೇ ಇದ್ದ ಉದ್ಯೋಗದಲ್ಲಿ ಶಾಖೆಗಳನ್ನು ತೆರೆಯುವ ಉದ್ಯೋಗಕ್ಕೆ ಬೇಕಾಗುವ ಹೊಸ ಉಪಕರಣ. ಮಶೀನರಿಗಳನ್ನೂ ಕೊಳ್ಳುವ ಇಲ್ಲವೆ ನವೀಕರಿಸುವ ಇವೇ ಮೊದಲಾದ ಪ್ರಗತಿದಾಯಕ ಸಂಗತಿಗಳು ಜರುಗುವವು. ಈ ರಾಶಿಯ ಕೃಷಿಕ ವರ್ಗದವರಿಗೆ ಅಧಿಕ ಬೆಳೆ ಬರುವುದರಿಂದ ಹಿಂದಿನ ಸಾಲಗಳೆಲ್ಲ ತೀರಿ ಹೋಗಿ ಹೊಸದಾಗಿ ಹೊಲ. ಮನೆ, ನಿವೇಶನ. ದನಕರುಗಳು. ಬೇಸಾಯಕ್ಕೆ ಬೇಕಾಗಬಹುದಾದ ಟ್ರಕ್. ಟ್ರ್ಯಾಕ್ಟರ ಪಂಪಸೆಟ್ಟ ಮೊದಲಾದವುಗಳನ್ನು ಖರೀದಿಸುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಬರುವದು.

ಕಳೆದ ಅನೇಕ ವರುಷಗಳಿಂದ ಗೃಹಸ್ಥಾಶ್ರಮಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ ವಧೂವರರಿಗೆ ಏಳನೇ ಗುರುವಿನಿಂದಾಗಿ ಅವರ ಮನೋರಥ ಈಡೇರುವದು. ಅದರಲ್ಲಿಯೂ ನವ್ಹಂಬರ ೧೪ರಿಂದ ಜನವರಿ ೧೩, ಮಾರ್ಚ ೧೫ರಿಂದ ಜೂನ ೧೪, ಆಗಸ್ಟ ೧೫ರಿಂದ ಅಕ್ಟೋಬರ ೧೬ರ ವರೆಗಿನ ಕಾಲದಲ್ಲಿ ವಿವಾಹ ನಿರ್ವಿಘ್ನವಾಗಿ ನೆರವೇರುವದು. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿದ್ದು, ಒಡೆದು ಹೋದ ಏಕತ್ರ ಕುಟುಂಬ ಮತ್ತೆ ಒಂದುಗೂಡುವದು. ಆಪ್ತೇಷ್ಟರ ಮಧ್ಯ ಉಂಟಾಗಿದ್ದ ತಪ್ಪು ತಿಳುವಳಿಕೆ ದೂರಾಗಿ ಪರಸ್ಪರ ಪ್ರೀತಿ ವಿಶ್ವಾಸ ಮೊದಲಿನಂತೆ ಹೆಚ್ಚುವದು. ಅಕ್ಟೋಬರ ೨೪ರಿಂದ ಫೆಬ್ರುವರಿ ೧೨, ಮಾರ್ಚ ೧೫ರಿಂದ ಜೂನ ೧೫, ಆಗಸ್ಟ ೧೫ರಿಂದ ಅಕ್ಟೋಬರ ೧೬ರ ವರೆಗಿನ ಕಾಲದಲ್ಲಿ ಬೆಲೆಯುಳ್ಳ ವಸ್ತು ಒಡವೆಗಳನ್ನು ಖರೀದಿಸುವ ತೀರ್ಥ ಯಾತ್ರಾ ಸಂದರ್ಶನ, ನೂತನ ಗೃಹ ಪ್ರವೇಶ ಮಂಗಲ ಕಾರ್ಯ ಜರುಗುವಿಕೆ, ವಾಹನ ಸೌಖ್ಯ, ಪರದೇಶ ಪರ್ಯಟನ ಮೊದಲಾದ ಶುಭ ಘಟನೆಗಳು ಜರುಗುವವು. ಈ ರಾಶಿಯ ಗರ್ಭಿಣಿಯರ ಹೆರಿಗೆ ಅಕ್ಟೋಬರ ೨೪ರಿಂದ ಡಿಸೆಂಬರ ೧೪, ಜನವರಿ ೧೪ರಿಂದ ಮಾರ್ಚ ೧೫, ಜೂನ ೧೫ರಿಂದ ಆಗಸ್ಟ ೧೫ರ ವರೆಗಿನ ಅವಧಿಯಲ್ಲಾದರೆ ಪ್ರಸೂತಿ ಕಷ್ಟದಾಯಕ ಹಾಗೂ ಶಸ್ತ್ರಕ್ರಿಯೆ ಅನಿವಾರ್ಯವಾಗುವದು. ಮಿಕ್ಕ ಆರು ತಿಂಗಳಲ್ಲಾದರೆ ಸುಖ ಪ್ರಸೂತಿ.

ಅನೇಕ ಗ್ರಹಗಳ ಬೆಂಬಲ ಪಡೆದ ಈ ರಾಶಿಯ ರಾಜಕೀಯ ಸಾಮಾಜಿಕ ಕಾರ್ಯಕರ್ತರಿಗೆ ಈ ವರುಷ ಅತ್ಯಂತ ಸ್ಮರಣೀಯವಾದುದು. ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸಿ ಅನೇಕ ಸಂಘ ಸಂಸ್ಥೆಗಳ ಪದಾಧಿಕಾರಿಗಳಾಗುವರಲ್ಲದೇ ಗೌರವಾನ್ವಿತ ಸ್ಥಾನಮಾನ. ಅಧಿಕಾರ ಪಡೆದು. ಜಿಲ್ಲಾ, ರಾಜ್ಯ ಮಟ್ಟದ ಗಣ್ಯ ವ್ಯಕ್ತಿಗಳಾಗುವದರಲ್ಲಿ ಸಂದೇಹವಿಲ್ಲ. ಶತ್ರುಗಳು ಮಿತ್ರರಾಗುವದರಿಂದ ಈ ವರುಷದಲ್ಲಿ ಜರುಗಬಹುದಾದ ಯಾವದೇ ಚುನಾವಣೆಗೆ ಸ್ಪರ್ಧಿಸಿದರೂ ಅವಿರೋಧ ಆಯ್ಕೆ, ಅಥವಾ ಅತ್ಯಧಿಕ ಬಹುಮತದಿಂದ ಆಯ್ಕೆಗೊಳ್ಳಬಹುದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಏಳನೆಯ ಗುರುವಿನಿಂದಾಗಿ ಈ ವರುಷ ಪ್ರೋತ್ಸಾಹದಾಯಕವಿದೆ. ಕಳೆದ ವರುಷ ಕುಂಠಿತವಾಗಿದ್ದ ಶಿಕ್ಷಣ ಈ ವರುಷ ಮುಂದುವರೆಯುವದಲ್ಲದೇ ಕಳೆದುಕೊಂಡಿದ್ದ ಶಿಷ್ಯವೃತ್ತಿ ವಿದ್ಯಾರ್ಥಿವೇತನ ಮತ್ತೆ ಲಭಿಸುವದು. ಹೆಚ್ಚಿನ ಶಿಕ್ಷಣಕ್ಕಾಗಿ ಇಲ್ಲವೇ ಸಂಶೋಧನೆಗಾಗಿ ವಿದೇಶ ಯಾತ್ರೆ ಕೈಕೊಳ್ಳುವ ಸುಯೋಗವೂ ಉಂಟು. ನವ್ಹಂಬರ ೧೫ರಿಂದ ಫೆಬ್ರುವರಿ ೧೨. ಮಾರ್ಚ ೧೫ರಿಂದ ಜೂನ ೧೫. ಆಗಸ್ಟ ೧೫ರಿಂದ ಅಕ್ಟೋಬರ ೧೬ರ ವರೆಗಿನ ಅವಧಿಯಲ್ಲಿ ನಡೆಯುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಉಚ್ಚ ಶ್ರೇಣಿಯಲ್ಲಿ ತೇರ್ಗಡೆಯಾಗುವರಲ್ಲದೇ ಪ್ರಶಸ್ತಿ ಪದಕಗಳನ್ನು ಪಡೆಯುವರು. ಆದರೆ ಅಕ್ಟೋಬರ ೨೪ರಿಂದ, ನವ್ಹಂಬರ ೧೪, ಫೆಬ್ರುವರಿ ೧೨ರಿಂದ ಮಾರ್ಚ ೧೫. ಜೂನ ೧೫ರಿಂದ ಆಗಸ್ಟ ೧೪ರ ವರೆಗಿನ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಕೀರ್ತಿಗೆ ಅಗಲು ಬಹಳ ಪರಿಶ್ರಮ ಪಡಬೇಕಾಗುತ್ತದೆ.



## ಧನು

ಈ ರಾಶಿಯ ಎಲ್ಲ ವರ್ಗದವರಿಗೆ ಎಲ್ಲ ದೃಷ್ಟಿಯಿಂದಲೂ ಈ ವರುಷ ಹೇಳಿಕೊಳ್ಳುವಂಥ ಪ್ರಗತಿಯಂದಾಗಿರದೆ ಯಥಾಸ್ಥಿತಿಯೇ ಮುಂದುವರೆಯುವದು.

ಈ ವರುಷ ಈ ರಾಶಿಯವರ ಗ್ರಹಗತಿ ಬಹಳ ವಿಚಿತ್ರವಾಗಿದೆ. ಕಳೆದ ವರುಷದಿಂದ ಪ್ರಾರಂಭವಾದ ಎಂಟನೆಯ ಅಶುಭ ಫಲದಾಯಕ ಶನಿಯು ಈ ವರುಷ ಮುಂದುವರೆದರೂ ಅವನ ಅಶುಭ ಫಲ ಪೂರ್ವಾಷಾಢಾ, ಉತ್ತರಾಷಾಢಾದ. ಧನು ರಾಶಿಯವರಿಗೆ ಇದ್ದು. ಮೂಲಾ ನಕ್ಷತ್ರದವರು ಅಷ್ಟಮ ಶನಿಯ ಅನಿಷ್ಟತೆಯಿಂದ ಈ ವರುಷ ಮುಕ್ತರಾಗುವರು.ಅದರಂತೆ ಈ ವರುಷ ಪ್ರಾರಂಭದಿಂದ ಬಂದ ಆರನೆಯ ಗುರುವಿನ ಅಶುಭ ಫಲ ಮೂಲಾ ನಕ್ಷತ್ರದವರಿಗೆ ಇದ್ದು ಪೂರ್ವಾಷಾಢಾ, ಉತ್ತರಾಷಾಢಾದವರಿಗೆ ಪಂಚಮ ಗುರುವಿನಂತೆ ಶುಭ ಫಲವನ್ನು ಕೊಡುವನು. ಚೈತ್ರದಿಂದ ಬರುವ ದಶಮ ರಾಹುವಿನ ಶುಭಫಲ ವರುಷಾಂತ್ಯದ ವರೆಗೂ ಇರುವದು. ಗ್ರಹಗತಿ ಹೀಗಿರುವದರಿಂದ ಈ ವರುಷ ಮಿಶ್ರ ಫಲ ದೊರೆಯುವದು. ಆರೋಗ್ಯ ವರುಷದ ಮುಕ್ಕಾಲು ಭಾಗ ಉತ್ತಮ. ಆದರೆ ನವ್ಹಂಬರ ೧೫ರಿಂದ ಡಿಸೆಂಬರ ೧, ಮಾರ್ಚ ೧೫ರಿಂದ ಎಪ್ರಿಲ್ ೧೨. ಜುಲೈ ೧೫ರಿಂದ ಆಗಸ್ಟ ೧೫ರ ವರೆಗಿನ ಈ ಮೂರು ತಿಂಗಳುಗಳು ಪ್ರತಿಕೂಲವಿದ್ದು ಈ ಕಾಲದಲ್ಲಿ ಆರೋಗ್ಯ ಕೆಡಬಹುದಾಗಿದೆ. ಶತ್ರುಗಳ ಕಾಟ ಹಾಗು ಅಪಘಾತದ ಭಯವೂ ಉಂಟು. ಆರ್ಥಿಕ ದೃಷ್ಟಿಯಿಂದ ಯಾವ ಹೆಚ್ಚಿನ ಏರಿಳಿತವಿಲ್ಲದೇ ಹಿಡಿತದಲ್ಲಿರುವದು. ಅಂದರೆ ಸಾಲಗಾರರ ಕಾಟವಿರದು. ಆಕಸ್ಮಿಕ ಧನಲಾಭವೂ ಇಲ್ಲ. ಅಕ್ಟೋಬರ ೨೪ರಿಂದ ನವ್ಹಂಬರ ೧೫, ಡಿಸೆಂಬರ ೧೫ರಿಂದ ಮಾರ್ಚ ೧೫, ಮೇ ೧೫ರಿಂದ ಜೂನ ೧೪, ಆಗಸ್ಟ ೧೫ರಿಂದ ವರುಷಾಂತ್ಯದ ವರೆಗೆ ನಿರೀಕ್ಷಿಸಿದ ಮೂಲದಿಂದ ಹಣ ಬರುವದಲ್ಲದೆ ಉದ್ಯೋಗ ನೌಕರಿಯಿಂದಲೂ ಸಾಕಷ್ಟು ಹಣ ಬರುವದು. ಆದರೆ ನವ್ಹಂಬರ ೧೪ರಿಂದ ಡಿಸೆಂಬರ೧೫. ಮಾರ್ಚ ೧೫ರಿಂದ ಮೇ ೧೨ ಜೂನ. ೧೫ರಿಂದ ಆಗಸ್ಟ ೧೫ರ ವರೆಗಿನ ಅವಧಿಯಲ್ಲಿ ಆದಾಯಕ್ಕಿಂತಲೂ ವೆಚ್ಚ ವಿಪರೀತ ಬೆಳೆಯುವುದರಿಂದ ಕೂಡಿಟ್ಟ ಹಣವೆಲ್ಲವೂ ಬರಿದಾಗುವುದು.

ಆರನೆಯ ಅಶುಭದಾಯಕ ಗುರುವಿನಿಂದಾಗಿ ಈ ವರುಷ ವಾದ ಸ್ಪರ್ಧೆಯ ಕೆಲಸಗಳಿಗೆ ಕೈ ಹಾಕದಿರುವುದೇ ಹಿತಕರ.ನ್ಯಾಯಾಲಯದ ಕಟ್ಟೆ ಹತ್ತದೇ ಸಂಧಾನ ಮನೋಭಾವನೆಯಿಂದ ವರ್ತಿಸಿದಲ್ಲಿ ಖಂಡಿತವಾಗಿಯೂ ಲಾಭವಾಗುತ್ತದೆ. ಅನಿವಾರ್ಯವಿದ್ದಲ್ಲಿ ಡಿಸೆಂ

ಬರ ೧೫ರಿಂದ ಮಾರ್ಚ ೧೫ ಹಾಗೂ ಆಗಸ್ಟ ೧೫ರಿಂದ ವರುಷಾಂತ್ಯದ ವರೆಗಿನ ಕಾಲವಲ್ಲಿ ದಾವೆ ದಾಖಲು ಮಾಡಿ ಮುದ್ದತ್ತು ತೆಗೆದುಕೊಳ್ಳುತ್ತ ಹೋಗಬೇಕು.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಹೇಳಿಕೊಳ್ಳುವಂಥ ಪ್ರಗತಿ ಇಲ್ಲ. ಬಡತಿ, ಇಚ್ಛಿತ ಸ್ಥಳಕ್ಕೆ ಬದಲಿ, ಮೊದಲಾದ ಇಚ್ಛಿತ ಘಟನೆಗಳು ಜರುಗುವವು. ಒಂದು ರೀತಿಯಿಂದ ನೋಡಿದರೆ ಯಥಾಸ್ಥಿತಿ ಮುಂದುವರೆಯುವುದು. ಆದಾಗ್ಯೂ ಕೂಡ ಡಿಸೆಂಬರ ೧೫ರಿಂದ ಮಾರ್ಚ ೧೫, ಮೇ ೧೫ರಿಂದ ಜುಲೈ ೧೫, ಹಾಗು ಸಪ್ಟೆಂಬರ ೧೬ರಿಂದ ವರುಷಾಂತ್ಯದ ವರೆಗಿನ ಅವಧಿಯಲ್ಲಿ ಅನುಕೂಲವಿದ್ದು, ಮೂಲಾ ನಕ್ಷತ್ರದವರಿಗೆ ಕೇವಲ ಇಚ್ಛಿತ ಸ್ಥಳಕ್ಕೆ ಬದಲಿಯಾದರೆ ಪೂರ್ವಾಷಾಢಾ, ಉತ್ತರಾಷಾಢಾದವರಿಗೆ ಇಚ್ಛಿತ ಸ್ಥಳದೊಂದಿಗೆ ಹಂಗಾಮಿ ಬಡತಿ ದೊರೆವ ಯೋಗವುಂಟು. ನಿರುದ್ಯೋಗಿಗಳಿಗೆ ಈ ವರುಷದ ಪೂರ್ವಾರ್ಧದಲ್ಲಿ ಉದ್ಯೋಗ ಲಭಿಸುವದು. ಹಂಗಾಮಿ ನೌಕರರಿಗೆ ಕಾಯಂ ಆಗದಿದ್ದರೂ ನೌಕರಿಗೆ ಭೀತಿ ಇಲ್ಲ. ಈ ರಾಶಿಯ ಬಾಹ್ಯ ಹಾಗೂ ತಾಂತ್ರಿಕ ಕೆಲಸಗಾರ, ಗಿರಣಿ ಕಾರಖಾನೆಗಳ ಕಾರ್ಮಿಕರಿಗೂ ಈ ವರುಷ ಮಿಶ್ರ ಫಲವಿದೆ. ಅಕ್ಟೋಬರ ೨೪ ರಿಂದ ನವ್ಹಂಬರ್ ೧೫. ಡಿಸೆಂಬರ ೧೫ರಿಂದ ಮಾರ್ಚ ೧೫, ಮೇ ೧೫ರಿಂದ ಜೂನ ೧೫, ಸಪ್ಟೆಂಬರ ೧೬ರಿಂದ ವರುಷಾಂತ್ಯದ ವರೆಗಿನ ಕಾಲ ಅನುಕೂಲವಿದ್ದು ನೌಕರಿಯಲ್ಲಿ ಬಡತಿ ಹೆಚ್ಚಿನ ಬೋನಸ್, ಇಮ್ಮಡಿ ಇನ್‌ಕ್ರಿಮೆಂಟ ದೊರೆಯುವ ಸಾಧ್ಯತೆಯುಂಟು. ಆದರೆ ಸಪ್ಟೆಂಬರ ೧೫ರಿಂದ ಡಿಸೆಂಬರ ೧೫, ಮಾರ್ಚ ೧೫ ರಿಂದ ಮೇ ೧೫, ಜೂನ ೧೫ ರಿಂದ ಸಪ್ಟೆಂಬರ ೧೬, ರ ವರೆಗಿನ ಈ ಆರು ತಿಂಗಳುಗಳು ಅಸಹನೀಯವಾಗಿದ್ದು, ಆರ್ಥಿಕ ಮುಗ್ಗಟ್ಟಿನೊಂದಿಗೆ ವರಿಷ್ಠರ ಅಸಹಕಾರ ಕಿರುಕುಳ ಹಾಗು ಮಶಿನರಿಯ ತೊಂದರೆಗಳನ್ನು ಎದುರಿಸಬೇಕಾಗುತ್ತದೆ.

ಈ ರಾಶಿಯ ಸಾಹಿತಿ, ಕಲಾವಿದ, ಲೇಖಕ. ಪತ್ರಿಕೋದ್ಯಮಿ, ಶಿಕ್ಷಕ, ಅಧ್ಯಾಪಕ. ಕರಣಿಕ. ಡಾಕ್ಟರ, ವಕೀಲ, ನ್ಯಾಯಾಧೀಶ, ಮೊದಲಾದ ಬುದ್ಧಿಜೀವಿಗಳಿಗೆ ಆರನೆಯ ಗುರುವಿನಿಂದಾಗಿ ಹೇಳಿಕೊಳ್ಳುವಂಥ ಪ್ರಗತಿ ಕಂಡು ಬಾರದು. ಆರ್ಥಿಕ ದೃಷ್ಟಿಯಿಂದ ಹಾನಿ ಇರದಿದ್ದರೂ ಕೂಡ ಸ್ಥಾನ ಮಾನ ಅಧಿಕಾರಕ್ಕೆ ಎರವಾಗಬೇಕಾಗುತ್ತದೆ. ಆದಾಗ್ಯೂ ಮೂಲಾ ನಕ್ಷತ್ರದವರಿಗೆ ಪೂರ್ವಾರ್ಧ ಪ್ರಗತಿದಾಯಕವಿದ್ದರೆ ಪೂರ್ವಾಷಾಢಾ, ಉತ್ತರಾಷಾಢಾದವರಿಗೆ ಉತ್ತರಾರ್ಧವು ಉತ್ತೇಜಕರವಿದೆ.

ಈ ರಾಶಿಯ ಸ್ವತಂತ್ರ, ವ್ಯಾಪಾರ, ಉದ್ಯೋಗಸ್ಥ ಕಮೀಶನ್ ಏಜಂಟ್ ಹಂಚಿಕೆದಾರ, ಚಾಳ. ಟಾಕೀಜ, ಹೋಟೆಲ, ಗಿರಣಿ, ಕಾರಖಾನೆಗಳ ಮಾಲಕ ವರ್ಗದವರಿಗೆಲ್ಲ ಉದ್ಯೋಗ, ಆರ್ಥಿಕ ದೃಷ್ಟಿಯಿಂದ ಈ ವರುಷ ಪ್ರಗತಿದಾಯಕವಿದೆ. ಆದರೆ ನೌಕರರ ಸಮಸ್ಯೆಗಳೊಂದಿಗೆ ಸರಕಾರ ಸಂಘ ಸಂಸ್ಥೆಗಳ ನಿರ್ಬಂಧನೆಯನ್ನು ಎದುರಿಸಬೇಕಾಗುತ್ತದೆ. ಅದರಲ್ಲಿಯೂ ನವ್ಹಂಬರ ೧೫ರಿಂದ ಡಿಸೆಂಬರ ೧೫, ಮಾರ್ಚ ೧೫ ರಿಂದ ಮೇ ೧೪, ಜುಲೈ ೧೫ರಿಂದ ಸಪ್ಟೆಂಬರ ೧೬ ರ ವರೆಗಿನ ಈ ಐದು ತಿಂಗಳ ಕಾಲ ಪ್ರತಿಕೂಲ ಸನ್ನಿವೇಶಗಳನು ಎದುರಿಸಬೇಕಾಗುವದು. ಆದರೆ ಡಿಸೆಂಬರ ೧೫ರಿಂದ ಮಾರ್ಚ ೧೫, ಮೇ ೧೫ರಿಂದ ಜುಲೈ ೧೫ ಮತ್ತು ಸೆಪ್ಟೆಂಬರ ೧೬ರಿಂದ ವರುಷಾಂತ್ಯದ ವರೆಗಿನ ಕಾಲ ಉದ್ಯೋಗ, ಆರ್ಥಿಕ ದೃಷ್ಟಿಯಿಂದ ಉತ್ತೇಜನಕರವಿದೆ. ಈ ರಾಶಿಯ ಕೃಷಿಕ ವರ್ಗದವರಿಗೆ ಪೂರ್ವಾರ್ಧವು ಪ್ರಗತಿದಾಯಕವಿದ್ದು, ನಿರೀಕ್ಷೆಗಿಂತ ಅಧಿಕ ಬೆಳೆ ಬಂದು ಆರ್ಥಿಕ ಸ್ಥಿತಿ ಕಿಂಚಿತ್ ಸುಧಾರಿಸಿ ಬೇಸಾಯಕ್ಕೆ ಬೇಕಾಗಬಹುದಾದ ಉಪಕರಣ, ದನಕರುಗಳನು ಖರೀದಿಸಬಹುದು. ಇಲ್ಲವೇ ನವೀಕರಿಸುವ ಸಾಧ್ಯತೆಯುಂಟು. ಆದರೆ ಉತ್ತರಾರ್ಧವು ತೀರ ಪ್ರತಿಕೂಲವಿದ್ದು, ಲೆಕ್ಕ ಸಂಪೂರ್ಣ ತಪ್ಪಾಗಿ ಹಮ್ಮಿಕೊಂಡಿದ್ದ ಅಭಿವೃದ್ಧಿಯ ಕೆಲಸ ಅರ್ಧಕ್ಕೆ ನಿಲ್ಲುವದು. ಸಾಲಗಾರರ ಕಾಟ, ಆರ್ಥಿಕ ಮುಗ್ಗಟ್ಟು, ದನಕರುಗಳು ಬೇನೆಗೆ ಬಲಿಯಾಗುವ, ಯಾಂತ್ರಿಕ ತೊಂದರೆ ಇವೇ ಮೊದಲಾದ ಪ್ರತಿಕೂಲ ಸನ್ನಿವೇಶಗಳು ಎದುರಾಗುವವು.





ಈ ರಾಶಿಯ ವಧೂವರರಿಗೆ ಈ ವರುಷ ಮಿಶ್ರ ಫಲವುಂಟು. ಮೂಲಾ ನಕ್ಷತ್ರದವರಿಗೆ ಪೂರ್ವಾರ್ಧ ಪ್ರಗತಿದಾಯಕವಿದ್ದು, ವಿವಾಹ ನಿರ್ವಿಘ್ನವಾಗಿ ಸಾಂಗವಾಗುವದು. ಆದರೆ ಉತ್ತರಾರ್ಧವು ಪ್ರತಿಕೂಲವಿದ್ದು, ಗೊತ್ತು ಮಾಡಿದ ಮದುವೆ ಮುರುಗಡೆ ಆಗಬಹುದು. ಇಲ್ಲವೇ ಮುಂದಕ್ಕೆ ಹೋಗಬಹುದು. ಇದರಂತೆ ಪೂರ್ವಾಷಾಢಾ, ಹಾಗೂ ಉತ್ತರಾಷಾಢಾದ ಧನು ರಾಶಿಯುವರಿಗೆ ಪೂರ್ವಾರ್ಧ ಪ್ರತಿಕೂಲವಿದ್ದು, ಉತ್ತರಾರ್ಧವು ಪ್ರೋತ್ಸಾಹದ್ದಾಗಿದೆ. ಉತ್ತರಾರ್ಧದಲ್ಲಿ ನಿರ್ವಿಘ್ನದಿಂದ ವಿವಾಹ ಸಾಂಗವಾಗುವದು. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೆಲ್ಲ ಆರನೆಯ ಗುರುವಿನಿಂದಾಗಿ ಆಪ್ತೇಷ್ಟರಲ್ಲಿ ವಿರಸ ಹುಟ್ಟಿ ಗೃಹ ಕಲಹ ಹೆಚ್ಚಿ, ಮಾನಸಿಕ ನೆಮ್ಮದಿ ದೊರೆಯದು. ಅದರಲ್ಲಿಯೂ ನವ್ಹಂಬರ ೧೫ರಿಂದ ಡಿಸೆಂಬರ ೧೬, ಮಾರ್ಚ ೧೫ರಿಂದ ಮೇ ೧೫ ಹಾಗೂ ಜುಲೈ ೧೫ರಿಂದ ಸಪ್ಟೆಂಬರ ೧೬ರ ವರೆಗಿನ ಐದು ತಿಂಗಳ ಕಾಲ ತೀರ ಪ್ರತಿಕೂಲ. ಗೃಹಕಲಹ, ಮಿಥ್ಯಾಪವಾದದಿಂದಾಗಿ ಮನೆಯ ಪರಿಸ್ಥಿತಿ ತೀರ ಹದಗೆಟ್ಟು ಏಕತ್ರ ಕುಟುಂಬ ಒಡೆಯಬಹುದಾಗಿದೆ. ಆದರೆ ಡಿಸೆಂಬರ ೧೫ರಿಂದ ಮಾರ್ಚ ೧೫, ಮೇ ೧೫ರಿಂದ ಜುಲೈ ೧೫, ಸಪ್ಟೆಂಬರ ೧೬ರಿಂದ ವರುಷಾಂತ್ಯದ ವರೆಗಿನ ಕಾಲ ಶುಭವೂ ಅನುಕೂಲವೂ ಆಗಿದ್ದು, ಈ ಅವಧಿಯಲ್ಲಿ ಕಲುಷಿತವಾಗಿದ್ದ ಮನೆಯ ವಾತಾವರಣ ತುಸು ತಿಳಿಯಾಗುವದು. ಬೆಲೆಯುಳ್ಳ ವಸ್ತು ಒಡವೆಗಳನ್ನು ಕೊಳ್ಳಬಹುದಾಗಿದೆ. ಈ ರಾಶಿಯ ಗರ್ಭಿಣಿಯರಿಗೆ ನವ್ಹಂಬರ ೧೫ರಿಂದ ಡಿಸೆಂಬರ ೧೫, ಮಾರ್ಚ ೧೫ರಿಂದ ಮೇ ೧೪ ಹಾಗೂ ಜುಲೈ ೧೫ರಿಂದ ಸಪ್ಟೆಂಬರ ೧೬ರ ಅವಧಿಯಲ್ಲಾದರೆ ಪ್ರಸೂತಿ ತೊಂದರೆಯದು. ಹಾಗು ಶಸ್ತ್ರ ಕ್ರಿಯೆ ಅನಿವಾರ್ಯವಾಗುವದು. ಮಿಕ್ಕ ಅವಧಿಯಲ್ಲಿ ಆದರೆ ಪ್ರಸೂತಿ ಸುಖಪ್ರದ.

ಈ ರಾಶಿಯ ರಾಜಕೀಯ, ಸಾಮಾಜಿಕ, ಕಾರ್ಯಕರ್ತರಿಗೆ ಆರನೆಯ ಗುರುವಿನಿಂದಾಗಿ ಈ ವರುಷ ನಿರುತ್ಸಾಹದಾಯಕವಿದೆ. ಇದ್ದುದರಲ್ಲಿಯೇ ಡಿಸೆಂಬರ ೧೫ರಿಂಡ ಮಾರ್ಚ ೧೫. ಮೇ ೧೫ರಿಂದ ಜುಲೈ ೧೫ ಹಾಗೂ ಸಪ್ಟೆಂಬರ ೧೬ರಿಂದ ವರುಷಾಂತ್ಯದ ವರೆಗಿನ ಕಾಲ ತುಸು ಅನುಕೂಲಕರವಿದ್ದು, ತಕ್ಕ ಮಟ್ಟಿಗೆ ಗೌರವಾನ್ವಿತ ಸ್ಥಾನಮಾನ ಅಧಿಕಾರ ಪಡೆಯಬಹುದಾಗಿದೆ. ಇದೇ ಅವಧಿಯಲ್ಲಿ ಚುನಾವಣೆಗಳು ನಡೆದಲ್ಲಿ ಸ್ಪರ್ಧಿಸಬಹುದು. ಮಿತ್ರರು ಶತ್ರುಗಳಾಗುವದರಿಂದ ಸ್ಪರ್ಧೆ ನೇರ ಹಾಗೂ ತುರುಸಿನದಾಗುವುದು. ಅತ್ಯಲ್ಪ ಮತದಿಂದ ಆಯ್ಕೆ ಆಗುವಿರಿ. ಆದರೆ ನವ್ಹಂಬರ ೧೫ರಿಂದ ಡಿಸೆಂಬರ ೧೫. ಮಾರ್ಚ ೧೫ರಿಂದ ಮೇ ೧೪ ಜುಲೈ ೧೫ರಿಂದ ಸಪ್ಟಂಬರ ೧೫ರ ವರೆಗಿನ ಈ ಐದು ತಿಂಗಳ ಕಾಲ ತೀರ ಪ್ರತಿಕೂಲವಿದ್ದು, ಮಿಥ್ಯಾಪವಾದಕ್ಕೆ ಗುರಿಯಾಗಿ ಸ್ಥಾನಮಾನ ಅಧಿಕಾರವನ್ನು ಕಳೆದುಕೊಳ್ಳಬಹುದು. ಇದೇ ಅವಧಿಯಲ್ಲಿ ಚುನಾವಣೆಗಳು ಜರುಗಿದರೆ ಸ್ಪರ್ಧಿಸದಿರುವದೇ ಹಿತಕರ. ಸ್ಪರ್ಧಿಸಿದಲ್ಲಿ ಇಡುಗಂಟು ಸಹ ಜಪ್ತವಾಗುವದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಮನೆಯಲ್ಲಿಯ ಕಲುಷಿತ ವಾತಾವರಣ ಹಾಗೂ ಶಿಕ್ಷಕರ ಅವಕೃಪೆಯಿಂದಾಗಿ ಶಿಕ್ಷಣ ಮುಂದುವರಿಸುವುದೇ ಕಠಿಣವಾಗುತ್ತದೆ. ವಿದ್ಯಾರ್ಥಿವೇತನ, ಶಿಷ್ಯವೃತ್ತಿಗೆ ಎರವಾಗಬೇಕಾಗುತ್ತದೆ. ಡಿಸೆಂಬರ ೧೫ರಿಂದ ಮಾರ್ಚ ೧೫. ಮೇ ೧೫ರಿಂದ ಜುಲೈ ೧೫ ಹಾಗೂ ಸಪ್ಟೆಂಬರ ೧೬ರಿಂದ ವರುಷಾಂತ್ಯದ ವರೆಗಿನ ಕಾಲದಲ್ಲಿ ನಡೆಯುವ ಪರೀಕ್ಷೆಗೆ ಕೂಡುವ ವಿದ್ಯಾರ್ಥಿಗಳು ಸಾಮಾನ್ಯ ದರ್ಜೆಯ ತೇರ್ಗಡೆ ಆಗುವರು. ಆದರೆ ನವ್ಹಂಬರ ೧೫ರಿಂದ ಡಿಸೆಂಬರ ೧೫, ಮಾರ್ಚ ೧೫ರಿಂದ ಮೇ ೧೪, ಜುಲೈ ೧೫ರಿಂದ ಸಪ್ಟೆಂಬರ ೧೬ರ ವರೆಗಿನ ಅವಧಿಯಲ್ಲಿ ನಡೆಯುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳ ಫಲಿತಾಂಶವು ಸಂಶಯಾಸ್ಪದ.

# ಮಕರ



ಈ ರಾಶಿಯ ಎಲ್ಲ ವರ್ಗದವರಿಗೂ ಎಲ್ಲ ದೃಷ್ಟಿಯಿಂದಲೂ ಈ ವರುಷ ಪ್ರೋತ್ಸಾಹದಾಯಕವಾಗಿದೆ.

ಈ ರಾಶಿಯುವರ ಈ ವರುಷದ ಗ್ರಹಗತಿಯನ್ನು ಅವಲೋಕಿಸಲಾಗಿ ಪ್ರೋತ್ಸಾಹದಾಯಕವಾಗಿದೆ. ಎಂದು ಹೇಳಬಹುದಾಗಿದೆ. ವರುಷವಿಡೀ ಶನಿಯು ಏಳನೆಯವನಾಗಿರುವದರಿಂದ ಶುಭ–ಅಶುಭ ಫಲ ಕೊಡದೇ ಮಧ್ಯಮ ಫಲದಾಯಕನಾಗಿರುವನು. ಕಳೆದ ವರುಷದಿಂದ ಅತ್ಯಂತ ಶುಭ ಫಲದಾಯಕ ದಶಮ ರಾಹು ನಿರ್ಗಮಿಸಿ ಚೈತ್ರದಿಂದ ನವಮನಾಗಿ ಬರುವನು. ಅವನ ಶುಭಫಲದ ಪ್ರಮಾಣ ಕಡಿಮೆ ಆದರೂ ಅಶುಭ ಫಲ ನೀಡಲಾರ. ಇಷ್ಟೇ ಅಲ್ಲ ಉತ್ತರಾಷಾಢಾ ಶ್ರವಣಾ ನಕ್ಷತ್ರದ ಮಕರ ರಾಶಿಯವರಿಗೆ ಹತ್ತನೆಯ ರಾಹುವಿನ ಶುಭಫಲ ದೊರೆತರೆ ಧನಿಷ್ಠಾದವರಿಗೆ ನವಮ ರಾಹುವಿನ ಮಧ್ಯಮ ಫಲ ದೊರೆಯುವದು. ಪಂಚಮ ಗುರುವಿನ ಶುಭಫಲ ವರುಷದ ಮುಕ್ಕಾಲು ಅವಧಿಯ ವರೆಗೆ ದೊರೆಯುತ್ತದೆ. ಗ್ರಹಗತಿ ಹೀಗಿರುವದರಿಂದ ಈ ವರುಷ ಪ್ರೋತ್ಸಾಹದಾಯಕ ವರುಷವಾಗಿದೆ. ಆರೋಗ್ಯ ದೃಷ್ಟಿಯಿಂದ ಡಿಸೆಂಬರ ೧೫ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಮೇ ೧೪, ಜುಲೈ ೧೫ರಿಂದ ಸಪ್ಟೆಂಬರ ೧೬ರ ವರೆಗಿನ ಈ ಐದು ತಿಂಗಳು ಶಾರೀರಿಕ ಪೀಡೆ, ಶತ್ರುಗಳ ಕಾಟ, ವಾಹನಾದಿಗಳ ಭಯವುಂಟು. ವಿಶೇಷವಾಗಿ ಈ ರಾಶಿಯ ವಾಹನಚಾಲಕರು ಮಶೀನರಿ ಹಾಗೂ ತಾಂತ್ರಿಕ ಕೆಲಸಗಾರರು ಮೇಲಿನ ಅವಧಿಯಲ್ಲಿ ಎಚ್ಚರಿಕೆ ವಹಿಸಬೇಕು. ಉಳಿದ ಏಳು ತಿಂಗಳ ಕಾಲ ಚೆನ್ನಾಗಿರುವದು. ಆರ್ಥಿಕ ದೃಷ್ಟಿಯಿಂದ ನೋಡಿದರೆ ಈ ವರುಷ ತೃಪ್ತಿಕರವಿದೆ. ಅದರಲ್ಲಿಯೂ ಅಕ್ಟೋಬರ ೨೪ರಿಂದ ಡಿಸೆಂಬರ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨ ಮತ್ತು ಮೇ ೧೫ರಿಂದ ಜುಲೈ ೧೫ರ ವರೆಗೆ ಈ ಆರು ತಿಂಗಳ ಕಾಲ ನಿರೀಕ್ಷಿಸಿದ ಮೂಲದಿಂದ ಹಣ ಬರುವದಲ್ಲದೇ ದತ್ತಕ, ವಾರಸಾ, ಬಕ್ಷಿಸ್, ಬಹುಮಾನ, ಲಾಟರೀ ಕಮೀಶನ್ ಮೊದಲಾದ ಮೂಲದಿಂದ ಆಕಸ್ಮಿಕ ಧನ ಲಾಭ ಪ್ರಾಪ್ತಿಯಾಗಿ ಕಳೆದ ವರುಷ ಮಾಡಿದ್ದ ಸಾಲವೆಲ್ಲ ತೀರಿ ಹೋಗುವದುಂಟು. ಆದರೆ ಡಿಸೆಂಬರ ೧೫ರಿಂದ ಫೆಬ್ರುವರಿ ೧೨. ಎಪ್ರಿಲ್ ೧೨ರಿಂದ ಮೇ ೧೪. ಜುಲೈ ೧೫ರಿಂದ ಸಪ್ಟೆಂಬರ್ ೧೬ರ ವರೆಗಿನ ಈ ಐದು ತಿಂಗಳ ಕಾಲ ಆದಾಯ ಅಲ್ಪ. ವೆಚ್ಚ ವಿಪರೀತ ಬೆಳೆದು ಹೊಸ ಸಾಲಕ್ಕಾಗಿ ಪರದಾಡಬೇಕಾಗುವದು. ಆದರೆ ಹೇಗೋ ಹಣಕಾಸಿನ ವ್ಯವಸ್ಥೆ ಆಗುವದು ಖಂಡಿತ. ... ವಾದ, ಸ್ಪರ್ಧೆ, ಕೋರ್ಟು ಕಚೇರಿಗಳ ಕೆಲಸಗಳಲ್ಲಿ ಪಂಚಮ ಗುರುವಿನಿಂದಾಗಿ ಈ ವರುಷ ಜಯ ಲಭಿಸುವುದು. ವ್ಯಾಜ್ಯದ ಬಗೆಗೆ ವಿವರವಾಗಿ ಹೇಳಬೇಕೆಂದರೆ ಫೌಜದಾರಿ ಮೊಕದ್ದಮೆಗಳಿಗೆ ಉತ್ತರಾರ್ಧ, ರಾಜಕೀಯ ಹಾಗೂ ಸರಕಾರಿ ನೌಕರಿಗೆ ಸಂಬಂಧಿಸಿದ ವ್ಯಾಜ್ಯಗಳಿಗೆ ವರುಷದ ಮಧ್ಯಕಾಲದಲ್ಲಿ ಯಶಸ್ಸು ಲಭಿಸುತ್ತದೆ. ದಿವಾಣಿ ವ್ಯಾಜ್ಯಗಳಿಗೆ ಪೂರ್ವಾರ್ಧದಲ್ಲಿ ಯಶಸ್ಸು ಲಭ್ಯ.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಪ್ರೋತ್ಸಾಹದಾಯಕವಿದೆ. ಕಳೆದ ವರುಷ ವರಿಷ್ಠರೊಡನೆ ಉಂಟಾಗಿದ್ದ ತಪ್ಪು ತಿಳುವಳಿಕೆ ದೂರಾಗುವದು. ಅಕ್ಟೋಬರ ೨೪ರಿಂದ ಡಿಸೆಂಬರ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨, ಮೇ ೧೫ರಿಂದ ಜುಲೈ ೧೫ರ ವರೆಗಿನ ಈ ಆರುತಿಂಗಳ ಕಾಲ ಶುಭ ಹಾಗೂ ಅನುಕೂಲವಿದ್ದು, ಈ ಅವಧಿಯಲ್ಲಿ ನಿರುದ್ಯೋಗಿಗಳಿಗೆ ನೌಕರಿ ಲಭಿಸುವದು. ಹಂಗಾಮಿ ನೌಕರದಾರರಿಗೆ ಕಾಯಂ ಆಗುವದು. ನೌಕರದಾರರಿಗೆ ಬಡತಿ, ಇಚ್ಛಿತ ಸ್ಥಳಕ್ಕೆ ಬದಲಿ, ಎರಡು ಹುದ್ದೆಗಳ ಕಾರ್ಯ ನಿರ್ವಹಿಸುವಿಕೆ, ಮೊದಲಾದ ಶುಭ ಘಟನೆಗಳು ಸಂಭವಿಸುವವು. ಈ ರಾಶಿಯ ಬಾಹ್ಯ ಹಾಗು ಪ್ರವಾಸಿ, ತಾಂತ್ರಿಕ. ಕೆಲಸಗಾರರು, ಗಿರಣಿ ಕಾರಖಾನೆಗಳ ಕಾರ್ಮಿಕರಿಗೆ ಈ ವರುಷ ಹೇಳಿಕೊಳ್ಳುವಂಥ ಪ್ರಗತಿದಾಯಕವಿಲ್ಲದಿದ್ದರೂ ಕಳೆದ ವರುಷದಂತೆ ಉದ್ವಿಗ್ನತೆಯ ಪರಿಸ್ಥಿತಿ ಇರುವದಿಲ್ಲ. ಇದೂ ಅಲ್ಲದೆ ಅಕ್ಟೋಬರ ೨೪ ರಿಂದ ಡಿಸೆಂಬರ ೧೫, ಫೆಬ್ರುವರಿ ೧೨ ರಿಂದ ಎಪ್ರಿಲ್ ೧೨ ಹಾಗೂ ಮೇ ೧೫ ರಿಂದ ಜುಲೈ ೧೫ರ ವರೆಗಿನ ಈ ಅವಧಿಯಲ್ಲಿ ಅವರ ಕೆಲ ಬೇಡಿಕೆಗಳು ಈಡೇರುವವು.

ಈ ರಾಶಿಯ ಶಿಕ್ಷಕ, ಅಧ್ಯಾಪಕ, ಲೇಖಕ, ಸಾಹಿತಿ, ಕಲಾವಿದ, ಪತ್ರಿಕೋದ್ಯಮಿ, ಕರಣಿಕ, ವಕೀಲ, ಡಾಕ್ಟರ, ನ್ಯಾಯಾಧೀಶ, ಮೊದಲಾದ ಬುದ್ಧಿಜೀವಿಗಳಿಗೆ ಪಂಚಮ ಗುರುವಿನಿಂದಾಗಿ ಈ ವರುಷ ಪ್ರೋತ್ಸಾಹದಾಯಕವಾಗಿದೆ. ಅದರಲ್ಲಿಯೂ ಅಕ್ಟೋಬರ ೨೪ರಿಂದ ಡಿಸೆಂಬರ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨ ಮೇ ೧೫ರಿಂದ ಜುಲೈ ೧೫ರ ವರೆಗಿನ ಈ ಅವಧಿಯಲ್ಲಿ ಉದ್ಯೋಗದಲ್ಲಿ ಪ್ರಗತಿ ಸಾಧಿಸಿ ಸರಕಾರ ಸಂಘ ಸಂಸ್ಥೆಗಳಿಂದಲೂ ಮನ್ನಣೆ ಪ್ರಶಸ್ತಿ ಪದಕ ಬಿರುದು ಬಾವಲಿ ಬಹುಮಾನಗಳನ್ನು ಪಡೆದು ದ್ರವ್ಯಾನುಕೂಲತೆಯಾಗುವದು. ಸ್ಥಾವರ ಇಸ್ಟೇಟ ಸಂಪಾದನೆ, ವಾಹನ ಸೌಖ್ಯ, ಪರದೇಶ ಪರ್ಯಟನಗಳಂಥ ಸ್ಮರಣೀಯ ಘಟನೆಗಳು ಸಂಭವಿಸುವವು.

ಈ ರಾಶಿಯ ಸ್ವತಂತ್ರ್ಯ ವ್ಯಾಪಾರ ಉದ್ಯೋಗಸ್ಥರು ಉದ್ಯಮದಾರ, ಕಮೀಶನ ಏಜಂಟ, ಹಂಚಿಕೆದಾರ, ಚಾಳ, ಟಾಕೀಜ, ಹೋಟೆಲ, ಗಿರಣಿ ಕಾರಖಾನೆಗಳ ಮಾಲಕ ವರ್ಗದವರಿಗೆಲ್ಲ ಪಂಚಮ ಗುರುವಿನಿಂದಾಗಿ ಈ ವರುಷ ಪ್ರೋತ್ಸಾಹದಾಯಕವಿದೆ. ಕಳೆದ ವರುಷ ಕುಂಠಿತವಾಗಿದ್ದ ಉದ್ಯೋಗ ಮತ್ತೆ ಚೇತರಿಸುವದು. ನೌಕರರ ಸಮಸ್ಯೆ ಸರಕಾರದ ನಿಬಂಧನೆಗಳು ಈ ವರುಷ ದೂರಾಗುವವು. ಅಕ್ಟೋಬರ ೨೪ರಿಂದ ಡಿಸೆಂಬರ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨, ಮೇ ೧೫ರಿಂದ ಜುಲೈ ೧೫ರ ವರೆಗಿನ ಈ ಕಾಲವಂತೂ ಅತ್ಯಂತ ಶುಭದಾಯಕವಾಗಿದ್ದು ಈ ಕಾಲದಲ್ಲಿ ವ್ಯಾಪಾರ ಉದ್ಯೋಗದಲ್ಲಿ ದ್ವಿಗುಣ ಲಾಭ ದೊರೆಯುವದಲ್ಲದೆ ಹಿಂದಿನ ಸಾಲಗಳೆಲ್ಲ ತೀರಿ ಹೊಸ ಉದ್ಯೋಗ ಅಥವಾ ಇದ್ದ ಉದ್ಯೋಗದ ಹೊಸ ಶಾಖೆಗಳನ್ನು ತೆರೆಯುವ ಸಾಮರ್ಥ್ಯ ಬರುವದು. ಉದ್ಯೋಗಕ್ಕೆ

ಬೇಕಾಗುವ ಉಪಕರಣಗಳನ್ನು ಕೊಳ್ಳುವ ಸಾಧ್ಯತೆ ಉಂಟು. ಈ ರಾಶಿಯ ಕೃಷಿ ವರ್ಗದವರಿಗೆ ಈ ವರುಷವು ಹೇಳಿಕೊಳ್ಳುವಂಥ ಪ್ರಗತಿದಾಯಕವಾಗಿಲ್ಲವಾದರೂ ಕುಂಠಿತವಾದ ಬೇಸಾಯ ಮತ್ತೆ ಪ್ರಾರಂಭವಾಗುವದು. ಅಡವಿಟ್ಟ ಹೊಲ, ಮನೆ, ಜಾಗೆಗಳನ್ನು ಬಿಡಿಸಿಕೊಳ್ಳುವ ಸಾಮರ್ಥ್ಯ ಬರುವದು. ಆದರೆ ಈ ವರುಷದ ವೈಶಿಷ್ಟ್ಯವೆಂದರೆ ವರುಷದ ಪ್ರಾರಂಭದ ಮೂರು ತಿಂಗಳು ಹಾಗೂ ಕೊನೆಯ ಮೂರು ತಿಂಗಳು ಅತ್ಯಂತ ಅನುಕೂಲಕರ ಹಾಗೂ ಶುಭದಾಯಕವಿರುವದಾದರೆ ಮಧ್ಯದ ಆರು ತಿಂಗಳು ತೀರ ತಾಪದಾಯಕವಾಗಿದೆ.

ಕಳೆದ ಕೆಲ ವರುಷಗಳಿಂದ ಪ್ರಯತ್ನಿಸುತ್ತಿರುವ ಈ ರಾಶಿಯ ವಧೂವರರಿಗೆ ಪಂಚಮ ಗುರುವಿನಿಂದಾಗಿ ಈ ವರುಷ ಕಂಕಣಬಲ ಕೂಡಿ ಬಂದಿದೆ. ಇದೂ ಅಲ್ಲದೆ ಅಕ್ಟೋಬರ ೨೪ರಿಂದ ಡಿಸೆಂಬರ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨, ಮೇ ೧೫ರಿಂದ ಜುಲೈ ೧೫ರ ವರೆಗಿನ ಈ ಕಾಲವಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗಿ ಗೃಹಸ್ಥಾಶ್ರಮದ ಆನಂದಮಯ ಜೀವನದಲ್ಲಿ ಓಲಾಡುವರು. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೆ ಈ ವರುಷ ಪ್ರೋತ್ಸಾಹದಾಯಕವಾಗಿದೆ. ತಪ್ಪು ತಿಳಿವಳಿಕೆಯಿಂದಲೂ ಚಾಡಿಯ ಪ್ರಭಾವದಿಂದಲೂ ಒಡೆದು ಹೋದ ಏಕತ್ರ ಕುಟುಂಬ ಮತ್ತೆ ಒಂದುಗೂಡುವದು. ಅಕ್ಟೋಬರ ೨೪ರಿಂದ ಡಿಸೆಂಬರ ೧೫, ಫೆಬ್ರುವರಿ ೧೮ರಿಂದ ಎಪ್ರಿಲ್ ೧೨, ಮೇ ೧೫ರಿಂದ ಜುಲೈ ೧೫ರ ವರೆಗಿನ ಈ ಕಾಲ ಅತ್ಯಂತ ಶುಭದಾಯಕವಿದ್ದು, ಈ ಅವಧಿಯಲ್ಲಿ ಬೆಲೆಯುಳ್ಳ ವಸ್ತು ಒಡವೆಗಳ ಖರೀದಿ, ಸ್ಥಾವರ ಇಸ್ಟೇಟ ಸಂಪಾದನೆ, ತೀರ್ಥಯಾತ್ರಾ ಸಂದರ್ಶನ, ಮೊದಲಾದ ಸ್ಮರಣೀಯ ಘಟನೆಗಳು ಜರುಗುವವು. ಈ ವರುಷ ಈ ರಾಶಿಯ ಗರ್ಭಿಣಿಯರ ಹೆರಿಗೆಯು ಡಿಸೆಂಬರ ೧೫ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಮೇ ೧೪, ಜುಲೈ ೧೫ರಿಂದ ಸಪ್ಟೆಂಬರ ೧೫ರ ವರೆಗಿನ ಈ ಐದು ತಿಂಗಳ ಅವಧಿಯಲ್ಲಾದರೆ ಕಷ್ಟದಾಯಕವಲ್ಲದೆ ಶಸ್ತ್ರಕ್ರಿಯೆ ಅನಿವಾರ್ಯ; ಆದರೆ ಹೆರಿಗೆಯು ಅಕ್ಟೋಬರ ೨೪ರಿಂದ ಡಿಸೆಂಬರ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨, ಮೇ ೧೫ರಿಂದ ಜುಲೈ ೧೫ ಹಾಗೂ ಸಪ್ಟೆಂಬರ ೧೬ರಿಂದ ವರುಷಾಂತ್ಯದ ವರೆಗಿನ ಅವಧಿಯಲ್ಲಾದರೆ ಸುಖ ಪ್ರಸವ. ಅಲ್ಲದೇ ಗಂಡು ಸಂತಾನ ಯೋಗವೂ ಉಂಟು.

ಈ ರಾಶಿಯ ವಿದ್ಯಾರ್ಥಿಗಳಿಗೆ ಪಂಚಮ ಗುರುವಿನಿಂದಾಗಿ ಈ ವರುಷ ಯಶೋದಾಯಕವಿದೆ. ಕಳೆದ ವರುಷ ಅರ್ಧಕ್ಕೆ ನಿಂತ ಶಿಕ್ಷಣ ಮತ್ತೆ ಮುಂದುವರೆಯುವದು. ಕಳೆದುಕೊಂಡ ಶಿಷ್ಯವೃತ್ತಿ ವಿದ್ಯಾರ್ಥಿ ವೇತನ, ಪುನಃ ಪಡೆಯುವರಲ್ಲದೆ, ಶಿಕ್ಷಕರ ಕೃಪೆಗೆ ಪಾತ್ರರಾಗುವರು. ಅಕ್ಟೋಬರ ೨೪ರಿಂದ ಡಿಸೆಂಬರ ೧೫, ಫೆಬ್ರುವರಿ ೧೨ರಿಂದ ಎಪ್ರಿಲ್ ೧೨, ಮೇ ೧೫ರಿಂದ ಜುಲೈ ೧೫ರ ಅವಧಿಯಲ್ಲಿ ನಡೆಯುವ ಪರೀಕ್ಷೆಗೆ ಕಟ್ಟುವವರು ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ ಪ್ರಶಸ್ತಿ ಪದಕಗಳನ್ನು ಪಡೆಯುವರು. ಆದರೆ ಡಿಸೆಂಬರ ೧೫ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಮೇ ೧೪, ಜುಲೈ ೧೫ರಿಂದ ಸಪ್ಟೆಂಬರ ೧೫ರ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವವರು ತೇರ್ಗಡೆ ಆಗಲು ಬಹಳ ಪರಿಶ್ರಮ ಪಡೆಯು ಬೇಕಾಗುತ್ತದೆ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಅಕ್ಟೋಬರ ೨೪ರಿಂದ ಡಿಸೆಂಬರ ೧೫, ಫೆಬ್ರುವರಿ ೧೬ರಿಂದ ಎಪ್ರಿಲ್ ೧೧, ಮೇ ೧೫ರಿಂದ ಜುಲೈ ೧೫ರ ವರೆಗಿನ ಅವಧಿ ಶುಭ ಹಾಗೂ ಅನುಕೂಲವಿದ್ದು, ಈ ಅವಧಿಯಲ್ಲಿ ಅನೇಕ ಸಂಘ ಸಂಸ್ಥೆಗಳ ಸದಸ್ಯರಾಗಿಯೂ ಪದಾಧಿಕಾರಿಗಳಾಗಿಯೂ ಗೌರವಾನ್ವಿತ ಸ್ಥಾನ ಮಾನ ಅಧಿಕಾರ ಪಡೆದು ಗಣ್ಯ ವ್ಯಕ್ತಿಗಳಾಗುವುದರಲ್ಲಿ ಸಂದೇಹವಿಲ್ಲ. ಇದೇ ಅವಧಿಯಲ್ಲಿ ಚುನಾವಣೆಗಳು ಜರುಗಿದಲ್ಲಿ ಅತ್ಯಧಿಕ ಬಹುಮತದಿಂದ ಆಯ್ಕೆ ಆಗುವುದು ನಿಶ್ಚಿತ. ಆದರೆ ಡಿಸೆಂಬರ ೧೫ರಿಂದ ಫೆಬ್ರುವರಿ ೧೫, ಎಪ್ರಿಲ್ ೧೨ರಿಂದ ಮೇ ೧೪ ಜುಲೈ ೧೫ರಿಂದ ಸಪ್ಟೆಂಬರ ೧೬ರ ವರೆಗಿನ ಈ ಐದು ತಿಂಗಳ ಕಾಲ ತೀರ ಪ್ರತಿಕೂಲ ಇದ್ದು, ಮಿತ್ರರು ಶತ್ರುಗಳಾಗುವುದರಿಂದ ಅವಿಶ್ವಾಸ ಸೂಚನೆಗೆ ಬಲಿಯಾಗಿ ಸ್ಥಾನಮಾನ, ಅಧಿಕಾರ ಕಳೆದುಕೊಳ್ಳಬೇಕಾಗುತ್ತದೆ. ಈ ಅವಧಿಯಲ್ಲಿ ಚುನಾವಣೆಗಳು ಜರುಗಿದಲ್ಲಿ ಸ್ಪರ್ಧಿಸದಿರುವುದೇ ಹಿತಕರವು.



## ಕುಂಭ

ಈ ರಾಶಿಯವರಿಗೆ ಈ ವರುಷ ಉದ್ಯೋಗ ಆರ್ಥಿಕದಲ್ಲಿ ಯಥಾಸ್ಥಿತಿ ಮುಂದುವರೆದರೆ ಕೌಟುಂಬಿಕ ಪ್ರಾಪಂಚಿಕ, ಶೈಕ್ಷಣಿಕ ಮತ್ತು ಆರೋಗ್ಯ ದೃಷ್ಟಿಯಿಂದ ಪ್ರತಿಕೂಲ ಹಾಗೂ ನಿರುತ್ಸಾಹ. ಪೂರ್ವಾರ್ಧವು ಪ್ರಗತಿದಾಯಕವಾದರೆ ಉತ್ತರಾರ್ಧ ತಾಪದಾಯಕ.

ಕಳೆದ ವರುಷದಿಂದ ಬಂದ ಆರನೇ ಶುಭಫಲದಾಯಕ ಶನಿಯು ಈ ವರುಷವೂ ಆರನೆಯವನಾಗಿ ಶುಭಫಲ ಕೊಡುವನಾದರೆ ಕಳೆದ ವರುಷದಿಂದ ಶುಭಫಲ ಕೊಡುತ್ತಿದ್ದ ಒಂಭತ್ತನೆಯ ರಾಹು ನಿರ್ಗಮಿಸಿ ನಾಳಿನ ಚೈತ್ರದಿಂದ ಅಷ್ಟಮನಾಗುವನಲ್ಲದೆ ಚತುರ್ಥ ಗುರುವಿನ ಅಶುಭ ಫಲವು ವರುಷಾಂತ್ಯದ ವರೆಗೂ ಇರುವದರಿಂದ ಈ ವರುಷ ಮಿಶ್ರಫಲವಿದೆ. ಗುರು ರಾಹುಗಳ ಪೂಜೆ, ಜಪ ಶಾಂತಿ, ಶ್ರೀ ದತ್ತಾತ್ರಯ ಹಾಗೂ ಶ್ರೀರಾಘವೇಂದ್ರರ ಪ್ರಾರ್ಥನೆಯಿಂದ ಅನಿಷ್ಟತೆ ಕಡಿಮೆಯಾಗುವದು.

ಈ ರಾಶಿಯವರ ಆರೋಗ್ಯ ವರುಷದ ಆರು ತಿಂಗಳ ಕಾಲ ದೈಹಿಕವಾಗಿ ಚೆನ್ನಾಗಿರುವದಾದರೂ ಮಾನಸಿಕ ನೆಮ್ಮದಿ ವರುಷವಿಡೀ ಸರಿ ಇರುವದಿಲ್ಲ. ಅದರಲ್ಲಿಯೂ ಜನವರಿ ೧೪ರಿಂದ ಮಾರ್ಚ ೧೫, ಮೇ ೧೫ರಿಂದ ಜೂನ ೧೫, ಜುಲೈ ೧೫ರಿಂದ ಅಕ್ಟೋಬರ ೧೬ರ ವರೆಗಿನ ಈ ಆರು ತಿಂಗಳು ತೀರ ಪ್ರತಿಕೂಲವಿದ್ದು, ಶಾರೀರಿಕ ಪೀಡೆ, ಅಪಘಾತದ ಭಯ, ಶತ್ರುಗಳ ಕಾಟದಿಂದ ಮನಸ್ಸು ಜರ್ಜರಿತವಾಗುವದು. ಸೂರ್ಯೋಪಾಸನೆ, ಗಾಯತ್ರಿ ಜಪದಿಂದ ಎಲ್ಲವೂ ಸರಿಯಾದೀತು. ಆರ್ಥಿಕದ ದೃಷ್ಟಿಯಿಂದ ಈ ವರುಷ ಬಹು ವಿಚಿತ್ರವಿದೆ. ಆಕಸ್ಮಿಕ ಧನ ಲಾಭದ ಜೊತೆಗೆ ಸಾಲಗಾರರ ಕಾಟವೂ ಉಂಟು. ಅಕ್ಟೋಬರ ೨೪ರಿಂದ ಜನವರಿ ೧೪, ಫೆಬ್ರುವರಿ ೧೨ರಿಂದ ಮೇ ೧೫ರ ವರೆಗಿನ ಈ ಆರು ತಿಂಗಳ ಕಾಲ ಅತ್ಯಂತ ಶುಭ ಹಾಗೂ ಅನುಕೂಲವಿದ್ದು, ಈ ಕಾಲದಲ್ಲಿ ನಿರೀಕ್ಷಿಸಿದ ಮೂಲದಿಂದ ಹಣ ಬರುವದಲ್ಲದೇ ದತ್ತಕ, ವಾರಸಾ, ಬಕ್ಷಿಸ್, ಬಹುಮಾನ ಲಾಟರೀ, ಕಮೀಶನ ಮುಂತಾದ ಮೂಲದಿಂದಆಕಸ್ಮಿಕಧನಲಾಭವಾಗಿಆರ್ಥಿಕ ಸ್ಥಿತಿ ಹಿಡಿತದಲ್ಲಿರುವದು. ಆದರೆ ಜನವರಿ ೧೪ರಿಂದ ಫೆಬ್ರುವರಿ ೧೨, ಮೇ ೧೫ರಿಂದ ಅಕ್ಟೋಬರ ೧೬ರ ವರೆಗಿನ ಈ ಆರುತಿಂಗಳ ಕಾಲ ತೀರ ಪ್ರತಿಕೂಲ. ಆದಾಯಕ್ಕಿಂತ ವೆಚ್ಚ ಹೆಚ್ಚಾಗುವುದಲ್ಲದೇ ಡಾಕ್ಟರ ಹಾಗೂ ವಕೀಲರ ಬಿಲ್ಲುಗಳನ್ನು ತೀರಿಸಲು ಹೊಸ

ಸಾಲಕ್ಕಾಗಿ ಪರದಾಡಬೇಕಾಗುತ್ತದೆ. ಇದೂ ಅಲ್ಲದೆ ಬರತಕ್ಕ ಹಣ ಸಮಯಕ್ಕೆ ಬರದೆ ಕೊಡತಕ್ಕ ಹಣಕ್ಕಾಗಿ ಸಾಕು ಬೇಕಾಗುವುದಲ್ಲದೆ ಸಾಲಗಾರರಿಂದ ಅವಮಾನಕರ ಸನ್ನಿವೇಶವನ್ನು ಎದುರಿಸಬೇಕಾಗುತ್ತದೆ.

ನಾಲ್ಕನೆಯ ಗುರುವಿನಿಂದಾಗಿ ವಾದ, ಸ್ಪರ್ಧೆ ಕೋರ್ಟು ಕಚೇರಿಗಳ ಕೆಲಸಕ್ಕೆ ಪ್ರತಿಕೂಲವಿರುವದರಿಂದ ಅವುಗಳ ಗೊಡವೆಗೆ ಹೋಗದಿರುವುದೇ ಹಿತಕರವು. ಇದ್ದುದರಲ್ಲಿಯೇ ಪೂರ್ವಾರ್ಧವು ಕೆಲ ಮಟ್ಟಿಗೆ ಅನುಕೂಲವಿದ್ದು, ರಾಜೀ ಸಂಧಾನ ಮನೋಭಾವನೆಯಿಂದ ವರ್ತಿಸಿದಲ್ಲಿ ಖಂಡಿತ ಲಾಭವಾಗುತ್ತದೆ. ದಾವೆ ಅನಿವಾರ್ಯವಿದ್ದಲ್ಲಿ ದಾಖಲು ಮಾಡಿ ವರುಷವಿಡೀ ಮುದ್ದತು ತೆಗೆದುಕೊಳುತ್ತ ಹೋಗುವದು ಹಿತಕರವು

ಈ ರಾಶಿಯ ನೌಕರ ವರ್ಗದವರಿಗೆ ಆರ್ಥಿಕ ದೃಷ್ಟಿಯಿಂದ ಈ ವರುಷ ಅನುಕೂಲವಿದ್ದರೆ ಸ್ಥಾನಮಾನ, ಅಧಿಕಾರ ದೃಷ್ಟಿಯಿಂದ ಪ್ರತಿಕೂಲವಿದೆ. ಹಂಗಾಮಿ ನೌಕರರಿಗೆ ಅಸ್ಥಿರತೆ ಈ ವರುಷವೂ ಮುಂದುವರೆಯುತ್ತದೆ. ಇದ್ದದರಲ್ಲಿಯೇ ಅಕ್ಟೋಬರ ೨೪ರಿಂದ ಜನವರಿ ೧೪, ಹಾಗೂ ಫೆಬ್ರುವರಿ ೧೨ರಿಂದ ಮೇ ೧೫ರ ವರೆಗಿನ ಈ ಆರು ತಿಂಗಳು ಕಿಂಚಿತ್ ಅನುಕೂಲವಿದ್ದು, ಈ ಅವಧಿಯಲ್ಲಿ ತಾತ್ಪೂರ್ತಿಕ ಬಡತಿ, ಇಚ್ಛಿತ ಸ್ಥಳಕ್ಕೆ ಬದಲಿ. ನಿರುದ್ಯೋಗಿಗಳಿಗೆ ತಾತ್ಪೂರ್ತಿಕ ನೌಕರಿ ಲಭಿಸುವಿಕೆ, ಮೊದಲಾದ ಶುಭ ಘಟನೆಗಳು ಜರುಗುವವು. ಆದರೆ ಜನವರಿ ೧೪ರಿಂದ ಫೆಬ್ರುವರಿ ೧೨ ಹಾಗೂ ಮೇ ೧೬ರಿಂದ ಅಕ್ಟೋಬರ ೧೭ರ ವರೆಗಿನ ಆರು ತಿಂಗಳ ಕಾಲ ತೀರ ಪ್ರತಿಕೂಲ ಇದ್ದು. ಈ ಕಾಲದಲ್ಲಿ ಅನಪೇಕ್ಷಿತ ಸ್ಥಳಕ್ಕೆ ಬದಲಿ, ಹಿಂಬಡತಿ ಮೇಲಿನವರ ಅಸಹನೀಯ ಕಿರುಕುಳದಿಂದಾಗಿ ನೌಕರಿಗೆ ತಿಲಾಂಜಲಿ ಈಯುವ ಸನ್ನಿವೇಶ ಎದುರಾಗುವದು. ಹಂಗಾಮಿ ನೌಕರರಿಗೆ ಮನೆಗಪ್ಪಣೆ ಯಾಗುವದು. ನಿರುದ್ಯೋಗಿಗಳಂತೂ ಈ ಅವಧಿಯಲ್ಲಿ ಆರ್ಥಿಕ ಮುಗ್ಗಟ್ಟು ಹಾಗು ಸಲ್ಲದ ಅಪವಾದದಿಂದ ಮನಸ್ಸಿಗೆ ನೆಮ್ಮದಿ ಇರುವುದಿಲ್ಲ. ಈ ರಾಶಿಯ ಬಾಹ್ಯ ಹಾಗು ತಾಂತ್ರಿಕ ಕೆಲಸಗಾರ ಪ್ರವಾಸಿ ಕೆಲಸಗಾರ, ಮಶೀನರಿ ಹಾಗೂ ಗಿರಣಿ ಕಾರಖಾನೆಗಳ ಕಾರ್ಮಿಕರಿಗೆಲ್ಲ ಈ ವರುಷ ಮಿಶ್ರಫಲವಿದೆ. ಪೂರ್ವಾರ್ಧ ಪ್ರಗತಿದಾಯಕವಿದ್ದು, ಹೆಚ್ಚಿನ ಬೋನಸ್ ಹಾಗೂ ಇನ್‌ಕ್ರಿಮೆಂಟ್ ದೊರೆತು ಅವರ ಅನೇಕ ಬೇಡಿಕೆಗಳು ಈಡೇರುವವು. ಆದರೆ ಉತ್ತರಾರ್ಧವು ತೀರ ಪ್ರತಿಕೂಲವಿದ್ದು, ಮೇಲಿನವರ ಕಿರುಕುಳ, ಮಶೀನರಿಗಳ ತೊಂದರೆ, ಅಪಘಾತಗಳ ಭಯ, ಇವೇ ಮೊದಲಾದ ಘಟನೆಗಳು ಸಂಭವಿಸಬಹುದಾಗಿದೆ.

ಈ ರಾಶಿಯ ಸಾಹಿತಿ, ಲೇಖಕ, ಕಲಾವಿದ, ಶಿಕ್ಷಕ ಅಧ್ಯಾಪಕ, ಕರಣಿಕ, ಡಾಕ್ಟರ, ವಕೀಲ, ಪತ್ರಿಕೋದ್ಯಮಿ, ನ್ಯಾಯಾಧೀಶ ಮೊದಲಾದ ಬುದ್ಧಿಜೀವಿಗಳಿಗೆ ನಾಲ್ಕನೆಯ ಗುರುವಿನಿಂದಾಗಿ ಈ ವರುಷ ಪ್ರತಿಕೂಲವಿದೆ. ಮಿತ್ರರು ಶತ್ರುಗಳಾಗುವುದರಿಂದ ಮಿಥ್ಯಾಪವಾದಕ್ಕೆ ಗುರಿಯಾಗಬಹುದಾಗಿದೆ. ಪೂರ್ವಾರ್ಧ ಇದ್ದುದರಲ್ಲಿಯೇ ಪ್ರೋತ್ಸಾಹದಾಯಕವಿದ್ದು ಆರ್ಥಿಕ ದೃಷ್ಟಿಯಿಂದ ಅನುಕೂಲವಿದೆ. ಆದರೆ ಉತ್ತರಾರ್ಧವು ತೀರ ಪ್ರತಿಕೂಲವಿದ್ದು, ಸಾಲಗಾರರ ಕಾಟ, ಅನಾರೋಗ್ಯ, ಆರ್ಥಿಕ ಮುಗ್ಗಟ್ಟುಗಳೊಂದಿಗೆ ಸ್ಥಾನಮಾನ ಅಧಿಕಾರಕ್ಕೂ ಚ್ಯುತಿ ಬರಬಹುದಾಗಿದೆ.

ಈ ರಾಶಿಯ ಸ್ವತಂತ್ರ ಉದ್ಯೋಗ ವ್ಯಾಪಾರಸ್ಥ, ಉದ್ಯಮದಾರ, ಕಮೀಶನ ಏಜಂಟ, ಹಂಚಿಕೆದಾರ, ಟಾಕೀಜ ಚಾಳ ಹೊಟೇಲ ಗಿರಣಿ ಕಾರಖಾನೆಗಳ ಮಾಲಕ ವರ್ಗದವರಿಗೆಲ್ಲ ಈ ವರುಷ ನಿರುತ್ಸಾಹದಾಯಕವಿದೆ. ಹೊಸ ಶಾಖೆ, ಹೊಸ ಉದ್ಯೋಗ, ಪ್ರಾರಂಭಿಸಬೇಕೆಂಬ ವಿಚಾರವಿದ್ದರೂ ಈ ವರುಷ ಕೈ ಬಿಡುವುದೇ ಹಿತಕರವು. ಇದ್ದುದರಲ್ಲಿಯೇ ಪೂರ್ವಾರ್ಧವು ಉದ್ಯೋಗ. ಆರ್ಥಿಕ, ದೃಷ್ಟಿಯಿಂದ ತುಸು ಪ್ರಗತಿದಾಯಕವಿದೆ. ಆದರೆ ಉತ್ತರಾರ್ಧವು ತೀರ ಪ್ರತಿಕೂಲವಿದ್ದು ನೌಕರರ ಸಮಸ್ಯೆಗಳೊಂದಿಗೆ ಸರಕಾರದ ನಿಬಂಧನೆಗಳನ್ನು ಎದುರಿಸಬೇಕಾಗುವದು. ಉದ್ಯೋಗ ಉಪಕರಣಗಳು ಹಾಗು ಮಶೀನರಿಗಳು ಕೆಡುವ ಸಂಭವವುಂಟಲ್ಲದೆ ಆರ್ಥಿಕ ಮುಗ್ಗಟ್ಟು, ಸಾಲಗಾರರ ಕಾಟವನ್ನು ಎದುರಿಸಬೇಕಾಗುತ್ತದೆ. ಈ ಅವಧಿಯಲ್ಲಿ ನವಗ್ರಹ ಶಾಂತಿ ಮಾಡಿಸಿದಲ್ಲಿ ಎಲ್ಲವೂ ಸರಿಯಾದೀತು. ಈ ರಾಶಿಯ ಕೃಷಿಕ ವರ್ಗದವರಿಗೆ ಪೂರ್ವಾರ್ಧ ಪ್ರಗತಿದಾಯಕವಿದ್ದು, ನಿರೀಕ್ಷೆಗಿಂತ ಅಧಿಕ ಫಸಲು ಬಂದು, ಆರ್ಥಿಕ ಸ್ಥಿತಿ ಚೇತರಿಸಿ, ಹೊಸದಾಗಿ ಜಾಗೆ, ಮನೆ ದನಕರುಗಳನ್ನು ಖರೀದಿಸಬಹುದು. ಟ್ರ್ಯಾಕ್ಟರ, ಪಂಪಸೆಟ್ಟು ಮೊದಲಾದ ಉಪಕರಣಗಳನ್ನು ಕೊಳ್ಳುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಬರುತ್ತದೆ. ಆದರೆ ಉತ್ತರಾರ್ಧ ಪ್ರತಿಕೂಲವಿದ್ದು, ಸಾಲಗಾರರ ಕಾಟ, ಹಳೇ ಸಾಲ ತೀರಿಸಲು ಹೊಸ ಸಾಲಕ್ಕೆ ಪರದಾಟ, ಹೊಲ, ಮನೆ, ದನ–ಕರುಗಳನ್ನು ಮಾರಿ ಇಲ್ಲವೇ ಒತ್ತಿ ಹಾಕಿ ಋಣಮುಕ್ತರಾಗುವ ಸನ್ನಿವೇಶ ಎದುರಾಗುವದು. ಹೀಗಾಗಿ ಬೇಸಾಯ ಮುಂದುವರೆಸುವದು ಕಠಿಣವಾಗಬಹುದು.

ಈ ರಾಶಿಯ ವಧೂವರರಿಗೂ ಚತುರ್ಥ ಗುರುವಿನಿಂದಾಗಿ ಈ ವರುಷ ಪ್ರತಿಕೂಲವಿದೆ. ಇದ್ದುದರಲ್ಲಿಯೇ ಪೂರ್ವಾರ್ಧದಲ್ಲಿ ಮದುವೆ ನಿಶ್ಚಯವಾದಲ್ಲಿ ನಿರ್ವಿಘ್ನವಾಗಿ ವಿವಾಹ ಸಾಂಗವಾಗುವದು. ಆದರೆ ಉತ್ತರಾರ್ಧದಲ್ಲಿ ವಿವಾಹ ಗೊತ್ತಾದರೆ ಮುರಗಡೆ ಆಗಬಹುದು. ಇಲ್ಲವೇ ಮುಂದೂಡಬಹುದು. ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೆಲ್ಲ ಈ ವರುಷ ತೀರ ಪ್ರತಿಕೂಲವಿದೆ. ಜೀವನದ ಉಜ್ವಲ ಭವಿಷ್ಯದ ಸುಖದ ಸೋಪಾನ ಹತ್ತಿ ಕಷ್ಟ ಕಾರ್ಪಣ್ಯದ ಸುಳಿವೇ ಅರಿಯದಂತೆ ಸಂಸಾರದ ರಸ ನಿಮಿಷಗಳನ್ನು ಅನಂತವಾಗಿ ಅನುಭವಿಸಿ ಮನೆಯೆಂದರೆ ಸ್ವರ್ಗ ಸಮಾನವೆಂದು ಬಗೆದ ಅವರಿಗೆ ಈ ವರುಷ ಅದೇ ಮನೆ ನರಕ ಸದೃಶವಾಗಿ ಕಾಣುತ್ತದೆ. ಪ್ರತಿ ನಿತ್ಯದ ಗೃಹಕಲಹದಿಂದಾಗಿ ಮನೆ ಸ್ಮಶಾನದಂತೆ ಗೋಚರವಾಗುತ್ತದೆ. ಏಕತ್ರ ಕುಟುಂಬ ಒಡೆಯುವುದಲ್ಲದೇ ಪತಿ–ಪತ್ನಿಯರಲ್ಲಿಯ ತಪ್ಪು ತಿಳುವಳಿಕೆ ಹಾಗೂ ಚಾಡಿಯ ಪ್ರಭಾವದಿಂದ ವಿರಸ, ವಿರಹ, ಉಂಟಾಗುವದು. ತಾಳ್ಮೆಯೇ ಇದಕ್ಕೆಲ್ಲ ಮದ್ದು. ಇದ್ದುದರಲ್ಲಿಯೇ ಪೂರ್ವಾರ್ಧದಲ್ಲಿ ತೊಂದರೆ ಕಡಿಮೆ. ಉತ್ತರಾರ್ಧ ತೀರ ತಾಪದಾಯಕವಾಗಿರುತ್ತದೆ. ಈ ರಾಶಿಯ ಗರ್ಭಿಣಿಯರಿಗೆ ಚತುರ್ಥ ಗುರುವಿನಿಂದಾಗಿ ಅಶುಭವಿದೆ. ಗರ್ಭಸ್ರಾವ, ಗರ್ಭಪಾತದ, ಭಯವೂ ಉಂಟು. ಆದರೆ ಹೆರಿಗೆಯು ಅಕ್ಟೋಬರ ೧೨ರಿಂದ ಜನವರಿ ೧೪ ಹಾಗೂ ಫೆಬ್ರುವರಿ ೧೨ರಿಂದ ಮೇ ೧೪ರ ವರೆಗೆ ಹಾಗೂ ಫೆಬ್ರುವರಿ ೧೨ರಿಂದ ಮೇ ೧೪ರ ವರೆಗಿನ ಅವಧಿಯಲ್ಲಾದರೆ ಸುಖಪ್ರದ. ಆದರೆ ಹೆರಿಗೆಯು ಜನವರಿ ೧೪ರಿಂದ ಫೆಬ್ರುವರಿ ೧೨ ಮತ್ತು ಮೇ ೧೫ರಿಂದ ಅಕ್ಟೋಬರ ೧೭ರ ವರೆಗಿನ ಅವಧಿಯಲ್ಲಾದರೆ ತೊಂದರೆಯಾಗುವದಲ್ಲದೆ ಶಸ್ತ್ರಕ್ರಿಯೆ ಅನಿವಾರ್ಯವಾಗುವದು.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಚತುರ್ಥ ಗುರು ಅಷ್ಟಮ ರಾಹುವಿನಿಂದಾಗಿ ಈ ವರುಷ ಪ್ರತಿಕೂಲವಿದೆ. ಪ್ರಾಮಾಣಿಕ ಬುದ್ಧಿವಂತರೆಂದು ಕೀರ್ತಿ ಪಡೆದ ನಿಮ್ಮನ್ನು ಜನ ಈಗ ತಿರಸ್ಕಾರದಿಂದ ಕಾಣತೊಡಗುವರು. ಬದಲಾದ ಪರಿಸ್ಥಿತಿಯನ್ನು ಧೈರ್ಯದಿಂದ ಎದುರಿಸಬೇಕಲ್ಲದೆ ನಿರಾಶೆ ಸಲ್ಲದು. ಅಕ್ಟೋಬರ ೨೪ರಿಂದ ಜನವರಿ ೧೩. ಫೆಬ್ರುವರಿ ೧೨ರಿಂದ ಮೇ ೧೪ರ ವರೆಗಿನ ಈ ಆರು ತಿಂಗಳುಗಳಲ್ಲಿ ಇದ್ದುದರಲ್ಲಿಯೇ ತುಸು ಅನುಕೂಲವಿದೆ. ಇದೇ

ಅವಧಿಯಲ್ಲಿ ಚುನಾವಣೆಗಳು ಜರುಗಿದಲ್ಲಿ ಜಯ ಲಭಿಸುತ್ತದೆ. ಆದರೆ ಸ್ಪರ್ಧೆ ತುರುಸಿನದಾಗಿದ್ದು, ಅತ್ಯಲ್ಪ ಮತದಿಂದ ಆಯ್ಕೆಯಾಗುವದು. ಆದರೆ ಸ್ಥಾನ ಮಾನ ಸಿಗುವುದಿಲ್ಲ. ಜನವರಿ ೧೪ ರಿಂದ ಫೆಬ್ರುವರಿ ೧೨, ಮೇ ೧೫ರಿಂದ ಅಕ್ಟೋಬರ ೧೬ರ ವರೆಗಿನ ಉತ್ತರಾರ್ಧದ ಈ ಆರು ತಿಂಗಳ ಕಾಲ ತೀರ ಪ್ರತಿಕೂಲ ಇದ್ದು, ಮಿತ್ರರು ಶತ್ರುಗಳಾಗಿ ಅವಿಶ್ವಾಸ ವ್ಯಕ್ತಪಡಿಸುವುದರಿಂದ ಸ್ಥಾನ ಮಾನ ಅಧಿಕಾರದಿಂದ ಕೆಳಗೆ ಇಳಿಯಬೇಕಾಗುತ್ತದೆ. ಇದೇ ಸಮಯದಲ್ಲಿ ಚುನಾವಣೆಗಳು ಜರುಗಿದರೆ ಭಾಗವಹಿಸದಿರುವುದೇ ಹಿತಕರ.

ಈ ರಾಶಿಯ ವಿದ್ಯಾರ್ಥಿಗಳಿಗೆ ನಾಲ್ಕನೆಯ ಗುರುವಿನಿಂದಾಗಿ ಈ ವರುಷ ತೀರ ಪ್ರತಿಕೂಲವಿದ್ದು, ಶಿಕ್ಷಕರ ಅವಕೃಪೆ, ಮನೆಯಲ್ಲಿಯ ವಿಷಮ ವಾತಾವರಣ, ಆರ್ಥಿಕ ಮುಗ್ಗಟ್ಟಿನಿಂದಾಗಿ ಶಿಕ್ಷಣ ಮುಂದುವರಿಸುವುದೇ ಕಠಿಣವಾಗುತ್ತದೆ. ಕಳೆದ ವರುಷ ಪಡೆದ ಶಿಷ್ಯವೃತ್ತಿ ವಿದ್ಯಾರ್ಥಿವೇತನಕ್ಕೆ ಎರವಾಗಬೇಕಾಗುತ್ತದೆ. ಆದಾಗ್ಯೂ ಧೈರ್ಯಗೆಡದಿರಿ. ಬೃಹಸ್ಪತಿಯ ಶಾಂತಿ ಜಪ ಮಾಡಿರಿ. ಇಲ್ಲವೆ ಶ್ರೀ ಗುರುದತ್ತ ಇಲ್ಲವೇ ಶ್ರೀ ರಾಘವೇಂದ್ರರನ್ನು ಭಜಿಸಿರಿ. ಎಲ್ಲವೂ ಸರಿಯಾಗುವದು. ಅಕ್ಟೋಬರ ೨೪ರಿಂದ ಜನವರಿ ೧೪, ಫೆಬ್ರುವರಿ ೧೨ ರಿಂದ ಮೇ ೧೪ರ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ತೇರ್ಗಡೆ ಆಗುವರು. ಆದರೆ ಶ್ರೇಣಿ ದೊರೆಯುವದು ಮಾತ್ರ ದುಸ್ತರ. ಜನವರಿ ೧೪ರಿಂದ ಫೆಬ್ರುವರಿ ೧೨. ಮೇ ೧೫ರಿಂದ ಅಕ್ಟೋಬರ ೧೬ರ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವವರ ಫಲಿತಾಂಶ ಸಂಶಯಾಸ್ಪದ.



## ಮೀನ

ಈ ರಾಶಿಯ ಎಲ್ಲ ವರ್ಗದವರಿಗೆ ಎಲ್ಲ ದೃಷ್ಟಿಯಿಂದಲೂ ಈ ವರುಷದಲ್ಲಿ ಯಾವ ಮಹತ್ವದ ಶುಭಾಶುಭ ಫಲಗಳು ದೊರೆಯುದೇ ಯಥಾಸ್ಥಿತಿ ಮುಂದುವರಿಯುವುದಲ್ಲದೆ ಕೆಲವರ್ಗದವರಿಗೆ ಕೆಲ ದೃಷ್ಟಿಯಿಂದ ಕಳೆದ ವರುಷದಂತೆಯೇ ಪ್ರಗತಿದಾಯಕವಿದೆ.

ಈ ರಾಶಿಯವರಿಗೆ ಕಳೆದ ವರುಷದಿಂದ ಎರಡನೆಯವನಾಗಿ ಶುಭಫಲ ಕೊಡುತ್ತಿದ್ದ ಗುರುವು ಈ ವರುಷ ಮೂರನೆಯವನಾಗುವದರಿಂದ ಶುಭಫಲ ಕೊಡದಿದ್ದರೂ ಅಶುಭಫಲ ಕೊಡಲಾರ. ಆದರೆ ರೇವತಿ ನಕ್ಷತ್ರದವರಿಗೆ ಈ ವರುಷ ದ್ವಿತೀಯ ಗುರುವಿನಂತೆ ಆತ ಶುಭ ಫಲಕೊಡುತ್ತಾನಾದರೆ ಪೂರ್ವಾಭಾದ್ರಪದ ಹಾಗೂ ಉತ್ತರಾ ಭಾದ್ರಪದದ ಮೀನ ರಾಶಿಯವರಿಗೆ ತೃತೀಯ ಗುರುವಿನ ಫಲದೊರೆಯುವದು. ಅದರಂತೆ ಕಳೆದ ವರುಷದಿಂದ ಬಂದ ಐದನೆಯ ಅಶುಭ ಫಲದಾಯಕ ಶನಿಯು ಈ ವರುಷವೂ ಐದನೆಯವನಾಗಿಯೇ ಮುಂದುವರೆದರೂ ಪೂರ್ವಾಭಾದ್ರಪದ ಹಾಗೂ ಉತ್ತರಾ ಭಾದ್ರಪದದ ಮೀನ ರಾಶಿಯವರಿಗೆ ಆರನೆಯ ಶನಿಯಂತೆ ಶುಭ ಫಲಕೊಡುವನು. ಅದರಂತೆ ಕಳೆದ ವರುಷದಿಂದ ಬಂದ ಅನಿಷ್ಟದಾಯಕ ಎಂಟನೆಯ ರಾಹು ಚೈತ್ರದಿಂದ ನಿರ್ಗಮಿಸಿ ಏಳನೆಯವನಾಗುವನಾದರೂ ಅವನ ಶುಭ ಫಲ ರೇವತಿ ನಕ್ಷತ್ರದವರಿಗೆ ದೊರೆತರೆ ಪೂರ್ವಾಭಾದ್ರಪದ ಹಾಗೂ ಉತ್ತರಾಭಾದ್ರಪದದವರಿಗೆ ದೊರೆಯಲಾರದು.

ಈ ರಾಶಿಯವರ ಆರೋಗ್ಯ ವರುಷದ ಮುಕ್ಕಾಲು ಅವಧಿವರೆಗೆ ಚೆನ್ನಾಗಿರುವದಾದರೂ ಫೆಬ್ರುವರಿ ೧೨ರಿಂದ ಎಪ್ರಿಲ್ ೧೨, ಜೂನ ೧೫ರಿಂದ ಜುಲೈ ೧೫ರವರೆಗಿನ ಈ ಮೂರು ತಿಂಗಳ ಕಾಲ ಕಿಂಚಿತ ಆರೋಗ್ಯ ಕೆಡಬಹುದಾಗಿದೆ. ಈ ವರುಷದ ಆರ್ಥಿಕ ಸ್ಥಿತಿ ಬಹಳ ವಿಚಿತ್ರವಿದೆ. ಆಕಸ್ಮಿಕ ಧನ ಯೋಗವೂ ಉಂಟು. ಸಾಲಗಾರರ ಕಾಟವೂ ಉಂಟು. ನವ್ಹಂಬರ ೧೫ರಿಂದ ಫೆಬ್ರುವರಿ ೧೨, ಮೇ ೧೫ರಿಂದ ಜೂನ ೧೫ ಹಾಗೂ ಅಗಸ್ಟ ೧೫ರಿಂದ ಅಕ್ಟೋಬರ ೧೬ರವರೆಗಿನ ಈ ಆರು ತಿಂಗಳ ಕಾಲ ಅತ್ಯಂತ ಶುಭ ಹಾಗೂ ಅನುಕೂಲವಿದ್ದು, ಈ ಅವಧಿಯಲ್ಲಿ ನಿರೀಕ್ಷಿಸಿದ ಮೂಲದಿಂದ ಹಣ ಬರುವದಲ್ಲದೇ ದತ್ತಕ. ವಾರಸಾ, ಬಕ್ಷಿಸ, ಬಹುಮಾನ, ಲಾಟರಿ, ಕಮೀಶನ್. ಮೊದಲಾದ ರೀತಿಯಿಂದ ಆಕಸ್ಮಿಕ ಧನಪ್ರಾಪ್ತಿಯಾಗಿ ಹಿಂದಿನ ಸಾಲವೆಲ್ಲ ತೀರುವದು. ವಾಹನ ಸೌಖ್ಯ, ಸ್ಥಾವರ ಇಸ್ಟೇಟ ಸಂಪಾದನೆ, ವಸ್ತು ಒಡವೆಗಳ ಖರೀದಿ ಮೊದಲಾದ ಶುಭಘಟನೆಗಳು ಜರಗುವವು. ಆದರೆ ಫೆಬ್ರುವರಿ ೧೩ರಿಂದ ಮೇ೧೪, ಜೂನ ೧೫ರಿಂದ ಅಗಸ್ಟ ೧೪ರವರೆಗಿನ ಅವಧಿಯಲ್ಲಿ ಆರ್ಥಿಕ ದೃಷ್ಟಿಯಿಂದ ಅಶುಭವಿದೆ. ಆದಾಯಕ್ಕಿಂತ ವೆಚ್ಚ ಹೆಚ್ಚುವದರಿಂದ ಮತ್ತೆ ಹೊಸ ಸಾಲಕ್ಕೆ ಮೊರೆ ಹೋಗಬೇಕಾಗುತ್ತದೆ.

ವಾದ ಸ್ಪರ್ಧೆ, ಕೋರ್ಟು, ಕಚೇರಿಗಳ ಯಾವುದೇ ಪ್ರಕಾರದ ವ್ಯಾಜ್ಯಗಳಲ್ಲಿ ಈ ವರುಷ ಜಯ ಕಟ್ಟಿಟ್ಟದ್ದು. ವ್ಯಾಜ್ಯಗಳ ಬಗೆಗೆ ವಿವರವಾಗಿ ಹೇಳಬೇಕೆಂದರೆ ರಾಜಕೀಯ ಹಾಗೂ ನೌಕರರಿಗೆ ಸಂಬಂಧಿಸಿದ ವ್ಯಾಜ್ಯಗಳಿಗೆ ವರುಷದ ಮಧ್ಯದಲ್ಲಿಯೂ ದಿವಾಣಿ ವ್ಯಾಜ್ಯಗಳಿಗೆ ಪೂರ್ವಾರ್ಧದಲ್ಲಿಯೂ ಫೌಜದಾರಿ ವ್ಯಾಜ್ಯಗಳಿಗೆ ಉತ್ತರಾರ್ಧದಲ್ಲಿಯೂ ಯಶಸ್ಸು ಲಭಿಸುತ್ತದೆ.

ಈ ರಾಶಿಯ ನೌಕರ ವರ್ಗದವರಿಗೆ ಈ ವರುಷ ಮಿಶ್ರಫಲವಿದೆ. ನವ್ಹಂಬರ ೧೫ರಿಂದ ಫೆಬ್ರುವರಿ ೧೨, ಮೇ ೧೫ರಿಂದ ಜೂನ ೧೫, ಅಗಸ್ಟ ೧೫ರಿಂದ ಅಕ್ಟೋಬರ ೧೬ರವರೆಗಿನ ಈ ಆರು ತಿಂಗಳ ಕಾಲ ಅತ್ಯಂತ ಶುಭ ಹಾಗೂ ಅನುಕೂಲವಿದ್ದು ಈ ಅವಧಿಯಲ್ಲಿ ಬಡತಿ, ಇಚ್ಛಿತ ಸ್ಥಳಕ್ಕೆ ಬದಲಿ. ನಿರುದ್ಯೋಗಿಗಳಿಗೆ ಉದ್ಯೋಗ ಲಭಿಸುವಿಕೆ. ಹಂಗಾಮಿ ನೌಕರರಿಗೆ ಕಾಯಂ ಆಗುವಿಕೆ, ಮೊದಲಾದ ಶುಭಘಟನೆಗಳು ಜರುಗುತ್ತವೆ. ಆದರೆ ಫೆಬ್ರುವರಿ ೧೨ರಿಂದ ಮೇ ೧೪, ಹಾಗೂ ಜೂನ ೧೫ರಿಂದ ಅಗಸ್ಟ ೧೪ರವರೆಗಿನ ಈ ಐದು ತಿಂಗಳ ಕಾಲ ಪ್ರತಿಕೂಲ. ಅನಪೇಕ್ಷಿತ ಸ್ಥಳಕ್ಕೆ ಬದಲಿ ವರಿಷ್ಠರ ಅಸಹಕಾರವನ್ನು ಎದುರಿಸಬೇಕಾಗುತ್ತದೆ. ಈ ರಾಶಿಯ ಬಾಹ್ಯ ಹಾಗು ತಾಂತ್ರಿಕ ಕೆಲಸಗಾರ, ಪ್ರವಾಸಿ, ಸಂಚಾರಿ, ಕೆಲಸಗಾರರ ಗಿರಣಿ ಕಾರಖಾನೆಗಳ ... ಕರಿಗೆ ಈ ವರುಷ ... ದಾಯಕವಿದ್ದು, ಬಹುದಿನಗಳ ಅವರ ಆಶೆ-ಆಕಾಂಕ್ಷೆಗಳು ಈಡೇರುವವು. ಅದರಲ್ಲಿಯೂ ನವ್ಹಂಬರ ೧೫ ರಿಂದ ಫೆಬ್ರುವರಿ ೧೨, ಮೇ ೧೧ ರಿಂದ ಜೂನ ೧೫, ಅಗಸ್ಟ ೧೫ರಿಂದ ಸಪ್ಟೆಂಬರ ೧೬ರ ವರೆಗಿನ ಈ ಐದು ತಿಂಗಳ ಕಾಲ ಅತ್ಯಂತ ಶುಭ ಹಾಗೂ ಅನುಕೂಲವಿದ್ದು ಈ ಅವಧಿಯಲ್ಲಿ ಹೆಚ್ಚಿನ ಇನ್ಕ್ರಿಮೆಂಟ ಬೋನಸ್ ದೊರೆತು ಅವರ ಅನೇಕ ಬೇಡಿಕೆಗಳು ಈಡೇರಿ ದ್ರವ್ಯಾನುಕೂಲತೆ ಆಗಬಹುದಾಗಿದೆ.

ಈ ರಾಶಿಯ ಶಿಕ್ಷಕ, ಅಧ್ಯಾಪಕ, ಕಲಾವಿದ, ಲೇಖಕ, ಸಾಹಿತಿ, ಕರಣಿಕ, ಪತ್ರಿಕೋದ್ಯಮಿ, ವಕೀಲ, ಡಾಕ್ಟರ, ನ್ಯಾಯಾಧೀಶ, ಮೊದಲಾದ ಬುದ್ಧಿಜೀವಿಗಳಿಗೆ ಈ ವರುಷ ಮಿಶ್ರಫಲವಿದೆ. ನವ್ಹಂಬರ ೧೫ರಿಂದ ಫೆಬ್ರುವರಿ ೧೨ ಎಪ್ರಿಲ ೧೨ರಿಂದ ಜೂನ ೧೪, ಅಗಸ್ಟ ೧೫ರಿಂದ ಸಪ್ಟೆಂಬರ ೧೬ರವರೆಗಿನ ಈ ಆರು ತಿಂಗಳು ಅತ್ಯಂತ ಶುಭದಾಯಕ. ಈ ಕಾಲದಲ್ಲಿ ಉದ್ಯೋಗದಲ್ಲಿ ಪ್ರಗತಿ ಸಾಧಿಸುವದು. ಸರಕಾರ ಹಾಗು ಸಂಘ ಸಂಸ್ಥೆಗಳಿಂದ ಪ್ರಸಿದ್ಧಿ ಪದಕಗಳು ಲಭಿಸುವದರ ಜೊತೆಗೆ ದ್ರವ್ಯಾನುಕೂಲತೆಯಾಗಿ, ವಾಹನ ಸೌಖ್ಯ. ಪರದೇಶ ಪರ್ಯಟನ, ಸ್ಥಾವರ ಆಸ್ತಿ ಸಂಪಾದನೆ ಮೊದಲಾದ ಸ್ಮರಣೀಯ ಘಟನೆಗಳು ಜರುಗಿ ಅವರ ಬಹುದಿನದ ಕನಸು ನನಸಾಗುವದು. ಆದರೆ ಫೆಬ್ರುವರಿ ೧೨ರಿಂದ ಮೇ ೧೪. ಜೂನ ೧೫ರಿಂದ ಅಗಸ ೧೪ರವರೆಗಿನ ಈ ಕಾಲ ತುಸು ಪ್ರತಿಕೂಲವಿದ್ದು ಈ ಅವಧಿಯಲ್ಲಿ ಆರ್ಥಿಕ ಮುಗ್ಗಟ್ಟನ್ನು ಎದುರಿಸಬೇಕಾಗುವುದಲ್ಲದೆ ಉದ್ಯೋಗ ಅರ್ಧಕ್ಕೆ ನಿಲ್ಲಬಹುದು.

ಈ ರಾಶಿಯ ಸ್ವತಂತ್ರ ವ್ಯಾಪಾರ ಉದ್ಯೋಗಸ್ಥ ಉದ್ಯಮದಾರ, ಕಮೀಶನ್ ಏಜೆಂಟ. ಹಂಚಿಕೆದಾರ, ಚಾಳ ಟಾಕೀಜ, ಹೋಟೆಲ ಗಿರಣಿ, ಕಾರಖಾನೆಗಳ ಮಾಲಕವರ್ಗದವರಿಗೆಲ್ಲ ಈ ವರುಷ ಮಿಶ್ರಫಲವಿದೆ. ಪೂರ್ವಾರ್ಧ ಪ್ರಗತಿದಾಯಕವಿದ್ದು ಈ ಅವಧಿಯಲ್ಲಿ ಹೊಸ ಉದ್ಯೋಗ ಪ್ರಾರಂಭಿಸಬಹುದು. ಇಲ್ಲವೇ ಹೊಸ ಶಾಖೆಗಳನ್ನು ತೆರೆಯುವ ಹಾಗು ಉದ್ಯೋಗಕ್ಕೆ ಬೇಕಾಗುವ ಉಪಕರಣಗಳನ್ನು ಖರೀದಿಸುವ ಇವೇ ಮೊದಲಾದ ಪ್ರಗತಿದಾಯಕ ಸಂಗತಿಗಳು ಜರಗುವವು. ಆದರೆ ಉತ್ತರಾರ್ಧವು ತೀರ ಪ್ರತಿಕೂಲವಿದ್ದು ಉದ್ಯೋಗದಲ್ಲಿ ಹಿನ್ನಡೆ, ಆರ್ಥಿಕ ಮುಗ್ಗಟ್ಟಿನೊಂದಿಗೆ ನೌಕರರ ಸಮಸ್ಯೆ, ಸರಕಾರದ ನಿಬಂಧನೆಗಳನ್ನು, ಎದುರಿಸಬೇಕಾಗುತ್ತದೆ. ಈ ರಾಶಿಯ ಕೃಷಿಕ ವರ್ಗದವರಿಗೆಲ್ಲ ಶನಿ-ರಾಹುಗಳ ಬೆಂಬಲದಿಂದ ಈ ವರುಷ ಪ್ರೋತ್ಸಾಹದಾಯಕವಾಗಿದೆ. ನಿರೀಕ್ಷೆಗಿಂತ ಅಧಿಕ ಬೆಳೆ ಬರುವದರಿಂದ ಹಿಂದಿನ ಸಾಲವೆಲ್ಲ ತೀರಿ ಹೊಸದಾಗಿ ಹೊಲ ಮನೆ ಜಾಗೆ. ತೋಟ, ದನಕರು, ಟ್ರಕ್. ಟ್ರ್ಯಾಕ್ಟರ, ಪಂಪಸೆಟ ಮೊದಲಾದ ಬೇಸಾಯಕ್ಕೆ ಉಪಯುಕ್ತವಾದ ಉಪಕರಣಗಳನ್ನು ಕೊಳುವ ಇಲ್ಲವೇ ನವೀಕರಿಸುವ ಸಾಮರ್ಥ್ಯ ಬರುತ್ತದೆ.

ಕಳೆದ ಅನೇಕ ವರ ಷಗಳಿಂದ ಗೃಹಸ್ಥಾಶ್ರಮಕ್ಕಾಗಿ ಹಾತೊರೆಯುತ್ತಿರುವ ಈ ರಾಶಿಯ ವಧೂವರರಿಗೆ ಈ ವರುಷ ಅವರ ಮನೋರಥ ಈಡೇರುವುದು. ಅದರಲ್ಲಿಯೂ ನವ್ಹಂಬರ ೧೫ ರಿಂದ ಫೆಬ್ರುವರಿ ೧೨. ... ೧೫ರಿಂದ ಜೂನ ೧೫. ಈ ಆರು ತಿಂಗ... ಕಾಲದಲ್ಲಿ ವಿವಾಹ ಜರುಗಿ ಗೃಹಸ್ಥಾಶ್ರಮ ... ಆನಂದಮಯ ಜೀವನದಲ್ಲಿ ಓಲಾಡುವರು.

ಈ ರಾಶಿಯ ವಿವಾಹಿತ ಸ್ತ್ರೀ ಪುರುಷರಿಗೆಲ್ಲ ಈ ವರ್ಷ ಮಿಶ್ರಫಲವಿದೆ. ನವ್ಹೆಂಬರ ೧೫ರಿಂದ ಫೆಬ್ರುವರಿ ೧೨, ಮೇ ೧೫ರಿಂದ ಜೂನ ೧೫, ಅಗಸ್ಟ ೧೫ರಿಂದ ಅಕ್ಟೋಬರ್ ೧೬ರವರೆಗಿನ ಈ ಆರು ತಿಂಗಳು ಕಾಲ ಶುಭ ಹಾಗೂ ಅನುಕೂಲವಿದ್ದು, ಈ ಅವಧಿಯಲ್ಲಿ ಬೆಲೆಯುಳ್ಳ ವಸ್ತು ಒಡವೆಗಳ ಖರೀದಿ, ನೂತನ ಗೃಹಪ್ರವೇಶ, ತೀರ್ಥಯಾತ್ರಾ ಸಂದರ್ಶನ, ವಾಹನ ಸೌಖ್ಯ, ಸ್ಥಾವರ ಇಸ್ಟೇಟ ಸಂಪಾದನೆ ಇವೇ ಮೊದಲಾದ ಸ್ಮರಣೀಯ ಘಟನೆಗಳು ಜರುಗುತ್ತವೆ. ಫೆಬ್ರುವರಿ ೧೩ರಿಂದ ಮೇ೧೪, ಜೂನ ೧೫ರಿಂದ ಅಗಸ್ಟ ೧೪ರವರೆಗಿನ ಈ ಐದು ತಿಂಗಳ ಕಾಲ ಪ್ರತಿಕೂಲವಿದ್ದು ಆರ್ಥಿಕ ಮುಗ್ಗಟ್ಟು ಗೃಹಕಲಹದಿಂದಾಗಿ ಮನಸ್ಸಿಗೆ ನೆಮ್ಮದಿ ದೊರೆಯುವುದಿಲ್ಲ. ಈ ರಾಶಿಯ ಗರ್ಭಿಣಿಯರ ಹೆರಿಗೆಯು ನವ್ಹೆಂಬರ ೧೪ರಿಂದ ಫೆಬ್ರುವರೀ ೧೨ ಮೇ ೧೫ರಿಂದ ಜೂನ ೧೪ ಹಾಗೂ ಅಗಸ್ಟ ೧೫ರಿಂದ ಅಕ್ಟೋಬರ ೧೬ ಅವಧಿಯಲ್ಲಾದರೆ ಸುಖ ಪ್ರಸವವಾಗುವದು. ಆದರೆ ಹೆರಿಗೆಯು ಫೆಬ್ರುವರಿ ೧೨ರಿಂದ ಮೇ ೧೪ ಹಾಗೂ ಜೂನ ೧೫ರಿಂದ ಆಗಸ್ಟ೧೪ರ ಅವಧಿಯಲ್ಲಾದರೆ ಪ್ರಸೂತಿ ಕಷ್ಟದಾಯಕ ಹಾಗೂ ಶಸ್ತ್ರಕ್ರಿಯೆ ಅನಿವಾರ್ಯವಾಗಬಹುದು.

ಈ ರಾಶಿಯ ರಾಜಕೀಯ, ಸಾಮಾಜಿಕ, ಕಾರ್ಯಕರ್ತರಿಗೆ ಈ ವರುಷದ ನವ್ಹೆಂಬರ ೧೫ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಜೂನ ೧೫, ಅಗಸ್ಟ ೧೫ರಿಂದ ಅಕ್ಟೋಬರ ೧೬ರವರೆಗಿನ ಈ ಏಳು ತಿಂಗಳ ಕಾಲ ಅತ್ಯಂತ ಶುಭ ಹಾಗೂ ಅನುಕೂಲವಿದ್ದು ಈ ಕಾಲದಲ್ಲಿ ಪ್ರತ್ಯಕ್ಷ ರಾಜಕೀಯದಲ್ಲಿ ಭಾಗವಹಿಸಿ ಅನೇಕ ಸಂಘ ಸಂಸ್ಥೆಗಳ ಸದಸ್ಯರಾಗಿಯೂ ಪದಾಧಿಕಾರಿಗಳಾಗಿಯೂ ಗೌರವಾನ್ವಿತ ಸ್ಥಾನ ಮಾನ ಅಧಿಕಾರ ಪಡೆದು ಜಿಲ್ಲಾ ರಾಜ್ಯ ಮಟ್ಟದ ಗಣ್ಯವ್ಯಕ್ತಿಗಳಾಗುವುದರಲ್ಲಿ ಸಂದೇಹವಿಲ್ಲ. ಇದೇ ಅವಧಿಯಲ್ಲಿ ಜರುಗಬಹುದಾದ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದಲ್ಲಿ ಅತ್ಯಧಿಕ ಬಹುಮತದಿಂದ ಆಯ್ಕೆ ಆಗುವ ಸಂಭವವೇ ಹೆಚ್ಚು. ಅವಿರೋಧದ ಆಯ್ಕೆಯ ಸಾಧ್ಯತೆಯೂ ಉಂಟು. ಆದರೆ ಫೆಬ್ರುವರಿ ೧೨ರಿಂದ ಎಪ್ರಿಲ್ ೧೨, ಜೂನ ೧೫ರಿಂದ ಅಗಸ್ಟ ೧೪ರವರೆಗಿನ ಈ ನಾಲ್ಕು ತಿಂಗಳ ಕಾಲ ಪ್ರತಿಕೂಲವಿದ್ದು ಮಿತ್ರರು ಶತ್ರುಗಳಾಗುವ ಮೂಲಕ ಅವಿಶ್ವಾಸ ಸೂಚನೆಗೆ ಬಲಿಯಾಗಿ ಸ್ಥಾನಮಾನ ಅಧಿಕಾರ ಚ್ಯುತಿ ಇದೆ. ಇದೇ ಅವಧಿಯಲ್ಲಿ ಚುನಾವಣೆಗೆ ಸ್ಪರ್ಧಿಸದೆ ಇರುವುದೇ ಹಿತಕರವು.

ಈ ರಾಶಿಯ ವಿದ್ಯಾರ್ಥಿಗಳಿಗೆ ನವ್ಹೆಂಬರ ೧೫ರಿಂದ ಫೆಬ್ರುವರಿ೧೨. ಮೇ ೧೪ರಿಂದ ಜೂನ ೧೫ ಹಾಗೂ ಅಗಸ್ಟ ೧೫ರಿಂದ ಸಪ್ಟೆಂಬರ ೧೫ರವರೆಗಿನ ಈ ಐದು ತಿಂಗಳ ಕಾಲ ಅತ್ಯಂತ ಶುಭ ಹಾಗೂ ಅನುಕೂಲವಿದ್ದು ಈ ಕಾಲದಲ್ಲಿ ಜರುಗಲಿರುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಉಚ್ಚ ಶ್ರೇಣಿಯಲ್ಲಿ ತೇರ್ಗಡೆ ಆಗುವರಲ್ಲದೆ ಪ್ರಶಸ್ತಿ ಪದಕ ಶಿಷ್ಯವೃತ್ತಿ, ವಿದ್ಯಾರ್ಥಿ ವೇತನ ಪಡೆಯುವರು, ಅಲ್ಲದೇ ಹೆಚ್ಚಿನ ವ್ಯಾಸಂಗಕ್ಕೆ ಇಲ್ಲವೆ ಸಂಶೋಧನೆಗಾಗಿ ವಿದೇಶಯಾತ್ರೆ ಕೈಕೊಳ್ಳುವ ಸುಯೋಗವೂ ಉಂಟು. ಆದರೆ ಫೆಬ್ರುವರಿ ೧೨ರಿಂದ ಮೇ ೧೪, ಹಾಗೂ ಜೂನ ೧೫ರಿಂದ ಅಗಸ್ಟ ೧೪ರವರೆಗಿನ ಕಾಲ ಪ್ರತಿಕೂಲ ಇದ್ದು ಈ ಕಾಲದಲ್ಲಿ ಜರುಗಲಿರುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ತೇರ್ಗಡೆ ಆಗಲು ಬಹಳ ಪರಿಶ್ರಮ ಪಡಬೇಕಾಗುತ್ತದೆ.

**– ಶುಭಂ ಭವತು –**

# ಸಂಖ್ಯಾಬ್ರಹ್ಮ

ಬಂ. ರಂ. ಸರ್ವೊಕದ್ದಂ



ನಮ್ಮ ಸೀನನಿಗೆ ಭಾಷಣವೆಂದರೆ ಎಲ್ಲಿಲ್ಲದ ಹಿಗ್ಗು. ಇವನೊಬ್ಬ ನಡೆದಾಡುವ 'ಭಾಷಣ'. ಎಲ್ಲರೂ ಇವನನ್ನೇ ಭಾಷಣಕ್ಕೆ ಕರೆಯಲು ಕಾರಣವಿಲ್ಲದಿರಲಿಲ್ಲ. ಸೀನ ತನ್ನ ಸ್ವಂತ ಖರ್ಚಿನಿಂದ ಭಾಷಣಕ್ಕೆ ಹೋಗಿ ಬರುತ್ತಿದ್ದ. ಹಲವೆಡೆಯಲ್ಲಿ ಹಾರ ತುರಾಯಿಯ ಖರ್ಚನ್ನೂ ನಿಭಾಯಿಸುತ್ತಿದ್ದ. ಇಂತಹ ಭಾಷಣಕಾರನನ್ನು ಆಮಂತ್ರಿಸದವರಾರು? ಯಾರಾದರೂ ಸೀನನ ಮನೆಗೆ ಬಂದಿದ್ದಾರೆಂದರೆ, ಭಾಷಣಕ್ಕೆ ಕರೆಯಲು ಬಂದಿದ್ದಾರೆಂದೇ ಅರ್ಥ. ಸೀನ, ಮಾವ ಲಗ್ನದಲ್ಲಿ ಕೊಟ್ಟ ಕೋಟನ್ನು ಧರಿಸಿ, ಬೆಳೆಯುವ ಕಂಠಲಂಗೋಟಿ(ಟೈ)ಯನ್ನು ಉರುಲು ಹಾಕಿಕೊಂಡು, ಹೆಂಡತಿಯ ಕರವಸ್ತ್ರದಿಂದ ಮುಖ ಒರೆಸುತ್ತ ಹೊರಗೆ ಹೊರಟನೆಂದರೆ ಭಾಷಣಕ್ಕೇ ಹೋಗುತ್ತಿದ್ದಾನೆಂದು ಓಣಿಯಲ್ಲಿ ಎಲ್ಲರಿಗೂ ಗೊತ್ತು. ದಶರಥನಿಗೆ ಕೈಕೇಯಿಯ ಮೇಲೆ ಎಷ್ಟು ಪ್ರೇಮವಿತ್ತೋ ಅಷ್ಟೇ ಪ್ರೇಮ, ಸೀನನಿಗೆ ಭಾಷಣದ ಮೇಲೆ. ಮನೆಯಲ್ಲಿನ ಹೆಂಡತಿ ಮಕ್ಕಳ ಖಬರಂತೂ ಸೀನನಿಗೆ ಇರಲೇ ಇಲ್ಲವೆಂದರೆ ನಡೆದೀತು.

ಒಮ್ಮೆ ಶ್ರೀನಿವಾಸರಾಯರ ಭಾಷಣದಿಂದ ಪಾಷಾಣ ಹೃದಯಗಳು ಕರಗಿದ್ದುಂಟು. ಇನ್ನೊಮ್ಮೆ ವಿದ್ಯಾರ್ಥಿಗಳ ಸಮೂಹದಿಂದ ಪಾಷಾಣಗಳ ಸುರಿಮಳೆಯೂ ಆದದ್ದುಂಟು. ಪಾಷಾಣಗಳು ಬೀಳುವವರೆಗೂ ಭಾಷಣ ಮಾಡುವುದು ರಾಯರ ಜನ್ಮಸಿದ್ಧ ಹಕ್ಕಾಗಿತ್ತು. ನಮ್ಮ ಸೀನ್ಯಾ ಒಳ್ಳೆಯ ಉಪನ್ಯಾಸಕಾರನೂ ಹೌದು ಎಂದರೆ ನಿಮಗೆ ಆಶ್ಚರ್ಯದ ಜತೆ ಮೂರ್ಛೆ ಉಂಟಾಗಬಹುದು. ಇವನ ಭಾಷಣ ಕೇಳುವವರು ಒಂದೆರಡು 'ಅನಾಸಿನ್'ಗಳನ್ನು ಉಪ+ನ್ಯಾಸ (ಹತ್ತಿರ ಇಟ್ಟುಕೊ) ಮಾಡಿಕೊಳ್ಳದೇ ಗತಿಯಿಲ್ಲ. ತಲೆ ಇದ್ದವರಿಗೆ ತಲೆಶೂಲೆ ಖಂಡಿತ. ತಲೆ ಇಲ್ಲದವರಿಗೆ? ತಳಶೂಲೆ ನಿಶ್ಚಿತ! ಇವನೊಬ್ಬ 'ವಾಗ್ಮಿ'ಯೂ ಆಗಿದ್ದ. 'ವಾಗ್ಮಿ' ಎಂದರೆ ವಾಕ್+ಮೀ (ಮಾತಿನಿಂದ ಸ್ನಾನ ಮಾಡಿಸುವವ) ಇವನ ಮುಂದೆ ಕುಳಿತ ವಿದ್ಯಾರ್ಥಿಗಳಿಗೆ ಮುಖಗಂಗೋತ್ರಿಯ ಸ್ನಾನ ಕಟ್ಟಿಟ್ಟದ್ದೇ. ಮಳೆಗಾಲದ ಕಪ್ಪೆಯಂತೆ 'ಟರ್ ಟರ್' ಎಂದು ಗೊಗ್ಗರ ದನಿಯಲ್ಲಿ ಭಾಷಣ ಮಾಡುತ್ತಿದ್ದುದರಿಂದ 'ಆರೇಟರ್' ಎಂಬ ಆಂಗ್ಲಪದವೂ ಇವನಿಗೆ ಅನ್ವರ್ಥಕವಾಗಿತ್ತು. ಸೀನನ ಭಾಷಣಕ್ಕೆ ಮೂರೇ ಮೂರು ಹಂತಗಳು: ಮೊದಲು ಆಕಳಿಕೆ, ನಡುವೆ ಒಡಮುರಿಕೆ, ಕೊನೆಗೆ ತೂಕಡಿಕೆ!

**ಬಂದವರಿಗೆ ಕೈಕಾಲು ಮುಗಿದು, ಆಮಂತ್ರಣಗಿಟ್ಟಿಸುವ**
**ಸೀನನಿಗೆ ಭಾಷಣ ಕರೆಗಳು ಬಹಳ**
**ಈಗಾಗಲೇ ನೂರೆಂಟು ಕಡೆ ಭಾಷಣ ಮಾಡಿ,**
**ಸಭಿಕರ ತಲೆ ತಿಂದಿದ್ದಾನೆ.**
**ಆಕಾಶವಾಣಿಯ ಶ್ರೋತೃಗಳನ್ನು**
**ಗೋಳು ಹುಯ್ದುಕೊಂಡಿದ್ದಾನೆ.**
**ಪತ್ರಿಕಾ ಓದುಗರನ್ನು ನೋಯಿಸಿದ್ದಾನೆ.**
**ಈಗವನಿಗೆ ಸಂಖ್ಯೆಯ ಹುಚ್ಚು....**

# ಕರ್ನಾಟಕ ಬ್ಯಾಂಕ್
## ಶ್ರೀ




ನಮ್ಮ ನೆಚ್ಚಿನ ಗ್ರಾಹಕರಿಗೆ ಹಿತೈಷಿಗಳಿಗೆ
ಅಸಂಖ್ಯ ಠೇವಣಿದಾರರಿಗೆ
ದೀಪಾವಳಿಯ ಶುಭಾಶಯಗಳು !!

ಜನಸಾಮಾನ್ಯರಿಗೆ ನಿಲುಕುವ ನಮ್ಮ ವಿವಿಧ ಠೇವಣಿ
ಯೋಜನೆಗಳಿಂದ ಅಧಿಕ ದರದ ಬಡ್ಡಿಯ
ಪ್ರಯೋಜನವನ್ನು ಹೊಂದಿರಿ.



ಅಭ್ಯುದಯ ಕ್ಯಾಶ್ ಸರ್ಟಿಫಿಕೇಟುಗಳು
ಸಾ. ಶೇ. ೩೨ ಕ್ಕಿಂತಲೂ ಹೆಚ್ಚಿನ ಬಡ್ಡಿ ಗಳಿಸುತ್ತದೆ.

## ಕರ್ನಾಟಕ ಬ್ಯಾಂಕ್ ಲಿಮಿಟೆಡ್

( ರಿ. ಆಫೀಸು : ಮಂಗಳೂರು-575003

ಚೇರಮನ್ :
ಕೆ. ಎಸ್. ಎನ್. ಅಡಿಗ

'ಭಾಷಣ ಕೇಸರಿ' (ಭಾಷಣಕ್ಕೇ+ಸರಿ) ಶ್ರೀನಿವಾಸರಾಯರು ಕರ್ನಾಟಕ ಸಂಘದ ವಾರ್ಷಿಕೋತ್ಸವ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಹೋಗಿದ್ದರು. (ಮರುವರುಷ ಆ ಸಂಘದ ಪ್ರಾರಂಭೋತ್ಸವ ನಡೆಯಲಿಲ್ಲ) ಸ್ವಂತ ಖರ್ಚಿನಿಂದಲೇ ಬಂದ ರಾಯರನ್ನು ವಿನಯಪೂರ್ವಕವಾಗಿಯೇ ಸ್ವಾಗತಿಸಲಾಯಿತು. ಸ್ವಾಗತ ಗೀತೆ ಸ್ವಾಗತ ಭಾಷಣಗಳು ಯಥಾಪ್ರಕಾರ ಮುಗ್ಗರಿಸಿ ಮುಂದುವರಿದು ಮುಗಿದವು. ಅಪರಿಚಿತರು ರಾಯರ ಪರಿಚಯ ಮಾಡಿಕೊಡಲು ಎದ್ದು ಮೈಕಿನ ಮುಂದೆ ನಿಂತು, ಕೆಮ್ಮಿ ಖ್ಯಾಕರಿಸಿ– "ಮಹಿಳೆಯರೆ, ಮಹನೀಯರೆ; ಈ ಸಮಾರಂಭಕ್ಕೆ ಒಳ್ಳೇ ಅತಿಥಿಗಳನ್ನೇ ತರಬೇಕೆಂದು ಈ ವರೆಗೆ ಪ್ರಯತ್ನ ಮಾಡಿದೆವು. ಕೊನೆಗೆ ಯಾರೂ ಸಿಗದೆ ಶ್ರೀನಿವಾಸರಾಯರ ಮನೆಗೆ ಹೋದೆವು. ರಾಯರು ಉದಾರಿಗಳು, ಸ್ನೇಹಪರರು. ನಾವು ಕರೆಯುವ ಮೊದಲೇ ಹಟ ಹಿಡಿದು ಒಪ್ಪಿಕೊಂಡು ತಮ್ಮ ಯೋಗ್ಯತೆಯ ಪ್ರಭಾವವನ್ನು ತೋರಿಸಿಕೊಟ್ಟರು. ಶ್ರೀಯುತರು ಮುದ್ದಾಂ ಕ್ಷಮಿಸಿ ಕ್ಷಮಿಸಿ ಉದ್ದಾಂ ಕವಿಗಳು. ಇವರ ಅನೇಕ ಕವನಗಳು ನಾಡಿನ ಮೂಲೆ ಮೂಲೆಯಲ್ಲಿರುವ ವಾರ ಪತ್ರಿಕೆಗಳಲ್ಲಿ ಬಾಲ ವಿಭಾಗದಲ್ಲಿ ಅಬಾಲ ವಿಭಾಗದಲ್ಲಿ ಪ್ರಕಟಗೊಂಡಿವೆ. ಇವರು ರೇಡಿಯೋ ಕಾರ್ಯಕ್ರಮದಲ್ಲಿ ಪದೇ ಪದೇ ಭಾಗವಹಿಸಿ ಕೇಳುಗರನ್ನು ತಣಿಸಿದ್ದುಂಟು. ಬಾಲ್ಯದಲ್ಲಿಯೇ 'ಗಿಳಿವಿಂಡು' ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರಂತೆ. ಇವರ ಜನ್ಮ ಸ್ಥಳ (ಗೊತ್ತಿಲ್ಲದ್ದರಿಂದ ಅತಿಥಿಗಳಿಂದಲೇ ಕೇಳಿ ತಿಳಿದುಕೊಂಡು) 'ಹರಿನೀರ್'. ಹರಿನೀರ ನಿವಾಸಿಗಳಾದ ಇವರು ನೀರು ಹರಿದಂತೆ ಮಾತಾಡುತ್ತಾರೆ. ಇವರ ಕ್ಲಾಸಿನಲ್ಲಿ ವಿದ್ಯಾರ್ಥಿಗಳು ಬೋರ್‌ಗಲ್ಲ ಪಾತ್ರ ವಹಿಸುತ್ತಾರೆ. ಇವರು ಅನೇಕ ಉದ್ದಗ್ರಂಥಗಳನ್ನು ಬರೆದಿದ್ದಾರೆ. (ಗ್ರಂಥಗಳ ಹೆಸರಿಗಾಗಿ ಅತಿಥಿಗಳನ್ನೇ ಕೇಳಿ ತಿಳಿದುಕೊಂಡರು) 'ಪಾಕ ಶಾಸ್ತ್ರ' ಇವರ ಮೊದಲ ಕೃತಿ. ಇದಕ್ಕೆ ಪ್ರಮೀಳಾ ರಾಜ್ಯದ ಬಹುಮಾನ ದೊರಕಿದೆ. ಮತ್ತೊಂದು ಮಹತ್ವದ ಕೃತಿ 'ಸಂಖ್ಯಾ ಶಾಸ್ತ್ರ'. ನಮ್ಮಲ್ಲಿ ಆ ಈ ಕವಿಗಳಿಗೆ ಅಂಕಿ ಸಂಖ್ಯೆಯ ಹುಚ್ಚಿರುವಂತೆ ಇವರಿಗೂ ಸಂಖ್ಯಾ ಶಾಸ್ತ್ರದಲ್ಲಿ ತುಂಬಾ ಆಸಕ್ತಿ. ಇಂದು ಆ ವಿಷಯವನ್ನೇ ಕುರಿತು ಮಾತಾಡಲು ಕೇಳಿಕೊಂಡಿದ್ದೇವೆ. ಸಮಯದ ಅಭಾವದ ಮೂಲಕ ಪರಿಚಯವನ್ನು ಮುಗಿಸುತ್ತಿದ್ದೇನೆ". ಅನಂತರ ಅಧ್ಯಕ್ಷರು ಕೈಯಲ್ಲಿದ್ದ ಕನ್ನಡಕವನ್ನು ಮೂಗಿಗೇರಿಸಿ ಅತಿಥಿಗಳಿಗೆ ಮಾತಾಡುವಂತೆ ಕಳ ಕಳಿಯಿಂದ ಕೇಳಿಕೊಂಡರು. ಅತಿಥಿಗಳು ಎದ್ದು ನಿಂತು ಸಭೆಯ ಉದ್ದಗಲಕ್ಕೂ ಮಿಕಿ ಮಿಕಿ ನೋಡಿ ಪಕ್ಕದಲ್ಲಿ ಹೆಂಡತಿಯಿಲ್ಲದ್ದರಿಂದ ಧೈರ್ಯ ತಂದುಕೊಂಡು ಪ್ರಾರಂಭಿಸಿದರು.

"ನಾಲ್ಕು ಕಣ್ಣಿನ ಅಧಿ ಅಕ್ಷರೆ, ಮೂರು ಗುಣಗಳ (ಅಜ್ಞಾನ, ಅಹಂಕಾರ, ಅನಾರೋಗ್ಯ) ಕಾರ್ಯದರ್ಶಿಗಳೆ, ಹಾಗೂ ಷಡ್ರಿಪುಯುಕ್ತ ಸಭಿಕರೆ, ಈ ದಿನ ನವಮಿ, ತಾರೀಖು ೯ ಅಂಕೆಗಳಲ್ಲಿ ೯ ಸುದೈವಿ ಸಂಖ್ಯೆ, ಆದ್ದರಿಂದ ೯ ಸಂಖ್ಯೆಯ ಮಹತ್ವವನ್ನು ಕುರಿತು ಈಗ ಚರ್ಚಿಸಲಿದ್ದೇನೆ. ಸಹೃದಯ ಸಭಿಕರೇ, ನೋಡಿ! ವಿಚಾರ ಮಾಡಿ!! ಸಂಖ್ಯೆಗಳಲ್ಲಿ ೯ ದೊಡ್ಡದು ಏಕೆಂದರೆ ಹತ್ತು ಬರೆಯುವಾಗ ಒಂದರ ಮುಂದೆ ಪೂಜಿ ಕೊಡುತ್ತೇವೆ. (೧೦) ಎರಡು ಒಂದು ಬರೆದು ಹನ್ನೊಂದು (೧೧) ಎನ್ನುತ್ತೇವೆ. ಆದ್ದರಿಂದ ೧ರಿಂದ ೧೦ ಅಂಕೆಗಳಲ್ಲಿ ೯ ದೊಡ್ಡದು. ದೇವರು ಒಬ್ಬನಾದರೂ ನಾಮಗಳು ಹಲವು; ಅವತಾರಗಳು ಹಲವು. ಹಾಗೇ ೯. ಅದು ಭಿನ್ನ ಭಿನ್ನ ಅಂಕೆಗಳ ಸಮಾಗಮದಲ್ಲಿ ಸೇರಿಕೊಂಡಿದೆ. ೯ರಲ್ಲಿ ಯಾವುದಾದರೂ ಒಂದು ಒಂಟಿ ಸಂಖ್ಯೆಯನ್ನು ಕಳೆದು, ಶೇಷಕ್ಕೆ ೯ರಿಂದ ಗುಣಿಸಿ ಬಂದ ಮೊತ್ತವನ್ನು ಕೂಡಿಸಿದರೆ ಪುನಃ ೯ ಬರುವುದು. ಇಲ್ನೋಡಿ, ೯ರಲ್ಲಿ ೪ ಕಳೆಯೋಣ. ೫ ಬಂದಿದೆ. ೫ಕ್ಕೆ ೯ರಿಂದ ಗುಣಿಸಿದರೆ ೪೫ ಬರುತ್ತದೆ. ಬಂದ ಮೊತ್ತವನ್ನು ಕೂಡಿಸಿದರೆ ೪+೫=೯ ಬರುತ್ತದೆ. ಹೀಗೆ ೧ರಿಂದ ೮ರ ವರೆಗಿನ ಅಂಕೆಗಳನ್ನು ಪರೀಕ್ಷಿಸಿ ನೋಡಬಹುದು. ೯ರ ಮಗ್ಗಿಯಿಂದ ಬರುವ ಮೊತ್ತವನ್ನು ಕೂಡಿದರೂ ೯ ಬರುತ್ತದೆ. ೧೮=೯; ೨೭=೯, ೩೬=೯ ಹೀಗೇ ೧೮, ೩೬, ಮೊದಲಾದ ಮಗ್ಗಿಗಳಿಂದ ಬಂದ ಮೊತ್ತ ಕೂಡಿದರೆ ೯ ಬರುವುದು. ದೇವರಂತೆ ೯. ಇದು ನನ್ನ ಸಾಧನೆ. ಈ ೯ರ ಮಹತ್ವವನ್ನು ಕಂಡು ಹಿಡಿಯಲು ೯ ತಿಂಗಳನ್ನೇ ತೆಗೆದುಕೊಂಡಿದ್ದೇನೆ. ಇನ್ನೂ ಮುಂದೆ ನೋಡಿ ಸಂಖ್ಯಾ ಬ್ರಹ್ಮನ ಚಮತ್ಕಾರ. ಎಲ್ಲಿ ನಿಮ್ಮ ಮನಸ್ಸಿನಲ್ಲಿ ಯಾವುದಾದರೂ ಜೋಡು ಅಂಕಿಯನ್ನು ಇಟ್ಟುಕೊಳ್ಳಿ. ಅದನ್ನು ಒಂದರ ಕೆಳಗೆ ಒಂದು ಇಟ್ಟು ಕೂಡಿಸಿರಿ. ಬಂದ ಮೊತ್ತವನು ಮನದಲ್ಲಿ ಹಿಡಿದ ಅಂಕಿಯಲ್ಲಿ ಕಳೆಯಿರಿ. ಒಂಟಿ ಅಂಕಿ ಬಂದರೆ ಹಾಗೇ ಇರಲಿ. ಜೋಡು ಅಂಕಿಗಳು ಬಂದರೆ ಒಂದರ ಕೆಳಗೊಂದು ಮಾಡಿ ಕೂಡಿಸಿರಿ. ಎಲ್ಲರೂ ಹಾಗೆ ಮಾಡಿದ್ದೀರಾ ? ಸರಿ, ಸರಿ. ನಿಮ್ಮೆಲ್ಲರ ಮನದಲ್ಲಿ ಏನಿದೆ ಹೇಳಲೆ? ಒಂಬತ್ತು ಇದೆ ಅಲ್ಲವೆ? ಗುಣ, ರೂಪ, ಶೀಲಗಳು ನಿಮ್ಮಲ್ಲಿ ಭಿನ್ನವಾಗಿದ್ದರೂ ಅಂತರಂಗ ದಲ್ಲಿ ಇರುವ ಪರಮಾತ್ಮ ಒಬ್ಬನೇ. ಹಾಗೆ ನೀವು ಮನಸಿನಲ್ಲಿ ಇಟ್ಟುಕೊಂಡ ಅಂಕಿಗಳು ಬೇರೆ ಬೇರೆ ಆಗಿದ್ದರೂ ಉತ್ತರ ಒಂದೇ. ಉದಾಹರಣೆಗೆ ೨೪ ಇಟ್ಟುಕೊಂಡಿದ್ದೀರೆಂದು ಭಾವಿಸುವ. ೨+೪=೬ ಆಯಿತು. ೨೪ರಲ್ಲಿ ಕಳೆದರೆ ೧೮ ಆಯಿತು. ಎರಡನ್ನೂ ಕೂಡಿದರೆ ೧+೮=೯ ಬರುವುದು. ಮೂರು ಅಂಕಿಗಳನ್ನು ಇಟ್ಟುಕೊಳ್ಳಬಹುದು. ನೋಡಿ, ೧೩೪ ಇದೆ. ಕೂಡಿದರೆ ೮ ಬರುವುದು. ಮೇಲಿನ ಅಂಕೆಯಲ್ಲಿ (೧೩೪) ಕಳೆದರೆ ೧೨೬ ಬರುವುದು. ಮೂರನ್ನೂ ಕೂಡಿದರೆ ೧+೨+೬=೯ ಬರುವುದು.

ಸಭಿಕರೆ, ಇಷ್ಟಕ್ಕೇ ಮುಗಿಯಲಿಲ್ಲ ೯ರ ಮಹಿಮೆ. ನಾವು ಈ ಭೂಮಿಯ ಮೇಲೆ ಅವತರಿಸುವುದು ಒಂಬತ್ತು ತಿಂಗಳು ಕಳೆದ ಮೇಲೆಯೇ. ಹೊರಗೆ ಬರುವಾಗಲೇ ನಮಗೆ ಒಂಬತ್ತು ದ್ವಾರಗಳು! ಎರಡು ಕಣ್ಣು, ಎರಡು ಕಿವಿ, ಮೂಗಿನ ಎರಡು ಹೊರಳೆಗಳು, ಬಾಯಿ, ಎಷ್ಟಾಯ್ತು? ಎರಡು, ಎರಡು ನಾಲ್ಕು, ನಾಲ್ಕು ಎರಡು ಆರು, ಒಂದು, ಏಳಾಯ್ತು. ಇನ್ನೆರಡು ಎಲ್ಲಿವೆ ಎಂದು ಬಾಯಿ ಬಿಟ್ಟು ಹೇಳಬೇಕೆ? "ಬ್ಯಾಡ" ಎಂದರು ಸಭಿಕರು. ಗಲಿಬಿಲಿ ಶಾಂತವಾದ ಮೇಲೆ ಭಾಷಣ ಮುಂದುವರೆಯಿತು. "ಗ್ರಹಗಳ ಸಂಖ್ಯೆ ಒಂದಲ್ಲ, ಮೂರಲ್ಲ, ಆರಲ್ಲ, ಒಂಬತ್ತು! ರಾಮನ ಜನ್ಮ ದಿನ ನವಮಿ (೯) ಮಧ್ವಾಚಾರ್ಯರ ಜನ್ಮ ದಿನ ನವಮಿ (೯) ಮುತ್ತೈದೆಯ ಶ್ರಾದ್ಧ ಬರುವುದು ನವಮಿ (೯) ಅದಕ್ಕೆ 'ಐದಾನೋಮಿ' ಎನ್ನುತ್ತೇವೆ. ಹಾಗೆಂದರೆ ಅ+ವಿಧವಾ+ನವಮಿ ಎಂದರ್ಥ. ಮಾರನೋಮಿಯ ಹೆಸರು ಕೇಳಿದ್ದೀರಲ್ಲವೆ? ಇವೆಲ್ಲ ೯ ಸಂಖ್ಯೆಯ ವಿಜಯ ಪತಾಕೆಗಳು! ಹೊಡ್ರಿ ಚಪ್ಪಾಳೆ! ಎಂದು ಅಪ್ಪಣೆ ಕೊಡಿಸಿದ ಕೂಡಲೇ ಸಭೆ ಚಪ್‌ಚಪ್‌ಚಪ್ಪಾಳೆ ಗಟ್ಟಿಸಿತು.

ಸಂಸಾರದಲ್ಲಿ ಸತಿಪತಿಗಳು ಸರಸವಾಗಿದ್ದರೆ ಅವರಿಗೆ '೬೩' ಎಂದು ಸಂಖ್ಯೆಯಲ್ಲಿ ಸಂಕೇತಿಸುತ್ತೇವೆ. ಆದರೆ ಅವುಗಳನ್ನು ಕೂಡಿದಾಗ '೯' ಆಗುವುದೆಂದು ಯಾರಿಗೂ ತಿಳಿಯುವುದಿಲ್ಲ. ಅವರು ದ್ವಿಮುಖವಾದರೆ '೩೬' ಎಂದು ಸೂಚಿಸುತ್ತೇವೆ. ಆದರೆ ಅವುಗಳ ಮೊತ್ತವೂ '೯' ಆಗಿದೆ. ಸಾಹಿತ್ಯದಲ್ಲಿ ನವರಸಗಳ ಮಾತು ಜನಜನಿತವಾಗಿದೆ. ವ್ಯಾವಹಾರಿಕವಾಗಿ ನೋಡಿದ್ದೀರಾ? ನೀವು ಕೊಳ್ಳುವ ಎವರಡಿ ಬ್ಯಾಟರಿ ಸೆಲ್ಲಿನ ಮೇಲೆ ೯ರ ಗುರುತು ಇರುತ್ತದೆ. ಅದರೊಳಗಿಂದ ಕರಿಯ ಬೆಕ್ಕು ನೆಗೆಯುತ್ತಿರುತ್ತದೆ! ಶಿವರಾತ್ರಿಯ ನೆನಪು ಹಾರಿದರೂ 'ನವರಾತ್ರಿ'ಯ ನೆನಪು ಹಾರೀತೆ? ಹೀಗೆ ಹೇಳುತ್ತ ಹೋದರೆ ಬೆಳಗಾದೀತು". ಹೌದು. ಹೌದು ಎಂದರು ಕೆಲವರು ಬೇಸರದಿಂದ. ಒಟ್ಟಿನಲ್ಲಿ ನನ್ನ ಸಂದೇಶ ಇಷ್ಟೆ. ನವದ್ವಾರಗಳ ನರೋತ್ತಮರೆ. ಅಷ್ಟ ಮದಗಳನ್ನು ಮೆಟ್ಟಿ, ಸಪ್ತ ವ್ಯಸನಗಳನ್ನು ಅಟ್ಟಿ, ಷಡ್ರಿಪುಗಳನ್ನು (ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ) ಕುಟ್ಟಿ, ಪಂಚೇಂದ್ರಿಯಗಳನ್ನು ಕಟ್ಟಿ, ಚತುರ್ಭುಜನಾದ, ತ್ರಿಗುಣಾತೀತನಾದ ದ್ವಂದ್ವರಹಿತನಾದ, ಏಕೇಶ್ವರನಲ್ಲಿ ಐಕ್ಯರಾಗಿರೆಂದು ಹಾರೈಸುತ್ತೇನೆ. ನಾನು ಕೇಳಿಕೊಂಡ ಕೂಡಲೇ ಒಪ್ಪಿ, ಕರೆದು ತಂದ ಕಾರ್ಯದರ್ಶಿಗಳನ್ನೂ ನನ್ನಂಥವನಿಗೂ ಒದಗಲು ಅವಕಾಶವಿತ್ತ ಅಧ್ಯಕ್ಷರನ್ನೂ ತಿಳಿಯದಿದ್ದರೂ ಶಾಂತಚಿತ್ತದಿಂದ ಕೇಳಿ ತಲೆದೂಗಿದ ತಮ್ಮನ್ನೂ ಅಭಿನಂದಿಸಿ ನಾಲ್ಕು ಮಾತು ಮುಗಿಸುತ್ತೇನೆ."

ಹಾರ ತುರಾಯಿಗಳ ಜೊತೆಗೆ ಸಭಿಕರ ಆಭಾರಗಳನ್ನು ಹೊತ್ತು, ಮೈ ಭಾರವಾಗಿ ಶೀನ ಮನೆಗೆ ಬಂದಾಗ ಒಂಬತ್ತು ಗಂಟೆ! ಮುದ್ದು ಮಡದಿಯಿಂದ ಮಂತ್ರಪುಷ್ಪದ ಜೊತೆಗೆ ಮಂಗಳಾರತಿಯನ್ನೂ ಮಾಡಿಸಿಕೊಂಡು, ಮರು ದಿನ ಭಾನುವಾರವಾದ್ದರಿಂದ ೯ಕ್ಕೆ ಎದ್ದರಾಯಿತೆಂದು. ಒಂಟಿ ಹಾಸಿಗೆಯ ಮೇಲೆ ಒಂಟಿಯಾಗಿ ಇಂಗ್ಲೀಷ ೯ರ ಸಂಖ್ಯೆಯಂತೆ ಸುತ್ತಿಕೊಂಡು ಮಲಗಿದ–ನಮ್ಮ ಚೂಡಾ ಚಹಾ ಪ್ರಿಯ ಶೀನಪ್ಪದೇವಾ ! ●

## ಪ್ರಾರ್ಥನೆಯ ಗುಟ್ಟು

ನಾನು ಮಹಾಸ್ವಾರ್ಥಿ. ದೇವರನ್ನು ನನ್ನ ಸಲುವಾಗಿ ಪ್ರಾರ್ಥಿಸುತ್ತೇನೆ. ಸಂತೋಷದ ಶ್ರೀಮಂತಿಕೆಯನ್ನೇ ದಯಪಾಲಿಸು ಎಂದು ಬೇಡುತ್ತೇನೆ. ಜಾಣತನದ ಸಂಪತ್ತನ್ನೇ ನೀಡೆಂದು ವಿನಂತಿಸುತ್ತೇನೆ. ಜಗತ್ತಿನಲ್ಲಿ ಅಸಾಧ್ಯವಾದ ಕಾರ್ಯವೊಂದನು ಮಾಡಲು ಶಕ್ತಿ ದಯಪಾಲಿಸೆಂದು ಕೇಳುತ್ತೇನೆ. ದೇವರನ್ನೇ ನಂಬಿರುವಂತಹ ನಿಶ್ಶಕ್ತಿಯನ್ನು ಕೊಡು ಎಂದು ಆಗ್ರಹಿಸುತ್ತೇನೆ. ಅತಿ ದೊಡ್ಡ ಕೆಲಸವನು ಮಾಡಬಲ್ಲ ಆರೋಗ್ಯವನ್ನು ನೀಡಲು ದೇವರಲ್ಲಿ ಮೊರೆಯಿಡುತ್ತೇನೆ. ಜಗತ್ತು ನನಗೆ ಬೇಕು ನಾನು ಜಗತ್ತಿನ ಕಣಕಣವನ್ನೂ ಅನುಭವಿಸಬೇಕು. ಈ ಜಗತ್ತು ನನದು. ಈ ಆನಂದ ಅನುಭವಿಸಲು ನೂರುವರ್ಷ ಸಾಕಾಗುವದಿಲ್ಲ. ಅದಕ್ಕಾಗಿ ಅಮರತ್ವ ನನಗೆ ಬೇಕು. ದೇವರಲ್ಲಿ ಇದೆಲ್ಲವನ್ನೂ ಬೇಡುತ್ತೇನೆ. ದೇವರು ನನ್ನ ಸ್ವಾರ್ಥವನ್ನು ಕ್ಷಮಿಸಲಾರ. ನಾನು ಬೇಡಿದುದೆಲ್ಲವನ್ನೂ ನೀಡಿದರೆ-ರಾಕ್ಷಸನಾಗುತ್ತೇನೆಂದು ದೇವ ಎಣಿಸಿದ್ದಾನೆ.

ಸ್ವಾರ್ಥಿ

# ಕೆಂಪು ನೆನಪು

— ಅವ್ಯಕ್ತ ಸೋಮೇಶ್ವರ

**ಅಂತರ್ ಕಾಲೇಜು ಭಾಷಣ ಸ್ಪರ್ಧೆಯಲ್ಲಿ**
**ಅಮರನಾಥನಿಗೆ ಪ್ರಥಮ ಬಹುಮಾನ**
**ರೋಸಾ ಅವನ ಪ್ರತಿಭೆಗೆ ಮಾರುಹೋಗಿ**
**ಅವನ ಸ್ನೇಹ ಬಯಸಿದಳು.**
**ಅಮರ ಆಕೆಯಿಂದ ಬಯಸಿದುದೊಂದು**
**ಆದುದು ಇನ್ನೊಂದು !**

ಬೆಳಗ್ಗೆ ಎದ್ದೊಡನೆ ಕಿಟಕಿಯ ತೆರೆ ಸರಿಯಿಸಿ ಹೊರಗೆ ಪಕ್ಕದಲ್ಲೆ ಇರುವ ಗುಲಾಬಿ ಗಿಡಗಳತ್ತ ಕಣ್ಣು ಹಾಯಿಸುತ್ತೇನೆ. ದಿನವೂ ಒಂದಾದರೂ ಹೊಸ ಗುಲಾಬಿ ಅರಳದೆ ಇಲ್ಲ. ಚಟ್ಟಿಗಳಲ್ಲಿ ನೆಟ್ಟ ಆ ಗಿಡಗಳ ಗುಲಾಬಿಗಳನ್ನು ಯಾರೂ ಕೊಯ್ಯುವುದಿಲ್ಲ. ಅವು ಗಿಡದಲ್ಲೆ ಅರಳಿ ನಗುತ್ತಿದ್ದು ಹಾಗೆಯೆ ಕರಗಿ ಹೋಗುವಂಥವು. ದಿನವೂ ಒಂದು ಕೊಡ ನೀರನ್ನು ಆ ಗಿಡಗಳ ಬುಡಕ್ಕೆ ಎರೆದು ಅರಳಿದ, ಅರಳಲಿರುವ ಹೂಗಳನ್ನೇ ನೋಡುತ್ತ ಒಂದುಗಳಿಗೆ ಸುಮ್ಮನೆ ನಿಲ್ಲುತ್ತೇನೆ. ಆ ನವುರಾದ ಪರಿಮಳ ನಿಧಾನವಾಗಿ ಮಿದುಳಿಗೆ ಮುದ್ದುಕೊಟ್ಟು ಮನಸ್ಸಿನಾಳದಲ್ಲಿ ಮಲಗಿರುವ ಯಾವುದೋ ಭಾವನೆಗಳನ್ನು ಎಚ್ಚರಿಸುತ್ತದೆ.

ಒಮ್ಮೊಮ್ಮೆ ಕೈಗೆ ಕುಂಚವನ್ನು ಎತ್ತಿಕೊಂಡು ಗುಲಾಬಿಯ ಹೂವನ್ನು ಕಾಗದದಲ್ಲಿ ಮೂಡಿಸಲು ಯತ್ನಿಸುತ್ತೇನೆ. ಆದರೆ ಸಜೀವತೆ ಸಾಧ್ಯವಾಗದಾಗ ರೋಷದಿಂದ ಅದನ್ನು ಹರಿದು ಬಿಸಾಡಬೇಕೆಂದುಕೊಳ್ಳುತ್ತೇನೆ. ಹರಿಯಲೆಂದು ಎತ್ತಿಕೊಂಡರೂ ಮನಸ್ಸು ಬಾರದೆ ಮತ್ತೆ ಅದನ್ನು ತೆಗೆದಿರಿಸುತ್ತೇನೆ. ಹೀಗೆ ಅರ್ಧಂಬರ್ಧವಾಗಿ ಚಿತ್ರಿಸಿದ ಬಣ್ಣದ ಗುಲಾಬಿ ಇವೆ, ಒಂದು ಚಿಕ್ಕ ಪೆಟ್ಟಿಗೆ ತುಂಬ ...

ಒಂದೆರಡು ಬಾರಿ ಈ ಗುಲಾಬಿಗಿಡಗಳನ್ನೆಲ್ಲ ಕಿತ್ತು ಬಿಸಾಡಬೇಕೆಂದು, ಅವು ನಿಂತ ಮಣ್ಣಿನ ಚಟ್ಟಿಗಳನ್ನು ಒಡೆದು ಹಾಕಬೇಕೆಂದು ತೋರಿದ್ದುಂಟು. ಅವುಗಳೊಂದಿಗೆ ಆ ನೆನಪುಗಳೆಲ್ಲ ಸತ್ತು ಹೋಗಲಿ! ಆದರೆ ಸತ್ತಾವೆ ಆ ನೆನಪುಗಳು? ಇಲ್ಲ, ಇಲ್ಲ! ಅವು ಸಾಯಲಾರವು! ಸಾಯಬಾರದು.... ನನ್ನ ಕಿಟಕಿಯ ಪಕ್ಕದ ಗುಲಾಬಿಗಳಂತೆ ಅವು ನಿರಂತರ ಘಮಘಮಿಸುತ್ತ ಬಾಳಬೇಕು. ಆ ನೆನಪಿನ ನೀರುಂಡು ನನ್ನ ಚಿತ್ತ ಮೆತ್ತಗಾಗಬೇಕು, ಹಸನಾಗಬೇಕು.

× × ×

ಜ್ಞಾನೇಶ್ವರ ಕಾಲೇಜಿನಲ್ಲಿ ಏರ್ಪಡಿಸಿದ್ದ ಅಂತರ ಕಾಲೇಜು ಭಾಷಣ ಸ್ಪರ್ಧೆಗೆ ನಾನೂ ಒಬ್ಬ ಸ್ಪರ್ಧಾಳುವಾಗಿದ್ದೆ. ಅಂತಿಮ ಬಿ.ಎಸ್.ಸಿ.ಯಲ್ಲಿ ಓದುತ್ತಿದ್ದ ನಾನು ಸರ್ಕಾರಿ ಕಾಲೇಜನ್ನು ಪ್ರತಿನಿಧಿಸಿದ್ದೆ. ಇನ್ನೂ ಹಲವು ಕಾಲೇಜುಗಳ ತರುಣ ತರುಣಿಯರು ಭಾಗವಹಿಸಿದ್ದರು. ಸ್ಪರ್ಧೆ ತುಂಬ ರೋಚಕವಾಗಿ ನಡೆದಿತ್ತು. ವಿಷಯ 'ಮುಕ್ತ ಮಾನವ.' ಯುವ ಚೇತನಗಳು ಮುಕ್ತವಾಗಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದವು.

ನನಗಂತೂ ಆ ವಿಷಯ ಬಹಳಷ್ಟು ಪ್ರಿಯವಾದುದು. ಆವೇಶದಿಂದ ಮಾತನಾಡಿದೆ. ಪ್ರಥಮ ಬಹುಮಾನ ನನಗೆಂದು ಘೋಷಿತವಾಯಿತು. ದ್ವಿತೀಯ ಬಹುಮಾನ ತೆರೆಸಾ ಕಾಲೇಜಿನ ರೋಸ ಲಿಂಡ್ ಎಂಬ ಹುಡುಗಿಗೆ ಎಂದೂ ಸಾರಲಾಯಿತು. ಆಕೆಯೂ ಚೆನ್ನಾಗಿ ಮಾತನಾಡಿದ್ದಳು. ಅವಳ ಇಂಗ್ಲೀಷ್ ಅತ್ಯಂತ ಆಪ್ಯಾಯಮಾನವಾಗಿತ್ತು.

ಫಲಿತಾಂಶ ಘೋಷಿಸಲ್ಪಟ್ಟೊಡನೆ ರೋಸಲಿಂಡ್ ನನ್ನ ಬಳಿಗೆ ಓಡಿ ಎಂಬಂತೆ ಬಂದು ಅಭಿನಂದಿಸಿದಳು. ಇತರ ಅನೇಕರೂ ಆ ಸಂಪ್ರದಾಯವನ್ನು ಪಾಲಿಸಿದರು. ನಾನು ರೋಸಲಿಂಡಳನ್ನು ಅಭಿನಂದಿಸುತ್ತ, "ನ್ಯಾಯವಾಗಿ ಪ್ರಥಮ ಬಹುಮಾನ ನಿಮಗೇ ಸಲ್ಲಬೇಕಿತ್ತು. ನಿಮ್ಮ ಭಾಷಣ ಮುದ್ದಾಗಿತ್ತು" ಎಂದೆ. ಆಕೆ, "oh no no ನನಗೆ ಈವತ್ತು ಮೂಡೇ ಇರಲಿಲ್ಲ. But your speech was really wonderful" ಎಂದಳು. ನಾನು, "Oh thank you !" ಎಂದು ನಕ್ಕು ಸುಮ್ಮನಾದೆ.

ನನಗೆ ಭಾಷಣ ಸ್ಪರ್ಧೆಗಳಲ್ಲಿ ಬಹುಮಾನ ಬರುವುದು ಅದು ಪ್ರಥಮ ಸಲವೇನೂ ಆಗಿರಲಿಲ್ಲ. ಹೈಸ್ಕೂಲಿನ ದಿನಗಳಿಂದಲೂ ಭಾಷಣ ನನ್ನ ಪಾಲಿಗೆ ನೀರು ಕುಡಿದಂತೆ. ಬಂಡವಾಳವಿಲ್ಲದ ಬಡಾಯಿಯಲ್ಲಿ ನಾನು ಪ್ರಚಂಡನೆಂದು ನನ್ನ ಗೆಳೆಯರು ಗೇಲಿಮಾಡಿದ್ದರು ಎಷ್ಟೋ ವೇಳೆ. ವಿಶ್ವವಿದ್ಯಾಲಯದ ಮಟ್ಟದ ಸ್ಪರ್ಧೆಯಲ್ಲೂ ನಾನು ಭಾಗಿಯಾಗಿದ್ದೆ.

ಸಾಯಂಕಾಲ ಜ್ಞಾನೇಶ್ವರ ಕಾಲೇಜಿನಿಂದ ಹೊರಟು ನಾವು ಮಂಗಳೂರಿನ ಬಸ್ಸು ಹಿಡಿದೆವು. ಇತರ ಕಾಲೇಜುಗಳಿಂದ ಬಂದಿದ್ದ ಕೆಲವರು ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಇದ್ದರು. ಸ್ಟೇಂಡಿನಲ್ಲಿ ಬಸ್ಸಿನಿಂದ ಇಳಿದು ನಿಂತಿದ್ದ ರೋಸಲಿಂಡ್ ನಾನು ಇಳಿಯುವುದನ್ನೆ ಕಾದುಕೊಂಡಿದ್ದು, "So, good evening Let us meet again" ಎಂದು ಮುಗುಳ್ನಕ್ಕು ಸಿಟಿ ಬಸ್ಸು ಹಿಡಿಯಲು ಹೊರಟಳು.

ಎರಡು ದಿನಗಳ ಮೇಲೆ ನನಗೊಂದು ಪತ್ರ. ಅತ್ಯಂತ ಕಲಾತ್ಮಕವಾದ ಅಕ್ಷರಗಳಲ್ಲಿ ನನ್ನ ವಿಳಾಸವನ್ನು ಬರೆಯಲಾಗಿತ್ತು. "ಯಾರಪ್ಪಾ ಇದು?" ಎಂದುಕೊಳ್ಳುತ್ತಾ ಲಕೋಟೆಯನ್ನು ಒಡೆದೆ. ರೋಸಲಿಂಡಳ ಪತ್ರ! ಬಾಯಲ್ಲಿ ಹೇಳಿದ್ದು ಸಾಲದೆ ಪತ್ರವಲ್ಲೂ ಅಧಿಕೃತವಾಗಿ ತನ್ನ ಅಭಿನಂದನೆಯನ್ನು ಸಾರಿದ್ದಳು. ನನ್ನ ಭಾಷಣದ ಪ್ರತಿ ವಾಕ್ಯವನ್ನೂ ಅವಳು ನೆನಪಿಟ್ಟುಕೊಂಡಂತಿತ್ತು. ಕೆಲವನ್ನು ಉಲ್ಲೇಖಿಸಿ ತನ್ನದೇ ವ್ಯಾಖ್ಯಾನಮಾಡಿ ಇಡೀ ಭಾಷಣ ಒಂದು ಅದ್ಭುತ ನಿರೂಪಣೆ ಎಂಬಂತೆ ಕಾವ್ಯಾತ್ಮಕ ಶೈಲಿಯಲ್ಲಿ ಪ್ರಶಂಸೆ ಮಾಡಿದ್ದಳು. ಅವಳ ಅತಿಶಯೋಕ್ತಿಗೆ ನನಗೆ ನಗು ಬಂದರೂ ಪ್ರಶಂಸೆಯ ಭಾಗ ಮನಸ್ಸಿಗೆ ಪ್ರಿಯವೆನಿಸದೆ ಇರಲಿಲ್ಲ. ಹೊಗಳಿಕೆಗೆ ಕಿವಿ ನಿಗುರಿಸದೆ ಇರುವವರು ಯಾರಿದ್ದಾರೆ?

ಪತ್ರದಲ್ಲಿ ಆಕೆಯ ಸಹಿಯ ಕೆಳಗೆ ಕೆಂಪುಶಾಯಿಯಿಂದ ಚಿಕ್ಕದೊಂದು ಗುಲಾಬಿಯನ್ನು ಬಿಡಿಸಿದ್ದಳು.

ಪತ್ರಕ್ಕೆ ಉತ್ತರಿಸದಿರುವುದು ಸೌಜನ್ಯವಲ್ಲವೆಂದು ನಾಲ್ಕು ಪಂಕ್ತಿ ಬರೆದೆ. ಅದರಲ್ಲಿ ಆಕೆಯ ಭಾಷಣವನ್ನು ಒಂದಿಷ್ಟು ಕೊಂಡಾಡಲು ಮರೆಯಲಿಲ್ಲ.

ಮರುಟಪ್ಪಾಲಿನಲ್ಲಿ ಅವಳ ಪತ್ರ ಪ್ರತ್ಯಕ್ಷ. ತನಗೆ ಹಲವು ಸಹೃದಯರಾದ 'Pen friends' ಇರುವುದಾಗಿಯೂ ಈ ಪತ್ರ ಸಂಪರ್ಕದಿಂದ ಬೌದ್ಧಿಕವಾಗಿ ತಾನು ತುಂಬ ಲಾಭ ಹೊಂದಿರುವುದಾಗಿಯೂ ನಾನೂ ಆಕೆಯೊಂದಿಗೆ ಪತ್ರವ್ಯವಹಾರ ಇಟ್ಟುಕೊಂಡರೆ ತನಗೆ ಸಂತೋಷವೆಂದೂ ಕೋರಿದ್ದಳು. ಪತ್ರ ವ್ಯವಹಾರದಲ್ಲಿ ನಾನು ತುಸು ಸೋಮಾರಿಯಾದರೂ ರೋಸಲಿಂಡಳಂಥ ಹೊಸ ಹರೆಯದ ಜಾಣೆ ಹುಡುಗಿ ಪತ್ರವ್ಯವಹಾರಕ್ಕೆ ಕರೆಯುವಾಗ ಒಲ್ಲೆ ಎನ್ನುವ ಅರಸಿಕನೇನೂ ಅಲ್ಲ ನಾನು.

ನಮ್ಮ ಪತ್ರವ್ಯವಹಾರ ತೊಡಗಿತು. ಅನೇಕ ವಿಚಾರಗಳನ್ನು ನಾವು ಪತ್ರಗಳ ಮೂಲಕ ಚರ್ಚಿಸುತ್ತಿದ್ದೆವು. ಕೆಲವು ಬೌದ್ಧಿಕ ಜಟಿಲತೆಗಳನ್ನೊಳಗೊಂಡುವಾದರೆ ಇನ್ನು ಕೆಲವು ಲೋಕಾಭಿರಾಮವಾಗಿರುತ್ತಿದ್ದುವು.

ಒಂದು ಸಂಜೆ ಸಾರ್ವಜನಿಕ ಗ್ರಂಥಾಲಯಕ್ಕೆ ಹೋಗಿದ್ದೆ. ಒಂದು ಬೀರುವಿನ ಮುಂದೆ ನಿಂತು ಯಾವುದೋ ಗ್ರಂಥಕ್ಕಾಗಿ ಹುಡುಕಾಡುತ್ತಿದ್ದೆ. ಹಿಂದಿನಿಂದ "ಹಲೋ ಮಿಸ್ಟರ್ ಅಮರ್‌ನಾಥ್!" ಎಂಬ ಹೆಣ್ಣು ದನಿ ಕೇಳಿಸಿತು. ಹಿಂದಿರುಗಿ ನೋಡಿದೆ: ರೋಸಲಿಂಡ್! "ಓ ನೀವಾ?" ಎಂದೆ, ನಗುತ್ತ.

"ಯಾವ ಪುಸ್ತಕಕ್ಕಾಗಿ ಹುಡುಕಾಟ?"

"Man the invisible".

"ಇದೋ ಇಲ್ಲಿದೆ! ಕಣ್ಣೆದುರಿಗಿದ್ದೂ ಕಾಣಿಸುವು ದಿಲ್ಲವೆ?" ಎಂದು ಕಿಲಕನೆ ನಕ್ಕು ಆ ಪುಸ್ತಕವನ್ನು ತೆಗೆದು ನನ್ನ ಕೈಗಿತ್ತಳು.

"ಎಷ್ಟೋ ವಿಷಯಗಳು ಹಾಗೆಯೇ ಅಲ್ಲವೆ?" ಎಂದೆ. ಆಕೆಯೂ ಒಂದು ಪುಸ್ತಕವನ್ನು ಆಯ್ಕೆ ಮಾಡಿದ್ದಳು. "ಏನದು?" ಎಂದುದಕ್ಕೆ 'war and Peace' ಎಂಬ ಅದರ ಶೀರ್ಷಿಕೆ ತೋರಿಸಿದಳು.

"ಓದಿದ್ದೀರಾ?"

"ಇಲ್ಲ" ಎಂದೆ.

"ನಿಮಗೆ ಈಗ ಟೈಮ್ ಇದೆಯಾ? ಒಂದು ಕಡೆ ಕುಳಿತು ಸ್ವಲ್ಪ chat ಮಾಡೋಣವೆ?"

"ಟೈಮ್ ಇಲ್ಲದೇನು? ಹೋಗೋಣ" ಎಂದೆ. ಠಾಗೂರ್ ಪಾರ್ಕಿನ ಕೆಳಮೂಲೆಯ ಒಂದೆಡೆ ಹಸುರು ಹುಲ್ಲಿನ ಮೇಲೆ ಕುಳಿತೆವು. ಪತ್ರ ಮೂಲಕ ಈಗಾಗಲೇ ನಾವು ಸಾಕಷ್ಟು ಹತ್ತಿರಕ್ಕೆ ಬಂದಿದ್ದೆವು.

ಒಂದೆರಡು ನಿಮಿಷ ಇಬ್ಬರೂ ಸುಮ್ಮನಿದ್ದೆವು. ಆಕೆಯ ಬೆನ್ನ ಹಿಂದೆ ನಾಲ್ಕಾರು ಕೊಬ್ಬಿದ ಕಸಿಗುಲಾಬಿ ಗಿಡಗಳು ದೊಡ್ಡ ದೊಡ್ಡ ಹೂ ಹೊತ್ತು ನಿಂತಿದ್ದವು. ನಾನು ಅವುಗಳನ್ನು ನೋಡುತ್ತಿರುವುದನ್ನು ಗಮನಿಸಿ ರೋಸ್‌ಲಿಂಡ್, "ನಿಮಗೆ ಗುಲಾಬಿ ಎಂದರೆ ಇಷ್ಟವೆ?" ಎಂದು ಕೇಳಿದಳು. "ಹೌದು, ತುಂಬ ಇಷ್ಟ" ಎಂದೆ.

ಮಾತು ಒಂದರಿನ್ನೊಂದಕ್ಕೆ ದಾಟುತ್ತ ಹೋದವು. ನಮ್ಮ ಪರಸ್ಪರ ಅಭಿರುಚಿ, ಹವ್ಯಾಸ, ಓದಿ ಮೆಚ್ಚಿದ ಪುಸ್ತಕಗಳು, ನೋಡಿ ಸಂತೋಷಿಸಿದ ಚಿತ್ರಗಳು ಮುಂತಾದವುಗಳ ಕುರಿತು ವಿಚಾರ ವಿನಿಮಯ ನಡೆಸಿದೆವು.

ಅವಳು ಬಿಳಿಯ ಫ್ರಾಕ್, ಕೆಂಪು ಬ್ಲೌಸ್ ತೊಟ್ಟಿದ್ದಳು. ತುಸು ನೀಳವಾದ, ಆದರೆ ಕೃಶವಲ್ಲದ ಆಕಾರ. ಮುಖದಲ್ಲಿ ಬಾಲಿಶ ಮುಗ್ಧತೆ ಇರದೆ ಒಂದು ಸ್ನಿಗ್ಧಗಾಂಭೀರ್ಯದ ಕಳೆ ಇತ್ತು. ದೊಡ್ಡ ದೊಡ್ಡ ಕಣ್ಣುಗಳು ತುಸುವೇ ನೀಲಿಮಯ ನೆರಳನ್ನು ಹೊಂದಿ ಭಾವಪೂರ್ಣವಾಗಿ ತೋರುತ್ತಿದ್ದವು. ತಿಳುವಾದ ತುಟಿಗಳ ರೇಖೆಗಳು ಆ ಮುಖಕ್ಕೆ ಒಂದು ಚೆಲುವಿನ ವಿನ್ಯಾಸವನ್ನು ಮೂಡಿಸಿ, ಆಕೆ ಮಾತನಾಡುವಾಗ ಮುದ್ದಾಗಿ ಅರಳುತ್ತಿದ್ದವು. ನಗುವಿನಲ್ಲಿ ಚೆಲ್ಲಾಟ ಕಾಣಿಸದೆ, ಅಪೂರ್ವ ಆತ್ಮೀಯತಾಭಾವವೊಂದರ ಕುಲುಕಾಟ ಅವ್ಯಕ್ತ ಗೋಚರವಾಗಿತ್ತು.



ಎಣ್ಣೆ ಸೋಂಕದಿದ್ದ ಅವಳ ನಸುಗೆಂಚು ಕೂದಲ ಗುಚ್ಛಗಳು ಮೆಲುಗಾಳಿಗೆ ಆಗಾಗ ನಲಿಯುತ್ತಿದ್ದವು. ಮುಖಕ್ಕೆ ಬಹುವಾಗಿ ಕವಿದಾಗ ಹಿಂಗೈಯಿಂದ ಹಿಂದಕ್ಕೆ ನೇವರಿಸುತ್ತಿದ್ದಳು. ಆಕೆಯ ಕೊರಳಲ್ಲಿದ್ದ ಸಪೂರವಾದ ಚೈನಿನ ಪದಕಸ್ಥಾನದಲ್ಲಿ ಚಿಕ್ಕ ಚಿನ್ನದ ಶಿಲುಬೆಯೊಂದು ತೂಗುತ್ತಿತ್ತು.

ನಾನು ಅದನ್ನು ಗಮನಿಸಿ ಕೇಳಿದೆ: "ನೀವು ತುಂಬ ರಿಲಿಜಿಯಸ್ ಎಂದು ತೋರುತ್ತದೆ."

"ಛೆ, ಛೆ! ಅಷ್ಟು ಸ್ಟ್ರಾಂಚ್ ಅಲ್ಲ! of course ಯೇಸು ಸ್ವಾಮಿಯ ಬಗ್ಗೆ ನನಗೆ ತುಂಬ ಅಭಿಮಾನ. ಆದರೆ ನನಗೆ ಮತೀಯ ಕಂದಾಚಾರ ಹಿಡಿಸುವುದೇ ಇಲ್ಲ."

"ನನಗೂ ಅಷ್ಟೆ. ನನ್ನ ಪಾಲಿಗೆ ಕ್ರಿಸ್ತನೂ ಒಂದೇ ಕೃಷ್ಣನೂ ಒಂದೇ"

"ನಾನು ಭಗವದ್ಗೀತೆಯ ಭಾಷಾಂತರ ಓದಿದ್ದೇನೆ. ಕೆಲವು ಭಾಗ ನನಗೆ ಬಹಳ ಪ್ರಿಯವಾಯಿತು."

"ತುಂಬ ಸಂತೋಷ. ಯುವ ಪೀಳಿಗೆಯವರಾದ ನಾವು ಮತೀಯವಾದ ಯಾವ ಅಡ್ಡ ಬೇಲಿಗಳನ್ನೂ ಇರಿಸಿಕೊಳ್ಳಬಾರದು."

ಹೀಗೆ ತುಂಬ ಮಾತನಾಡಿದೆವು. ನಡುನಡುವೆ ತುಸು ಸುಮ್ಮನಿದ್ದು ಪಡುಬಾನಿನಲ್ಲಿ ಒಟ್ಟುಗೂಡುತ್ತಿದ್ದ ಬಣ್ಣ ಬಣ್ಣದ ಮೋಡಗಳನ್ನೂ ಚಿನ್ನದ ಬಣ್ಣಕ್ಕೆ ತಿರುಗಿ ಹೊಳೆಯಹತ್ತಿದ್ದ ಸಮುದ್ರದ ನೀರನ್ನೂ ನೋಡುತ್ತಿದ್ದೆವು.

ಕತ್ತಲಾಗಿ ದೀಪಗಳು ಹೊತ್ತಿಕೊಂಡಾಗ ಹೊರಡಲೆದ್ದೆವು. ಆಕೆ ತನ್ನ ಮನೆಯ ಪರಿಸರದ ಪರಿಚಯ ಹೇಳಿ, 'You are welcome on any day' ಎಂದು ಬೀಳ್ಕೊಟ್ಟಳು. ರೋಸಲಿಂಡಳ ಸ್ನೇಹಮಯ ವ್ಯಕ್ತಿತ್ವವನ್ನೇ ನೆನೆಯುತ್ತ ಆಕೆಯ ಪರಿಚಯ ಲಾಭವಾದುದಕ್ಕೆ ನನ್ನನ್ನೆ ನಾನು ಅಭಿನಂದಿಸಿಕೊಳ್ಳುತ್ತ ಮನೆಗೆ ಮರಳಿದೆ.

ಮುಂದಿನ ಪತ್ರದಲ್ಲಿ ಆಕೆಯ ಮನೆಗೆ ಊಟಕ್ಕೆ ಹೋಗಲು ನನಗೆ ಆಹ್ವಾನ! ಆಕೆಯ ತಾಯಿಯೂ ಒತ್ತಾಯಿಸಿ ಹೇಳಿದ್ದರಂತೆ. ಊಟ ಗೀಟಗಳಲ್ಲಿ ನನಗೆ ಅಷ್ಟಾಗಿ ಆಸಕ್ತಿಯಿಲ್ಲವಾದರೂ ರೋಸಲಿಂಡಳೊಡನೆ ಸಲ್ಲಾಪಿಸುವ ಸಂದರ್ಭವನ್ನು ಕಳೆದುಕೊಳ್ಳಬಾರದೆಂದು ಮಧ್ಯಾಹ್ನ ಆಕೆಯ ಮನೆಯನ್ನು ಅರಸಿಕೊಂಡು ಹೋದೆ. ಹೆಚ್ಚು ಕಷ್ಟವಿಲ್ಲದೆ ಮನೆ ಸಿಕ್ಕಿತು. ತಾಯಿ ಮತ್ತು ಮಗಳು– ಅವರಿಬ್ಬರೇ ಮನೆಯಲ್ಲಿ. ತುಂಬ ಸಂತೋಷದಿಂದ ನನ್ನನ್ನು ಸ್ವಾಗತಿಸಿದರು.

ಹೆಚ್ಚು ದೊಡ್ಡದಲ್ಲದ ಮನೆ. ಒಪ್ಪ ಓರಣಗಳು ಅದರ ಅಂದವನ್ನು ಹೆಚ್ಚಿಸಿದ್ದವು. ಮೆಟ್ಟಿಲ ಇಕ್ಕೆಡೆಗಳಲ್ಲಿ ಗುಲಾಬಿ ಗಿಡಗಳಿರುವ ಕುಂಡಗಳು. ನಾಲ್ಕಾರು ರಕ್ತವರ್ಣದ ಗುಲಾಬಿಗಳು ಅರಳಿದ್ದವು.

ಮಗಳಿಗಿಂತಲೂ ತಾಯಿ ಮಾತುಗಾತಿ. ನಾನು ಅಪರಿಚಿತನಾದರೂ ಅತ್ಯಂತ ಆತ್ಮೀಯತೆಯಿಂದ

ಮಾತನಾಡಿದರು. ಮಾತುಮಾತಿಗೆ ಗಟ್ಟಿಯಾದ ನಗೆ. ಆ ಸರಳವಾದ ಮನಸನು ಗುರುತಿಸಿ ನನ ಸಂಕೋಚ ಹಾರಿಹೋಯಿತು.

ಗೋಡೆಯಲ್ಲಿ ಇಬ್ಬರು ಗಂಡುಸರ ಭಾವ ಚಿತ್ರವಿದ್ದವು. ಒಂದು ರೋಸಲಿಂಡರ ತೀರಿಹೋದ ತಂದೆಯದೆಂದೂ ಇನ್ನೊಂದು, ಸೈನ್ಯದಲ್ಲಿ ಆಫೀಸರ್ ಆಗಿರುವ ಅವಳ ಅಣ್ಣನದೆಂದೂ ತಿಳಿಯಿತು ಇನ್ನೊಂದು ಹೆಂಗುಸಿನ ಚಿತ್ರ. ಅದು, ಮೈಸೂರಿನಲ್ಲಿರುವ ರೋಸಲಿಂಡಳ ಚಿಕ್ಕಮ್ಮನದಂತೆ.

ರೋಸಾಳ ಪುಸ್ತಕ ಸಂಗ್ರಹವನ್ನು ನೋಡಿದೆ. ಹಲವಾರು ಉತ್ತಮ ಅಭಿರುಚಿಯ ಪುಸ್ತಕಗಳು ಅಲ್ಲಿದ್ದವು. ಹಾಗೇ ಅವಳು ಸಂಗ್ರಹಿಸಿದ್ದ ದೇಶ ವಿದೇಶಗಳ ಅಂಚೆ ಚೀಟಿಗಳನ್ನು ನಾಣ್ಯಗಳನ್ನೂ ಚಿತ್ರಗಳನ್ನೂ ಮೇಲಿಂದ ಮೇಲೆ ನೋಡಿದೆ.

"ಓ! ಇವುಗಳನ್ನೆಲ್ಲ ಸರಿಯಾಗಿ ನೋಡಬೇಕಾದರೆ ಕೆಲವು ದಿನಗಳೇ ಬೇಕಾದಾವು"ಎಂದೆ.

"ನೀವು ಎಷ್ಟು ದಿನಗಳನ್ನು ತೆಗೆದುಕೊಳ ಬಹುದು" ಎಂದಳು.

ಊಟ ಸರಳವಾಗಿ ಚೆನ್ನಾಗಿತ್ತು. ಮೇಜಿನ ಮೇಲೆಯೆ ಊಟದ ಎಲ್ಲ ಪರಿಕರಗಳನ್ನೂ ಇರಿಸಲಾಗಿತ್ತು. ಮೂವರೂ ಮಾತಾಡುತ್ತ ರುಚಿಕಟ್ಟಾಗಿ ಉಂಡೆವು.

ಊಟವಾಗಿ ಸೋಫಾದಲ್ಲಿ ಕೂತಿರುವಾಗ ರೋಸಲಿಂಡ್ ಸೇಬು ಕತ್ತರಿಸಿ ತಂದಳು. ಅವಳ ತಾಯಿಯೂ ಬಂದು ಸಮೀಪದಲ್ಲಿ ಕೂತು ಒಂದು ಚೂರನ್ನು ಬಾಯಿಗಿರಿಸುತ್ತ, "ನೋಡಿ, ಯಾರಾದರೂ ಸ್ನೇಹಿತರು ಇದ್ದರೆ ಒಂದಿಷ್ಟು ಹೊತ್ತು ಸಂತೋಷವಾಗಿ ಕಳೆಯುತ್ತದೆ. ಕೇವಲ ನಾವೇ ಉಣ್ಣುವುದು ತಿನ್ನುವುದರಲ್ಲಿ ಏನು ಸ್ವಾರಸ್ಯವಿದೆ? ಈ ದಿನ ನೀವು ಇದ್ದುದು ನಮಗೆಷ್ಟು ಸಂತೋಷವಾಯಿತು ಬಲ್ಲಿರಾ?" ಎಂದರು.

ನಾನು ಕೃತಜ್ಞತಾ ಪೂರ್ವಕವಾಗಿ ನಕ್ಕೆ.

ರೋಸಾ ನನ್ನ ಕಾಲೇಜಿನ ಪಾಠ ಪ್ರವಚನ, ಅಧ್ಯಾಪಕರು ನನ್ನ ಅಭಿರುಚಿ ಇತ್ಯಾದಿಗಳನ್ನು ಕುರಿತು ಪ್ರಶ್ನಿಸಿದ್ದಲ್ಲದೆ ನಡು ನಡುವೆ ತನ್ನ ಕಾಲೇಜಿನ ಸ್ವಾರಸ್ಯ ವಿಚಾರಗಳನ್ನು ಹೇಳಿದಳು.

ಸ್ವಲ್ಪ ಹೊತ್ತು ಕುಳಿತಿದ್ದು, ಬೇರೆ ತುಸು ಕೆಲಸವಿದ್ದುದರಿಂದ ಹೊರಟು ನಿಂತೆ. "ಟೀ ಕುಡಿದು ಹೋಗ ಬಹುದಲ್ಲ?" ಎಂದರು ರೋಸಾಳ ತಾಯಿ.

"ಕ್ಷಮಿಸಿ, ಇನ್ನೊಮ್ಮೆ ಬರುತ್ತೇನೆ" ಎಂದೆ.

"ಬಿಡುವಾದಾಗ ಬರುತ್ತಿರಿ"

"ಓಹೋ ಖಂಡಿತವಾಗಿ"

ತಾಯಿ ಮಕ್ಕಳ ಬೆಳ್ನಗೆಯ ವಿದಾಯವನ್ನು ಪಡೆದು ಹೊರಟು ಬಂದೆ.

ಈ ಅನಿಮಿತ್ತ ಬಂಧುತ್ವವನ್ನು ದಾರಿಯುದ್ದಕ್ಕೂ ಮೆಲುಕು ಹಾಕುತ್ತಿತ್ತು ನನ್ನ ಮನಸ್ಸು.

× × ×

ವಿಶ್ವವಿದ್ಯಾನಿಲಯದ ಯುವಗೋಷ್ಠಿಯಲ್ಲಿ ಭಾಗವಹಿಸಲೆಂದು ನಾನು ಮುಂಜಾನೆಯ ಮೈಸೂರು ಬಸ್ಸು ಹತ್ತಿದ್ದೆ. ನಾನು ಸೀಟಿಗಾಗಿ ತಡಕಾಡತೊಡಗುತ್ತಲೆ, "ಹಲೋ ಅಮರ್‌ನಾಥ್!" ಎಂಬ ಇಂಪಾದ ಪರಿಚಿತ ಕಂಠ ಕೇಳಿಸಿತು. ಅತ್ತ ನೋಡಿದರೆ, ರೋಸಲಿಂಡ್! ನನಗೆ ಸ್ವಲ್ಪ ಅಚ್ಚರಿಯಾಯಿತು. "ಬನ್ನಿ ಸ್ಥಳ ಇದೆ" ಎಂದಳು. ನಾನು ತುಸು ಸಂಕೋಚದಿಂದಲೆ ಹೋಗಿ ಆಕೆಯ ಪಕ್ಕದಲ್ಲಿ ಕುಳಿತೆ "Youtn festivalಗೆ ತಾನೆ?" ಎಂದಳು. "ಹೂಂ" ಎಂದೆ "ನಾನೂ ಅಷ್ಟೆ, ನೀವು ಬರಬಹುದು ಎಂದುಕೊಂಡಿದ್ದೆ: ಆದರೆ ಇದೇ ಬಸ್ಸಿಗೆ ಬರುವಿರೆಂದು ತಿಳಿದಿರಲಿಲ್ಲ"ಎಂದಳು.

ಕಿತ್ತಳೆ ಮಾರುತ್ತ ಬಂದವನಿಂದ ಒಂದಿಷ್ಟು ಕಿತ್ತಳೆ ಕೊಂಡಳು ರೋಸಲಿಂಡ್. ನಾನು ದುಡ್ಡು ಕೊಡ ಹೋದರೂ ಆಕೆ ಕೇಳಲಿಲ್ಲ. ಬಸು ಹೊರಟಿತು.

ಅದೂ ಇದೂ ಮಾತಾಡತೊಡಗಿದೆವು. ಬಸ್ಸಿನ ತಿರುವುಗಳಲ್ಲಿ ರೋಸಾಳ ಮೈ ನನ್ನನ್ನು ಒತ್ತುತ್ತಿತ್ತು. ಗಾಳಿಯ ಬಿರುಸಿಗೆ ಆಕೆಯ ಕೂದಲು ಆಗಾಗ ನನ್ನ ಮೋರೆಯನ್ನು ಮುದ್ದಿಡುತ್ತಿತ್ತು.

ಒಮ್ಮೆ ರಸ್ತೆಯ ತೀರಾ ಬದಿಗೆ ಸರಿಯಿತು ಬಸ್ಸು ಪ್ರಯಾಣಿಕರೆಲ್ಲ ಬೆಚ್ಚಿದರು. ಕೆಳಗೆ ಸಾಕಷ್ಟು ಆಳವಾದ ಕೊಳ "ಒಂದು ವೇಳೆ ಬಸ್ಸು ಮಗುಚಿಕೊಂಡಿದ್ದರೆ?" ಎಂದು ಅವಳೆಂದಾಗ, ಹತ್ತು ಜನರೊಂದಿಗೆ ಮರಣ ಮದುವೆಗೆ ಸಮಾನ"ಎಂದೆ. ಕಿತ್ತಳೆ ಸುಲಿಯುತ್ತ.

ಬಿಸಿಲೇರುತ್ತ ಬಂದಾಗ ರೋಸಾಳ ಮಾತು ಕಡಿಮೆಯಾಯಿತು. ಆಕೆ ನಿಧಾನವಾಗಿ ತೂಕಡಿಸತೊಡಗಿದಳು. ಅವಳರಿಯದಂತೆ ಅವಳ ತಲೆ ನನ್ನ ಹೆಗಲ ಮೇಲೆ ವಿಶ್ರಮಿಸಲು ತೊಡಗಿತು. ನನಗೆ ಸಂಕೋಚ. ಒಂದೆರಡು ಬಾರಿ ಮೆಲ್ಲನೆ ಭುಜವನ್ನು ಈಚೆಗೆಳೆದುಕೊಂಡೆ. ಆಕೆ ಬೆಚ್ಚಿದಂತಾಗಿ ಕಣ್ಣು ಬಿಟ್ಟು ನಸು ನಾಚಿದಂತೆ ನಕ್ಕು ಸೆಟೆದು ಕುಳಿತುಕೊಳ್ಳಲು ಪ್ರಯತ್ನ ಪಟ್ಟಳು. ಮತ್ತೆ ಯಥಾ ಪ್ರಕಾರ ತೂಕಡಿಕೆ. ಎಚ್ಚರ.

ಮೈಸೂರು ತಲಪಿದೊಡನೆ ರೋಸಾ "ಹೋಗೋಣ" ಎಂದಳು. "ಎಲ್ಲಿಗೆ?" ಎಂದು ಕೇಳಿದೆ.

"ಯಾದವಗಿರಿಯಲ್ಲಿ ನನ್ನ ಚಿಕ್ಕಮ್ಮ ಇದ್ದಾರೆ"

"ನಾನು ಯಾವುದಾದರೂ ಲಾಜ್‌ನಲ್ಲಿ ನಿಲ್ಲುತ್ತೇನೆ" ಎಂದೆ.

"ಛೆ, ಛೆ ನಿಮಗೇನು ಹಣ ಹೆಚ್ಚಾಗಿದೆಯೆ? ನಮ್ಮ ಚಿಕ್ಕಮ್ಮ ತುಂಬ ಒಳ್ಳೆಯವರು, ಅವರಲ್ಲಿ ನಿಲ್ಲಲು ಯಾವ ತೊಂದರೆಯೂ ಇಲ್ಲ"

"ಬೇಡ, ಯಾಕೆ ಸುಮ್ಮನೆ ತೊಂದರೆ..."

"ತೊಂದರೆ ಇಲ್ಲವೆಂದೆನಲ್ಲ?"

ನನಗೆ ಆಕೆಯನ್ನು ಹಿಂಬಾಲಿಸದೆ ವಿಧಿಯೇ ಇರಲಿಲ್ಲ. ಯಾದವಗಿರಿಯ ಬಸ್ಸು ಹಿಡಿದೆವು.

ರೋಸಾ ಎಂದಂತೆ ಅವಳ ಚಿಕ್ಕಮ್ಮ ತುಂಬ ಸ್ನೇಹಮಯಿ. ಮಾತು, ನಗೆ, ಉಪಚಾರ ಎಲ್ಲ ಇವಳ ತಾಯಿಯಂತೆಯೆ ಆಕೆಯ ಪತಿ ಕಾರ್ಯ ನಿಮಿತ್ತವಾಗಿ ಬೆಂಗಳೂರಿಗೆ ಹೋಗಿದ್ದರಂತೆ.

ಯುವಜನೋತ್ಸವದಲ್ಲಿ ಪಾಲ್ಗೊಂಡೆವು. ಉತ್ಸಾಹಪೂರ್ಣ ವಾತಾವರಣ. ನಾನಾ ಕಡೆಯ ಯುವ ಪ್ರತಿಭೆಗಳ ಸಮಾವೇಶ. ಹೊಸ ಹೊಸ ಪರಿಚಯ. ವಿಧವಿಧದ ಆಕರ್ಷಕ ಕಾರ್ಯಕ್ರಮಗಳು...

ಭಾಷಣ ಸ್ಪರ್ಧೆಯಲ್ಲಿ ನಾವಿಬ್ಬರೂ ಭಾಗವಹಿಸಿದೆವು. ಈ ಬಾರಿ ನನ್ನ ಭಾಷಣ ಎಂದಿನಂತೆ ಕಳೆಕಟ್ಟಲಿಲ್ಲ. ನಡುವೆ ಯಾಕೋ ಗಂಟಲಿನ ಪಸೆ ಆರಿದಂತಾಗಿ ಕುಸು ತ್ರಾಸಪಟ್ಟೆ. ವಿಚಾರಗಳು ಓತಪ್ರೋತವಾಗಿ ಪ್ರವಹಿಸಲಿಲ್ಲ.

ರೋಸಲಿಂಡ್ ಆದರೋ ಲೀಲಾಜಾಲವಾಗಿ ನಿಯಮಿತ ಸಮಯಾವಧಿ ಸರಿಯಾಗಿ ಅಚ್ಚುಕಟ್ಟಾಗಿ ಮಾತನಾಡಿದಳು.

"ಚೆನ್ನಾಗಿ ಮಾತನಾಡಿದಿರಿ"ಎಂದ.

"ಅದಿರಲಿ, ಈ ದಿನ ವೃಂದಾವನದಲ್ಲಿ Colour Lights ಹಾಕುತ್ತಾರೆ, ಹೋಗೋಣವೇ?"

"ಓಹೋ, ಹೋಗೋಣ"–ಸಂತೋಷದಿಂದ ಒಪ್ಪಿದೆ.

ಸೂರ್ಯಾಸ್ತವಾಗುವ ವೇಳೆಗೆ ವೃಂದಾವನ ಮುಟ್ಟಿದೆವು. ನಿಸರ್ಗದ ಬೆಡಗನ್ನು ಸವಿಯುತ್ತ ಅಡ್ಡಾಡಿದೆವು. ವರ್ಣರಂಜಿತ ತುಷಾರ ಮಂಡಲಗಳು ಭಾವಲೋಕವನ್ನು ನಿರ್ಮಿಸಿದ್ದವು. ಆ ಮಾಯಾ ಆವರಣದಲ್ಲಿ ಸ್ವಪ್ನಮುದ್ರಿತ ಜೀವಿಗಳಂತೆ ಅವಾಕ್ಕಾಗಿ ಸಂಚರಿಸಿದೆವು. ಸುತ್ತುವುದು ಸಾಕಾಗಿ ಹಸಿರು ಹುಲ್ಲ ಮೇಲೆ ಕೂತೆವು.

ರೋಸಾ ಏನೋ ಬಹು ಮೆಲ್ಲಗೆ ಹಾಡತೊಡಗಿದ್ದಳು. ನಾನು ಆಕೆಯ ಮುಖವನ್ನೇ ನೋಡುತ್ತಿದ್ದೆ. ಅದು ಪ್ರಫುಲ್ಲವಾಗಿ ಉಲ್ಲಾಸದ ಅಕ್ಷಯ ಪಾತ್ರದಂತಿತ್ತು. ಸುತ್ತಲಿನ ನಿಸರ್ಗಶ್ರೀ ಹಾಗೂ ಈ ಚೆಲುವೆಯ ಸಾನ್ನಿಧ್ಯ ನನ್ನ ಮನಸ್ಸನ್ನು ಒಂದು ಅನಿರ್ವಚನೀಯ ಗುಂಗಿನಲ್ಲಿ ತೇಲಿಸಿದ್ದವು. ಪ್ರೀತಿಭಾವ ಉಕ್ಕಿ ರೋಸಾಳ ಕೈಯನ್ನು ಮೃದುವಾಗಿ ಎತ್ತಿಕೊಂಡು, "ಎಷ್ಟು ಚಂದ, ಅಲ್ಲಾ?" ಎಂದೆ ಬೇರೆನೂ ಹೇಳಲು ತೋರದೆ.

ಆಕೆ ಒಡನೆ ಬೆಚ್ಚಿದಂತಾಗಿ ಕೈಯೆಳೆದುಕೊಂಡು ಮುಖದಲ್ಲಿ ತುಸು ಅಸಮಾಧಾನವನ್ನು ಕ್ಷಣಕಾಲ ಪ್ರಕಟಿಸಿ ಮತ್ತೆ ಯಥಾಪ್ರಕಾರ ಹಸನ್ಮುಖಿಯಾಗಿ ಏನೂ ಆಗದಂತೆ ಕುಳಿತಳು. ನನಗೊಮ್ಮೆ ಪೆಚ್ಚೆನಿಸಿದರೂ ಚೇತರಿಸಿಕೊಂಡು ಬೇರೇನೋ ಮಾತೆತ್ತಿ "ಹೋಗೋಣವೆ? ತುಂಬ ತಡವಾಯಿತು" ಎಂದೆ.

"ಇಲ್ಲಿಂದ ಹೊರಡಲು ಮನಸ್ಸೇ ಬರುವುದಿಲ್ಲ" ಎಂದು ಮೆಲ್ಲನೆ ಎದ್ದಳು. ಬಸ್ಸು ಹಿಡಿದು ಯಾದವಗಿರಿಗೆ ಹಿಂದಿರುಗಿದೆವು.

ಎರಡು ದಿನಗಳ ಉತ್ಸವ ಭರ್ಜರಿಯಾಗಿ ಜರುಗಿ ಮುಗಿಯಿತು. ನಾನು ನಿರೀಕ್ಷಿಸಿದಂತೆ ರೋಸಲಿಂಡ್ ಭಾಷಣ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನವನ್ನು ಗೆದ್ದಿದ್ದಳು. ನಾನು ಈ ಬಾರಿ ಸೋತಿದ್ದೆ. ಆಕೆ ಆ ಬಗ್ಗೆ ವಿಷಾದ ವ್ಯಕ್ತಪಡಿಸಿ "ನನಗೆ ಬಹುಮಾನ ಬರುವುದಕ್ಕಿಂತಲೂ ನಿಮಗೆ ಬರುತ್ತಿದ್ದರೆ ನನಗೆ ಹೆಚ್ಚು ಆನಂದವಾಗುತ್ತಿತ್ತು"ಎಂದಳು.

"ನಿಮಗೆ ಬಂದದ್ದು ನನಗೇ ಬಂದ ಹಾಗೆ"ಎಂದು ನಕ್ಕೆ.

ಊರಿಗೆ ಹಿಂದಿರುಗಿದ ಮೇಲೂ ಆಗಾಗ ಭೇಟಿಯಾಗುತ್ತಿದ್ದೆವು. ನಡು ನಡುವೆ ಪತ್ರಗಳೂ ಓಡಾಡುತ್ತಿದ್ದವು. ಅವಳ ಬಗೆ ಮಾತ್ರ ನನಗೆ ಸಮಸ್ಯೆಯಾಗಿತ್ತು. ಆಕೆಯದು ಬರಿಯ ಸ್ನೇಹವೋ ಅವ್ಯಕ್ತ ಪ್ರೇಮವೋ ನನಗೆ ತಿಳಿಯುವಂತಿರಲಿಲ್ಲ. ಮಾತಿನಲ್ಲೂ ಪತ್ರದಲ್ಲೂ ಎಲ್ಲೆಮೀರಿ ಒಂದು ನುಡಿಯೂ ಇರುತ್ತಿರಲಿಲ್ಲ. ನಿಜ ಹೇಳಬೇಕೆಂದರೆ, ನನಗೆ ಬರಿಯ ಸ್ನೇಹ ಬೇಕಿರಲಿಲ್ಲ. ನನ್ನ ಹೃದಯ ಪ್ರೇಮಕ್ಕಾಗಿ ಹಸಿದಿತ್ತು. ಅನೇಕ ಪ್ರೇಮಕಥೆಗಳನ್ನು ಓದಿದ್ದ ನನಗೆ ವಾಸ್ತವಿಕವಾಗಿ ನನಗೂ ಅಂಥ ಕಥೆಯೊಂದರ ನಾಯಕನಾಗಬೇಕೆಂಬ ಅಭಿಲಾಷೆ ಸಹಜವಾಗಿತ್ತು.

"ಸಿದ್ಧಾರ್ಥ ಪಿಕ್ಚರ್ ಬಂದಿದೆ. ಹೋಗೋಣವೆ?" ಎಂದು ಒಂದು ಸಂಜೆ ಕೇಳಿದಳು. "ಆಗಲಿ,

ಎಂದೆ. ಬಾಲ್ಕನಿಯ ಅಕ್ಕಪಕ್ಕದಲ್ಲಿ ಕೂತೆವು. ಅರೆ ಕತ್ತಲು ಕವಿದಾಗ ಆಕೆಯ ಬೆರಳುಗಳಲ್ಲಿ ಹೆಣೆದುಕೊಳಲು ನನ್ನ ಬೆರಳುಗಳು ತವಕಿಸಿದರೂ ಧೈರ್ಯ ಸಾಲದೆ ಚಿತ್ರದಲ್ಲಿ ಮನಸ್ಸನ್ನು ಕೇಂದ್ರೀಕರಿಸಲು ಪ್ರಯತ್ನ ಪಟ್ಟೆ; ಆಕೆ ತುಂಬ ಭಾವಾವಿಷ್ಟಳಾಗಿ ಚಿತ್ರವನ್ನು ಅನುಭವಿಸುವಂತಿತ್ತು.

ಚಿತ್ರ ತಕ್ಕ ಮಟ್ಟಿಗೆ ಚೆನ್ನಾಗಿತ್ತು. ಮುಗಿದು ಹೊರಬಿದ್ದಾಗ ರಾತ್ರಿ ಒಂಬತ್ತು ಗಂಟೆ "ಮನೆಗೆ ಹೋಗೋಣ"ಎಂದಳು "ಬೇಡ" ಎಂದು ಹೇಳಬೇಕೆಂದಿದ್ದರೂ ನಾಲಗೆಯಿಂದ ಆ ಮಾತು ಹೊರಳಲಿಲ್ಲ. ಚಿತ್ರದ ಬಗ್ಗೆ ಚರ್ಚಿಸುತ್ತ ಆಕೆಯ ಮನೆಯತ್ತ ನಡೆದೆವು.

ಮನೆಯಲ್ಲಿ ರೋಸಾಳ ತಾಯಿ ಇರಲಿಲ್ಲ. ಈಚೆಗೆ ಊರಿಗೆ ಬಂದ ಅಣ್ಣನೊಂದಿಗೆ ಮೈಸೂರಿನ ಚಿಕ್ಕಮ್ಮನಲ್ಲಿಗೆ ಹೋಗಿದ್ದರಂತೆ ಮನೆಗೆ ಮುಟ್ಟಿದ ಮೇಲೆಯೇ ಆ ವಿಚಾರವನ್ನು ರೋಸಾ ಹೇಳಿದ್ದು, ಮನೆಗೆಲ್ಲಾ ಅಂದು ಅವಳೊಬ್ಬಳೇ ಒಡತಿ ಎಂಬುದು ತಿಳಿದು ಮನಸ್ಸಿಗೊಂದು ತರಹ ಎನಿಸಿದರೂ ಸಾವರಿಸಿಕೊಂಡೆ.

"ಅಡುಗೆ ಆಗಲೆ ಮಾಡಿಟ್ಟದ್ದೇನೆ ಸ್ವಲ್ಪ ಬಿಸಿ ಮಾಡಿದರಾಯಿತು. ಈ ದಿನ ನನ್ನದೇ ಅಡುಗೆ; ನಿಮಗೆ ಹೇಗೆನಿಸುತ್ತದೋ"ಎಂದಳು

"ಓ, ದಿವ್ಯವಾಗಿರುತ್ತದೆ"ಎಂದೆ.

ಊಟಕ್ಕೆ ಕೂತೆವು. ಊಟ ದಿವ್ಯವೇನೂ ಆಗಿರಲಿಲ್ಲವಾದರೂ ರುಚಿಗೇನೂ ಕೊರತೆಯಾಗಿರಲಿಲ್ಲ. ಆಗತಾನೇ ತಯಾರಿಸಿದ ಆಮ್ಲೆಟ್ ತುಂಬ ಸ್ವಾದುತರವಾಗಿತ್ತು.

"ಸ್ವಲ್ಪ ವೈನ್ ತರಲೆ?" ಎಂದು ಕೇಳಿದಳು ರೋಸಾ.

"ಬೇಡ, ಬೇಡ. ನನಗೆ ಅಭ್ಯಾಸವಿಲ್ಲ" ಎಂದೆ.

"ಇದು ಅಣ್ಣ ತಂದದ್ದು, ತೀರಾ Mild. ಅಣ್ಣ ರಮ್, ವಿಸ್ಕಿ ಇಂಥದ್ದು ತೆಕ್ಕೊಳ್ಳುತ್ತಾರೆ, ಯಾವಾಗಾದರೊಮ್ಮೆ. ಇದು ತಾಯಿಗೋಸ್ಕರ ತಂದದ್ದು, ತುಂಬ ಚೆನ್ನಾಗಿದೆ; ಟೇಸ್ಟ್ ನೋಡಿ" ಎಂದು ಪುಟ್ಟ ಚೆಲುವಿನ ಗ್ಲಾಸೊಂದರಲ್ಲಿ ಬಗ್ಗಿಸಿ ಕೊಟ್ಟಳು.

ನಾನು ಆ ಕೆಂಪು ದ್ರಾವಕವನ್ನು ಈಂಟಿದೆ ಸವಿಯಾಗಿತ್ತು. ಅಂಥ ಘಾಟು ಏನೂ ಇರಲಿಲ್ಲ. "ನಿನಗೆ?" ಎಂದು ಕೇಳಿದುದಕ್ಕೆ "ಇಲ್ಲ, ಬೇಡ" ಎಂದಳು.

"ಒಬ್ಬನೇ ತಕ್ಕೊಳ್ಳುವುದರಲ್ಲಿ ಏನು ಸ್ವಾರಸ್ಯವಿದೆ?" ಎಂದು ತುಸು ಒತ್ತಾಯಿಸಿದಾಗ ಕೊನೆಗೆ ಕೊಂಚ ಗುಟುಕರಿಸಿದಳು.

ಊಟವಾದ ಮೇಲೆ ಸ್ವಲ್ಪ ಹೊತ್ತು ರೇಡಿಯೋ ಕೇಳಿದೆವು. ಅವಳ ಅಣ್ಣ ತಂದಿದ್ದ ವಿದೇಶೀ ಸಿಗರೇಟು ಕೊಟ್ಟಳು, "ನಿಮಗೆ?" ಎಂದು ನಕ್ಕು ಕೇಳಿದೆ. "ಛೀ, ಛೀ ನನಗದೆಲ್ಲಾ ಆಗುವುದಿಲ್ಲ" ಎಂದಳು. ರೇಡಿಯೋ ನಿಲ್ಲಿಸಿದೆ. ರೋಸಾಳ ಮಾತು ಕೇಳುವುದಕ್ಕಿಂತ ರೇಡಿಯೋ ದೊಡ್ಡದಲ್ಲವಲ್ಲ?

"ನಾಳೆ ನಾನು ಮೈಸೂರಿಗೆ ಹೊರಡುತ್ತೇನೆ. ಚಿಕ್ಕಮ್ಮನಿಗೆ ಗಂಡು ಮಗುವಾಗಿದೆಯಂತೆ ನೋಡಬೇಕು"

"ಹೌದೇನು? ಮುಂಜಾನೆಯ ಬಸ್ಸಿಗೆ ತಾನೆ?"

"ಹೌದು; ನಿದ್ರೆ ಬರುತ್ತಿದೆ. ಬೆಳಗ್ಗೆ ಏಳಬೇಕಲ್ಲವೆ?" ಎಂದು ಹಾಸುಗೆ ಸಿದ್ಧಪಡಿಸಿ ಸೊಳ್ಳೆ ಪರದೆ ಕಟ್ಟಿ ಒಂದು ಚಿಕ್ಕ ಟಾರ್ಚನ್ನೂ ನನ್ನ ಬಳಿ ಇರಿಸಿ, ಐದು ಗಂಟೆಗೆ ಎಲಾರ್ಮ್ ಇಟ್ಟು, ತಾನು ಪಕ್ಕದ ರೂಮಿಗೆ ಹೋಗಿ ಮಲಗಿಕೊಂಡಳು. ಕೊಠಡಿಯ ಬಾಗಿಲನ್ನು ಎಳೆದುಕೊಂಡಳಾದರೂ ಒಳಗಿನಿಂದ ಚಿಲಕ ಹಾಕಿದ್ದೇನೂ ಕೇಳಿಸಲಿಲ್ಲ.

ನನಗೆ ಸುಲಭದಲ್ಲಿ ನಿದ್ರೆ ಬರುವಂತಿರಲಿಲ್ಲ. ಸೊಳ್ಳೆ ಪರದೆಯ ಪಂಜರದೊಳಗೆ ಸುಮ್ಮನೆ ಚಡಪಡಿಸುತ್ತಿದ್ದೆ. ಮನೆಗೆಲ್ಲಾ ಹೊಸ ಹರೆಯದ ನಾವಿಬ್ಬರೇ! ಬಯಸಿದರೂ ಸಿಗದಂಥ ಸದವಕಾಶ. ಆದರೆ ಆಕೆ ಸುಮ್ಮನೆ ಹೋಗಿ ಮಲಗಿಕೊಂಡಳಲ್ಲ? ನನ್ನನ್ನು ಆಕೆ ಆಟವಾಡಿಸುತ್ತಿದ್ದಾಳೆಯೆ? ಅವಳ ವರ್ತನೆಯಲ್ಲಿ ಯಾವ ಕಾತರತೆಯೂ, ದೈಹಿಕ ಆಮಂತ್ರಣವೂ ಇದ್ದಿಲ್ಲ. ಹಾಗಿದ್ದರೆ ತಾನೊಬ್ಬಳೆ ಇರುವುದನ್ನು ಮೊದಲು ಹೇಳದೆ ನನ್ನನ್ನು ಯಾಕೆ ಮನೆಗೆ ಕರೆದುಕೊಂಡು ಬಂದಳು? ಬಾಗಿಲಿಗೆ ಚಿಲಕ ಹಾಕದೆ ಯಾಕೆ ಮಲಗಿದ್ದಾಳೆ? ಹೆಣ್ಣಿನ ಮನದಾಳವನ್ನು ಯಾರು ಬಲ್ಲರು..?... ಮನಸು ಉದ್ವಿಗ್ನವಾಗುತ್ತಿತ್ತು. ಹೊತ್ತು ಭಾರವಾಗಿ ಸರಿಯುತ್ತಿತ್ತು. ಟಾರ್ಚ್ ಬೆಳಗಿ ವಾಚ್ ನೋಡಿದೆ. ಗಂಟೆ ಒಂದಾಗಿತ್ತು.

ಬಾಯಾರಿಕೆಯಾಗುತ್ತಿತ್ತು. "ನೀರು ಬೇಕು" ಎಂಬ ನೆವದಿಂದ ರೋಸಾಳನ್ನು ಕರೆಯೋಣವೆಂದರೆ ಆಕೆ ಸಮೀಪದ ಸ್ಟೂಲಿನಲ್ಲಿ ಬಿಸಿನೀರಿನ ಪಾತ್ರವನ್ನೂ ಲೋಟವನ್ನೂ ಮಡಗಿದ್ದಳು! ಎದ್ದು ಸೊಳ್ಳೆಯ ಪರದೆಯನ್ನು ಓಸರಿ ತುಸು ನೀರು ಕುಡಿದೆ. ದಾಹ ಅಡಗಿದಂತೆನಿಸಲಿಲ್ಲ.

ಒಮ್ಮೆ ಅವಳ ಎಸಳುತುಟಿಯನ್ನು–ಬೇಡ, ಆ ಮಿದುಗೈಯನ್ನಾದರೂ ಮುಟ್ಟಿ ಬಿಡುತ್ತೇನೆ. ಅಷ್ಟು ಭಾಗ್ಯವನ್ನಾದರೂ ಪ್ರಾಪ್ತಿಸಿಕೊಳದಿದ್ದಲ್ಲಿ ನಾನು ಶುದ್ಧ ಅರಸಿಕ. ಹೆಡ್ಡ, ಅದೃಷ್ಟಹೀನ, ಹುಚ್ಚ ಅದೇನು ಎಂದುಕೊಂಡು ಮೆಲ್ಲನೆದ್ದೆ. ಎದೆ ಡವಗುಟ್ಟುತ್ತಿತ್ತು. ಆಕೆ ಮಲಗಿದ್ದ ರೂಮಿನ ಬಾಗಿಲೆಡೆ ಬಂದೆ. ಒಂದು ಕ್ಷಣ ನಿಂತು ಮತ್ತೆ ಧೈರ್ಯ ಮಾಡಿ ಬಾಗಿಲು ನೂಕಿದೆ. ನಿರಾಯಾಸವಾಗಿ ಬಾಗಿಲು ಸರಿಯಿತು. ಮೆಲ್ಲನೆ ಟಾರ್ಚ್ ಗುಂಡಿಯನ್ನೊತ್ತಿದೆ. ರೋಸಾ ಮಂಚದ ಮೇಲೆ ಸುಖವಾಗಿ ನಿದ್ದೆ ಹೋಗಿದ್ದಳು. ಅವಳ ತುಟಿಯ ಮೇಲೆ ಒಂದು ಸುಂದರ ಮಂದಹಾಸ ಮಿನುಗುತ್ತಿತ್ತು. ಯಾವ ಕನಸೋ ಏನೊ! ಆಚೆಗೆ ತೆರೆದ ಕಿಟಕಿಯ ಮೂಲಕ ಬಿರಿದ ಗುಲಾಬಿಗಳ ನವುರಾದ ಕಂಪು ನನ್ನ ಮೂಗಿಗೆ ಸುಳಿಯಿತು.

ಹೊದ್ದ ಕೆಂಪು ಚಾದರದೆಡೆಯಿಂದ ಅವಳ ಬಲಗೈ ಹೊರಗಿಣುಕುತ್ತಿತ್ತು. ತಲೆಗೂದಲು ಸ್ವಚ್ಛಂದವಾಗಿ ದಿಂಬನ್ನು ಆಕ್ರಮಿಸಿತ್ತು. ಉಸಿರಾಟಕ್ಕನುಗುಣವಾಗಿ ಚಾದರ ನಿಧಾನವಾಗಿ ಮೇಲೂ ಕೆಳಗೂ ಚಲಿಸುತ್ತಿತ್ತು.

ಮತ್ತೂ ಒಂದೆರಡು ಬಾರಿ ಟಾರ್ಚ್ ಬೆಳಗಿ ಅವಳ ತುಟಿಯನ್ನೇ ದಿಟ್ಟಿಸಿದೆ. ನನ್ನ ಧೂರ್ತತೆಯನ್ನು ಪರಿಹಾಸ್ಯ ಮಾಡುವಂತಿದ್ದ ಅವಳ ಕಿರುನಗೆ ನನ್ನನ್ನು ಅಧೀರನನ್ನಾಗಿಸತೊಡಗಿತು. ನಾನು ಮಾಡುತ್ತಿರುವುದು ತೀರಾ ತಪ್ಪೆಂದು ಇದ್ದಕ್ಕಿದ್ದಂತೆ ಭಾಸವಾಗಲಾರಂಭಿಸಿತು. ಮುಗ್ಧ ಮಗುವಿನಂತೆ ಮಲಗಿ ನಿದ್ರಿಸುತ್ತಿದ್ದ ಅವಳ ಕೈಯನ್ನಾಗಲೀ ಕಡೆಗೆ ಹೊದ್ದ ಚಾದರವನ್ನಾಗಲೀ ಸ್ಪರ್ಶಿಸುವುದು ಸಾಧ್ಯವಾಗದೆ ಹಿಂಜರಿದು ನಿಂತೆ. ಹೀಗೆ ಕದ್ದು ಮುದಿ ಸ್ವಭಾವ ಹೇಡಿತನ. ಅವಳಾಗಿಯೇ ಒಪ್ಪಿ ಸಹಕರಿಸಿದರೆ ಮಾತ್ರ ಸೂಕ್ತವೇ ಹೊರತು ಹೀಗೆ ಮುಂದುವರಿಯುವುದು ಕೇವಲ ಪಶುತ್ವ ಎಂಬ ವಿಚಾರ ಪ್ರಬಲವಾಗಿ ಬೆಳೆದು ನನ್ನನ್ನು ರೂಮಿನಾಚೆ ತಳ್ಳಿ ಬಿಟ್ಟಿತು. ಸದ್ದಿಲ್ಲದೆ ಬಾಗಿಲಿಕ್ಕಿ ಬಂದು ಪುನಃ ಒಂದು ಲೋಟ ನೀರು ಕುಡಿದು ಸೊಳ್ಳೆಯ ಪರದೆಯ ಒಳಸೇರಿದೆ.

ಎಷ್ಟೊ ಹೊತ್ತಿನ ಬಳಿಕ ನಿದ್ರೆ ಬಂದಿರಬೇಕು. ಎಲಾರ್ಮ್ ಹೊಡೆದಾಗ ತಟಕ್ಕನೆ ಎಚ್ಚರವಾಯ್ತು. ರೋಸಾ ಒಡನೆ ಗಡಬಡಿಸಿ ಎದ್ದು ಹೊರಬಂದಳು.

"ಎಚ್ಚರವಾಯ್ತೆ ?" ಎಂದು ಕೇಳಿದಳು. "ಹೂಂ" ಎಂದು ಏಳುವ ಸನ್ನಾಹ ಮಾಡಿದೆ. "ನಿದ್ರೆ ಚೆನ್ನಾಗಿ ಬಂದಿತ್ತೆ"

"ಕನಸುಗಳಿಂದ ತುಂಬಿತ್ತು"ಎಂದೆ.

"ಈ ಮಂಚದಲ್ಲಿ ಮಲಗಿದರೆ ಕೆಟ್ಟ ಕನಸುಗಳೇ ಬೀಳುತ್ತವೆಂದು ಅಮ್ಮ ಹೇಳುತ್ತಿರುತಾರೆ"

"ಅಂಥಾದ್ದೇನೂ ಬೀಳಲಿಲ್ಲ."

ರೋಸಾ ಸ್ಟವ್ ಹೊತ್ತಿಸಿ ಚಾ ಮಾಡಿದಳು. ಚಾ ಕುಡಿದು ಮನೆಗೆ ಬಾಗಿಲಿಕ್ಕಿ ಬಸ್‌ನಿಲ್ದಾಣಕ್ಕೆ ಹೊರಟೆವು. ರೋಸಾಳ ಕೈಯಲ್ಲಿ ಚಿಕ್ಕ ಬ್ಯಾಗ್ ಮಾತ್ರವಿತ್ತು. ಮುಂಜಾನೆಯ ಕುಳಿರ್ಗಾಳಿಯನ್ನು ಉಸಿರಾಡುತ್ತ ನಿರ್ಜನವಾದ ಬೀದಿಯಲ್ಲಿ ಮುಂದುವರಿದೆವು. ಆ ಪ್ರಾತಃಕಾಲದ ಪ್ರಶಾಂತತೆಯಲ್ಲಿ ಮಾತಿಗಿಂತಲೂ ಮೌನವೇ ಹಿತವಾಗಿತ್ತು. ನಿಲ್ದಾಣ ಸಮೀಪಿಸುತ್ತಿದ್ದಂತೆ ರೋಸಾ ಹೇಳಿದಳು. "ಅಮರ್‌ನಾಥ್ ಅಂತೂ ನೀವು ತುಂಬ ಯೋಗ್ಯರು!"

"ಯಾಕೆ, ಏನಾಯ್ತು?"

"ವಿಡಂಬನೆಯಲ್ಲ, ನಿಜಕ್ಕೂ ಹೇಳಿದೆ"

"ಹೌದೆ?"

"ವೃಂದಾವನದಲ್ಲಿ ನೀವು ನನ್ನ ಕೈ ಹಿಡಿದಾಗ ನಿಮ್ಮ ಬಗ್ಗೆ ಸ್ವಲ್ಪ ಶಂಕೆ ಮೂಡಿತ್ತು. ಈಗ ಪರಿಹಾರವಾಯಿತು."

ನಾನು ನಕ್ಕಂತೆ ಮಾಡಿದೆ. ನನ್ನೆದೆಯಲ್ಲಾದ ತುಮುಲ ಅವಳಿಗೇನು ಗೊತ್ತು ?

"ಬರುತ್ತೀರಾ, ಹೋಗೋಣವೆ ಮೈಸೂರಿಗೆ?"

"ಯೋಚಿಸಿದ ತಕ್ಷಣ ಹೊರಡುವುದು ಹೇಗೆ? ಇನ್ನೊಮ್ಮೆ ನೋಡೋಣ."

"ಯಾವಾಗ?"

"ಯೋಚಿಸುತ್ತೇನೆ."

ಬಸ್ ಸಹಜವಾಗಿ ಸ್ಟಾರ್ಟ್ ಆಗಲು ಕೇಳಲೇ ಇಲ್ಲ, "ಬಸ್ಸಿಗೆ ಚಳಿ ಹಿಡಿದಿದೆಯೇನೋ"ಯಾರೋ ಗೊಣಗಿದರು. ಕಂಡಕ್ಟರ್ ಹ್ಯಾಂಡಲ್ ತಂದು ತಿರುಗಿಸಿದ ಮೇಲೆ ಸ್ಟಾರ್ಟ್ ಆಯಿತು. ಬಸ್ಸು ಹೊರಡಲಿರುವಾಗ ಕೆಳಗಿಳಿದೆ. ಕೆಂಪು ಸ್ವೆಟರ್ ತೊಟ್ಟಿದ್ದ ರೋಸಾಳಿಗೆ ಟೈಟೈ ಹೇಳುತ್ತ, ಬಸ್ಸು ತಿರುವಿನಲ್ಲಿ ಕಣ್ಮರೆಯಾಗುವುದನ್ನೇ ನೋಡುತ್ತ ನಿಂತೆ.

× × ×

ಮರುದಿನದ ಪತ್ರಿಕೆಯಲ್ಲಿ ಮೈಸೂರಿಗೆ ತೆರಳಲಿದ್ದ ಮುಂಜಾನೆಯ ಬಸ್ಸು ಸೇತುವೆಯೊಂದರ ಬಳಿ ಕೆಳಗುರುಳಿ ಹತ್ತಿಪ್ಪತ್ತು ಮಂದಿ ಸ್ಥಳದಲ್ಲೆ ಅಸುನೀಗಿದ ದುಃಖಂತವಾರ್ತೆ ವರದಿಯಾಗಿತ್ತು. ಮಡಿದವರ ಪಟ್ಟಿಯನ್ನು ಆತುರದಿಂದ ಎದೆ ಹಿಡಿದುಕೊಂಡು ಓದಿದೆ. ಎದೆಯೊಳು ಕದಡಿ ಹೋದಂತೆನಿಸಿತು. ಕಣ್ಣ ಮುಂದೆ ಕೆಂಪು... ಕೆಂಪು... ಅಳುವುದಕ್ಕೂ ತೋಚಲಿಲ್ಲ. ಮರವಟ್ಟು ನಿಂತೆ. ●

# ರಿ॥ಪ್ರೊ॥ಭೈರಿಗೆ ಕೊರೆಯಪ್ಪನವರು

ಕೆ ವೆಂಕಣ್ಣಾಚಾರ್

**ಪ್ರೊಫೆಸರಗಿರಿಯನ್ನು ಹತ್ತಿ ಈ ಇಳಿದಿರುವ ಅಂದ್ರೆ ರಿಟೈರಾಗಿರುವ ರಿ॥ಪ್ರೊ॥ ಭೈರಿಗೆ ಕೊರೆಯಪ್ಪನವರು ಪ್ರಸಂಗಾವಧಾನಿಗಳು. ಬೇಕಾದಾಗ ಭೇಟಿ ಮಾಡಿರಿ, ನಿಮ್ಮನ್ನವರು ತಮ್ಮ ಮಾತಿನ ಪ ವಾಹದಲ್ಲಿ ತಳ್ಳಿ ಗತಕಾಲಕ್ಕೆಳೆಯುತ್ತಾರೆ. ಇದೋ ಇಲ್ಲಿದೆ ಅಂಥದೊಂದು ಸ್ಯಾಂಪಲ್.**

"ಮುದುಕರ ಪ್ರಾಯ ಬಾಯಲ್ಲಿ" ಎಂಬ ಮಾತಿಗೆ ರಿಟೈರ್ಡ್ ಪ್ರೊಫೆಸರ್ ಕೊರೆಯಪ್ಪನವರೇ ಮೂಲ ಎಂದು ಖಡಾ ಖಂಡಿತವಾಗಿ ಹೇಳುತ್ತಾರೆ. ನಮ್ಮೂರಿನ ಪ್ರಪಿತಾಮಹರಾಗಿರುವ ಮಾಜಿಗಳು. ಅವರ ಮಾತಿನ ಚಪಲ, ಕೇಳಬೇಕಾದವುಂದಿ ಒಡ್ಡುವ ಅಡ್ಡಿಯನ್ನು ನಿವಾರಿಸಿಕೊಂಡು ಭೈರಿಗೆ ನಡೆಸುವ ಚಾಲೂಕು, ಶುರು ಮಾಡಿದರೆ ಕನಿಷ್ಠ ಒಂದು ಗಂಟೆಯಾದರೂ ನಿರಂತರವಾಗಿ ಕೊರೆಯುವ ಚಟ ಇವುಗಳಿಂದಾಗಿಯೇ ಅವರಿಗೆ ಭೈರಿಗೆ ಕೊರೆಯಪ್ಪ ಎಂಬ ಅಡ್ಡಹೆಸರು ಬಂದಿರಬೇಕು. ಈಗೀಗಲಂತೂ ರಿ॥ ಪ್ರೊ॥ ಭೈ॥ ಕೊರೆಯಪ್ಪ ಬಂದರು ಅಂದರೆ ಊರಿನ ಮಾಜಿಗಳು ಸತ್ತೆನೋ ಕೆಟ್ಟೆನೋ ಎಂದು ಫರಾರಿಯಾಗುತ್ತಾರೆ. ಮಾಜಿಗಳ ಗುಂಪಿನಲ್ಲಿ ರಿಟೈರ್ಡ್ ಹಟ್ ಲಾಯರ್ ಪೆಂಗಣ್ಣನವರು ಭಯಂಕರ ಆಶಾವಾದಿಗಳು. ಎಷ್ಟೊಂದು ಸಾರಿ ಸೋತರೂ ಒಂದಲ್ಲ ಒಂದು ದಿನ ಕೊರೆಯಪ್ಪನವರಿಗೆ ಖಂಡಿತಾ ಕೊರೆಯುತ್ತೇನೆ ಎಂಬ ನಂಬಿಕೆ ಅವರದ್ದು.

ಕೆಲವು ದಿನಗಳ ಹಿಂದೆ, ಈ ದಿನ ಏನಾದರಾಗಲಿ, "ಅಂದ ಕಾಲತ್ತಿಲೆ ಕಾಲೇಜು ಫಡಿಕ್ಕಪೋದು" ಎಂದು ತಮಿಳು ಸಿನಿಮಾದ ಬಾಲಯ್ಯನ ಥರಾ ಶುರು ಮಾಡಿಯೇ ಬಿಡಬೇಕೆಂದು ಬಂದಿದ್ದ ಪೆಂಗಣ್ಣನವರ ನಿರ್ಧಾರ, ಕೊರೆಯಪ್ಪನವರು ಪೇರಿಸಿಟ್ಟಿದ್ದ ಗರಮಾಗರಂ ಖಾರಾ ಮಂಡಕ್ಕಿ ಹಾಗೂ ಮೆಣಸಿನಕಾಯಿ ಬೋಂಡಗಳ ರಾಶಿಯನ್ನು ಕಂಡೊಡನೆಯೇ ಕರಗಿ ಬಾಯಲ್ಲಿನ ಜೊಲ್ಲಿನ ರೂಪ ಪಡೆಯಿತು. ಕೊರೆತ, ತಿನಿಸು ಎರಡರ ಛಾನ್ಸನ್ನೂ ಏಕೆ ಗಿಟ್ಟಿಸಬಾರದು ಎಂಬ ಯೋಚನೆ ಅವರ ತಲೆಗೆ ಹೊಳೆದ ಒಡನೆಯೇ, ತಾವು ಡಿಗ್ರಿ ಪರೀಕ್ಷೆಯಲ್ಲಿ ಎಂಟು ಸಾರಿ ಢುಂ ಆದುದು, ಎರಡನೇ ಸಾರಿ ಢುಂ ಆದಾಗಲೇ ಫುಟ್‌ಲಾಯರಿ ಫುಲ್ಲಯ್ಯನ ನಕ್ಷತ್ರಿಕನಂತೆ ಬೆನ್ನು ಹತ್ತಿದ್ದು, ಅವನ ಬಾಧೆಯಿಂದ ಪಾರಾಗಲು ಅವನ ಅಷ್ಟಮ ಪುತ್ರಿ ಅಸ್ತಮಾ ಪೀಡಿತೆ ಚೆಟ್ಟಮ್ಮನಿಗೆ ಜುಟ್ಟು ಕೊಟ್ಟಿದ್ದು, ಗಂಡ ಹೆಂಡತಿ ಸರಿಯಾಗಿ ಒಬ್ಬರನ್ನೊಬ್ಬರು ನೋಡಬದ್ದರೂ, ಪ್ರೊಡಕ್ಷನ್ ಮಾತ್ರ ನಿಲ್ಲದೆ ಹೋದುದು, ಮೊದಲಾದ ಸಂಗತಿಗಳನ್ನು ಕೊರೆಯಬೇಕೆಂದು ಬಯಸಿದ ಪೆಂಗಣ್ಣ ಆರಂಭದಲ್ಲಿ ಸಸ್ಪೆನ್ಸ್ ಕ್ರಿಯೇಟ್ ಮಾಡಕೆಂದು "ಏನ್ರಿ, ಮಿ. ಕೊರೆಯಪ್ಪ ನಾನು ಐದನೇ ಬಾರಿ ಡಿಗ್ರಿ ಪರೀಕ್ಷೆಯಲ್ಲಿ ಫೇಲಾದಾಗ ಏನಾಯ್ತು ಗೊತ್ತೆ?" ಎಂದು ಕೇಳಿದಾಗ ಇಂಥದನ್ನು ನಿರೀಕ್ಷಿಸಿದ್ದ ಕೊರೆಯಪ್ಪ "ಊರಿಗೇ ಗೊತ್ತಿರೋದು ನನಗ್ಗೊತ್ತಿಲ್ಲವೇನ್ರಿ ಪೆಂಗಣ್ಣ. ಆವಾಗ್ಲೆ ಅಲ್ಲೇನ್ರಿ ನಿಮಗೆ ಐದನೇ ಹೆಣ್ಣು ಮಗುವಾದದ್ದು ?" ಎಂಬ ಕೌಂಟರ್ ಕ್ವೆಶ್ಚನ್ ಹಾಕಿದಾಗ ಪೆಂಗಣ್ಣನವರ ಉತ್ಸಾಹ ಜರ್‍ರನೆ ಇಳಿದು ಹೋಯಿತು. ಕೊರೆಯೋ ಛಾನ್ಸಂತೂ ಹೋಯಿತು. ತಿನ್ನೋದನ್ನಾದರೂ ಏಕೆ ಕಡಿಮೆ ಮಾಡಿಕೋಬೇಕು ಎಂದುಕೊಂಡು ಬಾಯಿ ತುಂಬಾ ಖಾರಾ ಮಂಡಕ್ಕಿ ಮುಕ್ಕಿ ಮೇಲೆರಡು ಮೆಣಸಿನಕಾಯಿ ಬೋಂಡಾಗಳನ್ನು ಗಿಡಿದು ಮುಕ್ಕಯತೊಡಗಿದರು.

"ಬರಿ ಎಂಟು ಸಾರಿ ಫೇಲಾದ್ದು, ಆರು ಮಕ್ಕಳ ತಂದೆಯಾದದ್ದು ಇವೇ ಮಹಾ ಸಾಧನೆ ಅಂತೀರಲ್ರಿ. ನಾನು ಓದುತ್ತಿದ್ದಾಗ ಬರುತ್ತಿದ್ದ ಕಾಲೇಜಿಗೆ ಗುಬ್ಬಯ್ಯಾಂತ. ಅವನು ಇಂಟರಿನಲ್ಲಿ ಹದಿನೆಂಟು ಸಾರಿ ಢುಂ ಆಗಿದ್ದ. ಆರು ಮಕ್ಕಳಿದ್ದರು ಅವನಿಗೆ. ಆದರೂ ಎಂಥಾ ದಿಲ್ದಾರ ಗೊತ್ತೇನ್ರಿ" ಎಂದಾಗ ತಿಂಡಿ ಮೆಲ್ಲುವುದರಲ್ಲಿ ಮಗ್ನರಾಗಿದ್ದ ಮಾಜಿಗಳು ಇಲ್ಲವೆಂಬಂತೆ ಗೋಣು ಹಾಕಿದರು. ಕೊರೆತ ಶುರು ಮಾಡಲು ಸತ್ಕಾಲ ಇದೇ ಎಂಬುದನ್ನು ಕಂಡುಕೊಂಡ ಕೊರೆಯಪ್ಪ ಭೈರಿಗೆ ಚಾಲೂ ಮಾಡಿದರು.

## ಗುಬ್ಬಯ್ಯ

ಹೆಸರು ಗುಬ್ಬಯ್ಯನಾದರೂ ಅವನಿದ್ದುದು ರಾಕ್ ಪಕ್ಷಿಯಂತೆ. ನಮ್ಮ ಊರಿನ ಭಾರಿ ಲಕ್ಷಾಧಿಪತಿಯ ಒಬ್ಬನೇ ಮಗನಾದ ಗುಬ್ಬಯ್ಯ ಮಿಲ್ಲು, ಮಂಡಿ, ಲೇವಾದೇವಿ, ತೋಟ ಮೊದಲಾದ ವ್ಯವಹಾರಗಳ ಗಲಾಟೆಯಲ್ಲಿಯೂ ಕೆಲಸವಿಲ್ಲದ ಮಂದಿ ಕ್ಲಬ್ಬಿಗೆ ಹೋಗೋ ಹಾಗೆ ಬರ್ತಿದ್ದ ಕಾಲೇಜಿಗೆ. ಅವನು ಮನಸ್ಸಿಗೆ ಬಂದಾಗ ಬರ್ತಿದ್ದ. ಬೇಕಾದಷ್ಟು ಕಾಲ ಬೇಕಾದಲ್ಲಿ ಇದ್ದು ಸಾಕು ಎನಿಸಿದಾಗ ಹೋಗುತ್ತಿದ್ದ. ಅವನ ಎಷ್ಟೋ ಜೂನಿಯರ್‌ಗಳು ಅದೇ ಕಾಲೇಜಿಗೆ ಲೆಕ್ಚರರುಗಳಾಗಿ ಬಂದು ಅನೇಕ ವರ್ಷ ಸೇವೆ ಸಲ್ಲಿಸಿದ್ದರು. ಇದರಿಂದ ಅವನಿಗೇನೂ ಅಳುಕಾಗಿರಲಿಲ್ಲ. ಅವರೆಲ್ಲರನ್ನೂ ಇವನು ಏನ್ರೋ ಎನುವುದು ಅವರು ಇವನನ್ನು ಅಣ್ಣ ಎನ್ನುವುದು, ಎಲ್ಲರೂ ಒಟ್ಟಿಗೆ ಕಾಫಿ–ಸಿಗರೇಟು ಹೊಡೆಯುವುದು ನಡೆದಿತ್ತು. ವಿದ್ಯಾರ್ಥಿಗಳ ನಾಯಕನೂ, ಅಧ್ಯಾಪಕರ ಮಿತ್ರನೂ, ಪ್ರಿನ್ಸಿಪಾಲರ ನರ್ಮ ಸಚಿವನೂ ಆಗಿದ್ದ ಗುಬ್ಬಯ್ಯನೇ ಆ ಕಾಲೇಜಿಗೆ ನಿಜವಾದ ಯಜಮಾನ. ಇನ್ನೇನು ಹೇಳಲಿ ಕಾಲೇಜಿಗೆ ರಜಾ ಬೇಕು ಎನಿಸಿದರೆ ನಾವು ಕೇಳುತ್ತಿದ್ದುದು ಅವನನ್ನೇ. ಇಂಥಾ ಹೀರೋ ಇರೋವಾಗ ಏನ್ಹೇಳ್ಲಿ ಅದರ ಮಜಾ? ಕಾಲೇಜಿನಲ್ಲಿ ಯಾರ ಬಾಯಲ್ಲಿ ಕೇಳ್ರಿ ಅವನ್ದೇ ಹೆಸರು, ಅವನ್ದೇ ಚರ್ಚೆ.

## ಹಳೇಬಾಕಿ

ಗುಬ್ಬಯ್ಯನ ಕಾರುಬಾರಿನಿಂದ ಕಳವಳಪಡುತ್ತಿದ್ದ ಒಬ್ಬನೇ ಮನುಷ್ಯ ಕಾಲೇಜ್ ಕ್ಯಾಂಟೀನಿನ ಕುಪ್ಪಯ್ಯ. ಅವನು ಎಷ್ಟೋ ಸಾರಿ "ಯಾವಾಗ್ಸಾರ್ ಗುಬ್ಬಯ್ಯನೋರು ಕಾಲೇಜು ಬಿಡೋದು?" ಎಂದು ನಮ್ಮನ್ನೇ ಕೇಳಿದ್ದ. ಇದಕ್ಕೆ ಕಾರಣ ಇತ್ತು. ದಿನಕ್ಕಿಪ್ಪತ್ತು ಬಾರಿ ಹುಡುಗ್ರು, ಮೇಷ್ಟ್ರುಗಳು, ಕ್ಲಾರ್ಕುಗಳು, ಅಟೆಂಡರು, ಜವಾನರು ಹೀಗೆ ಯಾರ್ಯಾರನ್ನೊ ಗುಂಪು ಕಟ್ಟಿಕೊಂಡು ಕ್ಯಾಂಟೀನಿಗೆ ನುಗ್ಗಿ ಮಾಡಿಟ್ಟಿದ್ದೆಲ್ಲವನ್ನೂ ಖಾಲಿಮಾಡಿ 'ಬರ್ಕೊಳ್ರಿ ಭಟ್ರೆ' ಎನ್ನುತ್ತಿದ್ದ ಗುಬ್ಬಯ್ಯ. ದಿನವೂ ಹೀಗೆ ಮಾಡುತ್ತಾ ಬಂದದ್ದರಿಂದ ಒಡಕಲು ಕಪ್ಪು ಬಸಿ, ಉಟ್ಟಿದ್ದ ಹರಕಲು ಪಂಚೆ ಬಿಟ್ಟು ಕುಪ್ಪಯ್ಯನ ಸಮಸ್ತ ಲಾಭ ಹಾಗೂ ಬಂಡವಾಳಗಳು ಗುಬ್ಬಯ್ಯನ ಲೆಕ್ಕದಲ್ಲಿ ಅಂಕಿಗಳಾಗಿದ್ದವು. ಇದರಿಂದ ಆ ಬಡಪಾಯಿ ರೋಸಿಹೋಗಿದ್ದ.

ಅದೊಂದು ದಿನ. ಬೆಳಗಿನ ಬೋಣಿಗಿಗಾಗಿ ಕಾದು ಕುಳಿತಿದ್ದ ಕುಪ್ಪಯ್ಯ. ಅದೇ ಸಮಯಕ್ಕೆ ಐವತ್ತು ಜನರ ದಂಡಿನೊಂದಿಗೆ ನುಗ್ಗಿದ ಕ್ಯಾಂಟೀನಿನೊಳಗೆ ಗುಬ್ಬಯ್ಯ. ಸಂಜೆಯ ವರೆಗೂ ಆಗಲಿ ಎಂದುಮಾಡಿಟ್ಟಿದ್ದ ಉಪ್ಪಿಟ್ಟು ಕೇಸರಭಾತುಗಳು ಬೆಳಿಗ್ಗೆನೇ ಖಾಲಿಯಾಗಿ ಅಂಕೆಗಳಾಗಿ ಬಿಡುವುವಲ್ಲಾ ಎಂದು ಚಿಂತಿಸಿದ ಕುಪ್ಪಯ್ಯ ಧೈರ್ಯ ತಂದುಕೊಂಡು "ಹೋಯ್ ಮಾರಾಯ್ರೆ. ದಿನಾ ಹಿಂಗ್ ಮಾಡಿದ್ರೆ ನಾವು ಹೆಂಗೆ ಮಾಡ್ಬೇಕು ? ನೀವೇ ಕಾಣಿ" ಎಂದು ಹೇಳೋದು ಹೇಳಿ ಪ್ರಾಣಭಯದಿಂದ ಕೈಕೈ ಹೊಸೆಯತೊಡಗಿದ. ಕೊಂಚ ಹೊತ್ತು ಸುತ್ತಲೂ ನೋಡಿದ ಗುಬ್ಬಯ್ಯ "ಭಟ್ರೆ ಯಾರು ಎಲ್ಲಿಗೆ ಹೋದ್ರೂ ನಾನು ಮಾತ್ರ ಕಾಲೇಜು ಬಿಡೋನಲ್ಲ. ನಿಮ್ಮ ಬಾಕಿ ಇವತ್ತಲ್ಲ, ಯಾವತ್ತಾದ್ರೂ ಬರ್ಬೇಕು ಅನ್ನೋ ಆಸೆಯಿದ್ರೆ..." ಅನ್ನುವಷ್ಟರಲ್ಲಿ ಪರಿಸ್ಥಿತಿ ಬಿಗಡಾಯಿಸಬಹುದೆಂದು ಬೆದರಿದ ಕುಪ್ಪಯ್ಯ "ಸಾರ್ ಸಿಟ್ಟು ಮಾಡೋಕಾಗ. ಯಾಕೋ ಮಾಣಿ ಏನ್ಬೇಕು ಕೇಳೋದಿಲ್ಲೇನೋ ಗುಬ್ಬಣ್ಣೋರಿಗೆ" ಎಂದು ತನ್ನ ಹರಕಲು ಪಂಚೆಯನ್ನು ಮೇಲೆತ್ತಿ ಕಟ್ಟಿ ತಾನೇ ಸಪ್ಲೈ ಮಾಡಲು ಹೊರಟಿದ್ದು, ಮಾರನೇ ದಿನವೇ ಗುಬ್ಬಯ್ಯ ಹಳೇ ಬಾಕಿ, ಐನೂರು ಅಡ್ವಾನ್ಸ್ ಬಿಸಾಕಿದ್ದು, ಕುಪ್ಪಯ್ಯನ ಕಣ್ಣು ಹನಿಗೂಡಿದ್ದು. "ಎಂದಿಗೂ ಮರೆಯೋದಿಲ್ಲ. ಇಂಥಾದ್ದೇನಾದ್ರೂ ಮಾಡಿದ್ದೀರೇನ್ರಿ ಪೆಂಗಣ್ಣ?" ಎಂದು ಕೊರೆಯಪ್ಪ ಕೇಳಿದಾಗ ಖಾರವಾದ ಮೆಣಸಿನಕಾಯಿ ಅಗಿದು ಸಿಸಿ ಮಾಡು

ತ್ತಿದ್ದ ಪೆಂಗಣ್ಣ ಇಲ್ಲವೆಂದು ತಲೆಯಾಡಿಸಿದರು. ಕೊರೆಯಪ್ಪ ಮುಂದುವರಿಸಿದರು.

## ಮಾರುಹೊಳೆ

ನಮ್ಮ ಊರಿನ ಹೊಳೆಯಲ್ಲಿ ಜೂನ್ ತಿಂಗಳಲ್ಲಿ ಮಾರು ಹೊಳೆ ಬಂದು ನೀರು ಊರಲ್ಲೆಲ್ಲಾ ನುಗ್ಗುತ್ತಿತ್ತು. ಒಮ್ಮೆ ಕೋಡಂಗಿ ಇರಬದ್ರು ಎಂಬ ಕಾಲೇಜು ಹೈಕಳು ಹುಡುಗಿಯರ ಮುಂದೆ ಮಾರು ಹೊಳೆ ಬಂದಾಗ ಹೊಳೆಯನ್ನು ಈಜಿ ದಾಟುತ್ತೇವೆ



ಎಂದುಕೊಚ್ಚಿಕೊಂಡರು. ಅಲ್ಲಿಯೇ ಇದ್ದ ಗುಬ್ಬಯ್ಯ 'ಅಕಸ್ಮಾತ್ ದಾಟದಿದ್ದರೆ? ಎಂದು ಕೇಳಿದ. "ತಲೆ ಬೋಳಿಸ್ಕೋತೀನಿ' ಹೇಳಿದ ಕೋಡಂಗಿ. 'ನಾನೂ ಹಂಗೇ ಮಾಡಿಸ್ಕೋತೀನಿ. ಅಂದ ಇರಬದ್ರು. ಈ ಈ ವಿಷಯವನ್ನು ಹೇಳಿದವರು ಮರೆತರೂ ಗುಬ್ಬಯ್ಯ ನೆನಪಿಟ್ಟಿದ್ದ. ಜೂನ್ ತಿಂಗಳು ಮಾರುಹೊಳೆ ಬಂದಾಗ ಹೈಕಳಿಗೆ ಅವರು ಪ್ರತಿಜ್ಞೆಯನ್ನು ಜ್ಞಾಪಿಸಿದ. ಕೋಡಂಗಿ ಇರಬದ್ರರು ತಪ್ಪಿಸಿಕೊಳ್ಳಲಾಗದೆ ವಿಲಿ ವಿಲಿ ಒದ್ದಾಡಿದರು. ಏನುಮಾಡಿದರೂ ಬಿಡದೆ ಗುಬ್ಬಯ್ಯ ಅವರನ್ನು ನದೀ ತೀರಕ್ಕೆ ನಡೆಸಿದ. ಜೊತೆಗೇ ನಡೆಯಿತು ಕಾಲೇಜು ಹೈಕಳ ದಂಪು. ಹುಡುಗರು ಈಜುವವರನ್ನು ಹುರಿದುಂಬಿಸಲು ಹೋ ಎಂದರು. ಜೈಕಾರ ಹಾಕಿದರು. ಆದರೆ ಮೈಲಿಯಷ್ಟು ಅಗಲವಾದ ಕೆನ್ನೀರ ಹಾಳೆಯಂತೆ ನೊರೆ ನೊರೆಯಾಗಿ ಹರಿಯುತ್ತಿದ್ದ ತುಂಗಾ ಪ್ರವಾಹವನ್ನು ಆ ಹೈಕಳು ನೋಡಿ ಕಂಗೆಟ್ಟರು. ಏನು ಮಾಡಿದರೂ ಅವರ ಹಾರದುದನ್ನು ಕಂಡು ಬೇಸತ್ತು ಯಾರೋ ಅವರನ್ನು ನದಿಯಲ್ಲಿ ನೂಕಿ ಬಿಟ್ಟರು. ಕೆಲವೇ ಸೆಕೆಂಡುಗಳಲ್ಲಿ ಕೋಡಂಗಿ ಇರಬದ್ರು ದಡ ಹತ್ತಿದರು. ಅವರುಹಾರಿದ್ದ ದಡವನ್ನೇ! ಎಲ್ಲೆಲ್ಲಿಯೂ ಹೋ ಕಾರವಾಯಿತು. ಅವರನ್ನು ಅದೇ ರೀತಿ ಆಯುಷ್ಕರ್ಮ ಶಾಲೆಗೆ ಸಾಗಿಸಿದ ಗುಬ್ಬಯ್ಯ. ವಪನ ಕಾರ್ಯ ನಡೆದೇ ಹೋಯಿತು. ಥಳಥಳಗುಟ್ಟುತ್ತಿದ್ದ ತಲೆಯೊಂದಿಗೆ ಹೊರ ಬಂದ ಹೈಕಳನ್ನು ನಾವು 'ಯಾಕ್ರೂ ಹಿಂಗ್ಮಾಡಿದ್ರಿ ?' ಎಂದು ಕೇಳಿದ್ದಕ್ಕೆ ಅವರು 'ಸಾಯೋದಕ್ಕಿಂತ ತಿರುಪತಿಯಾಗೋದೇ ಸಲೀಸು ಅನ್ನಿಸ್ತು ಕಣ್ರೊ' ಎಂದು ನಮ್ಮೊಡನೆ ತಾವೂ ನಗಾಡಿದರು. ಅಂದಿನಿಂದ ಪ್ರತಿ ದಿನ ಟೋಪಿಧಾರಿಗಳಾಗಿ ಕಾಲೇಜಿಗೆ ಬರುತ್ತಿದ್ದ ಕೋಡಂಗಿ ಇರಬದ್ರರ ಟೋಪಿ ತೆಗೆದು ಅವರ ಬುರುಡೆಯ ಮೇಲೆ ಕೈಯಾಡಿಸುವುದು ಗುಬ್ಬಯ್ಯನಿಗೆ ಚಟವೇ ಆಯಿತು. ಇದಕ್ಕಿಂತ ಹೈಕಳು ನೀರಿಗೆ ಬಿದ್ದಾಗ ಮುಳುಗಿ ಸತ್ತಾರೆಂದು ಬೆದರಿ ತಾನೂ ಹಾರಲು ಬರಿಚಣ್ಣದ ಮೇಲೆ ನಿಂತ ದುಬ್ಬಯ್ಯನ ಆಕೃತಿಯೇ ನಮಗೆಲ್ಲಾ ಪ್ರಿಯವಾಯಿತು "ಇಂಥಾದ್ದೇನಾದರೂ ಮಾಡಿದ್ದೀರೇನ್ರಿ ಅಥವಾ ಇಂಥಾ ದಿಲ್ದಾರರುಗಳನು ನೋಡಿದ್ದೀರೇನ್ರಿ, ಹೇಳ್ರಿ ಪೆಂಗಣ್ಣ" ಎಂದು ಕೊರೆಯಪ್ಪ ಕೇಳಿದಾಗ ನೀರು ಕುಡಿಯುತ್ತಿದ್ದ ಪೆಂಗಣ್ಣ ಏನೋ ಹೇಳುವಂತೆ ಕೈ ಬಾಯಿ ಮಾಡಿ ತಡೆಯಲು ಸೂಚಿಸಿದಾಗ ಎಡವಟ್ಟಾಗಬಹುದೆಂದು ಬಗೆದ ಕೊರೆಯಪ್ಪ ಕೊರೆತ ಮುಂದುವರಿಸಿದರು.

## ಸುಂದರಿಯ ಕೋಪ

ನಮ್ಮ ಕಾಲದಲ್ಲಿ ಕಲ್ಲು ಹೊಡೆಯುವುದು, ಚೆಲ್ಲು ಬಡಿಯುವುದು, ಚೆನ್ನಾಗಿರುವವರು ಕಂಡರೆ ಜೊಲ್ಲು ಸುರಿಸುವುದು, ಅನಗತ್ಯವಾಗಿ ಹಲ್ಲು ಕಿರಿಯುವುದು, ದುಪ್ಪಟೆಯ ಅಂಗಿ ಷರಾಯಿ ಹಾಕುವುದು, ಎಲ್ಲೆಲ್ಲಿಯೋ ಕೂದಲು ಬೆಳೆಸಿ ಅದೇ ಜಾಣತನವೆಂದು ಮೆರೆಯುವುದು ಇನ್ನೂ ಫ್ಯಾಷನ್ ಆಗಿರಲಿಲ್ಲ. ಹುಡುಗಿಯರಂತೂ ತುಂಬಾ ಮಾಡೆಸ್ಟ್ ಆಗಿರುತ್ತಿದ್ದರು. ಹುಡುಗಿಯರನ್ನು ಮಾತಾಡಿಸುವಾಗ ಹುಡುಗರೂ ನೆಲ ಕೆರೆಯುತ್ತಿದ್ದ ಕಾಲವದು. ಹುಡುಗನೇ ಆಗಲಿ, ಮೇಸ್ಟರೇ ಆಗಲಿ, ಹುಡುಗಿಯೊಡನೆ ಪ್ರತ್ಯೇಕವಾಗಿ ಮಾತಾಡಿದರೆ ಸಾಕು, ಕಾಲೇಜು ತುಂಬಾ ಅದೇ ಸುದ್ದಿಯಾಗುತ್ತಿದ್ದ ಕಾಲ.

ಸೀನಿಯರ್ ಇಂಟರಿನ ವಿದ್ಯಾರ್ಥಿನಿ ಮಿಸ್ ಸುಂದರಿ ನಿಜಕ್ಕೂ ಸುಂದರಿ. ಜಿಲ್ಲಾ ಪೋಲೀಸ್ ಅಧಿಕಾರಿಯ ಮಗಳಾಗಿದ್ದ ಆಕೆ ನಯ, ನಾಜೂಕು, ಗಾಂಭೀರ್ಯಗಳ ಜೊತೆಗೆ ಓದಿನಲ್ಲೂ ಮಾದರಿ. ಆಕೆಯನ್ನು ದಿಟ್ಟಿಸಿ ನೋಡುವುದಕ್ಕೂ ಧೈರ್ಯ ಬೇಕಾಗುತ್ತಿತ್ತು. ಇಂಥಾ ಸುಂದರಿಗೆ ಡ್ಯಾಷ್ ಹೊಡೆದವರಿಗೆ 'ಸೀ ಕಾರ ಕಾಪಿ' ಜಿದ್ದು ಕಟ್ಟಿಕೊಂಡವು ಕರಟಕ –ದಮನಕರೆಂಬ ಜೂನಿಯರ್ ಇಂಟರ್ ಹುಡುಗರು.

ಅದೊಂದು ದಿನ. ಫಸ್ಟ್ ಅವರ್ ಬೆಲ್ ಆಗಿದೆ, ಕಾರೊಂದು ಭರ್ರನೆ ಕಾಲೇಜು ಕಾಂಪೌಂಡಿನೊಳಕ್ಕೆ ಬಂತು. ಹೊತ್ತಾಗಿದ್ದರಿಂದ ಮಗಳನ್ನು ಬಿಡಲು ಸುಂದರಿಯ ತಂದೆಯವರೇ ಕಾಲೇಜಿಗೆ ಬಂದಿದ್ದರು. ಸುಂದರಿ ಕಾರಿನಿಂದಿಳಿದು ಕಾಲೇಜು ಮೆಟ್ಟಿಲು ಹತ್ತುತ್ತಿದ್ದಂತೆಯೇ ಎಲ್ಲಿದ್ದನೋ ನೋಡಿ ಕರಟಕ ಧಿಡೀರನೆ ಬಂದು ಆಕೆಗೆ ಢಿಕ್ಕಿ ಹೊಡೆದ. ಅದರ ಹೊಡೆತಕ್ಕೆ ಸುಂದರಿ ಕೆಳಗೆ ಬಿದ್ದಳು. ಪುಸ್ತಕಗಳು ಚೆಲ್ಲಾಡಿದವು. ಅವಳ ಮುಖ ಕೆಂಪೇರಿತು. ಕಣ್ಣುಗಳು ಹನಿಗೂಡಿದವು. ಧುಸಮುಸ್ ಎದುಸಿರು ಬಿಡುತ್ತಾ ಎದ್ದು ನಿಂತವಳು 'ಡ್ಯಾಡಿ' ಎಂದು ಕೂಗಿದ್ದೇ ತಡ, ಇಡೀ ಕಾಲೇಜು ಹಾಗೂ ಅವಳ ತಂದೆ ಅಲ್ಲಿ ಜಮಾಯಿಸಿದರು. 'ಕಣ್ಣು ಕಾಣ್ಸಲ್ಲ ಅಂತಾ ಕಾಣುತ್ತೆ ಬ್ರೂಟ್. ಮನೇಲಿ ಅಕ್ಕ ತಂಗಿಯರೂ ಇಲ್ಲವೇನ್ರಿ ನಿಮಗೆ? ತಾಳಿ, ಪ್ರಿನ್ಸಿಪಾಲ್‌ಗೆ ರಿಪೋರ್ಟ್ ಮಾಡ್ತೀನಿ. ಗೂಂಡಾ!" ಎಂದು ಹೇಳಿದ ಸುಂದರಿ ಹೊರಟಾಗ 'ಪ್ಲೀಸ್ ಮಿಸ್. ಒನ್ ಮಿನಿಟ್' ಎಂದು ಗುಬ್ಬಯ್ಯನ ಧ್ವನಿ ಕೇಳಿಸ್ತು. 'ಏನು ಮಿಸ್.. ನೀವು ಕೇಳಿದ್ದು ? ಮನೇಲಿ ಅಕ್ಕ ತಂಗಿ ಇಲ್ಲಾಂತಲೆ ? ಈ ಪಾಪಿಗೆ ಅವ್ರೆಲ್ಲಾ ದಂಡಿಯಾಗಿದ್ದಾರೆ. ಇಲ್ದ ಇರೋದು ಅಂದ್ರೆ ಸೊಕ್ಕು ಇಳಿಸೋ ಹೆಂಡತಿ. ಇವನ ರೋಗ ವಾಸಿಯಾಗಬೇಕಾದ್ರೆ ಇವನ ಅಪ್ಪನಿಗೆ ಮಿಸ್ ರಿಪೋರ್ಟು ಮಾಡ್ಬೇಕಾದ್ದು' ಎಂದು ಗುಬ್ಬಯ್ಯ ಹೇಳಿದಾಗ ಇಡೀ ಗುಂಪು ಗೊಳ್ಳೆಂದು ನಕ್ಕಿತ್ತು

ಉಂಟಾಗಿದ್ದ ಉದ್ರೇಕ ಇಳಿಯಿತು. ಸುಂದರಿ ನಸು ನಕ್ಕು ಕ್ಲಾಸಿನ ಕಡೆ ನಡೆದಳು. ಅವಳ ತಂದೆ ಗುಬ್ಬಯ್ಯನಿಗೆ ವಿಷ್ ಮಾಡಿ ಕಾರಿನ ಕಡೆ ಹೊರಟರು. ನಡೆಯಲಿದ್ದ ಅಹಿತಕರ ಪ್ರಸಂಗ ಆಶ್ಚರ್ಯಕರವಾಗಿ ನಿವಾರಣೆಯಾಯಿತು. ಇಂಥಾದ್ದೇನಾದ್ರೂ ಮಾಡಿದ್ದೀರೇನ್ರಿ ಪೆಂಗಣ್ಣಾ ನೀವು ಕಾಲೇಜಿನಲ್ಲಿ ಎನ್ನುತ್ತಿದ್ದಂತೆಯೇ ಗಡಿಯಾರ ನೋಡಿಕೊಂಡ ಕೊರೆಯಪ್ಪ ಇನ್ನೂ ಕಾಲು ಗಂಟೆಯಿದೆ ಎಂದುಕೊಂಡು. ಅವರಿಗೆ ಉತ್ತರ ಕೊಡುವುದಕ್ಕೂ ಅವಕಾಶ ಕೊಡದೆ ರಿಕಾರ್ಡ್ ಹಾಕಿದರು.

## ಪೋಲೀಸನ ಫಜೀತಿ

ಊರಿಗಿಂತಾ ಬಲು ದೂರ ನಮ್ಮ ಕಾಲೇಜು. ಅದರದ್ದೊಂದು ವಿಚಿತ್ರ ನೋಡ್ರಿ. ವರ್ಷದ ಅರ್ಧ ಭಾಗ ಪಾಠಗಳಿಲ್ಲದೆ ಮಜಾ, ಉಳಿದರ್ಧ ವರ್ಷ ಬೆಳಗಿಂದ ಸಂಜೆ ತನಕಾ ಸಜಾ. ಇದರಿಂದ ವಾರ ಭಿಕ್ಷಾನ್ನದ ಹೈಕಳಿಗೆ ಬಲು ಬವಣೆಯಾಗುತ್ತಿತ್ತು. ಬೆಳಿಗ್ಗೆ ಮುಂಚೆ ಒಂದು ರಾತ್ರಿ ತಡವಾಗಿ ಹಿಂದಿರುಗುತ್ತಿದ್ದುದರಿಂದ ಎರಡು ಹೊತ್ತಿನ ತುತ್ತಿಗೇ ಚಕ್ರವಾಗುತ್ತಿತ್ತು.

ಕಲ್ಲ ಪಿಳ್ಳೆಯೆಂಬ ವಾರಾನ್ನದ ಹುಡುಗ ಕಾಲೇಜಿನಲ್ಲಿಯೇ ಬಲು ಜಾಣ. ಒಂದು ದಿನ ಅವನು ಕ್ಲಾಸಿನಲ್ಲಿಯೇ ಕುಸಿದುಬಿದ್ದು ಮೇಲ್ಗಣ್ಣು ತೇಲ್ಗಣ್ಣು ಮಾಡಿದ. ಅವನಾಗಿ ಏನೂ ಹೇಳದಿದ್ದರೂ ಅವನು ಬಿದ್ದ ಕಾರಣ ಎಲ್ಲರಿಗೂ ತಿಳಿಯಿತು. ಅಲ್ಲೇ ಇದ್ದ ಗುಬ್ಬಯ್ಯ ಅವನನ್ನು ಕ್ಯಾಂಟೀನಿಗೆ ಸಾಗಿಸಿ ಸೇವೆ ನಡೆಸಿದ. ಚೇತರಿಸಿಕೊಂಡ ಕಲ್ಲ ಪಿಳ್ಳೆಯನ್ನು ಸೈಕಲ್ ಹಿಂದೆ ಕೂರಿಸಿಕೊಂಡು ಅವನ ರೂಮಿಗೆ ಒಯ್ದು ಬಿಡಲು ಶಿಂಗ್ರಿ ಎಂಬುವನಿಗೆ ಗುಬ್ಬಯ್ಯ ಆರ್ಡರ್ ಮಾಡಿದ. ಹಿಂದಿರುಗಿದರೆ ತನಗೂ ತನ್ನ ಸೈಕಲ್ಲಿಗೂ ಏನಾದರೂ ಆಗಬಹುದೆಂದು ಬೆದರಿದ ಶಿಂಗ್ರಿ "ಅಣ್ಣಾ ಗೇಟ್ನಾಗೆ ಪೋಲೀಸಪ್ಪ ಇರ್ತಾನೆ ಏನ್ಮಾಡ್ಲಣ್ಣಾ" ಎಂದ. ಆಗ ಡಬಲ್‌ರೈಡ್‌ಗೆ ಅನುಮತಿಯಿರಲಿಲ್ಲ. "ಇರೋ ವಿಷಯ ತಿಳಿಸು. ಹೊಟ್ಟೆಗಿಲ್ಲದ ದರಿದ್ರನ್ನ ಮನೆಗೆ ಕರ್‍ಕೊಂಡು ಹೋಗ್ತಾ ಇದೀನಿ ಅನ್ನು. ತರಲೆ ಮಾಡಿದ್ರೆ ಅಲ್ಲೇ ಇರು ನಾವು ಬರೋ ವರೆಗೆ" ಎಂದ ಗುಬ್ಬಣ್ಣ.

ಇಷ್ಟು ಅಲ್ಲದ ಕೆಲಸ ಮಾಡಬೇಕಾಗಿ ಬಂದ ಶಿಂಗ್ರಿ ಗುಬ್ಬಯ್ಯ ಹಾಗೂ ವಾರದ ಹುಡುಗರ ಜಾತಿಯನ್ನೇ ಉದ್ಧರಿಸುತ್ತ ಸೈಕಲ್ ತುಳಿಯತೊಡಗಿದ. ಇಳುಕಲಿದ್ದ ದರಿಂದ ಕೆಲವೇ ನಿಮಿಷಗಳಲ್ಲಿ ಅವರು ಗೇಟಿನ ಬಳಿ ಬಂದು ಬಿಟ್ಟರು. ಇವರನ್ನು ಕಂಡು ಅಲ್ಲಿದ್ದ ಪೋಲೀಸು 'ಯಾರ್‍ರೋ ಅದು. ನಿಲ್ರೋ' ಎಂದು ಕೂಗಿ ಸೀಟಿ ಊದುತ್ತಾ ಓಡಿ ಬಂದ. ಜೋರಾಗಿ ಓಡುತ್ತಿದ್ದ ಸೈಕಲ್ಲು ಗೇಟು ದಾಟಿ ಪಾರಾಗಿ ಹೋಗಿ ಬಿಡುವುದೆಂದು ನಂಬಿದ ಶಿಂಗ್ರಿ "ನಾವ್ಕಣಲಾ ಕಾಲೇಜು ಹುಡುಗ್ರು. ನಿಲ್ಸಾಕಾಗಾಕಿಲ್ಲ ಕಣಾ. ಭಾಳಾ ಅರ್ಜಂಟ್" ಎನ್ನುತ್ತಾ ಮತ್ತೂ ಜೋರಾಗಿ ಸೈಕಲ್ ತುಳಿಯ ತೊಡಗಿದ. ದುರದೃಷ್ಟವಶಾತ್ ಸೇತುವೆಯ ಇಕ್ಕಟ್ಟಾದ ಭಾಗದಲ್ಲಿ ಎದುರುಗಡೆಯಿಂದ ಭಾರಿ ವಾಹನವೊಂದು ಬರುತ್ತಿತ್ತು. ಶಿಂಗ್ರಿ ನಿರ್ವಾಹವಿಲ್ಲದೆ ಸೈಕಲ್ ವೇಗವನ್ನು ನಿಧಾನವಾಗಿ ಮಾಡಿದ. ಇಷ್ಟರಲ್ಲಿ ಬ್ರಹ್ಮ ರಾಕ್ಷಸನಂತೆ ಬೆನ್ನು ಹತ್ತಿದ್ದ ಪೇದೆ ಹಿಂದಿನಿಂದ ಬಂದು ಸೈಕಲ್ಲನ್ನು ಬಲವಾಗಿ ಜಗ್ಗಿದ. ಇಬ್ಬರೂ ಕೆಳಗೆ ಬಿದ್ದರು.

ಕೆಳಗೆ ಬಿದ್ದ ಒಡನೆಯೇ ಶಿಂಗ್ರಿಯ ವರ್ತನೆ ಬದಲಾಯಿಸಿತು. 'ತಪ್ಪಾಯ್ತಣ್ಣಾ. ಇನ್ಯಾವತ್ತೂ ಹಿಂಗೆ ಮಾಡಲ್ಲಣ್ಣಾ. ಹೊಟ್ಟೆಗಿಲ್ಲದೆ ತಲೆ ತಿರುಗಿ ಬಿದ್ದಿದ್ದ ಈ ದರವೇಶಿಯನ್ನು ಮನೆಗೆ ಕರ್‍ಕೊಂಡು ಹೋಗ್ತಿದ್ದೆ ಕಣಣ್ಣಾ" ಒರಲಿದ ಶಿಂಗ್ರಿ. "ಸೈಕಲ್ಮೇಲೆ ಕುಂತಾಗ ಎಲ್ಲೋಗಿತ್ತಾ ಬುದ್ಧಿ. ಬತಾ ಧರ್ಮಾತ್ಮ ಕಣ್ಲಾ ನೀನು. ಕಾಲೇಜು ಹುಡುಗ್ನಂತೆ. ಕಾಲೇಜು ಹುಡುಗ್ರು ಇಂಗೆಲ್ಲಾ ಮಾಡ್ಬೇಕು ಅಂತ ಕಾನೂನ್ನೈತಾ? ನಡಿಲಾ [illegible] ಗೆ [illegible]. 'ಯಾಕಣ್ಣಾ ಈ ಪಾಟಿ ಸಿಟ್ಟು. ಮಕ್ಳು ಮರಿ ಇಲ್ವೇನಣ್ಣಾ? ಕೇಳಿದ ಶಿಂಗ್ರಿ. 'ನಂಗೇನಾದ್ರೂ ಇನ್ನಾ ಮಕ್ಳಿದ್ದಿದ್ರೆ ಬೂಟಿನಾಗೇ ಹೊಡೀತಿದ್ದೆ. ಹೊಂಡ್ರೂ ಟೇಷನ್ಗೆ ಮುಚ್ಕೊಂಡು." ಗುಡುಗಿದ ಪೋಲೀಸು. ಬರಿ ಮಾತಿನಿಂದ ಕೆಲಸವಾಗದೆಂದು ಅರಿತ ಶಿಂಗ್ರಿ ಜೇಬಿನಿಂದ ಎರಡಾಣೆ ತೆಗೆದು ಮುಷ್ಟಿಯಲ್ಲಿ ಪೋಲೀಸನಿಗೆ ಕೊಟ್ಟು "ಇದೊಂದ್ಸಲ ಮಾಫ್ ಮಾಡಿ ಬಿಡಣ್ಣ" ಎಂದ. ತಕ್ಷಣ ಪೋಲೀಸು "ಇನ್ನೊಂದ್ಸಲಾ ಮಾಡಿದ್ರೆ ಟೇಷನ್ ಗ್ಯಾರಂಟಿ. ಹೊಂಡ್ರಿ ಈಗ." ಎಂದು ಗೇಟಿನ ಗೂಡಿಗೆ ಹೋದ. ಆ ರಾತ್ರಿ ಶಿಂಗ್ರಿ ಅಲ್ಲಿಂದ ಸ್ವಲ್ಪ ದೂರ ಹೋಗದೇ ಏಕೋ ಅಲ್ಲೇ ಕಳಾಯಿಸ ತೊಡಗಿದ.

ಇದೇ ಸಮಯಕ್ಕೆ ಕಾಲೇಜ್ ಬಳಿ ಸೈಕಲ್ ದೀಪಗಳ ಬೆಳಕನ್ನು ಕಂಡ ಶಿಂಗ್ರಿಯ ಕಣ್ಣುಗಳು ಮಿನುಗಿದವು. ಕೆಲವೇ ನಿಮಿಷಗಳಲ್ಲಿ ಗುಬ್ಬಯ್ಯನ ಗ್ಯಾಂಗು ಗೇಟಿನ ಬಳಿ ಬಂತು. ಇದನ್ನೇ ಕಾಯುತ್ತಿದ್ದ ಶಿಂಗ್ರಿ ಟಣ್ಣನೆ ರಸ್ತೆಗೆ ಜಗಿದು "ಅಣ್ಣಾ ಹೋಯ್ತಣ್ಣಾ ನಂದುಡ್ಡು. ಪೋಲೀಸಪ್ಪ ಇಸ್ಕೊಂಬಿಟ್ಟ. ಕಣಣ್ಣಾ" ಎನ್ನುತ್ತಾ ರಸ್ತೆಯ ಮೇಲೆಲ್ಲಾ ಹೊರಳಾಡುತ್ತಾ ಹುಯಿಲೆಬ್ಬಿಸಿದ. ಇದನ್ನು ಕೇಳಿ ಕೆಲಸ ಮುಗಿಸಿ ಮನೆಗೆ ಹೊರಟಿದ್ದ ಗುಂಧದೆಣ್ಣೆ ಕಾರ್ಖಾನೆಯ ನೂರಾರು ಮಂದಿ ಕಾರ್ಮಿಕರು ಅಲ್ಲಿಗೆ ಬಂದರು. ಗುಂಪು ದೊಡ್ಡದಾದುದನ್ನು ಕಂಡ ಪೋಲೀಸನ ಎದೆ ಡವಗುಟ್ಟಿತು. 'ಯಾರ್‍ರಿ ನೀವು? ಏಷ್ಟ್ರಿ ನಿಮ್ಮ ನಂಬರ್?' ಎಲ್ರೀ ಈ ಹುಡುಗನಿಂದ ಕಿತ್ಕೊಂಡ ದುಡ್ಡು?' ಎಂದೆಲ್ಲಾ ಕೇಳಿದ ಗುಬ್ಬಯ್ಯನ ಗತ್ತು ನೋಡಿ ಪೇದೆ ಹೌಹಾರಿದ. ಜೇಬಿನಿಂದ ಎರಡಾಣೆ ತೆಗೆದು 'ತೊಗೊಳ್ಳಿ ಸಾರ್' ಎಂದು ಕೊಡ ಬಂದ. ಏನ್ರೀ ತೆಗೆದುಕೊಳ್ಳೋದು? ಹಿಡ್ಕೊಂಡು ನಡೀರಿ ಸ್ಟೇಷನ್‌ಗೆ ನಿಮ್ಮ ಮೇಲಧಿಕಾರಿಗಳಿಗೂ ಗೊತ್ತಾಗ್ಲಿ, ನೀವು ಮಾಡೋ ದರಿದ್ರ ಕೆಲ್ಸ' ಎಂದ ಗುಬ್ಬಯ್ಯ ಸುತ್ತಲಿದ್ದ ಜನರನ್ನು 'ನೀವೇ ಹೇಳಿ ಸ್ವಾಮಿ ಈ ದರಿದ್ರನಿಂದ ಈವಯ್ಯ ಲಂಚ ಇಸ್ಕೊಬೌದಾ?' ಎಂದು ಕೇಳಿದ. ಲಂಚ ಎಂಬ ಮಾತು ಪೋಲೀಸನನ್ನು ಇರಿದಿರಬೇಕು. ಅವನ ಜಂಘಾಬಲವೇ ಉಡುಗಿ ಹೋಗಿ 'ಬಡವಾ ತಪ್ಮಾಡ್ದೆ. ಇನ್ನೊಂದ್ಸಲ ಮಾಡಾಕಿಲ್ಲ. ಜೀವಾ ಇರಾಗಂಟ ಕಾಲೇಜು ಹುಡುಗರನ್ನ ತಡವಾಕಿಲ್ಲ. ಬಿಟ್ಬಿಡಿ ಸಾರ್' ಎಂದ ಪೋಲೀಸು. ಗುಬ್ಬಯ್ಯ ಮಿಕ್ಕವರಿಗೆ ಕಣ್ಣು ಮಿಟುಕಿಸಿ 'ಬಿಡ್ರೋ ಪಾಪ ಹೋಗ್ಲಿ' ಎಂದು ಪ್ರಸಂಗವನ್ನು ಅಲ್ಲಿಗೇ ಬಿಟ್ಟಿದ್ದು. ಅದರಿಂದ ಎಲ್ಲರಿಗೂ ಒಳ್ಳೇದಾಗಿದ್ದು ಇನ್ನೂ ಮರೆತಿಲ್ಲ ನೋಡ್ರಿ ನನಗೆ ಎಂದರು ಕೊರೆಯಪ್ಪ.

ಇಷ್ಟು ಹೇಳಿ ಗಡಿಯಾರ ನೋಡಿಕೊಂಡು ಒಂದು ಗಂಟೆಯಾಗಲು ಒಂದು ನಿಮಿಷ ಇರುವುದನ್ನು ಕಂಡ ರಿ॥ ಪ್ರೊ॥ ಕೊರೆಯಪ್ಪ Any Question ಎಂದು ಕೇಳುವ ಧಾಟಿಯಲ್ಲಿ 'ಹೇಳ್ರಿ ಪೆಂಗಣ್ಣಾ. ಗುಬ್ಬಯ್ಯ ಮಾಡಿದಂಥಾದ್ದು ಏನಾದ್ರೂ ಮಾಡಿದೀರಾ ನೀವು? ಎಂದು ಕೇಳಿದರು. ಅದಕ್ಕೆ ಪೆಂಗಣ್ಣ 'ಏನು ಕೆಲಸ ಮಾಡಿಲ್ಲವೇನ್ರಿ ಭೈರಿಗೆ ಪ್ರಿಯ ಕೊರೆಯಪ್ಪ? ಅಷ್ಟೊಂದು ಸಾರಿ ಫೇಲಾದ್ದು. ಭಾರತಕ್ಕೆ ಐದು ಹೆಣ್ಣು ಮಕ್ಕಳ ಕಾಣಿಕೆ ನೀಡಿದ್ದು. ಸಾಲದೇನ್ರಿ?' ಎನ್ನುವ ಹೊತ್ತಿಗೆ ಬರೋಬರಿ ಒಂದು ಗಂಟೆಯಾದ್ದರಿಂದ ಎಲ್ಲರೂ ಮನೆ ಕಡೆ ಹೊರಟರು. ●

# ಊನ



ಶ್ರೀನಿವಾಸ ಕುಲಕರ್ಣಿ

ಪವಿತ್ರಾ ಅಪವಿತ್ರಳಾದಂತೆ ಕಳೆಹೀನಳಾಗಿದ್ದಳು. ಕಾಂತಿಯ ಹಳದಿಯ ಬಣ್ಣ ಬಿಳುಚಿಕೊಂಡಿತ್ತು. ರಸ ಹೀರಿ ಒಗೆದ ಕಬ್ಬಿನ ಸಿಪ್ಪೆಯಂತೆ ಮಂಚದ ಮೇಲೆ ಉರುಳಿದ್ದಳು. ಕಣ್ಣು ತೆರೆದರೆ ಮೇರೆದಪ್ಪಿ ಹರಿವ ಕಣ್ಣೀರಿನ ಕೋಡಿ, ಮುಚ್ಚಿದರೆ ಅದೇ ಪ್ರಸೂತಿಯಾಗಿ ಮಸಣದ ಪ್ರಸೂನವಾಗಿ ಸೇರಿದ ಊನ ಸಂತಾನ. ಆ ಮಗುವಿನ ಅಕರಾಳ ವಿಕರಾಳ ರೂಪು. ನೆತ್ತಿಯ ಮೇಲೆ ಕಣ್ಣು. ಕೈ ಕಾಲು ಕಿವಿ ಒಂದೊಂದೇ ಅಂಗ

"ಈ ಸಂತಾನ ನಂದ್ಯಾ ಈ ಊನ ಸಂತಾನ ನಂದೇ ಕಾನ. ಹಡವದ್ದು ಇದು"

ಮಂಚದ ಮೇಲೆ ಬೋರಲಾಗಿ ಬಿದ್ದ ಅವಳ ಹಸಿ ಮೈಯೊಳಗಿನ ಹಸಿ ಬಿಸಿ ತಾಯ್ತನದ ಹಸಿವು ಅಗ್ಗಿಷ್ಟಿಕೆಯ ಕಾವಿಗೆ ಸುಟ್ಟು ಕರಕಾಗಿ ಹೋಗಿತ್ತು. ಊನ ಸಂತಾನವನ್ನು ಹೊರ ತಂದ ಅವಳ ಯೋನಿಯೊಳಗೆ ಯಾರೋ ಕಾದ ಕಬ್ಬಿಣದ ಸಲಾಕೆಯನ್ನು ತುರುಕಿ ಶುದ್ಧೀಕರಿಸಲು ಬಂದಂತೆ ಭಾಸವಾಯಿತು. ಪ್ರಸೂತಿ ಗೃಹದ ವಿಶೇಷ ಕೋಣೆ ದರವು ಹಿಡಿವಂತೆ ಕಿರುಚಿಕೊಂಡಳು.

"ಪವಿತ್ರಾ, ಪವಿತ್ರಾ ಮತ್ತ ವಿಚಾರ ಮಾಡಲಿಕ್ಕ ಸುರು ಮಾಡ್ದೇನು? ನಿನ್ನ ಹ್ಯಾಂಗೆ ಹೇಳಲಿ ನಾನು. ನಿನ್ನ ದೇಹಾ, ನನ್ನ ದೇಹಾನ, ನಿನ್ನ ಆರೋಗ್ಯ ನನ್ನ ಆರೋಗ್ಯಾನ. ನಾನು ಸುಖವಾಗಿ ಇರಬೇಕೂ ಅಂದ್ರ ನೀನು ನಿನ್ನ ಆರೋಗ್ಯದ ಕಡೆ ಲಕ್ಷ್ಯ ಕೊಡಬೇಕು. ಈಗ ಆಗಬಾರದ್ದು ಏನು ಆತು. ಪೀಡಾ ಪರಿಹಾರ ಆತು."

ಪವಿತ್ರಾಳ ಪತಿ ಆನಂದ ಇನ್ನೂ ಏನೇನೋ ಸಾಂತ್ವನ ಪರ ನುಡಿಗಳನ್ನು ಹೇಳುತ್ತಿದ್ದಾಗಲೇ ಮಲಗಿದವಳು ದಿಗ್ಗನೇ ಎದ್ದು ಕೂತಳು.

**ಪವಿತ್ರಾ ಆನಂದ, ಅಣ್ಣ ತಮ್ಮರ ಮಕ್ಕಳು. ಬೇರ ಸಮಾಜದಲ್ಲಿ ಅಣ್ಣ ತಮ್ಮರ ಮಕ್ಕಳು ಮದುವೆಯಾಗುವ ಅವಕಾಶ ಇರುವಾಗ ತಾವೇಕೆ ಮದುವೆಯಾಗಬಾರದು? ಎಂದರವರು. ಒಲಿದು ಮದುವೆಯಾದ ಅವರಿಗೆ ಹುಟ್ಟಿದ ಮಗು ಊನ. ಇದು ಪಾಪದ ಫಲವೆ? ಅಥವಾ ಸಮಾಜದ ಆಕ್ರೋಶದ ಪರಿಣಾಮವೆ!**

"ಪೀಡಾ ಪರಿಹಾರ ಆಗಲಿಲ್ಲ ಪ್ರಾರಂಭ ಆಗೇದ. ನಾನು ಹಡದದ್ದು ಪಾಪದ ಪಿಂಡ ಅಲ್ಲದ ಇನ್ನೇನು? ನಮ್ಮ ಪಾಪದ ಸಂಬಂಧದಿಂದ ಹುಟ್ಟಿದ ಕರ್ಮದ ಫಲ ಅಲ್ಲದ ಇನ್ನೇನು. ನನ್ನ ಕಂದ ಊನ ಆಗಿದ್ದು ಯಾಕ ಹೇಳು ಆನಂದ?"

ಆನಂದನನ್ನು ತಬ್ಬಿಕೊಂಡು ಪವಿತ್ರಾ ಬಿಕ್ಕಿ ಬಿಕ್ಕಿ ಅಳಹತ್ತಿದಳು. ಅಳುವಿನ ಶ್ರುತಿಗಳಂತೆ ಪ್ರಸೂತಿ ಗೃಹದ ಮಕ್ಕಳೂ ಅಲ್ಲಲ್ಲಿ ಅಳಹತ್ತಿದವು. ಆನಂದನಿಗೆ ಅವಳನ್ನು ಹೇಗೆ ಸಂತೈಸಬೇಕು, ಒಂದು ನಿಮಿಷ ತೋಚಲಿಲ್ಲ. ಅವಳ ಬಿಗಿ ಅಪ್ಪುಗೆಯನ್ನು ಸಡಿಲಿಸಿಕೊಂಡು ಅರಿಷಿಣ ಒಸರುತ್ತಿದ್ದ ಅವಳ ಗಲ್ಲಗಳಿಗೆ ಮೆಲ್ಲನೆ ಬಾಯಾರಿದ ತುಟಿಗಳನ್ನು ಒತ್ತಿ ಹೇಳಿದ.

'ಪವಿತ್ರಾ ನನ್ನ ಪ್ರೇಮದ ಮ್ಯಾಲೆ ಪೂರ್ತಿ ವಿಶ್ವಾಸ ಇದ್ರ ಹೇಳ್ತೀನಿ ಕೇಳು– ನಿನ್ನ ಸಂತಾನ ಊನ ಆಗಿದ್ದು ನಮ್ಮ ಅಪವಿತ್ರ ಸಂಬಂಧಕ್ಕ ಅಲ್ಲ. ಸಮಾಜದ ಆಕ್ರೋಶಕ್ಕ ಸಮಾಜದ ನಿಷ್ಕರುಣ ವರ್ತನೆಕ್ಕೆ. ವಿಷದ ಉರಿಗೆ ಸಿಕ್ಕ ನಿನ್ನ ಸಂತಾನ ಊನ ಆತು. ನಿನ್ನ ಸಂತಾನ ಊನ ಆತು.'

ಆನಂದನ ಕಣ್ಣು ಕಡಿಯಿಂದ ತುಂಬಿತ್ತು. ಆ ಗುಡ್ಡೆ ಕೆಂಡದ ಉಂಡೆಯಾಗಿತ್ತು. ಪವಿತ್ರಾಳ ಕಡೆಗೆ ನೋಡಿದ ಬತ್ತಿದ ಕಣ್ಣೊಳಗಿನ ಗೊಂಬೆಗಳು ಭೀಮಾರಿ ಗೊಂಬೆಗಳಂತೆ ಕುಣಿಯತೊಡಗಿದವು. ಸಮಾಜ ಅವಳ ಕಣ್ಣ ತುಂಬ ಕೊಳಿ ದೆವ್ವಗಳನ್ನು ತುಂಬಿದಂತಿತ್ತು. ಆಸ್ಪತ್ರೆಯ ದೀಪಗಳು ನಂದಿದ್ದವು. ಆ ನೀರವ ವಾತಾವರಣದ ಕತ್ತಲಿನಲ್ಲಿ ಅವರ ಪ್ರಣಯದ ಹೋರಾಟದ ಸತ್ಯ ಪ್ರತಿಮೆಗಳು ತೇಲಿ ಬರತೊಡಗಿದವು. ಪವಿತ್ರಾ–ಆನಂದ; ಆನಂದ–ಪವಿತ್ರ.

ಹೊಳೆಯೂರು. ಹೊಳೆಯ ದಂಡೆಯ ಮೇಲಿನ ಒಂದು ಪುಟ್ಟ ಊರು. ಊರಿನ ಪಶ್ಚಿಮ ಭಾಗವನ್ನು ಹೊರತುಪಡಿಸಿ ಹೊಳೆ ಸಿಂಪಿಯಂತೆ ಊರ ಸುತ್ತ

ಮುತ್ತ ಸುತ್ತು ವರಿದಿತ್ತು. ಪ್ರಕೃತಿರಮ್ಯ ಹೊಳಿ ಯುಗನ ಜೀವ ಜೀವಾಳ ಆ ಹೊಳಿಯಾಗಿತ್ತು.

ಪವಿತ್ರಾ ಆನಂದ ಕುಳಿತ ಹೊಳೆಯ ದಂಡೆಯ ಆ ಬಂಡೆಗಲ್ಲು ಅವರ ಬಾಲ್ಯದ ಸವಿ ನೆನಪಿನ ಸಂಕೇತದಂತಿತ್ತು. ಪವಿತ್ರಾ ಒಂದೊಂದೆ ಹರಳನ್ನು ನೀರಿಗೆಸೆಯುತ್ತ ಮೌನ ಮುರಿದಳು.

"ನಾವು ಸಣ್ಣವರಿದ್ದಾಗ ಈ ಹೊಳ್ಯಾಗ ಹಾಳಿ ಹಡಗಾ ಬಿಡ್ತಿದ್ವಿ. ಆನಂದ ಈಗ ನೋಡು ಖರೇ ದೋಣಿ ಹತ್ತಿಗೊಂಡು ಈ ದಂಡಿಯಿಂದ ಆ ದಂಡಿಗೆ ಆ ದಂಡಿಯಿಂದ ಈ ದಂಡಿಗೆ ಓಡ್ಯಾಡತೀವಿ".

"ಆವಾಗ ಹಾಳಿಹಡಗು ಮುಳುಗಿದ್ರ ನಕ್ಕು ಮನೀಗೆ ಹೋಗ್ತಿದ್ವಿ, ಈಗ ಬಿರುಗಾಳಿಗೆ ನಾವು ಕೂಡೋ ದೋಣಿ ಮುಳುಗಿದ್ರ."

"ಛೀ ಹಂಗೆಲ್ಲ ಮಾತಾಡಬ್ಯಾಡಾ ಆನಂದ ಈಗ ಯಾಕೋ ನನ್ಗ ಊರಾಗ ಇರಲಿಕ್ಕ ಹೆದರಿಕಿ ಬರಲಿಕ್ಕ ಹತ್ತೇದ. ಧಾರವಾಡದಾಗ ನೀನು ಕಾಲೇಜ ಕಲ್ತರೇನಾತು. ನಾನು ನಿನ್ನ ಜೋಡಿ ಇದ್ದ ಬಿಡ್ತೇನಿ"

"ಗಂಗಜ್ಜೀ ಬಿಡಬೇಕಲ್ಲ, ನೀ ಅಚ್ಚಾದ ಮೊಮ್ಮಗಳು".

"ನೀನು ಅಚ್ಚಾದ ಮೊಮ್ಮಗ"

"ಅದ್ರ ನೀನು ಕಣ್ಣ ಮುಂದೆ ಇರಬೇಕು ಅಂತ ಶಾಲಿ ಸಹಿತ ಬಿಡಿಸಿಕೂಡಿಸಿಕೊಂಡಳಲ್ಲ ಪವಿತ್ರಾ"

"ನಾವಿಬ್ಬರೂ ಅಕಿ ಕಣ್ಣು ಆಗೀವಿ ಆನಂದ. ಅದ್ರ ಯಾಕೋ ಇವತ್ತು ನಾವಿಬ್ಬರು ಹೀಂಗ ಬಂದಿದ್ದು ಸೇರಲಿಲ್ಲ. ಬಹುಶಃ ಅವ್ವಾ ಏನೇನೋ ಥಾಡಿ ಹೇಳಿದಂಗ ಅದ. ನನಗ ಯಾಕೋ ಅಂಜಿಕಿ ಬರಲಿಕ್ಕ ಹತ್ತೇದ."

"ಇನ್ನ ಅಂಜಿದ್ರ ನಡಿಯೋ ಹಂಗಿಲ್ಲ ಪವಿತ್ರಾ. ನಮ್ಮ ಮನಸ್ಸು ಗಟ್ಟಿ ಮಾಡಬೇಕು. ನಮ್ಮ ನಿರ್ಧಾರ ಗಟ್ಟಿ ಮಾಡಬೇಕು. ಈಗ ನಮ್ಮ ಮುಂದ ಒಂದು ಗ್ವಾಡಿ ನಿಂತದ ಅದ್ನ ಕಡದ ಹಾಕಬೇಕು."

"ಈ ಸಂಬಂಧ ಪಾಪ ಆಗಲಿಕ್ಕಿಲ್ಲ ಹೌದಲ್ಲೋ ಆನಂದ."

"ಮತ್ತ ಅದ ಪ್ರಶ್ನಿ ಕೇಳ್ತಿಯಲ್ಲಾ ಪವಿತ್ರಾ. ನಾವು ಒಂದ ಹೊಟ್ಟಿಯೊಳಗ ಹುಟ್ಟಿದ ಅಣ್ಣ ತಂಗಿ ಅಲ್ಲ. ಕಕ್ಕಕ್ಕನ ಮಕ್ಕಳು. ಇನ್ನೊಂದು ಜಾತಿಯೊಳಗ ಇಂಥ ಸಂಬಂಧ ಯೋಗ್ಯ ಅಂತ ಇದ್ದಮ್ಯಾಲೆ ಅಮಾನುಷ ಅಮಾನವೀಯ ಏನ ಅಲ್ಲ. ಆ ವಿಷಯದ ಬಗ್ಗೆ ನೀನು ಏನೂ ಯೋಚಿಸಬ್ಯಾಡಾ."

ದೋಣಿಯ ಹೊರ ವೈ ನೀರು ಭೋರ್ಗರೆಯ ತೊಡಗಿತ್ತು. ದೋಣಿಯ ಒಳಗಡೆ ಕುಳಿತು ಅವರಿಬ್ಬರ ಎದೆಯ ಹಂಬಲಗಳು ಉಕ್ಕೇರತೊಡಗಿದ್ದವು. ಹಂತಹಂತವಾಗಿ ಕುತ್ತಿಗೆಯ ವರೆಗಿನ ನೀರಿನಲ್ಲಿ ಇಳಿದಂತಿದ್ದರು ಅವರು. ಮೋಡ ತಿನಿಯೊಡೆಯಿತು. ಹೊಳೆಯ ತೆರೆಗಳೆಲ್ಲ ಕಣ್ಣು ಬಂದಂತೆ ಪಳ ಪಳನೆ ಹೊಳೆಸತೊಡಗಿದವು.

ಆನಂದ ಪವಿತ್ರಾರ ದೋಣಿ ಇನ್ನೂ ಹೊಳೆಯ ಮಧ್ಯದಲ್ಲೇ ಇತ್ತು. ಆನಂದ ಭಲ ಭರನೆ ಹುಟ್ಟು ಹಾಕತೊಡಗಿದ. ಆಚೆಯ ದಂಡೆಗಿನ ತೆಂಗಿನ ತೋಟವನ್ನು ಅವರು ತಲುಪುವುದರಲ್ಲಿ ಇಬ್ಬರೂ ತೊಯ್ದು ಹೋಗಿದ್ದರು. ಪವಿತ್ರಾಳ ಒದ್ದೆಯಾದ ಬಿಳಿದು ಸೀರೆ ಯೌವ್ವನ [illegible] ತಬ್ಬಿಕೊಂಡು ಕಾಮನ ಬಿಲ್ಲಿಗೆ ಪ್ರಚೋದನೆಯನ್ನೀಯುತ್ತಿತ್ತು. ಮುಂಗುರುಳಿನಿಂದ ತೊಟ್ಟಿಕ್ಕುವ ಹನಿಗಳು ಅವಳ ಕಣ್ಣಿನ ಆಸೆ ಒಸರುತ್ತಿದ್ದಂತೆ ಭಾಸವಾಯಿತು.

ಆನಂದ ಪವಿತ್ರಾಳನ್ನು ತೆಂಗಿನ ಪೊದರಿನಲ್ಲಿ ಎಳೆದುಕೊಂಡ. ಅವರು ಅಲ್ಲಿಂದ ಎದ್ದು ಹೊಳೆಯ ದಂಡೆಗೆ ಬಂದಾಗ ಅದೂ ಶಾಂತವಾಗಿತ್ತು. ಮುಳುಗುವ ಸೂರ್ಯನ ಕಾಂತಿಯಿಂದ ನಳನಳಿಸತೊಡಗಿತ್ತು ಹೊಳೆ.

"ನಾವು ದಂಡಿಯಿಂದ ಎಷ್ಟು ದೂರ ಬಂದ ಬಿಟ್ಟೇವಲ್ಲ" ಪವಿತ್ರಾ ದೋಣಿಯನ್ನು ಹತ್ತುತ್ತ ನುಡಿದಳು.

"ನಾವು ದಂಡಿಯಿಂದ ದೂರ ಅಷ್ಟ ಬಂದಿಲ್ಲ. ಭಾಳಾ ಆಳಕ್ಕೂ ಇಳದೀವಿ. ನಮ್ಮನ್ನ ಇನ್ನು ಯಾರೂ ಅಗಲಿಸಲಿಕ್ಕ ಸಾಧ್ಯನ ಇಲ್ಲ."

ಆನಂದ ಉದ್ವೇಗದಲ್ಲಿ ಹುಟ್ಟನ್ನು ವೇಗ ವೇಗವಾಗಿ ಹಾಕುತ್ತ ದಂಡೆಯತ್ತ ಧಾವಿಸಿದ.



ದೋಣಿಯಿಂದ ಕೆಳಗೆ ಜಿಗಿದು ಪವಿತ್ರಾ ನೋಡುತ್ತಾಳೆ. ಹೆಗಲ ಮೇಲಿದ್ದ ಟಾವೆಲ್ ಜಾಡಿಸಿ ಅವಳ ಅಪ್ಪ ಶಾಮರಾಯ ದುರುಗುಟ್ಟಿ ನೋಡಿದ. ಅವಳ ಇಡೀ ದೇಹದಲ್ಲಿ ಹೊಗೆಯಾಡಿಸಿದಂತಾಯಿತು. ಬೆಚ್ಚಿ ಬಿದ್ದಳು. ಒಂದು ಕ್ಷಣ ಅವಳಿಗೆ ಮಾತೆ ಹೊರಡಲಿಲ್ಲ. ಶಾಮ ಕಕ್ಕನ ಆ ದೈತ್ಯಾಕಾರ ಕಂಡು ಆನಂದನೂ ಕಂಗೆಟ್ಟ.

"ಅಪ್ಪಾ" ಪವಿತ್ರಾ ಬಿಟ್ಟ ಬಾಯಿಗೆ ಬಿಗಿದು ಶಾಮರಾಯ ದರದರನೆ ಎಳೆದುಕೊಂಡು "ಮನೀಗ ನಡಿ ನಿನ್ನ ಚರ್ಮಾ ಸುಲೀತೇನಿ" ಎಂದು ಹೊರಟ. "ಶಾಮ ಕಕ್ಕ, ಶಾಮ ಕಕ್ಕ" ಎನ್ನುತ್ತ ಆನಂದನೂ ಅವರನ್ನು ಅನುಸರಿಸಿದ.

ಮನೆ ತಲುಪಿದಾಗ ಯಾರೋ ಸತ್ತಂಥ ಮೌನ ಆವರಿಸಿತ್ತು. ಆನಂದನ ತಂದೆ ಭೀಮರಾಯ ಹಾಗೂ ತಾಯಿ ರಮಾಬಾಯಿ ಒಂದು ಮೂಲೆಗೆ ಗುಂಪಾಗಿದ್ದರು. ಪವಿತ್ರಾಳ ತಾಯಿ ಕಾವೇರಿ ಕೆಣಕಿದ ಸಿಂಹಿಣಿಯಂತೆ ಬಿಸಿ ಸುಯ್ಯುತ್ತ ವರಾಂಡದ ಬಾಗಿಲಿಗೆ ನಿಂತಿದ್ದಳು. ಪಡಸಾಲಿಗೆ ಹೊಂದಿದಕೋಣೆಯಲ್ಲಿ ಗಂಗಜ್ಜಿ ದುಬ್ಬಚ್ಚಿಯ ಹಾಗೆ ಮುದುಡೆಯಾಗಿ ಬಿದ್ದಿದ್ದಳು.

ಪವಿತ್ರಾ ತಂದೆಯ ಕೈಯನ್ನು ಕೊಸರಿಕೊಂಡು ಗಂಗಜ್ಜಿ ಗಂಗಜ್ಜಿ' ಎಂದು ಅಳುತ್ತ ಅವಳನ್ನು ತಬ್ಬಿಕೊಂಡಳು. ಗಂಗಜ್ಜಿಯ ಬಾಯಿಂದ ಮಾತೇ ಹೊರಡಲಿಲ್ಲ. ಪ್ರಯಾಸದಿಂದ ಅವಳನ್ನು ಹತ್ತಿರ ಕರೆದುಕೊಂಡಳು.

ಶಾಮರಾಯ ಹದ್ದಿನಂತೆ ಎರಗಿ ಪವಿತ್ರಾಳನ್ನು ಎಳೆದು ಕಾವೇರಿ ಬಳಿಗೆ ದಬ್ಬಿದ. ತಬ್ಬಿಬ್ಬಾದ ಪವಿತ್ರಾ ತಾಯಿಯನ್ನು ತಬ್ಬಿಕೊಂಡಳು.

"ಗಂಗಜ್ಜಿ ಹಿಂದೇನು ಅಡಗಿಕೊಂಡು ಕೂಡ್ತಿ. ಅಜ್ಜಿ ಅಚ್ಚಾಕ್ಕನಮ್ಮ ಮನೆತನಕ್ಕ ಕಳಂಕ ಬಂತು. ನಡಿ ಅತ್ತಾಗ."

ಶಾಮರಾಯ ಕಿಡಿ ಕಾರಿದ.

"ಎಂಥಾ ನಾಚಿಗ್ಗೇಡಿ ಇದ್ದೀದಿ ನೀನು ಪವಿತ್ರಾ. ರಮೇಶ, ತೆಂಗಿನ ತೋಟನ್ಯಾಗ ಹಾದುಬರೋ ಮುಂದ ನಿಮ್ಮ ಹೊಲಸ ಕೆಲಸಾ ಎಲ್ಲಾ ನೋಡಿದ್ನಂತ. ಥೂ ನನಗೆ ಮಾರಿ ತೋರಿಸಬ್ಯಾಡಹೋಗು ನೀನು."

ಕಾವೇರಿ ಪವಿತ್ರಾಳ ಮುಖಕ್ಕೆ ಉಗುಳಿದಳು.

ಅದುವರೆಗೆ ಸುಮ್ಮನಿದ್ದ ಭೀಮರಾಯರು 'ಆನಂದ ನೀವಿಬ್ಬರು ಅಣ್ಣ ತಂಗಿ ಅನ್ನೋ ಖಬರ ಆದ್ರು ಇರಬಾರದೇನೊ' ಕೆಳಗೆ ಹಾಕಿದ ತಲೆಯನ್ನು ಕೆಳಗೇ ಹಾಕಿಕೊಂಡೇ ಕೇಳಿದರು.

ಸನ್ನಿವೇಶವನ್ನು ಎದುರಿಸಲಿಕ್ಕೆ ಸನ್ನದ್ಧನಾಗಿ ನಿಂತ ಆನಂದ ಪವಿತ್ರಾಳ ಹತ್ತಿರ ಹೋಗಿ ಅವಳ ಕೈ ಹಿಡಿದುಕೊಂಡು ನಾನು ಪವಿತ್ರಾಳನ್ನು ಮದುವಿ ಆಗ್ತೇನಿ ಎಂದ ದೃಢ ನಿರ್ಧಾರದಿಂದ.

"ಥೂ ಹೇಸಿ ಮುಂಡೇದ ಏನ ಮಾತಾಡ್ತಿ. ನಾಲಿಗಿ ಬಿಗಿ ಹಿಡಿದಕೊಂಡಾದ್ರು ಸುಮ್ಮನೆ ಕೂಡು" ಗಂಗಜ್ಜಿ ಧ್ವನಿಯಲ್ಲಿ ಶಕ್ತಿ ಹಾಕಿ ಕಿರಿಚಿದಳು.

"ಆನಂದ ನಮ್ಮ ಮನೆತನಕ್ಕ ಕೀರ್ತಿ ತಂದೇಳು" ಶಾಮರಾಯ ಕೆಣಕಿದ.

"ಅಣ್ಣ ತಂಗಿ ಅನಲಿಕ್ಕ ನಾವೇನು ಒಡ ಹುಟ್ಟಿದವರೇನು?"

"ನಾಳೆ ನೀ ಖಿನ ಒಡ ಹುಟ್ಟಿದವರನ್ನು ಮಾಡಿಕೊಳೊವನ ಅನ್ನು"

"ಶಾಮಕಕ್ಕ ಬಾಯಿ ಬಿಗಿ ಹಿಡಿದು ಮಾತಾಡ್ರಿ"

"ಆನಂದ" ಭೀಮರಾಯ ಮಗನ ಕೆನ್ನೆಗೆ ಛಟಾರನೆ ಬಿಗಿದ. ತತ್ತರಿಸಿದ ಆನಂದ ಅದೇ ನಿರ್ಧಾರದ ಧ್ವನಿಯಲ್ಲಿ "ಅಪ್ಪಾ, ನಾವು ಮಾಡಿದ್ದು ಅಸಹಜವೇನಲ್ಲ, ಅಪವಿತ್ರವೇನಲ್ಲ"

"ಭಾಳ ಸಹಜ ಅದಪಾ ಊರಾಗ ಮಾರಿ ಎತ್ತದಂಗ ಮಾಡಿ ಬಿಟ್ಟೆಲ್ಲ"

ಹಂಗಿಸುವ ಧ್ವನಿಯಲ್ಲಿ ಕಾವೇರಿ ಹೇಳಿದಳು. ರಮಾಬಾಯಿ ಏನು ಹೇಳಬೇಕೋ ತೋಚದಾಗಿತ್ತು. ನಾಲಿಗೆ ಹೊಲೆದುಕೊಂಡು ಕೂತಿದ್ದಳು.

"ಊರಿನ ಉಸಾಬರಿ ತೊಗೊಂಡು ನಾವೇನ ಮಾಡಬೇಕು" ಎಂದ ಆನಂದನ ಮಾತಿಗೆ ಕೆರಳಿದ ಭೀಮರಾಯರು "ಆನಂದ, ಬಾಯಿ ಮುಚ್ಚಿಕೊಂಡು ಇರ್ತೀಯೋ ಇಲ್ಲೋ?" ಎಂದು ಕಿರುಚಿದರು.

"ಇದೇನೋ ಆನಂದ ಇದೇನ ಮಾಡಬಿಟ್ಟಿ. ನಾ ಸತ್ತಮ್ಯಾಲೆ ನನಗ ಇನ್ಯಾಲೆ ಎಲ್ಲಿದೋ ಸದ್ಗತಿ. ನನಗ ನರಕತಪ್ಪಿದ್ದಲ್ಲ. ಅವನ್ನ ಕೂಡಿಕೊಳೋ ಭಾಗ್ಯಾನೂ ಕಳಕೊಂಡ ಬಿಟ್ಟೆ."

ಗಂಗಜ್ಜಿ ನರಳುತ್ತ ಎದ್ದು ಹೊರಗೆ ಬಂದಳು.

"ಗಂಗಜ್ಜಿ ಇದೆಲ್ಲ ನಿಮ್ಮ ಹಳೇ ವಿಚಾರ" ಎಂದ ಆನಂದನ ಮಾತನ್ನು ಕೇಳಿ ಶಾಮರಾಯರು "ಹೌದಪಾ ನಾವು ಹಳೆ ವಿಚಾರದವರು. ನೀನು ಮನುಷ್ಯರು ಮಾಡೋ ಕೆಲಸಾ ಮಾಡೀ ಏನು?" ಎಂದು ಹಲ್ಲು ಕಚ್ಚಿ ನುಡಿದರು.

"ಬರೇ ಬ್ರಾಹ್ಮಣ ಜಾತಿ ಅವರು ಅಷ್ಟ ಮನುಷ್ಯರಲ್ಲ—ಬ್ಯಾರೆ ಧರ್ಮದವರಿಗೆ ಈ ಸಂಬಂಧ ಒಳ್ಳೇದು ಅಂತ ಅಂದ ಮ್ಯಾಲೆ ಈ ಧರ್ಮದವರಿಗೆ ಏನ್ ಆಗ್ತದ?"

"ಆ ಜಾತಿಯೊಳಗ ಸೇರು ಹೋಗು."

"ಸಂದರ್ಭ ಬಂದ್ರ..."

"ಆನಂದ, ಬಾಯಿಗೆ ಬಂದ ಹಾಗ ಬೊಗಳ್ತೀ ಏನು? ನಡೀ ಒಳಗ"

ಆನಂದನನ್ನು ಭೀಮರಾಯರು ಒಳಗ ದೂಡಿಕೊಂಡು ನಡೆದರು.

ಶಾಮರಾಯರು ಕಾವೇರಿ ಕಿಡಿ ಕಿಡಿಯಾಗಿ ಪವಿತ್ರಾಳನ್ನು ಚೆನ್ನಾಗಿ ಥಳಿಸಿ ತಮ್ಮ ರೋಷವನ್ನು ತೀರಿಸಿಕೊಂಡರು. ಆನಂದನನ್ನು ಕೋಣೆಯೊಳಗೆ ನೂಕಿ ಕೀಲಿ ಹಾಕಿದ್ದರು. ಗಂಗಜ್ಜಿಯ ಜೀವ ತಳಮಳಿಸಿತು. ಆದರೆ [illegible]ರೂ ಅವಳ ಮಾತನ್ನು ಕೇಳುವ ಸ್ಥಿತಿಯಲ್ಲಿ ಇರಲಿಲ್ಲ.

●

ಕುಲಕರ್ಣಿ ರಂಗರಾಯರು ಹೊಳೆಯೂರಿನ ಸುತ್ತಮುತ್ತಲಿನ ಊರಿಗೆಲ್ಲಪರಿಚಿತರು. ನಾಲ್ಕುಜನರಿಗೆ ಬೇಕಾದವರಾಗಿ ಬಾಳಿದವರು. ಕಣ್ಣು ಮುಚ್ಚುವಾಗ ಹಿರಿಯ ಮಗ ಭೀಮರಾಯ ಕಿರಿಯ ಮಗ ಶಾಮ ರಾಯನನ್ನು ಕರೆದು ಕುಟುಂಬದ ಮರ್ಯಾದೆಯನ್ನು ಕಾಪಾಡಿಕೊಂಡು ಹೋಗಬೇಕೆಂದು ಕೇಳಿಕೊಂಡಿದ್ದರು. ಈ ಅವಿಭಕ್ತ ಕುಟುಂಬದ ಸುಖವನ್ನು ಅದರ ಕೊಂಡಿಯಾಗಿದ್ದ ಗಂಗಜ್ಜಿ ಉಳಿಸಿಕೊಂಡು ಹೊರಟಿದ್ದಳು. ಭೀಮರಾಯ ಹೊಲ ಮನಿ ನೋಡಿಕೊಂಡರೆ, ಶಾಮರಾಯ ವ್ಯಾಪಾರಕ್ಕೆ ಕೈ ಹಾಕಿದ್ದ. ಆದರೆ ಇಂದು ಆನಂದ ಆ ಸುಖೀ ಕುಟುಂಬದ ಆನಂದವನ್ನೇ ನಂದಿಸಿ ದಂತಿದ್ದ.

ದಿನಗಳು ಉರುಳಿದವು. ಕಾಲೇಜನ್ನು ಬಿಟ್ಟು ಕೂತ ಆನಂದನನ್ನು ಭೀಮರಾಯರು ಒತ್ತಾಯದಿಂದ ಧಾರವಾಡಕ್ಕೆ ಕರೆದುಕೊಂಡು ಹೋಗಿ ಪುನಃ ಸೇರಿಸಿ ಬಂದರು. ಮನೆಯಲ್ಲಿ ಸದಾ ರಸಕಸಿ. ಶಾಮರಾಯರು ಕಾವೇರಿ ದಿನವಿಡೀ ಆನಂದ, ರಮಾಬಾಯಿ, ಭೀಮ ರಾಯರಿಗೆ ಹಿಡಿ ಶಾಪ ಹಾಕುತ್ತಲೇ ಇದ್ದರು. ಭೀಮ ರಾಯರಿಗೂ ಇದನ್ನು ಸಹಿಸದಂತಾಯಿತು. ಆದರೆ ಹೊಂದಿಕೊಂಡು ನಡೆವುದೂ ಅಸಾಧ್ಯವೆನಿಸಿತು.

"ಅವ್ವಾ, ಈ ಮನ್ಯಾಗ ನಾನು ಶಾಮ ಕೂಡಿ ಇರ ಲಿಕ್ಕ ಸಾಧ್ಯನ ಇಲ್ಲ. ಬ್ಯಾರೆ ಮನೀ ಮಾಡಿ ಬಿಡೋ ಣೇನು?" ಎಂದು ಕೇಳಿದರು.

ಗಂಗಜ್ಜಿ ಕಣ್ಣಲ್ಲಿ ನೀರೂರಿತು. ಎಪ್ಪತ್ತು ವರುಷ ವಯಸ್ಸಾಗಿದ್ದರೂ ಹುಡುಗಿಯಂತೆ ಚಟುವಟಿಕೆಯಿಂದ ಇದ್ದ ಗಂಗಜ್ಜಿ ಈಗ ಮುಪ್ಪನ್ನಪ್ಪಿದ್ದಳು. ಆ ಅಶಕ್ತ ದನಿಯಲ್ಲೇ "ಇನ್ನು ಸ್ವಲ್ಪ ದಿವಸ ತಡದ ನೋಡು ಭೀಮ, ನೀ ಹಿರೇವಾ ಸಮಾಧಾನ ತಂದಕೋ ಬೇಕು. ಈ ಕುಟುಂಬ ಒಡಿಯೋದಿಲ್ಲ ಅಂತ ನೀನು ಇವರಿಗೆ ವಚನಾ ಕೊಟ್ಟಿ ಅಲ್ಲೋ" ಎಂದು ನೆನಪು ಮಾಡಿ ಕೊಟ್ಟಳು.

ತಾಯಿ ಮಾತಿಗೆ ಕಟ್ಟುಬಿದ್ದು ಭೀಮರಾಯರು ಸಮಾಧಾನ ತಂದುಕೊಂಡು ಮಡದಿ ರಮಾಬಾಯಿ ಯನ್ನು ಸಂತೈಸಿದ.

●

ಆನಂದ ಲೈಬ್ರರಿಯ ಪುಸ್ತಕದ ರಾಶಿಯಲ್ಲಿ ಮನ ಸ್ಸನ್ನು ಸ್ಥಿರೀಕರಿಸಲು ಪ್ರಯತ್ನಿಸಿ ವಿಫಲನಾದ. ಪುಸ್ತ ಕದ ಪ್ರತಿಯೊಂದು ಪುಟದಲ್ಲ ಪವಿತ್ರಾಳ ಅಸಹಾಯಕ ನೋಟ. ಟೇಬಲ್ ಮೇಲೆ ಪುಸ್ತಕ ಇರಿಸಿ ಅದರಲ್ಲಿ ಮುಖವನ್ನು ಸೇರಿಸಿ ಮಲಗಿ ಬಿಟ್ಟ.

"ಆನಂದ ಇದೇನು ಲೈಬ್ರರಿ ಬಂದಾದ್ರೂ ?... ಇನ್ನೂ..."

ಗೆಳೆಯ ಕೇಶವ ಎಬ್ಬಿಸಿದಾಗಲೇ ಎಚ್ಚರ. ಇಬ್ಬರೂ ಮೆಟ್ಟಲು ಇಳಿದು ವಿಶ್ವವಿದ್ಯಾಲಯದ ಬೊಟ್ಯಾನಿಕಲ ಗಾರ್ಡನ್ನಿಗೆ ಬಂದರು. ದಾರಿ ಉದ್ದಕ್ಕೂ ಆನಂದ ತನ್ನ ಮನದ ಮಿಡಿತವನ್ನು ವಿವರಿಸಿದ.

"ಆನಂದ ನಿನ್ನ ಸಹಾಯಕ ನಾ ಇದ್ದೀನಿ. ನೀ ಏನೂ ಕಾಳಜೀ ಮಾಡ ಬ್ಯಾಡಾ. ಪವಿತ್ರಾನ್ನ ಇಲ್ಲಿಗೆ ಕರಕೊಂಡು ಬಂದು ಬಿಡು."

"ಅದೇ ವಿಚಾರ ಮಾಡಲಿಕ್ಕ ಹತ್ಯೇನಿ ಕೇಶವಾ. ಈ ಊರಾಗನೂ ನಮ್ಮ ಸಂಬಂಧಿಕರು ಇದ್ದಾರು. ಬೆಳ ಗಾಂವನ್ಯಾಗ ಇದ್ದಾರ, ಹುಬ್ಬಳ್ಯಾಗ ಇದ್ದಾರ. ಎಲ್ಲರ ಅಕಿನ್ನ ಬಿಡಲಿಕ್ಕ ಬರ್‍ತದ."

"ಆಮ್ಯಾಲೆ ಮುಂದಿನ ವಿಚಾರ ನಡಿ ಏಳು."

ಇಬ್ಬರೂ ಹೊರಟು ಹೋದರು. ಆನಂದ ಪವಿ ತ್ರಾಳನ್ನು ಕರೆ ತರುವ ಪ್ಲ್ಯಾನಿನಲ್ಲಿ ಹಲವಾರು ದಿವ ಸಗಳನ್ನು ಕಳೆದ.

●

"ಅವ್ವಾ ತಲೀಗೆ ಚಕ್ರ ಬರಲಿಕ್ಕ ಹತ್ತೇದ. ಕಣ್ಣು ಕತ್ತಲ ಗಡಸಲಿಕ್ಕ ಹತ್ತೇದ" ಎಂದು ಪವಿತ್ರಾ ಚೀರಿ ಕೊಂಡಾಗ ಕಾವೇರಿಯ ಎದೆ ಝಲ್ಲ ಎಂದಿತು. ಅವಳು ಓಡಿ ಬರುವಷ್ಟರಲ್ಲಿ ಪವಿತ್ರಾ ಕುಸಿದು ಬಿದ್ದಿದ್ದಳು.

ಪವಿತ್ರಾಗೆ ಎಚ್ಚರವಾದಾಗ ಬಳಿಯಲ್ಲಿ ಯಾರೂ ಇರಲಿಲ್ಲ. ಮಗ್ಗುಲ ಕೋಣೆಯಲ್ಲಿ ಕಾವೇರಿ ಬಾಯಿ ಶಾಮರಾಯರು ಪಿಸುಗುಟ್ಟುತ್ತಿದ್ದುದು ಕೇಳಿ ಸಿತು.

"ನನ್ಗ ಇಕಿ ಕಡಿಗಿ ಮುಂದ ಹೋದಾಗ ಸಂಶಯ ಬಂದಿತ್ತು. ಅದರ್ಹಂಗ ಆತು. ಈ ಮುಂಡಿ ನಮ್ಮ ಮಾನಾ ಎಲ್ಲಾ ಬಜಾರಕ್ಕ ತಂದ ಬಿಟ್ಟಳು."

"ಸ್ವಲ್ಪ ಶಾಂತ ಆಗು ಕಾವೇರಿ. ಮುಂದ ಏನ ಮಾಡ ಬೇಕು ಅನ್ನೋದು ಯೋಚನಿ ಮಾಡಬೇಕು."

"ಮಧ್ಲೀಗೆ ಮನೀ ಬ್ಯಾರೆ ಮಾಡ್ರಿ ಈಗ ಈ ಸಧ್ಯ. ಇನ್ನು ಒಂದು ಕ್ಷಣ ಇಲ್ಲೆ ಇರೋದು ಬ್ಯಾಡಾ

"ಹೌದು ಇವತ್ತ ಮನಿ ಹುಡುಕಿಕೊಂಡು ಬಂದೆ ಬಿಡ್ತೇನಿ. ಪವಿತ್ರಾನ್ನ...."

'ಪವಿತ್ರಾನ್ನ ಬೆಂಗಳೂರಿಗೆ ಕರಕೊಂಡು ಹೋಗಿ ಹೊಟ್ಟಿ ತಗಿಸಿಕೊಂಡು ಬಂದ ಬಿಡ್ರಿ. ಲಗು ಒಂದು ಗಂಡು ನೋಡಿ ಮದ್ವಿ ಮಾಡಿ ಬಿಡೋಣ"

ಪವಿತ್ರಾಳ ಎದೆಯೊಡೆದು ಹೋಯಿತು. ಅವಳ ಕರಾಳ ಭವಿಷ್ಯದ ಕಗ್ಗತ್ತಲಿನಲ್ಲಿ ಆನಂದದ ರೇಖೆ ಕೂಡ ಮಿಂಚಲಿಲ್ಲ. ಗಂಟಲಿನಲ್ಲಿ ಉಸಿರು ಕಟ್ಟಿತ್ತು. ಕಣ್ಣೀರು ಧಾರಾಕಾರವಾಗಿ ಹರಿಯತೊಡಗಿತ್ತು.

●

ರಂಗರಾಯರ ಎದೆಯನ್ನೇ ಸೀಳಿದಂತೆ ಆ ಮನೆ ಒಡೆದು ಹೋಯಿತು. ಅಣ್ಣ ತಮ್ಮಂದಿರಿಬ್ಬರೂ ಎಲ್ಲ ವನ್ನು ಎರಡು ಭಾಗ ಮಾಡಿ ಹಂಚಿಕೊಂಡು ಬಿಟ್ಟರು.

"ನನ್ನೂ ಎರಡು ಭಾಗ ಮಾಡಿ ಹಂಚಿಕೊಂಡು ಬಿಡ್ರೆಪ್ಪಾ, ಆಂದ್ರ ಅವರಿಗೂ ಸಮಾಧಾನ ಆಗ್ತದ" ಎಂದ ಗಂಗಜ್ಜಿಯ ಎದೆಗೆ ಚೂರಿ ಬಿದ್ದಂತಿತ್ತು.

ಗಂಗಜ್ಜ ಭೀಮರಾಯನ ಜೊತೆಗೆ ಉಳಿದು ಕೊಂಡಳು.ಶಾಮರಾಯ ಕಾವೇರಿ ತಮ್ಮ ಜೊತೆಗೆ ಕರೆದು ಕೊಂಡು ಹೋಗುವ ಇಚ್ಛೆಯನ್ನೂ ಪ್ರಕಟಪಡಿಸ ಲಿಲ್ಲ. ಪವಿತ್ರಾ ಗಂಗಜ್ಜಿಯನ್ನು ಅಪ್ಪಿಕೊಂಡು ಬೋರಿಟ್ಟಳು. ಶಾಮರಾಯರು ಅವಳನ್ನು ಎಳೆದು ಕೊಂಡು ಹೋದರು.

ಅಂದು ಅಸ್ತಮಾ ಹೆಚ್ಚಾಗಿ ಗಂಗಜ್ಜಿಯನ್ನು ಮಲಕ್ಕೆ ಹಾಕುವ ಹೊತ್ತು ಬಂದಂತಾಗಿತ್ತು. ಗೊರುತ್ತ ಬಿದ್ದಿದ್ದಳು ಮೂಲೆಯಲ್ಲಿ. ಭೀಮರಾಯರು ರಮಾಬಾಯಿ ಹತ್ತಿರವೇ ಕುಳಿತಿದ್ದರು. ಗಂಗಜ್ಜಿಯನ್ನು ಕಾಣುವ ಹಂಬಲದಲ್ಲಿ ಪವಿತ್ರಾ ತಾಯಿಯ ಮನ ಒಲಿಸಿ ಕೊಂಡು ಬಂದಿದ್ದಳು. ಆನಂದನೂ ಧಾರವಾಡದಿಂದ ಬಂದಿದ್ದ.

ಸಂಜೆ ಏಳು ಗಂಟೆಯಾಗಿರಬಹುದು. ಮಬ್ಬುಗತ್ತಲೆ ಕವಿದಿತ್ತು. ಆನಂದ ಪವಿತ್ರ ಎಷ್ಟು ಹೊತ್ತು ಕುಳಿ ತಿದ್ದರೋ ಸಮಸ್ಯೆಗೆ ಪರಿಹಾರ ಕಾಣದೆ. ಮೌನ ಮುರಿದ ಆನಂದ ಎಂದ

"ಪವಿತ್ರ, ಈಗ ನಮಗೆ ಉಳಿದಿರೋದು ಒಂದೇ ಹಾದಿ."

"ಏನು?"

"ನಾವು ಇಲ್ಲಿಂದ ಧಾರವಾಡಕ. ಓಡಿ ಹೋಗಿ ಬಿಡೋಣ."

"ಅಪ್ಪಾ ಅವ್ವಗ ಗೊತ್ತ ಆದ್ರ ನನ್ನ ಚರ್ಮ ಸುಲಿದು ಬಿಡ್ತಾರ"

"ಈಗ ಅಂಜಿ ಬದುಕಲಿಕ್ಕ ಸಾಧ್ಯನ ಇಲ್ಲ. ನೀ ಹಿಂಜರಿದ್ರ ನಿನ್ನ ಹೊಟ್ಯಾಗಿನ ನನ್ನ ಸಂತಾನ ಸಾಯ್ತದ ನಿನ್ನ ಮಾತೃತ್ವ ಸಾಯುತದ. ಈ ಊರಿನ ಎರಡ ಮನೆತನದ ಸರ್ಪ ಹರಕೊಂಡು ಹೋಗಿ ಬಿಡ ಬೇಕು."

"ಹೌದು ಆನಂದ. ಈಗ ನಮಗ ಆದ ಒಂದು ಹಾದಿ. ಇವತ್ತು ಅಷ್ಟ ಊರಾಗಿಲ್ಲ. ಇವತ್ತಿನಂಥ ಪ್ಯಾಳ್ಯಾ ಮತ್ತ ಬರಲಿಕ ಸಾಧ್ಯನ ಇಲ್ಲ.

"ನೀ ಹೇಳೋದೂ ... ಅದ ಮಾತ್ರ. ನನ್ನ ... ಸಹಾಯಕ್ಕ ಇದ್ದಾನ"

"ನಡೀ, ಉಟ್ಟ ಸೀರಿಮ್ಯಾಲೆ ಬಂದ ಬಿಡ್ತೇನಿ. ಹೀಂಗ ಓಡಿ ಹೋಗಿ ಬಿಡೋಣ" ಆನಂದ ಪವಿತ್ರ ಹೊಳೆಯ ಪ್ರವಾಹದೊಂದಿಗೆ ತೂರಿಕೊಂಡು ಹೋದರು.

●

ಒಂದು ವಾರ ಉರುಳಿರಬೇಕು. ಆನಂದ, ಪವಿತ್ರಾ, ಕೇಶವ ಅಜ್ಞಾತವಾಸದ ಜೀವನ ಸಾಗಿಸ ತೊಡಗಿ ದ್ದರು. ಊರಿನಿಂದ ಓಡಿ ಬಂದಾಗಿನಿಂದ ಪವಿತ್ರಾ ಹಾಸಿಗೆ ಹಿಡಿದು ಬಿಟ್ಟಿದ್ದಳು. ಯೌವ್ವನದಿಂದ ತುಂಬಿದ ಅವಳ ದೇಹ ಕೃಶವಾಗಿ ಹೋಗಿತ್ತು. ಅರ್ಧ ಕರಗಿ ಹೋದಂತಿದ್ದಳು. ಚೆಲುವು ಕಮರಿ ಹೋಗಿತ್ತು. ತಂದೆ ತಾಯಿಯ ಹೆಸರನೆತ್ತಲೂ ಹೇಸಿಕೆ ಎನ್ನಿಸಿತು ಅವಳಿಗೆ.

"ಪವಿತ್ರಾನ್ನ ಹುಡುಕ್ಯಾಡಿ ಕರಕೊಂಡು ಬರ್ರೆಲ್ಲ" ಎಂದು ಕಾವೇರಿ ನುಡಿದಾಗ ಶಾಮರಾಯರು ಸಿಟ್ಟಿ ನಿಂದ "ಅವಳು ನನ್ನ ಪಾಲಿಗೆ ಸತ್ತಾಳ. ಬೇಕಾದ್ರ ತಾನ ಬಾಗಲಿಗೆ ಬಂದು ಬೀಳಲಿ"ಎಂದು ಮಾತು ಮುಗಿ ಸಿದ್ದರು. ಭೀಮರಾಯರು ಆನಂದ ಪವಿತ್ರಾರನ್ನು ಶೋಧಿಸಲು ಪ್ರಯತ್ನಿಸಿ ವಿಫಲರಾಗಿದ್ದರು ಗಂಗಜ್ಜಿ ಇನ್ನೂ ಎಷ್ಟು ದಿವ ಜೀವಾ ಹಿಡಿದುಕೊಂಡು ಇರಲಿಕ ಸಾಧ್ಯ?

ಪವಿತ್ರಾ ಈಗ ಎಂಟು ತಿಂಗಳ ಬಸುರಿ. ಅಸ್ತ ವ್ಯಸ್ತ ಮನಸು ಅಶಕ್ತ ದೇಹ. ಯಾವ ಆಘಾತವನ್ನೂ ಸಹಿಸದಂತಾಗಿತ್ತು. ಆದರೆ ಅವಳ ಪಾಲಿಗೆ ಆ ಘಾ ತಗಳ ಸರಪಳಿಯ ಹೊರತು ಮತ್ತೇನು ದೊರೆಯ ಲಿಲ್ಲ. ಆನಂದ ಕೇಶವ ಗಳಿಸುವ ಗಳಿಕೆ ಅವಳ ಔಷಧಿ ಟಾನಿಕಗಳಿಗೆ ವ್ಯಯವಾಗ ತೊಡಗಿತು. ಗರ್ಭಿಣಿ ಇದ್ದಾಗ ಜಾಂಡೀಸ ಸೇರಿದರೆ ತಾಯಿ ಮಗು ಇಬ್ಬರ ಜೀವಕ್ಕೂ ಅಪಾಯ ಎಂದಿದ್ದರು ಡಾಕ್ಟರು. ಅದ



ನೀ ಸ್ವಲ್ಪ ಹಾಗೇ ಮನೆತುಂಬ ಓಡಾಡ್ರಿ! ಕಸಗುಡಿಸುವ ನನ್ನ ತೊಂದರೆಯಾದ್ರೂ ತಪ್ಪುತ್ತೆ.

ಕ್ಕಾಗಿ ಆನಂದ ಧಾರವಾಡ, ಹುಬ್ಬಳ್ಳಿ, ಬೆಳಗಾವಿಯಲ್ಲಿ ಯ ಸಂಬಂಧಿಕರ ಮನೆಯಲ್ಲಿ ಕೆಲವು ತಿಂಗಳ ಮಟ್ಟಿ ಗಾದರೂ ಇರಬೇಕೆಂದು ಪ್ರಯತ್ನಿಸಿದ. ಆದರೆ ಅಲ್ಲಿ ಪವಿತ್ರಾಗೆ ನೆಮ್ಮದಿಯ ಬದಲು ಇಲ್ಲದ ರೋಗಗಳು ಕಾಣಿಸಿಕೊಂಡು ಉಲ್ಬಣಿಸತೊಡಗಿದವು. ಫುಟಬಾಲಿ ನಂತೆ ಒಂದು ಮನೆಯಿಂದ ಇನ್ನೊಂದು ಮನೆಗೆ ಹೊಟ್ಟೆ ಹೊತ್ತುಕೊಂಡು ತಿರುಗಿದಳು ಪವಿತ್ರಾ. ಅಲೆದು ಅಲೆದು ಸೋತು ಸುಣ್ಣವಾಗಿ ಹೋಗಿದ್ದಳು.

ಆನಂದ ಮನೆಗೆ ಬಂದ. ಅವಳ ಆಕಾರವನ್ನು ನೋ ಡಿ ಕರುಳು ಹಿಚುಕಿ ಬಂತು. ಅವಳ ಮುಂಗುರುಳು ನೇವರಿಸುತ್ತಾ ಕೇಳಿದ:

"ಪವಿತ್ರಾ ನಿನ್ನ ಸುಖಾನ ನನ್ನ ಸುಖಾ–ನೀ ಈ ರೀತಿ ಕೊರಗೊಕ್ಕೋತ ಹೋದ್ರ ನಾನಾದ್ರು ಹ್ಯಾಂಗ ಬದುಕಬೇಕು?"

"ಆನಂದ, ನನ್ನಿಂದ ನಿನಗೂ ಯಾವ ಸುಖಾ ಇಲ್ಲಾ. ರಂಗಜ್ಜಿ ಹೇಳಿದಂಗ ಈ ಸಂಬಂಧ ಶಾಪ ಇರಬೇಕು."

"ಮತ್ತ ಅದ ಮಾತು ಆಡ್ತಿ ಅಲ್ಲ."

"ಹೌದು. ನಂದನದಂಥಾ ನಮ್ಮ ಮನೆತನ ಒಡೆದು ಹೋತು. ಗಂಗಜ್ಜಿ ಸಾಯಲಿಕ್ಕೆ ಆಗ್ಯಾಳ. ಇದು ಪಾಪದ ಸಂಬಂಧ ಕಾಣಸ್ತದ."

"ಮತ್ತ ಅದರ ವಿಚಾರನ...ನಾ ಸಾಕಷ್ಟು ವಿಚಾರ ಮಾಡೀನಿ ಪವಿತ್ರಾ" ಎಂದು ಮಾತು ಮುಗಿ ಸುವಷ್ಟರಲ್ಲಿ ಕೇಶವ ಬಂದ.

"ಹೌದು ಅತ್ತಿಗೆ, ಡಾಕ್ಟರ್ನ ಕೇಳಿಕೊಂಡು ಬಂದೀನಿ ರಕ್ತ ಸಂಬಂಧ ಏನಾದ್ರು ದೋಷ ಆಗ್ತದೇನು ಅಂತ. ಯಾವ ಜಾತಿ ಅವರು ಇದ್ದರೂ ರಕ್ತ ಒಂದ. ಯಾವ ವ್ಯತ್ಯಾಸಾನೂ ಇಲ್ಲ ಅಂತ ಹೇಳಿದ್ರು. ಈ ಸಂಬಂಧ ಏನೂ ದೋಷ ಇಲ್ಲಾ ಅಂತ"

"ಹೌದು ಪವಿತ್ರಾ. ನಾನಿಲ್ಲೀವರೆಗೂ ವಿಚಾರ ಮಾಡಿದೆ. ನಾವು ಮತಾಂತರ ಹೊಂದಿ ಬಿಟ್ಟು ಆರಾಮ ಇದ್ದು ಬಿಡೋಣ ಅಂತ."

ಎಂದು ಉದ್ವೇಗದಿಂದ ಹೇಳಿದ ಆನಂದ. ಆ ಮಾತನ್ನು ಕೇಳಿದ ಪವಿತ್ರ ಅವನ ಬಾಯಿ ಮೇಲೆ ಕೈ ಇರಿಸಿ, "ಬೇಡ. ಆ ವಿಚಾರ ಮಾಡ ಬ್ಯಾಡಾ" ಎಂದು ಕ್ಷೀಣ ಸ್ವರದಲ್ಲಿ ಹೇಳಿದಳು.

ಆನಂದ–ಕೇಶವ ಪವಿತ್ರಳ ಮನಸನ್ನು ಪ್ರಫುಲ್ಲ ಗೊಳಿಸಲು ಸಾಕಷ್ಟು ಪ್ರಯತ್ನಿಸಿದರು. ಆದರೆ ಎಲ್ಲವೂ ವ್ಯರ್ಥವಾಯಿತು. ಅವಳು ಕಣ್ಣು ಮುಚ್ಚಿದ ಕೂಡಲೇ, ತಂದೆ, ತಾಯಿ. ಗಂಗಜ್ಜಿ, ಆನಂದ, ಜಾತಿ–ಧರ್ಮ ಪಾಪ-ಪುಣ್ಯ ಎಲ್ಲಾ ಸುಳಿದು ಹೋಗುತ್ತಿದ್ದವು. ಗಂಗ ಜ್ಜಿಗೆ ಸದ್ಗತಿ ಇಲ್ಲಾ–ಗಂಗಜ್ಜಿಗೆ ಸದ್ಗತಿ ಇಲ್ಲಾ–ಅದೇ ಕನವರಿಕೆ. ಅದೇ ಪ್ರೇತಗಳು ಹತ್ತು ತಿಂಗಳೂ ಅವಳನ್ನು ಮಂತ್ತಿ ಹಡೆಯುವಂತೆ ಮಾಡಿದವು.

ಅಂತೂ ಪವಿತ್ರಾ ಸುನೀತಿ ಪ್ರಸೂತಿ ಗೃಹ ದಲ್ಲಿ ಹೆತ್ತಳು. ಇದುವರೆಗೆ ಆ ಪ್ರಸೂತಿ ಗೃಹದಲ್ಲಿ ಅಂಥ ಸಂತಾನವನ್ನೇ ಕಂಡಿರಲಿಲ್ಲ. ಊನ ಸಂತಾನ! ಅತಿ ರಾಳವಿಕರಾಳ ರೂಪ. ಹುಟ್ಟಿದಾಗಲೇ ಸತ್ತು ಹೊರ ಬಂದಿತ್ತು. ಹುಗಿದು ಬಂದಾಯಿತು. ಡಾಕ್ಟರರೂ ಸಂತೈಸಿದರೂ ಆನಂದನಿಗೆ ದಿಕ್ಕೇ ತೋಚದಾಗಿತ್ತು.

ಮತ್ತೆ ... ವಾತಾವರಣದ ಕತ್ತಲಲ್ಲಿ ಅವರ

ದ್ರೆಣಯಂದ ಹೋರಾಟದ ಸತ್ತೆ, ಪ್ರತಿಮೆಗಳು ನುಸುಳಿ ಹೋದವು. ಪವಿತ್ರಾ ಅಂದಿದ್ದನ್ನೇ ಅನ್ನತೊಡಗಿದಳು. ಪಾಪದ ಸಂಬಂಧ, ಪಾಪ ಸಂಬಂಧ..."

"ಪವಿತ್ರಾ...ಪವಿತ್ರಾ ಇದು ಪಾಪ ಅಲ್ಲ. ನಿನ್ನ ಊನ ಸಂತಾನ ಆಗಲಿಕ್ಕೆ ಸಮಾಜ ಕಾರಣ. ಅದ್ರ ಆಕ್ರೋಶ ಕಾರಣ."

"ಆನಂದ ನನ್ಗ ಗಂಗಜ್ಜಿ ನೆನಪು ಭಾಳ ಆಗಲಿಕ ಹತ್ತೇದ. ಹೋಗೋಣ ನಡಿ."

"ಈಗ ಇನ್ನೂ ನಿನ್ನ ಈ ಹಸೀ ಮೈ"

"ನಾನು ಇನ್ನು ಸ್ವಲ್ಪ ಹೊತ್ತು ಬದುಕಬೇಕು ಅಂದ್ರ ನಡಿ. ನನ್ನ ಕರಕೊಂಡು ನಡಿ–ಗಂಗಜ್ಜಿ ಹತ್ರ"

ಪವಿತ್ರಾ ಹಟ ಹಿಡಿದಳು. ಡಾಕ್ಟರರು ಅವಳ ಮನಸಿನ ವಿರುದ್ಧ ನಡೆದುಕೊಳ್ಳದಿರಲು ಹೇಳಿದರು.

●

ಅಂದು ಅಮಾವಾಸ್ಯೆಯ ಭಯಾನಕ ರಾತ್ರಿ. ವಾರವಿಡೀ ಸುರಿದ ಮಳೆ ಅಂದು ತನ್ನ ಶಕ್ತಿಯನ್ನು ಇಮ್ಮಡಿಸಿತ್ತು. ಅದರ ಕಸುವು ಹೆಚ್ಚುತ್ತಲೇ ಸಾಗಿತ್ತು. ಹೊಳೆಯೂರಿನ ಜನ ತಲ್ಲಣಿಸಿ ಹೋಯಿತು.

ಕಿಟಕಿಯ ಬಳಿಯ ಮಂಚದ ಮೇಲೆ ಗೂಡುಗಟ್ಟಿದ ಗುಬ್ಬಚ್ಚಿಯಂತೆ ಗಂಗಜ್ಜಿ ಅರೆಪ್ರಜ್ಞೆಯಲ್ಲಿದ್ದಳು. ಅವಳ ಅರ್ಧಮರ್ಧ ಕಣ್ಣು ತೆರೆದಿತ್ತು. ಮಿಂಚಿನ ಬೆಳಕಿನಲ್ಲಿ ಕತ್ತಲಲ್ಲೂ, ಏನೇನೋ ಆಕಾರಗಳು ವಿಕಾರಗಳು ನಾನಾ ರೂಪ ತಾಳಿ ಅವಳ ಕಣ್ಣು ಮುಂದೆ ಕುಣಿಯುತೊಡಗಿದವು. ಆನಂದ ಪವಿತ್ರಾಳ ಸಂಭೋಗ ಚಿತ್ರ: ರಂಗಾರಾಯರನ್ನು ಸ್ವರ್ಗದಿಂದ ಸರಕಾಡೂಡ ಚಿತ್ರ. ಸದ್ಗತಿ ಕಾಣದ ತಾಸ ಪ್ರೇತವಾದಂತೆ. ಒಂದೇ ಎರಡೇ! ಅನೇಕ ರೂಪುಗಳ ಕೊಳ್ಳಿ ದೆವ್ವಗಳ ಕುಣಿತ. ಬಿರುಗಾಳಿಯ ಹೊಡೆತಕ್ಕೆ ಕಿಟಕಿ ಬಾಗಿಲು ತೆರೆದುಕೊಂಡಿತು. ಅದರ ಜೊತೆಗೆ ಸಾರು ಬಸವನ ಧ್ವನಿಯೂ ಆಲಿಸಿ ಬಂತು. ರಮಾಬಾಯಿ ಕಿಟಕಿ ಬಾಗಿಲು ಹಾಕಲು ಹೋದಳು. ಪ್ರಯಾಸದಿಂದ ಗಂಗಜ್ಜಿ 'ಬಾಗಿಲ ಹಾಕ ಬ್ಯಾಡ ತಡಿ' ಎಂದಳು. ಸಾರು ಬಸವನ ಧ್ವನಿ ಜೋರಾಗಿ ಕೇಳಿಸಿತು. "ಕೇಳ್ರಿಪೊ ಕೇಳ್ರೀ ಸಾರ ಬಸವ ಸಾರಲಿಕ್ಕ ಹತ್ಯಾನ. ಮನಷ್ಯಾನ ಪಾಪದ ಕೊಡಾ ತುಂಬಿದಾಗ ಹೊಳೆಯೂರಿನ ಮಳಿಮಲ್ಲೇಶ್ವರನ ಗುಡಿ ಗೋಪುರದ ಮ್ಯಾಲಿ ಕೂತು ಗುಬ್ಬಿ ನೀರು ಕುಡಿತದ. ಊರು ನೀರಾಗಿ ಹೋಗ್ತದ. ನೀರೀನ ಊರಾಗ್ತದ ಹೊಳೆಯೂರು. ಪಾಪದ ಕೊಡ ತುಂಬಲಿಕ ಹತ್ತ್ಯೇದ.

ಭೀಮರಾಯ ಕಿಟಕಿಯ ಬಳಿ ಹೋಗಿ ನೋಡಿದಾಗ ಕಂದೀಲ ಹಿಡಕೊಂಡು ಸಾರು ಬಸವ ಹರಿದ ಛತ್ರಿಯ ಅಡಿಯಲ್ಲಿ ನಡೆದಿದ್ದ. ಚಟ ಭಡಲ್ ಎಂದು ಸಿಡಿಲು ಬಡಿದಾಗ ಊರೇ ನಡುಗಿ ಲೈಟುಗಳೆಲ್ಲಾ ನಂದಿ ಹೋದವು. ಗಂಗಜ್ಜಿ ಬಡಬಡಿಸಿದಳು. 'ಪಾಪಾ–ಪಾಪದ ಕೊಡ ತುಂಬ್ತ್ಯು. ಇವತ್ತ ಪ್ರಳಯ ಆಗ್ತದ. ನೀವೆಲ್ಲಾ ಈಗಿಂದೀಗ ಊರ ಬಿಟ್ಟು ಹೋಗ್ರೀ..."

ಅವಳ ಭವಿಷ್ಯವಾಣಿಯೇ ಎನ್ನುವಂತೆ ಸ್ವಲ್ಪ ಹೊತ್ತಿನಲ್ಲಿಯೇ ಹೊಳೆಯೂರಿನ ಒಡ್ಡು ಒಡೆದು ಹೋಯಿತು. ವೈರಿಯ ಸೈನ್ಯದಂತೆ ಪ್ರವಾಹ ಊರಲ್ಲಿ ನುಗ್ಗಿತ್ತು. ಎಲ್ಲೆಡೆ ಕೋಲಾಹಲ. ಚೀರಾಟ. ಊರು ಕೊಚ್ಚಿಕೊಂಡು ಹೋಯಿತು. ಇದ್ದವರ್‍ಯಾರೋ ಸತ್ತವರ್‍ಯಾರೋ ದೇವರಿಗೇ ಗೊತ್ತು.

ದಾರಿ ಕಟ್ಟಾಗಿದ್ದರಿಂದ ಹೊಳೆಯ ಬಳಿಯೇ ಬಸ್ಸು ಆನಂದ ಪವಿತ್ರರನ್ನು ಇಳಿಸಿ ಹೋಗಿ ಬಿಟ್ಟಿತ್ತು. ಪ್ರವಾಹ —ಏರುತ್ತಿದ್ದರೂ ಪವಿತ್ರಾಳ ಒತ್ತಾಯಕ್ಕೆ ಆನಂದ ಅವಳನ್ನು ಕರೆದುಕೊಂಡು ಹೊರಟಿದ್ದ. ಹೇಗೋ ಪಾರಾಗಬೇಕೆಂದಾಗ ಪ್ರವಾಹದ ಸೆಳೆತಕ್ಕೆ ಇಬ್ಬರೂ ಕೊಚ್ಚಿಕೊಂಡು ಹೋದರು. ಎಲ್ಲೆಡೆ ಕತ್ತಲು. ಪವಿತ್ರಾ ಪವಿತ್ರಾ ಎಂದು ಅರಚುತ್ತ ಗಿಡದ ಟೊಂಗೆಯ ಮೇಲೆ ಇಡೀ ರಾತ್ರಿ ಕಳೆದ ಆನಂದ. ಬೆಳಗು ಹರಿದಾಗ ನೋಡುತ್ತಾನೆ. ಪವಿತ್ರಾ ಅದೇ ಗಿಡದ ಎರಡು ಬೊಡ್ಡೆಗಳ ಮಧ್ಯ ಸ್ಮೃತಿ ತಪ್ಪಿ ಸಿಕ್ಕಿದ್ದಳು. ಮೆಲ್ಲನೆ ಅವಳ ಹತ್ತಿರ ಇಳಿದು ನಡೆದ. ನೀರು ಇಳಿಯ ತೊಡಗಿತ್ತು. ಅವಳನ್ನು ಹೆಗಲ ಮೇಲೆ ಹಾಕಿಕೊಂಡು ಊರ ಕಡೆಗೆ ನಡೆದ. ಕೆಸರಿನಲ್ಲಿ ಕಚ್ಚನೆ ಕಾಲಿರಿಸಿದಾಗ ಯಾವುದೋ ಹೆಣವನ್ನು ತುಳಿದಂತಾಯಿತು. ಅಲ್ಲೇ ಕಲ್ಲಿನ ಮೇಲೆ ಪವಿತ್ರಾಳನ್ನು ಮಲಗಿಸಿ ಆ ಹೆಣವನ್ನು ಎತ್ತಿದಾಗ ಮೈ ಕಂಪಿಸಿತು. ಕಿರುಚಲಿಕ್ಕೂ ಉಸಿರು ಬಾರದಂತಾಯಿತು. "ಗಂಗಜ್ಜಿ" ಬಿಗಿಯಾಗಿ ಹಿಡಿದ ಮುಷ್ಟಿಯನ್ನು ಬಿಡಿಸಿ ನೋಡಿದಾಗ ಆನಂದನಿಗೆ ಎರಡು ತಾಯ್ತಗಳು ಕಾಣಿಸಿವು. ಊನ ಸಂತಾನದ ಶಾಪದ ವಿಶಾಪಕ್ಕೆ ಪರಿತಪಿಸಿದ ಗಂಗಜ್ಜಿಯ ಎರಡು ಕಣ್ಣುಗಳಂತೆ. ಕಂಡವು ಆ ತಾಯ್ತಗಳು. ●

# ಸಹಕಾರದ ಮಹತ್ವ

ಒಮ್ಮೆ ಅಡುಗೆಯವನಿಗೆ ಇದ್ದಕ್ಕಿದ್ದಂತೆ ಅಹಂಕಾರವುಂಟಾಯಿತು. "ಈ ರೊಟ್ಟಿಗಳನ್ನು ನಾನೇ ತಯಾರಿಸಿದವನು ಇವೆಲ್ಲವೂ ನನ್ನ ದುಡಿಮೆಯ ಫಲ!"- ಎಂದು ಯೋಚಿಸಿದನಾತ.

ಹಿಟ್ಟು ಅಡುಗೆಯುವನ ಈ ಸೊಕ್ಕನ್ನು ಸಹಿಸದಾಯಿತು. ಅದು ಅವನೊಡನೆ "ನಾನೇ ಇರದೇ ಹೋಗಿದ್ದರೆ ನೀನೆಂತು ರೊಟ್ಟಿ ತಯಾರಿಸುತ್ತಿದ್ದೆ?" - ಎಂದು ಕೇಳಿತು. ಅಡುಗೆಯಾತ ಸುಮ್ಮನಾದ. ಆದರೆ ನೀರಿಗೆ ಹಿಟ್ಟಿನ ಸೊಕ್ಕು ಹಿಡಿಸಲಿಲ್ಲ... "ನಾನೇ ಇರದೇ ಹೋಗಿದ್ದರೆ ನೀವಿಬ್ಬರೂ ಏನು ಮಾಡುತ್ತಿದ್ದಿರಿ?" ಎಂದು ಕೇಳಿತದು.

ಆಗಲೇ ಲಟ್ಟಣಿಗೆ ಉಚ್ಚ ದನಿಯಲ್ಲಿ "ನೀವು ಮೂವರು ಇದ್ದು ನಾನೇ ಇರದಿದ್ದರೆ ಏನಾಗುತ್ತಿತ್ತು?" ಎಂದಿತು. ಕಾವಲಿಯೂ ಸುಮ್ಮನಿರದೆ - "ನೀವು ನಾಲ್ಕರಿದ್ದು ನಾನು ಇರದಿದ್ದರೆ ರೊಟ್ಟಿ ಅದೆಂತು ಸುಡುತ್ತಿತ್ತು?" ಎಂದಿತು

ಆಗ ಬೆಂಕಿ ಜೋರಾಗಿ... "ನಿಮ್ಮ ಮಾತೇನೋ ನಿಜವೇ... ನೀವೆಲ್ಲ ಇದ್ದು ನಾನೇ ಇರದಿದ್ದರೆ ರೊಟ್ಟಿ ಆಗುತ್ತಲೇ ಇರಲಿಲ್ಲ. ರೊಟ್ಟಿಯ ಬದಲು ಹಿಟ್ಟಿನ ಮುದ್ದೆ ಮಾತ್ರ ಉಳಿಯುತ್ತಿತ್ತು, ರೊಟ್ಟಿ ನಮ್ಮೆಲ್ಲರ ಸಹಕಾರದ ಫಲ!" ಎಂದಿತು.

ಅಂದಿನಿಂದ ಯಾರೂ ತಮ್ಮ ಕೆಲಸದ ಬಗ್ಗೆ ಹೆಮ್ಮೆ ಪಡಲಿಲ್ಲ. ಎಲ್ಲರೂ ಇತರರ ಆವಶ್ಯಕತೆಯನ್ನು ಮನಗಂಡು, ಮತ್ತು ಪರಸ್ಪರ ಸಹಯೋಗದ ಮಹತ್ವವನ್ನರಿತರು.

ಸವ್ಯಸಾಚಿ

# ಯಾರು?

ಹಗ್ಲೂ ರಾತ್ರಿ ಈ ಕಿಡ್ಕಿ ಕಣ್ಣಿಂದೆ
ನೋಡೋದೊಂದೇ ಕೆಲ್ಸ ನನಗ!
ಕೆಲಸಿಲ್ದ ಕೆಲ್ಸ ಕೆಲಸಲ್ದ ಕೆಲ್ಸ ಅಂತ
ನನ್ನವಳ್ ಅಂತೇ ಇರ್ತಾಳ
ಈ ಕಿಡ್ಕಿ ಕಣ್ಣಿಂದ ನಾ ನೋಡೋ ಬಂಬಯಿ ತಾರೀಫು
ಆ ಅದರ ಮಜಾ ಅವ್ಳಿಗೇನು ಗೊತ್ತು, ಪಾಪ!
ಹಗ್ಲೂ ರಾತ್ರಿ ಈ ಓಣಿಗಳಾಗ ಮನೆಗಳಾಗ
ನಡಿಯೊ ಕೆಲ್ಸ ಆಗೋ ಹಗ್ರಣ ಆದೆಲ್ಲ
ಒಂದ್ ರೀತಿ ಮಜಾ ಅನಿಸಿದ್ರೆ–
ಆ ಗಂಡ್ಸದ್ ವಾರಿಗಿರೋ ಹನುಮಂದೇರ್ ಗುಡ್ಯಾಗೆ
ರಾತ್ರಿ ಹನ್ನೊಂದ್ ಗಂಟ್ಗೆ ಸಾಧುಂರ ಮೇಳ
ನಡೀತದಲ್ಲಾ, ಅದೊಂದ್ ರೀತಿ ಮಜಾ ಅನಸ್ತದ
ಗದ್ದಲಕ್ಕ ಹಾಕ್ತದ......
ಗಾಂಜಾ ಸೇದಿ ಭಂಗ್ ಕಂಡ್ದು ವಿಚಾರಕ್ಕ ಹಾಕ್ತಾರ
ಆ ಸಾಧುಂಗಳು—
"ಆರು ನಾನೆಂದು ವಿಚಾರಿಸು?"
ಆರು ನಾನು?
"ಆರಲ್ಲ, ಮೂರಲ್ಲ, ಹತ್ತ್ಯಾಗ ಹನ್ನೊಂದೂ ಅಲ್ಲ, ಏಳೆಂಟೂ ಅಲ್ಲ
ಅಂದ್ರ ಏನು?
ಈಗ ನಾ ಗದ್ದಲಕ್ಕ ಬೀಳ್ತೀನಿ
"ಆರು ನಾನು?"
ಮಯ್ಯಾಗ ಮನಸಿನ್ಯಾಗ ಬುದ್ಧ್ಯಾಗ ಕೈಯಾಗ
ಹುಡುಕ್ತೀನಿ
ಚರ್ಮ ಹರ್ದು ನರ್ ನರ್‌ದಾಗ ಹೊಕ್ ನೋಡ್ತೀನಿ
ರಕ್ತ ಮೂಸ್ತೀನಿ: "ಆರು ನಾನು?"
ಮತ್ತೆ ಗುಡಿಂದ ಒಬ್ಬ ಸಾಧುನ ದನಿ ಬರ್ತದ:
"ಅಹಂ ಬ್ರಹ್ಮಾಸ್ಮಿ
"ನಾನೇ ಬ್ರಹ್ಮ, ನಾನೇ ಬ್ರಹ್ಮ
ನಾನೇ ಎಲ್ಲ, ಎಲ್ಲ ನಾನ, ನಾನೇ ಎಲ್ಲ"
ಹೌದಾ?
ಬೆಳ್‌ದಿಂಗಳನ್ನು ಬಿಸ್ಲಂತ ತಿಳ್ದು ಗ್ವಾಡೇ ನೆಳ್ಳಿಗೆ ನಿಂತ
ಆ ಗಾರ್ದಭರಾಯ ನಾನೇ?
ಅಲ್ಲ, ಅಲ್ಲ, ಒಲ್ಲೆ
ಆ ಮಾಸಾಗರ ಅನಂತಾಕಾಶ ನಾನೇ?
ಸುಳ್ಳು, ಸುಳ್ಳು ಮೋಸ!
ಕೆಟ್ಟು ತಲೆ ತುರಸ್ತೀನಿ
ಹುಡುಗ್ರು ಓಣ್ಯಾಗ ಆಡಿದ ಆಟ ತಟ್ನ
ನೆನಪ್ ಬರ್ತದ:
"ಅದರಿ ಬದರಿ ಕಂಚಿ ಬದರಿ ಇವ್ರು ಬಿಟ್ಟು ಇವ್ರ್ಯಾರು?"
ಆ ಸಾಧುರು. ಆ ಬಿಳಿ ಹೆಣ್ಗಳು, ಜನ್ರು, [illegible], [illegible]ಗಳು,
ಸೇಠ್, ಸಾಹುಕಾರ್ರು, ಸೂಳೆ, ಪೂಜಾರಿ–

ಇವ್ರು ಯಾರು? ನಾನ್ ಯಾರು?
ಕಣ್ ಮುಚ್ಚಿಲ್ಲ, ಆದ್ರ ಯಾರಂಬದೂ ಗೊತ್ತಿಲ್ಲ

ಉರೀ ಬಿಸ್ಲು ಸುರ್ಯೋ ಮಳೆ ಕೊರ್ಯೋ ಚಳಿ
ಹೆಪ್‌ಗಟ್ಟಿದ ಕತ್ಲೆ ಬೆಳ್ಳಂ ಬೆಳದಿಂಗ್ಳು
ಎಲ್ಲ ಕಾಲ್ದಾಗ ಈ ಕಿಡ್ಕೀಲೇ ನನ್ ಕಣ್ಣು—
ಆದ್ರೆ ಪಶ್ಚಿಮಕ್ಕ ನೋಡೀ ನೋಡೀ ನನ್‌ಗ
ಪೂರ್ವ ಮರ್ತ್ ಹೋಗ್ಯಾದ!
ಹುಟ್ಟೋ ಸೂರ್ಯನ್ಗಿಂತ ಸಾಯೋ ನೇಸರ್ನ ಮ್ಯಾಲೆ
ನನಗ್ ಹೆಚ್ ಪ್ರೀತಿ!
ತನ್ ಮೈ ಬೆಳಕಿನ್ ಚಿತೆ ತಾನೇ ಏರಿ
ಸೂರ್ಯ ಸುಟ್ ಮರ್ಯಾದಾಗ
ಆ ಉರ್ಯಾಗೇನೇ ಹುಟ್ಟಿ ಬರ್ತಾನ ಬಿದಿಗೆ ಚಂದ್ರ
ಏಸೋ ಸಾರೆ ನನ್ ಸತ್ ಮನ್‌ಸೀಗೆ ಸಂಜೀವ್ನಿ ಎರ್ದಾನ
ಆದ್ರೆ ಈ ಚಂದ್ರ ಬೆಳದ್ ದೊಡ್ಡವ್‌ನಾಗಿ ಹುಣ್ವೆ ದಿನ
ನಾ ಮರ್ತ ಪೂರ್ವದಾಗ ಹುಟ್‌ತಾನ!
ಹುಟ್ಟು ಸಾವು ಸಾವು ಹುಟ್ಟು
ತಲೆ ಚಿಟ್ಟಂತದ, ಮತ್ತೆ ಕಿಡಿಕ್ಯಾಗ ದೃಷ್ಟಿ ಹಾಯಿಸ್ತೀನಿ
ಉರಿ, ಸೆಕೆ, ತಾಪ ತಾಳ್‌ಲಾರ್ದ ಗಾಳಿ ಬಿಕ್ಕಕ ಹತ್ಯಾದ
ರಾತ್ರಿ ಮೈ ಬೆವ್‌ತದ, ಬೆಳ್ದಿಂಗ್ಳಿಗೆ ಸೆಕೆ ಹಿಡ್ದದ

ಮನ್ಸಿಗೆ ಏನೋ ಒಂದ್ ಥರಾ
ರೂಮಿನ್ ತುಂಬಾ ಕಣ್ಣಾಡಸ್ತೀನಿ
ಕರೆಂಟ್ ಫೇಲಾಗಿ ಲೈಟ್ ಯಾವಾಗೋ ಆರಿ ಹೋಗ್ಯಾದ
ಕತ್ಲೆ ಕಣ್‌ಮುಚಿಗೆಂಡ್ ಬಿದ್ದಾದ
ಬಾಗ್ಲಿ ಸಂದ್ಯಾಗಿನಿಂದ ಬೆಳ್‌ದಿಂಗ್ಳು ತೂರ್ಯಾದ
ಚೂರ್ಯಾಗಿ ಕತ್ಲನ್ನ ಸೀಳ್ಯಾದ
ಹಾಳ್ ಕತ್ಲೆ ಸುಮ್ನೆ ಬಿದ್ದಾದ, ಚೀರಾಟಿಲ್ಲ ಒದ್‌ರಾಟಿಲ್ಲ
ಗಪ್ಪನ್ ಲೈಟ್ ಬಂತು, ಕತ್ಲ ಹೋಯ್ತು, ಬೆಳ್‌ದಿಂಗ್ಳೂ ಹೋಯ್ತು
ಅಲ್ಲಿ ಆ ಕಡೆ ಮಂಚದ್ಮ್ಯಾಲೆ ಆಕಿ ಮಲಗ್ಯಾಳ
ಕಣ್ಣಿನ್ ಚಾಳೀಸು ಎದಿಮ್ಯಾಲೆ ಇಟ್‌ಗಂಡಾಳ
ಪುಸ್ತಕ್ ಕೈಯಾಗಿಂದ ಜಾರಿ ಕೆಳಗ್ ಬಿದ್ದಾದ
ಜಂತ್ಯಾಗ ಹಲ್ಲಿ ಎಲ್ಲೋ ಲೊಚಗುಟ್‌ತಾದ
ಕತ್ಲೆ, ಬೆಳ್‌ದಿಂಗ್ಳು, ಲೈಟು, ಚಾಳೀಸು, ಹಲ್ಲಿ, ಪುಸ್ತಕ, ಆಕೆ,
ಥತ್ ಏನೇನೋ ? ಯಾವ್ದು ಯಾವ್ದೋ? ಯಾರು ಯಾರೋ?
ಮತ್ತೆ ದೃಷ್ಟಿ ಹೊರಗ್ ಚಲ್ತೀನೆ
ಈ ಬಾರ್ಲ ಬಿದ್ದ ಆಕಾಶದ ಬೋಗುಣಿ
ಕೋಟಿ ಕೋಟಿ ವರ್ಸದಿಂದ ಹಿಂಗೇ ಆದಲ್ಲಾ
ಇದನ್ನ ಎತ್ತಿ ಸೀದಾ ನಿಲ್ಲಿಸ್ಬೇಕು
ಚಿಕ್ಕಿ ಹಚ್ಚಿ ಸೂರ್ಯ ಚಂದ್ರ ಚಿಕ್ಕೆಗಳನ್ನು ಕುಡುಸ್ಬೇಕು
ಆ ಕುಂದ್ಯಾರಸ್‌ದಾಗ ಈ ಭೂಮಿನ್ನ ಎತ್ತಿ ಒಗೀಬೇಕು

ಅಂತ ಅನಸ್ತದ
ಏನೋ ಹೊಸದು ಬೇಕು ಅಂತ
ಜೀವ ಚಡಪಡಸ್ತದ
ಅದೇಗಾಳಿ ಅದೇ ನೀರು ಅದೇ ಬೆಳಕು
ಥತ್‌ತೇರೀಕೀ ಎಲ್ಲದ್ರಿಂದ ಬ್ಯಾಸ್ರು

ಹೊಸದನ್ನು ಮಾಡ್‌ಬೇಕು
ಹಂಗಾದ್ರ ಹ್ಯಾಂಗ ಪ್ರಾರಂಭ ಮಾಡ್ಬೇಕು? ಎಲ್ಲಿಂದ ಮಾಡ್ಬೇಕು?
ಹಳೇದನ್ನ ಒಯ್ದು ಯಾವ ಸಂಡ್‌ಗಾಡ್‌ದಾಗ ಹಾಕ್‌ಬೇಕು?
ನಾನೂ ಹಳೆವ್‌ನಲ್ಲ!
ಹೊಸದ್ ಬರ್‌ಬೇಕಾದ್ರ ನಾ ಇಲ್ದಂಗಾಗ್‌ಬೇಕು !
ನಾ ಅಂದ್ರ ಏನು? ಯಾರು? "ಅರು ನಾನು?"
ಮತ್ತೆ ಆ ಸಾಧುರ ಮಾತ್ ನೆನಪಾಗ್ತದ
ನಾ ಯಾರಂಬೋದು ತಿಳ್‌ದಾಗ ಅದಕ್ ಸಾವ್ ಬರ್ತದ
ತಿಳಿವ್ ಬರ್‌ಬೇಕಾದ್ರ ಏನೋ ಸಾಯಬೇಕಂತ ಕಾಣ್ತದ
ಏನೋ ಸತ್ತಾಗ ಏನೋ ಹೊಸದ್ ಬರ್ತದ
ಹಳೇದು–ಹೊಸದು–ಹುಟ್ಟು –ಸಾವು
ಥತ್ ಇವು ಒಂದ್ ಬಿಟ್ ಒಂದ್ ಬರ್ತಾವ
ಮತ್ತೆ ಒಂದ್ರಾಗೊಂದ್ ಬರ್ತಾವ

ಕಣ್‌ಮುಂಚಾಟ ಆಡ್ತಾವ. ಆಡಸ್ತಾವ
ಈ ಆಟ್‌ದಾಗ
"ಅದಲಿ ಬದಲಿ ಕಂಚಿ ಬದಲಿ
ಇವುರ್ ಬಿಟ್ಟು ಇವುರ್ ಯಾರು?"
ಅಂಬೋದ್ರಾಗ ನಾವ್ ಖಿಂಚಿ ಪಡ್ತೇವಿ
ಹೊಸದ್ ಬಂತ್ ಅಂತ ಕುಣೀತೀವಿ
ಕುಣಿದ್ ಸುಸ್ತ್ ಹೊಡೀತೀವಿ

ವಿಚಾರ್‌ದಾಗ ತಲೆ ಕುದಿತ್ತದ
ಕಿಡಿಕ್ಯಾಗ ಕಣ್ ತೂರಸ್ತೇನಿ
ಓಣಿ ಮಿಸುಕ್ಯಾಡಾಕ ಸುರುವಾಗ್ಯಾದ
ಕತ್ಲ ಹಚ್ಚಡದ್ವ್ಯಾಲೆ ಬಂಗಾರ್ದ ಹುಡಿ
ಉದರಾಕ ಹತ್ಯಾದ
ಹಕ್ಕಿ ಪ್ಯೆಮುಂದ್ಲ್ ಏಳ್ತಾವ
ಬಯ್‌ಲಾಗ ಹಾಡ್ ಬರಿತವ
ನೋಡ್ ನೋಡದರಲ್ಲಿ—
ಹುಟ್ಟೋ ಸೂರ್ಯನ ಬಂಗಾರ್ದ ಕೈಗಳು
ಚಂದ್ರಾಮನ ಕುತ್ಗಿ ಹಿಚ್ಕಿ ಬಿಡ್ತಾವ

ಶಾಂತರಸ

---

## ಚಿಂತೆ

ನಿರಾಯಾಸವಾಗಿ ದಿಸೆ ದಿಸೆಗೆದ್ದು,
ಮತ್ತೆ ಜಲದೆದೆ ಮೇಲೆ ನಿರತ ಚಿತ್ರವ ಬರೆವ
ಬರೆ ಬರೆಯುವಂತೆಯೇ ಅಲೆ ಮೊರೆತದಲಿ ಬೆರೆವ
ಸಾಗರದ ಹಸ್ತ;
ಹಸ್ತ ಕೌಶಲ, ಗತ್ತು;
ಪರಿಮಳದ ಹೆಡಿಗೆಗಳ ಹೊತ್ತು ತಲೆ ಮೇಲೆ
ಕಾಡು ಕಾಡಿಗೆ ಅಲೆವ ಗಾಳಿ ಕೊರವಂಜಿ ಗತಿ
ಕೊಳ್ಳ ಕೊಳ್ಳದಿ ಅರಸಿ ಗಂಧಕೊಳ್ಳುವರನ್ನು
ಅರ್ಥಯಿಸಿ ಎಲೆಯ ಅಂಗೈಲಿರುವ ಗೆರೆಗಳನು
ಉಲಿವ ಗಮ್ಮತ್ತು:
ಇದರಲೊಂದೂ ಕೂಡ ಕೂಡಿಲ್ಲ ಒಡಮೆರದು
ಬೇಟೆಯಾಡುತ್ತಿರುವ ನನ್ನ ಮಾತಿನ ಲಯದಿ.
ಗೋದಿ ಹೊಲದೆದೆ ಮೇಲೆ ತಲೆದೂಗಿ ನೊಲ್ಲಿಸುವ
ಹುಲ್ಲ ಸುಯ್ಲಿಗೆ ಬಾಯಿ ಬಂದರೂ ಬಂದೀತು
ಇಂದಲ್ಲ, ನಾಳೆ:
-ಕಲ್ಪನೆಯ ಗಹ್ವರದಿ ಸ್ಪಂದಿಸುವ ಉನ್ಮಾದ
ಜೀವನದ ತಿರುವಿನಲಿ ಸಂಭ್ರಮಿತನಾದ
ನೆತ್ತರದ ರಭಸದೊಳಗವಿತ ಪ್ರಾಣದ ತುಡಿತ
ನುಡಿಯ ಕೊರಳಲಿ ತುಂಬಿ ಹೊಮ್ಮುವಂತೆ
ಅದೆ ನನ್ನ ಚಿಂತೆ.

## ಗುರುತು

ದಟ್ಟಿಯಾಗಿದೆ ನೆಲಾ ಈಗೀಗ
ಇದರ ನೆಲೆಗಟ್ಟು, ನಿಂತವರ ನೆಲೆ
ತಾನೆ ಸ್ಫಟಿಕಗೊಳ್ಳುತ್ತಿದೆ.
ಮನಕ್ಕೆ ದಾಳಿಯನಿಟ್ಟು ಹುಚ್ಚು ಹಿಡಿಸುವ
ಹೂವು
ಅದರ ಬಣ್ಣದ ಪದರು
ಹುದುಗಿರುವ ಗಂಧ
ಎಲ್ಲದೂ ತೆರೆಯುತಿದೆ ಕಣ್ಣ
ಹೊಸ ಬೆಳಗಿನಲಿ;
ಸರಿಯುತಿದೆ ಬಣ್ಣ,
ಎಲ್ಲ ತೆರೆಗಳ ಸರಿಸಿ
ನುಂಗಿ ಅಸ್ಪಷ್ಟತೆಯ ಬೀಜಗಳನು
ಕಿತ್ತಿ ಬೀಸಾಡುತ್ತ ತಲೆ ಹೊರೆಯ ಮುಂಗಿಲ
ಅಕ್ಷರದ ಬೆಂಕಿಯಲಿ ಈ ನಮ್ಮ ಪ್ರಾಣಗಳ
ಧಗ ಧಗಾ ಉರಿಸಿ,
ಬೆಳಕುಗಂಬವ ಹೀಗೆ ನೆಟ್ಟು ಒಟ್ಟಾರ
ಒಬ್ಬರೊಬ್ಬರ ಮುಖಾ ನೋಡುತ್ತಿದ್ದರೂ,
ನಾವು ನೋಡುತ್ತಲಿದ್ದರೂ......
ಅರೆ?
ಯಾವ ಮುಖವೂ ಸರೀ ಕಾಣುತ್ತಲೇ ಇಲ್ಲ!
ಈಗೀಗ ನನಗಿಲ್ಲ ನನ್ನದೇ ಗುರುತು!

ದೇವೇಂದ್ರಕುಮಾರ ಹಕಾರಿ



# ಒಂದು ಬೇವಿನ ಮರದ ಕಥೆ

**ಸೊಂಪಾಗಿ, ವಿಶಾಲವಾಗಿ, ಹಸಿರು ಸುರಿಯುತ್ತ ಒಣಗೇ ಆ ಬೇವಿನ ಮರ ಈಗ ಹೇಗಾ**

★

ಗಿರಡ್ಡಿ ಗೋವಿಂದರಾಜ

ನಮ್ಮೂರ ಹೆಸರು ಅಬ್ಬಿಗೇರಿ. ಇದು ಪಾಲಾ-ಬಾದಾಮಿ ಹೆದ್ದಾರಿಯ ಮೇಲೆ ಗದಗ, ರೋಣಗಳ ನಡುವೆ ಹತ್ತುವ ಒಂದು ಹಳ್ಳಿ. ಹಳ್ಳಿ ಎಂದರೂ ಐದಾರುಸಾವಿರ ಜನಸಂಖ್ಯೆ ಇದೆ. ರೋಣ ತಾಲೂಕಿಗೆ ಸೇರಿದ್ದಾದರೂ ಇದರ ವ್ಯಾಪಾರೀ ಸಂಬಂಧಗಳೆಲ್ಲ ಗದುಗಿನ ಶಹರದೊಂದಿಗೇ ಹೆಚ್ಚು. ಗದಗಿನಿಂದ ರೋಣದ ಮಾರ್ಗವಾಗಿ ಹೋಗುವ ಬಸ್ಸುಗಳೆಲ್ಲ ನಮ್ಮ ಊರಿನ ಮೇಲೆಯೇ ಹಾಯ್ದು ಹೋಗುತ್ತವೆ. ಹೀಗಾಗಿ ಇಲ್ಲಿ ವಾಹನಗಳ ಓಡಾಟ ಹೆಚ್ಚು.

ನಮ್ಮೂರಿನ ಬಸ್ ಸ್ಟ್ಯಾಂಡಿನಲ್ಲಿ ಇಳಿದ ಕೂಡಲೇ, ಎದುರಿಗೇ ಊರ ಹೊರಗೆ ಒಂದು ದೊಡ್ಡ ಕೆರೆ ಕಾಣುತ್ತದೆ. ಹಿಂದೆ ಡೋಂಗೀ ಬರದ ಕಾಲಕ್ಕೆ ಜನರಿಗೆ ಕೂಲಿ ಸಿಗಲೆಂದು ಕಟ್ಟಿಸಿದ ಕೆರೆ. ಮುಸಾರಿಯ ಕೆಂಪು ನೆಲದಲ್ಲಿ ಕಡಿದಿರುವದರಿಂದ ಇದರ ಮಣ್ಣಿನ ಒಡ್ಡು, ನೀರು ಎಲ್ಲಾ ಕೆಂಪು. ನಮ್ಮೂರಿಗೆ ಈ ಕೆರೆಯಿಂದ ವಿಶೇಷ ಪ್ರಯೋಜನವಿಲ್ಲವೆಂದೇ ಹೇಳಬೇಕು. ಊರಿನಲ್ಲಿ ಓಣಿಗೊಂದು ಭಾವಿ. ಭಾವಿಗಳಲ್ಲಿ ಸಾಕಷ್ಟು ಮೇಲೇ ನೀರು ಇರುವದರಿಂದ ಇಷ್ಟು ದೂರ ನೀರಿಗಾಗಿ ಯಾರೂ ಬರುವದಿಲ್ಲ.

ಊರನ್ನು ಪ್ರವೇಶಿಸುತ್ತಿದ್ದಂತೆ ಹಳೆಯ ಕಾಲದ ಅಗಸೀ ಬಾಗಿಲು ಕಾಣುತ್ತದೆ. ಇದು ಯಾವ ಕಾಲದ್ದೋ ಏನೋ. ನಮಗೆ ತಿಳಿಯದು. ಕೋಟೆಯ ಗೋಡೆಯ ಗುರುತುಗಳೇನೂ ಈಗ ಉಳಿದಿಲ್ಲ. ಈ ಹೆಬ್ಬಾಗಿಲು ಮಾತ್ರ ಉಳಿದಿದೆ, ಅದೂ ಬಹಳಷ್ಟು ಶಿಥಿಲವಾಗಿ. ಎಡಕ್ಕೆ ಬಲಕ್ಕೆ ಎದುರು ಬದುರಾಗಿ ಎರಡು ದೊಡ್ಡ ಪಡಸಾಲೆಗಳಿವೆ. ಇವೆರಡರ ನಡುವೆ ವಿಶಾಲವಾದ ಹಾದಿ. ಈ ಹಾದಿಯ ಮೇಲೆ ಅಡ್ಡಡ್ಡವಾಗಿ ಎರಡೂ ಪಡಸಾಲೆಗಳನ್ನು ಎತ್ತರದಲ್ಲಿ ಕೂಡಿಸಿರುವ ದೊಡ್ಡ ದೊಡ್ಡ ತೊಲೆಗಳಿವೆ. ಬಾಗಿಲು ಕದ ಇತ್ಯಾದಿ ಏನೂ ಇಲ್ಲ. ಬೇಕಾದಂಥ ಟ್ರಕ್ಕುಗಳಿದ್ದರೂ ಸಲೀಸಾಗಿ ಹಾದು ಹೋಗಬಹುದು. ಕಾರಹುಣ್ಣಿಮೆಯಲ್ಲಿ ಹೋರಿಗಳು ಕರಿ ಹರಿಯುವದು ಇದೇ ಪಾಚೀಗಟ್ಟಿ. ಅದರ ಹೊರತಾಗಿ ಇದರಿಂದಲೂ ವಿಶೇಷ ಉಪಯೋಗವಿಲ್ಲ. ಆದರೂ ಇದು ಊರಿನ ಪ್ರಾಚೀನತೆಯ ಕಳೆಯನ್ನು, ಹೊಸದಾಗಿ ಊರನ್ನು ಪ್ರವೇಶಿಸುವವರಿಗೆ ಒಂದು ಬಗೆಯ ಭವ್ಯತೆಯ ಅನಿಸಿಕೆಯನ್ನು ಹುಟ್ಟಿಸುತ್ತದೆ.

ಈ ಅಗಸೀಬಾಗಿಲನ್ನು ದಾಟಿ ಎಡಕ್ಕೆ ತಿರುಗಿದರೆ ಊರಿನ ಮುಖ್ಯ ರಸ್ತೆ. ನೆಟ್ಟಗೆ ಆ ರಸ್ತೆಯನ್ನು ಹಿಡಿದು ಸ್ವಲ್ಪ ಮುಂದಕ್ಕೆ ಬಂದರೆ ಬಲಗಡೆಗೆ ಒಂದು ಸಣ್ಣ ರಸ್ತೆ ಹತ್ತುತ್ತದೆ. ಇದು ನೀರ ಅಗಸಿಗೆ ಹೋಗುವ ದಾರಿ. ಈ ದಾರಿಯಲ್ಲಿ ಬಾವಾನ ಮಹಲು ಎಂದು ಊರವರು ಕರೆಯುತ್ತಿರುವ, ಯಾರೂ ಉಪಯೋಗಿಸದ ಒಂದು ದೊಡ್ಡ ಮನೆ ಇದೆ. ಬಹಳ ದಿನಗಳ ಹಿಂದೆ ಕಟ್ಟಿಸಿದ್ದು, ಅಲ್ಲಲ್ಲಿ ಶಿಥಿಲವಾಗಿದೆ. ಗದಗಿನಲ್ಲಿಯ ಒಬ್ಬ ದೊಡ್ಡ ಸಾಹುಕಾರನಿಗೆ ಅದು ಸಾಲದಲ್ಲಿ ಹೋಗಿದೆ. ಬಾವಾ ಇದ್ದ ಮನೆ ಎಂಬ ಕಾರಣದಿಂದ ಅಲ್ಲಿ ಯಾವ ಸಂಸಾರದವರೂ ವಾಸವಾಗಿರಲು ತಯಾರಿಲ್ಲ. ಹೀಗಾಗಿ ಮನೆ ಬಹಳ ದಿನಗಳಿಂದಲೂ ಹಾಳು ಬಿದ್ದಿದೆ. ಜನರಿಲ್ಲದ ಮನೆಯಲ್ಲಿ ಕಣ್ಣುಕಪ್ಪಡಿಗಳು ಸೇರಿಕೊಂಡಿವೆ. ಸಂಜೆಯಾದರೆ ಓಣಿಯ ತುಂಬ ಅವುಗಳ ಹಾವಳಿ. ಅದರಲ್ಲಿ ಏಳು ಮಕ್ಕಳ ತಾಯಿ ಇದೆಯೆಂದು ಸಣ್ಣವರಿದ್ದಾಗ ನಮ್ಮಮ್ಮ ಹೆದರಿಸುತ್ತಿದ್ದರು. ರಾತ್ರಿಯ ಹೊತ್ತಿನಲ್ಲಿ ಆ ಮನೆಯ ಮುಂದೆ ಹಾದು ಹೋಗಲು ಈಗಲೂ ಜನರಿಗೆ ಹೆದರಿಕೆ. ಆದರೆ ಮನೆ ದೊಡ್ಡ ವಾಡೆಯಂತೆ ಭವ್ಯವಾಗಿದೆ. ಅದಕ್ಕೆ ಬಳಸಿದ ಮಜಬೂತಾದ ತೇಗಿನ ಕಂಬ-ಜಂತಿಗಳನ್ನು ಮಾರಿದರೆ ಈಗ ಐವತ್ತು ಅರವತ್ತು ಸಾವಿರ ಬೆಲೆ ಬಂದೀತು ಎನ್ನುತ್ತಾರೆ. ಅಂತೆಯೇ ಗದುಗಿನ ಸಾಹುಕಾರರು ಅದನ್ನು ಕೆಡವಿಸಬೇಕೆಂದು ಬಹಳ ಪ್ರಯತ್ನ ಮಾಡಿದರು. ಆದರೆ ಊರಿನ ಹಿರಿಯರು ಅಡ್ಡಿ ಮಾಡಿ ಉಪಯೋಗವಿಲ್ಲದ ಈ ಮನೆಯನ್ನು ಉಳಿಸಿಕೊಂಡಿದ್ದಾರೆ.

ಪುನಃ ಮುಖ್ಯ ರಸ್ತೆಗೆ ಬಂದು ಅರ್ಧ ಫರ್ಲಾಂಗಿನಷ್ಟು ನಡೆದರೆ, ಎಡಗಡೆ ನಮಗೆ ಎದುರಾಗಿ ಚಾವಡಿ ಹತ್ತುತ್ತದೆ. ಅದರ ಬೆನ್ನಿಗೆ ಹತ್ತಿಯೇ ಆಚೆ ಮುಖಮಾಡಿ ಮಲ್ಲಿಕಾರ್ಜುನ ದೇವರ ಗುಡಿ. ಗುಡಿ ಎಂದರೆ ಈಗ ಕೇವಲ ಗರ್ಭಗುಡಿ ಮಾತ್ರ ಉಳಿದಿದೆ. ಮಾಳಿಗೆಯ ಮೇಲೆಲ್ಲ ಹುಲ್ಲು. ಹುಲ್ಲು ಕೊಯಲು ಮೇಲೆ ಹತ್ತಿದರೆ ಮಾಳಿಗೆಯೇ ಕುಸಿಯುತ್ತದೆಂಬ ಹೆದರಿಕೆಯಿಂದ ಅದನ್ನು ಯಾರೂ



**ಸುತ್ತಲೂ ಟೊಂಗೆ ಚಾಚಿ,ಸದಾ ಶೋಭೆಯಾಗಿ ಮೆರೆಯುತ್ತಿದ್ದ ಗಿಡೆ ಅಂತೀರಿ ?**

ತೆರೆಯುವದಿಲ್ಲ. ಅಲ್ಲದೆ, ಅದನ್ನು ತೆರೆಯುವ ಆಸಕ್ತಿಯಾದರೂ ಯಾರಿಗೆ? ಪೂಜೆ ನಿಂತು ಯಾವ ಕಾಲವಾಗಿದೆಯೋ ಏನೊ! ಗುಡಿಗೆ ಆಸ್ತಿ ಇಲ್ಲದ್ದರಿಂದ ಪೂಜಾರಿಯೂ ಇಲ್ಲ. ಗರ್ಭಗುಡಿಯ ಮುಂದಿನ ಭಾಗವೆಲ್ಲ ಬಿದ್ದು ಹೋಗಿ ಎರಡು ಗೋಡೆ ಮಾತ್ರ ಉಳಿದಿವೆ. ಸಮೀಪದ ಮನೆಯ ಹೆಣ್ಣು ಮಕ್ಕಳು ಕುಳು ಹಚ್ಚಲು ಈ ಹಾಳು ಗೋಡೆಗಳನ್ನು ಉಪಯೋಗಿಸುತ್ತಾರೆ. ಗುಡಿಯ ಆವಾರದಲ್ಲಿ ಹೆಣ್ಣು ಹುಡುಗರು, ಅಡಿಗೆ- ಆಟ, ಗೊಂಬೆ-ಮದುವೆ ಇಂಥ ಆಟಗಳನ್ನು ಆಡಿಕೊಳ್ಳುವದುಂಟು.

ಇನ್ನಷ್ಟು ಹಾಗೆಯೇ ಮುಂದೆ ಬಂದರೆ ಎದುರಿಗೆ ಒಂದು ಹುಲುಸಾಗಿ ಬೆಳೆದ ದೊಡ್ಡ ಬೇವಿನ ಮರ ಕಾಣುತ್ತದೆ. ಈ ಬೇವಿನ ಮರವೇ ನಮ್ಮ ಕಥೆಯ ನಾಯಕ. ಈ ಮರದ ಸುತ್ತ ಒಂದು ಎತ್ತರವಾದ ಕಟ್ಟೆಯಿದೆ. ಕಟ್ಟೆಯ ಮೇಲೆ ಮಲ್ಲಿಕಾರ್ಜುನ ಗುಡಿಯ ಈಶ್ವರ ಲಿಂಗಕ್ಕೆ ಎದುರಾಗಿ ಒಂದು ಹಳೆಯ ಮುಕ್ಕಾದ ಬಸವಣ್ಣನ ಮೂರ್ತಿ ಇದೆ. ಈ ಬೇವಿನ ಮರದ ಕಟ್ಟೆಯಿಂದ ರಸ್ತೆ ಎರಡು ಕವಲಾಗಿ ಒಡೆದು ಎಡಗಡೆಯ ರಸ್ತೆ ಮೇಲಕ್ಕೆ ಗೌಡರ ಓಣಿಯ ಕಡೆ ಹೋಗುತ್ತದೆ; ಬಲಗಡೆಯದು ನಮ್ಮ ಓಣಿಯ ಮೂಲಕ ಮಾಳ ಶೆಟ್ಟರ ಓಣಿಗೆ ಹೋಗುತ್ತದೆ. ಆ ಮರದ ಹತ್ತಿರದಲ್ಲೇ ಬಲಗಡೆಯ ರಸ್ತೆಗೆ ಹೊಂದಿ ಸ್ವಲ್ಪ ಒಳಕ್ಕೆ ನಮ್ಮ ಮನೆ.

ಬೇವಿನ ಮರದ ಕಟ್ಟೆಗೆ ಹೊಂದಿಯೇ ಎರಡು ಮನೆಗಳಿವೆ. ಅವಕ್ಕೆ ಬೇವಿನ ಮರದವರ ಮನೆಗಳೆಂದೇ ಹೆಸರು ಬಿದ್ದಿದೆ. ಕಟ್ಟೆಗೆ ಹತ್ತಿಯೇ ಇರುವ ಮನೆ ಮಲ್ಲಯ್ಯನದು. ಆತ ಊರಿನಲ್ಲಿ ಇರುವದಿಲ್ಲ. ಈ ಮನೆಯೊಂದನ್ನು ಬಿಟ್ಟು ಆತನಿಗೆ ಊರಲ್ಲಿ ಬೇರೆ ಆಸ್ತಿ ಇರಲಿಲ್ಲವಾದ್ದರಿಂದ ಮನೆಗೆ ಕೀಲಿಹಾಕಿಕೊಂಡು ತಾಯಿಯ ತವರು ಮನೆಗೆ ಹೋಗಿ ಅಲ್ಲೇ ನೆಲೆಸಿದ್ದಾನೆ. ಅದಕ್ಕೆ ಹೊಂದಿ ನಮ್ಮ ಮನೆಗೆ ಎದುರಾಗಿ ಇರುವ ಮನೆ ಬಸಯ್ಯನದು. ಎರಡೂ ಮನೆತನಗಳು ಅಣ್ಣ ತಮ್ಮಂದಿರ ನಾತೆಯವು.

ಬಸಯ್ಯ ಗುರುಬಸಮ್ಮನ ಕಡೆಯ ಮಗ. ಉಳಿದ ಮೂವರಲ್ಲಿ ಒಬ್ಬ ಚುಟ್ಟಾದ ಅಂಗಡಿ

ಬುನ್ನಿಟ್ಟುಕೊಂಡು ವಾರದ ಸಂತೆ ಖರ್ಚು ನೋಡಿಕೊಳ್ಳುತ್ತಿದ್ದ ಇನ್ನೊಬ್ಬ ಟ್ರಕ್ಕಿನ ಡ್ರಾಯವರನಾಗಿ ಗದಗಿನಲಿನಲ್ಲಿದ್ದ. ಮತ್ತೊಬ್ಬ ಕನ್ನಡ ಶಾಲೆಯ ಮಾಸ್ತರಾಗಿ ತಾಲೂಕಿನ ಇನ್ನೊಂದು ಮೂಲೆಯಲ್ಲಿದ್ದ. ಮನೆಯಲ್ಲಿ ಗುರುಬಸಮ್ಮನದೇ ಹಿರೇತನ. ನೌಕರಿಯಲ್ಲಿದ್ದ ಮಕ್ಕಳು ಪ್ರತಿತಿಂಗಳು ಅಷ್ಟಿಷ್ಟು ಕಳುಹಿಸುತ್ತಿದ್ದರು. ಗಂಡ ಜೋಳಿಗೆ ಹಾಕಿಕೊಂಡು ಹೋಗಿ ಭಿಕ್ಷೆ ಎತ್ತಿಕೊಂಡು ಬರುತ್ತಿದ್ದ. ಅಷ್ಟರ ಮೇಲೆ ಮನೆತನ ಸರಿಯಾಗೇ ನಡೆದಿತ್ತು. ಹೀಗಾಗಿ ಕಡೆಯ ಮಗ ಬಸಯ್ಯ ನಟ್ಟು ಕಡಿದು ಬಂದ ಕೂಲಿಯಲ್ಲಿ ಒಂದು ಬಿಲ್ಲಿಯನ್ನು ಮನೆಗೆ ಕೊಡದೆ ಚೈನೀ ಹೊಡೆಯುತ್ತಿದ್ದರೂ ಗುರಬಸಮ್ಮ ಹೆಚ್ಚಿನ ತಕರಾರು ಮಾಡಿರಲಿಲ್ಲ. ಅಲ್ಲದೆ ಅವನು ಸ್ವಲ್ಪ ಉಡಾಳ ಸ್ವಭಾವದವ. ಅಂಥವನೊಬ್ಬ ತನ್ನ ಮಗನಾಗಿರುವದು ಊರಲ್ಲಿ ತನಗೆ ಹೆಚ್ಚಿನ ಬಲುವು ಇದ್ದಂತೆ. ಊರವರು ತಮಗೆ ಅಂಜುತ್ತಾರೆ– ಎಂದು ಆಕೆಯ ಭಾವನೆ ಇದ್ದಂತಿತ್ತು. ಅಂತೆಯೇ ಅವನ ಉಡಾಳತನವನ್ನು ಅಪ್ರತ್ಯಕ್ಷವಾಗಿ ಪ್ರೋತ್ಸಾಹಿಸುತ್ತಿದ್ದಳು ಕೂಡ.

ತಮ್ಮ ಮನೆಗಳಿಗೆ ಹತ್ತಿರದ ಕಟ್ಟೆಯ ಮೇಲೇ ಆ ಬೇವಿನ ಮರ ಇದ್ದದ್ದರಿಂದ ಅದು ತಮ್ಮದೇ ಎಂದೇ ಬೇವಿನಮರದವರು ಹೇಳಿಕೊಳ್ಳುತ್ತಿದ್ದರು. ಮಲ್ಲಿಕಾರ್ಜುನ ಗುಡಿಯ ಈಶ್ವರ ಲಿಂಗಕ್ಕೆ ಸಂಬಂಧಿಸಿದ ಬಸವಣ್ಣ ಈ ಕಟ್ಟೆಯ ಮೇಲೆ ಇದ್ದುದರಿಂದ ಅದು ಗುಡಿಗೆ ಸೇರಿದ ಕಟ್ಟೆಯಾಗಿರಬಹುದಾದ ಸಾಧ್ಯತೆಯೂ ಇತ್ತು. ಆದರೆ ಬೇವಿನ ಮರ ಮಾವು ಹಲಸುಗಳಂತೆ ಹಣ್ಣು ಕೊಡುವ ಉಪಯುಕ್ತ ಮರವೇನೂ ಅಲ್ಲವಾದ್ದರಿಂದ ಅದು ಯಾರಿಗೆ ಸೇರಿದ್ದರೂ ಅದರಿಂದಾಗುವ ಸದ್ಯದ ಲಾಭ ಅಷ್ಟರಲ್ಲೇ ಇತ್ತು. ಹಾಗೆಂದೇ ಏನೋ, ಬೇವಿನ ಮರದವರು ಆ ಮರ ತಮ್ಮದೆಂದೇ ಹೇಳಿಕೊಂಡರೂ ಯಾರೂ ಅದನ್ನು ವಿಶೇಷವಾಗಿ ಗಮನಕ್ಕೆ ತೆಗೆದುಕೊಂಡಿರಲಿಲ್ಲ. ಅಲ್ಲದೆ, ಆ ಮರದಿಂದಾಗಿಯೇ ತಮ್ಮ ಮನೆತನಕ್ಕೆ ಬೇವಿನಮರದವರು ಎಂದು ಹೆಸರು ಬಂದಿದ್ದರಿಂದ ಆ ಮರ ತಮ್ಮದೇ ಎಂಬ ತರ್ಕವನ್ನೂ ಅವರು ಮಾಡಿಕೊಂಡಿರಬೇಕು. ಈ ಮರದ ಮೇಲೆ ತಾನೂ ಹಕ್ಕು ಸಾಧಿಸಬಹುದಾಗಿದ್ದ ಮಲ್ಲಯ್ಯ ಊರು ಬಿಟ್ಟು ಹೋಗಿ ಬಹಳ ದಿನಗಳಾಗಿದ್ದರಿಂದ ಈಗ ಗುರುಬಸಮ್ಮನ ಮನೆಯವರೊಬ್ಬರೇ ಅದನ್ನು ತಮ್ಮದೆಂದುಕೊಳ್ಳುತ್ತಿದ್ದರು. ಒಂದು ರೀತಿಯಿಂದ ಜನಗಳೂ ಸಹ ಬೇವಿನ ಮರವನ್ನು ಬೇವಿನ ಮರದವರ ಮನೆತನವನ್ನೂ ಒಂದಾಗಿಯೇ ಭಾವಿಸಿದ್ದರೆಂದು ಕಾಣುತ್ತದೆ.

ಅದೇನೇ ಇದ್ದರೂ, ಈ ಬೇವಿನಮರ ಇಡೀ ರಸ್ತೆಗೆ ಶೋಭೆ ತಂದಿತ್ತೆಂದು ಹೇಳಬಹುದು. ಬೇವಿನ ಮರ ಮನುಷ್ಯರಿಗೆ ಹಣ್ಣು ಇತ್ಯಾದಿ ಪ್ರಯೋಜನ ಕೊಡಲಿಕ್ಕಿಲ್ಲ. ಆದರೆ ವರ್ಷದುದ್ದಕ್ಕೂ ಸೊಂಪಾದ ನೆರಳನ್ನು ಮಾತ್ರ ಧಾರಾಳವಾಗಿ ಕೊಡಬಲ್ಲದು. ಓಣಿದಾರಿಯ ನಡುವೆ ಇದ್ದುದರಿಂದ ಈ ಮರದ ನೆರಳು ಎರಡೂ ಪಕ್ಕದ ದಾರಿಗಳನ್ನು ಪೂರ್ತಿಯಾಗಿ ಆವರಿಸಿತ್ತು. ಈ ಗಿಡ ಎಷ್ಟು ಎತ್ತರವಾಗಿ ದಟ್ಟವಾಗಿ ಬೆಳೆದಿತ್ತೆಂದರೆ ಅದರ ಅನೇಕ ಟೊಂಗೆಗಳು ಹತ್ತಿರದ ಮನೆಗಳ ಮಾಳಿಗೆಯ ಮೇಲೂ ಚಾಚಿಕೊಂಡಿದ್ದವು. ನಮ್ಮ ಮನೆಗೆ ಹೋಗಬೇಕಾದರೆ ಅದರ ನೆರಳಲ್ಲಿ ಹಾಯ್ದೇ ಹೋಗಬೇಕು. ಹೀಗಾಗಿ ಈಗ ನಮ್ಮ ಮನೆಯ ನೆನಪಾದರೆ ಅದರ ಕೂಡ ಅನಿವಾರ್ಯವಾಗಿ ಈ ಮರದ ಚಿತ್ರವೂ ಕಣ್ಣ ಮುಂದೆ ಬರುತ್ತದೆ.

ನನ್ನ ಬಾಲ್ಯದ ಅನೇಕ ನೆನಪುಗಳು ಈ ಮರದ ಜೊತೆಗೆ ಹೆಣೆದುಕೊಂಡಿವೆ. ನಮ್ಮ ಮನೆಯ ಪಡಸಾಲೆಯ ಕಟಾಂಜನದ ಬಳಿಯಿಂದ ನೋಡಿದರೆ ಗಿಡದ ಮೇಲ್ಭಾಗದ ಹಸಿರೆಲ್ಲ ಒಟ್ಟಾಗಿ ಗೋಪುರದ ಹಾಗೆ ಕಾಣುತ್ತಿತ್ತು. ಗಾಳಿಗೆ ಟೊಂಗೆಗಳು ಅಲ್ಲಾಡಿದಾಗ ಆ ಗೋಪುರವೆಲ್ಲ ಇಡಿಯಾಗಿ ಗಂಭೀರವಾಗಿ ಕೋಲಾಟದ ಹೆಜ್ಜೆ ಹಾಕಿದಂತೆ ತೂಗುವದು ಕಾಣುತ್ತಿತ್ತು. ಚೈತ್ರದಲ್ಲಿ ತಿಳಿಹಸಿರಿನ ಎಲೆಗಳ ನಡುವೆ ಕುಸುರೆಳ್ಳಿನಂಥ ಹೂವಾದರೆ ಓಣಿಯೆಲ್ಲಾ ಗಂಪು. ಸಂಜೆಯಾದೊಡನೆ ಆ ಗಿಡಕ್ಕೆ ನೂರಾರು ಕಾಗೆಗಳು ಹಾರಿ ಬಂದು ಕುಳಿತುಕೊಂಡರೆ ಹಸಿರಿನ ಗೋಪುರವೆಲ್ಲ ಕಪ್ಪಗಾಗಿ ಬಿಡುತ್ತಿತ್ತು. ಹಾಗೆ ಕಾಗೆಗಳು ಕುಳಿತರೆ. ಕಾಗೆಗಳ ಶಾಲೆ ಆರಂಭವಾಯಿತು. ಎಂದು ನಮ್ಮ ಲೆಕ್ಕ. ಆದರೆ ವಿಚಿತ್ರವೆಂದರೆ, ನಮ್ಮ ಶಾಲೆ ಬಿಟ್ಟ ಮೇಲೆ ಕಾಗೆಗಳ ಶಾಲೆ ಆರಂಭವಾಗುತ್ತಿತ್ತು. ನಾವು ಮಾಳಿಗೆಯ ಮೇಲೆ ನಿಂತು ಅವುಗಳಲ್ಲಿ ಶಿಕ್ಷಕ ಯಾರು ಎಂದು ಗುರುತಿಸಲು ಯತ್ನಿಸುತ್ತಿದ್ದೆವು. ಬೆಳಿಗ್ಗೆ ನಸುಕಿನಲ್ಲಿಯೇ ಎಚ್ಚರಾಗಿ ಕಾಗೆಗಳೆಲ್ಲ ಒಟ್ಟಿಗೆ ಕೂಗಲು ಆರಂಭಿಸುತ್ತಲೇ ಅವ್ವ ಏಳಬೇಕು. ಕಾಗೆ ಕೂಗಿದವು, ಇನ್ನೂ ಏಳುವುದಿಲ್ಲವೇನ್ರೋ? ಎಂದು ಆಳು ಮಕ್ಕಳನ್ನು ಎಬ್ಬಿಸಬೇಕು. ಶಾಲೆಗೆ ಹೊತ್ತಾಗುತ್ತದೆಂದು ಏಳಲಿಕ್ಕೆ ನಮಗೂ ಸಹ ಅದೇ ಸೂಚನೆ.

ಗಿಡದ ಕೆಳಗಿನ ನೆರಳಿನ ನೆಲ ದಿನವೆಲ್ಲ ನಮ್ಮ ಆಡುಂಬೊಲವಾಗುತ್ತಿತ್ತು. ಸರಗೆರೆ. ಖೊಖೊ ಮುಂತಾದ ಗುಂಪಿನ ಆಟಗಳಿಗೆ ಅಷ್ಟು ಜಾಗ ಸಾಲುತ್ತಿರಲಿಲ್ಲವಾದರೂ ಕಣ್ಣುಮುಚ್ಚಾಟ, ಗುಡಮಿಂಚೋಟುಗಳಿಗೆ ಆ ಕಟ್ಟೆ ಆದರ್ಶ ಪಾಜೇಗಟ್ಟೆಯಾಗಿತ್ತು. ಮಧ್ಯಾಹ್ನದ ಕಾಲಕ್ಕೆ, ಅದರಲ್ಲೂ ಸೂಟಿಯ ದಿನಗಳಲ್ಲಿ, ಅಲ್ಲಿ ಗುಂಡಾ ಆಡುವದೊಂದು ವಿಶೇಷ ಕಾರ್ಯಕ್ರಮ. ಗುಂಡಾ ಎಂದರೆ ಈಗಿನ ಕಾಲದ ಹುಡುಗರು ಆಡುವ ಗಾಜಿನ ಗೋಲಿಗಳಲ್ಲ. ಬೆಲಪತ್ರಿ ಕಾಯಿಗಳನ್ನೇ ಗುಂಡಾ ಮಾಡಿ ಹತ್ತು–ಹದಿನೈದು ಜನ ಸೇರಿ ಒಮ್ಮೆಲೆ ಆಡುವದು. ವಯಸ್ಸಾದವರೂ ಆಗಾಗ ಬಂದು ನಮ್ಮ ಆಟದಲ್ಲಿ ಸೇರಿಕೊಳ್ಳುತ್ತಿದ್ದರು. ಆಗ ಹಿರಿಯ–ಹಿರಿಯರಲ್ಲೇ ಪ್ಯಾವ ಬಿದ್ದು, ತಮ್ಮಲ್ಲೇ ಒಬ್ಬರನ್ನು ಸೋಲಿಸಿ, ನಮ್ಮನ್ನು ಗೆಲ್ಲುವಂತೆ ಮಾಡಿ, ನಮ್ಮ ಕೈಯಲ್ಲಿ ಹೆಣ್ಣಾದವರನ್ನು ಡೀಕಿಸಿ ಸೋತವರನ್ನು ಅವಮಾನಪಡಿಸುತ್ತಿದ್ದರು. ಹತ್ತು–ಹದಿನೈದು ಜನದ ಕೈಯಲ್ಲಿ ಡೀಕಿ ಮುಗಿಸುವದೆಂದರೆ ಸಾಕು–ಬೇಕಾಗಿ ಹೋಗಬೇಕು.

ನಾಗರಪಂಚಮಿಗೆ ಈ ಗಿಡದ ಟೊಂಗೆಗೇ ಜೋಕಾಲಿ ಕಟ್ಟುವದು. ಜೋರಾಗಿ ಜೀಕ ಏರಿಸಿದರೆ, ಮೇಲೆ ಹೋದಾಗ ಗಾಳಿಯಲ್ಲಿ ಅಲ್ಲೇ ಉಳಿದುಬಿಡುವೆವೇನೋ ಎನ್ನುವಂತೆ ಮೈ ಜುಮ್ಮೆನ್ನುತ್ತಿತ್ತು.

ಒಂದು ಸಲ, ನಮ್ಮ ಓಣಿಯ ಹಿರೇ ಹುದ್ದರಿ ಕಳಕ ಗುರುಬಸಮ್ಮನ ಕಣ್ಣು ತಪ್ಪಿಸಿ ಮರ ಹತ್ತಿ, ಅದರಲ್ಲಿ ಕಟ್ಟಿದ್ದ ಕಾಗೆಯ ಬಚ್ಚುಗಳಿಂದ ಹಲವಾರು ಸಣ್ಣ ಮರಿಗಳನ್ನು ತಂದು ನಮಗೆಲ್ಲ ತೋರಿಸಿದ. ಆ ದಿನ ಸಂಜೆಗೆ ತಿರುಗಿ ಬಂದ ಕಾಗೆಗಳು ಮರಿಗಳಿಲ್ಲದ್ದನ್ನು ನೋಡಿ ಒದರಲು ಶುರು ಮಾಡಿಬಿಟ್ಟವು. ಆ ದಿನ ರಾತ್ರಿಯೆಲ್ಲ ಓಣಿಯವರಿಗೆ ಜಾಗರಣೆಯಾಗಿ ಕಳಕನಿಗೆ ಎಲ್ಲರೂ ತರತರದ ಹೂ ಏರಿಸಿದರು. ಮರುದಿನ ಮಧ್ಯಾಹ್ನ ಕಾಗೆಗಳಿಲ್ಲದ ಹೊತ್ತಿನಲ್ಲಿ ಮರಹತ್ತಿ ಹೋಗಿ ಕಳಕ ಮತ್ತೆ ಮರಿಗಳನ್ನು ಬಚ್ಚುಗಳಲ್ಲಿ ಬಿಟ್ಟು ಬಂದ. ಯಾವ ಯಾವ ಮರಿ ಯಾವ ಯಾವ ಬಚ್ಚಿಗೆ ಹೋದವೊ ತಿಳಿಯದು. ಸಂಜೆಗೆ ಕಾಗೆಗಳು ತಿರುಗಿ ಬಂದಾಗ ಗೊಂದಲವೋ ಗೊಂದಲ. ಮರುದಿನ ಮುಂಜಾನೆ ಕೆಲವು ಮರಿಗಳು ಸತ್ತು ನೆಲಕ್ಕೆ ಬಿದ್ದಿದ್ದವು.

ಇದನ್ನೆಲ್ಲ ಯಾಕೆ ಹೇಳಿದೆನೆಂದರೆ, ಆ ಬೇವಿನ ಮರ ನಮ್ಮ ಬದುಕಿನ ಒಂದುಭಾಗವಾಗಿಬಿಟ್ಟಿತ್ತು. ಇಷ್ಟಾದರೂ, ಆ ಮರ ಬೇವಿನಮರದವರದು ಎಂಬ ಮಾತನ್ನು ಮರೆಯಲು ಮಾತ್ರ ಸಾಧ್ಯವಿರಲಿಲ್ಲ. ಯಾಕಂದರೆ, ಮಾಡಲು ಕೆಲಸವಿಲ್ಲದ ಗುರುಬಸಮ್ಮ ಯಾವಾಗಲೂ ಅದನ್ನು ದೆವ್ವದಂತೆ ಕಾಯುತ್ತಿದ್ದಳು. ಯಾರೂ ಈ ಮರದಿಂದ ಒಂದು ಸಣ್ಣ ಟೊಂಗೆಯನ್ನೂ ಮುರಿಯಲು ಬಿಡುತ್ತಿರಲಿಲ್ಲ. ಯಾವ ಆಡೂ ಇದರ ತೊಪ್ಪಲನ್ನು ತಿಂದಿದ್ದಿಲ್ಲ. ನಾಗರಪಂಚಮಿಗೊಮ್ಮೆ ನಿರ್ವಾಹವಿಲ್ಲದೆ, ಆದರೂ ಗೊಣಗುತ್ತ, ಸುಮ್ಮನಿರುತ್ತಿದ್ದಳೇ ಹೊರತು ಉಳಿದ ದಿನಗಳಲ್ಲಿ ಯಾರೂ ಮರವನ್ನೇರಲು ಸಾಧ್ಯವಿರಲಿಲ್ಲ. ಸಿಡಿ ಹಾಯ್ದು ಒಣಗಿ ತಾನಾಗಿ ನೆಲಕ್ಕೆ ಬಿದ್ದ ಮೇಲೇ ಅದರ ಕಟ್ಟಿಗೆ ಗುರುಬಸಮ್ಮನ ಮನೆಯ ಒಲೆಗೆ ಹೋಗಬೇಕು. ಹೀಗೆ ಗುರುಬಸಮ್ಮ ಹೆಜ್ಜೆ ಹೆಜ್ಜೆಗೂ ಆ ಮರ ತನ್ನದೆಂದು ಸಾಬೀತು ಮಾಡಿ, ಆ ಮಾತನ್ನು ನಮ್ಮ ತಲೆಯಲ್ಲಿ ಜಡಿದುಬಿಟ್ಟಿದ್ದಳು. ಆ ಮರದ ನೆರಳಿನಲ್ಲಿ ಆಡಲು ನಮಗೆ ಅವಕಾಶ ಕೊಟ್ಟದ್ದೇ ಒಂದು ದೊಡ್ಡ ಉಪಕಾರವೆಂಬಂತೆ ವರ್ತಿಸುತ್ತಿದ್ದಳು.

ಹೀಗಿರುತ್ತಿರಲಾಗಿ ಒಂದು ಘಟನೆ ನಡೆಯಿತು. ಬೇವಿನಮರದ ಬಳಿ ಮುಖ್ಯ ರಸ್ತೆ ಕವಲೊಡೆದು ಎಡಗಡೆಯ ರಸ್ತೆ ಗೌಡರ ಓಣಿಯ ಕಡೆಗೆ ಹೋಗುತ್ತದೆಂದು ಹೇಳಿದೆನಲ್ಲ! ಗೌಡರ ಓಣಿಗೆ ಹತ್ತಿ, ರಸ್ತೆಯ ಬಲಬದಿಗೆ ದ್ಯಾಮವ್ವನ ಗುಡಿ ಇದೆ. ಈ ಗುಡಿಯ ಸುತ್ತಲೂ ಬಡಿಗೇರ ಹತ್ತು ಹನ್ನೆರಡು ಮನೆಗಳಿವೆ. ಇವರ ಮನೆಗಳಿಗೆ ಸಮೀಪದಲ್ಲೇ ಊರ ಅಂಚಿಗೆ ಒಂದು ಬನ್ನೀ ಗಿಡ. ಅದರ ಕೆಳಗೆ ಎಂಥೆಂಥವೋ ಕಲ್ಲು ದೇವರುಗಳಿವೆ. ಈ ಗಿಡ ಮತ್ತು ಆ ದೇವರುಗಳನ್ನೆಲ್ಲ ಸೇರಿಸಿ ಅದಕ್ಕೆ ಬನ್ನೀಮಂಕಾಳಮ್ಮಾ ಎಂದು ಹೆಸರು. ಪಾಂಡವರು ಹದಿನಾಲ್ಕು ವರ್ಷ ವನವಾಸವನ್ನು ಮುಗಿಸಿ, ಅಜ್ಞಾತವಾಸಕ್ಕಾಗಿ ವಿರಾಟ ನಗರಕ್ಕೆ ಹೋಗುವ ಮೊದಲು ತಮ್ಮ ಶಸ್ತ್ರಾಸ್ತ್ರಗಳನ್ನೆಲ್ಲ ತೆಗೆದು ಬನ್ನೀಗಿಡದಲ್ಲಿ ಮುಚ್ಚಿ ಇಡಲಿಲ್ಲವೆ? ಆ ಬನ್ನೀ ಗಿಡ ಇದೇ. ಅಂದಿನಿಂದಲೂ ಇಲ್ಲಿ ವಿಜಯದಶಮಿಯನ್ನು ಪ್ರತಿ ವರ್ಷವೂ ಆಚರಿಸಲಾಗುತ್ತಿದೆ. ಬಡಿಗೇರರು ಈ ಹಬ್ಬದಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ದ್ಯಾಮವ್ವನ ಗುಡಿಯ ಪಲ್ಲಕಿಯನ್ನೇ ಒಯ್ದು, ಬನ್ನೀ ಗಿಡದಿಂದ ಉತ್ಸವವನ್ನು ಹೊರಡಿಸಿ ಅಗಸಿಯ ಹತ್ತಿರವಿರುವ ಹನುಮಂತದೇವರ ಗುಡಿಯವರೆಗೆ ಹೋಗಿ ಬರುತ್ತಾರೆ. ಬನ್ನಿಮಾಂಕಾಳಿಗೂ ಹನುಮಂತ

ನಿಗೂ ಹಾಗೆ ಸಂಬಂಧವೇನೂ ಇಲ್ಲ. ಪಲ್ಲಕ್ಕಿ ಹೋಗಿ ತಿರುಗಿ ಬರುವದಕ್ಕೆ ಅದೊಂದು ವಾಜೇ ಗಟ್ಟೆ, ಅಷ್ಟೇ. ಪಲ್ಲಕ್ಕಿ ತಿರುಗಿ ಬಂದ ಮೇಲೆಯೇ ಊರಿನಲ್ಲಿ ಬನ್ನಿ ಕೊಡುವ ಓಡಾಟ ಆರಂಭವಾಗುತ್ತದೆ.

ಈ ಬನ್ನಿ ಗಿಡದ ಎಡಕ್ಕೆ, ತಿಪ್ಪೆಯ ದಂಡೆಯ ಮೇಲೆ, ಒಂದು ಕಾಲಕ್ಕೆ ತೇರಿನ ಗಾಲಿಗಳಾಗಿರಬಹುದಾಗಿದ್ದ, ಹಳಿಬಂಡಿಯ ಗಾಲಿಗಳಂಥ ನಾಲ್ಕು ಗಾಲಿಗಳ ಚೆಟ್ಟು ಇತ್ತು. ಈ ರಥ ವಿರಾಟ ಪರ್ವದ್ದೇನೂ ಆಗಿರಲಿಕ್ಕಿಲ್ಲ. ಆದರೂ ಅದು ನಮಗೆ ನೆನಪಿದ್ದಾಗಿನಿಂದಲೂ ಅಲ್ಲೇ ಇತ್ತು. ಒಂದು ಮಾತು ಮಾತ್ರ ನಿಜ, ನಾವು ಆ ಮೊದಲು ಅದು ತೇರಾಗಿ ನಮ್ಮೂರ ಕಂಟೀ ಬಸವಣ್ಣನ ಜಾತ್ರೆಯಲ್ಲಿಯ ಹಾಗೆ ಎಳೆದದ್ದನ್ನು ನೋಡಿರಲಿಲ್ಲ. ಮಕ್ಕಳ ಪಾರ್ಕಿನಲ್ಲಿಯ ಕಬ್ಬಿಣದ ಸಳಿಗಳ ಆಟದ ರಚನೆಯಂತೆ ಮಕ್ಕಳು ಅದನ್ನು ಏರಿ ಇಳಿದು ಆಡುತ್ತಿದ್ದರು. ಈ ವರ್ಷ ಬಡಿಗರಲ್ಲಿ ಯಾರಿಗೋ ಅದನ್ನು ತೇರು ಮಾಡಿ ಎಳೆಸಿಬಿಡಬೇಕೆಂದು ಹುರುಪು ಬಂತು. ಸರಿ ಹೇಳಿಕೇಳಿ ಬಡಿಗರು. ತಮ್ಮ ಒಕ್ಕಲುಗಳಲ್ಲಿ ಕಟ್ಟಿಗೆಗಳನ್ನು ಬೇಡಿ ತಂದು, ಕಸಬು ಗೊತ್ತಿದ್ದವರೆಲ್ಲ ಕೂಡಿ, ಹಗಲು-ರಾತ್ರಿ ಕೆಲಸ ಮಾಡಿ ತೇರು ಕಟ್ಟಿದರು. ಬಡಿಗೇರ ತೇರು ಎಂದು ಎಲ್ಲರಿಗೂ ಗೊತ್ತಾಗಬೇಕಲ್ಲ! ಅರ್ಭಟ ಕಾಣಲಿ ಎಂದು ಸಾಕಷ್ಟು ಎತ್ತರವಾಗೇ ಕಟ್ಟಿದರು. ಅದರ ಮೇಲೆ ಕಂಟೀ ಬಸವಣ್ಣನ ತೇರಿನ ದೊಡ್ಡ ಕಳಸವನ್ನು ಇಟ್ಟರು.

ವಿಜಯದಶಮಿಯ ದಿನ ಸಾಯಂಕಾಲ ನಮ್ಮ ಕೊರವರ ಅಣ್ಣಪ್ಪನ ಸನಾದಿ, ಗೌಡರ ಓಣಿಯ ಕರಡೀ ಮಜಲು, ಕಂಟೀ ಬಸವೇಶ್ವರ ಕೃಪಾಪೋಷಿತ ಭಜನಾ ಮಂಡಳಿ ಮೊದಲಾದವುಗಳ ಸಕಲ ವೈಭದೊಂದಿಗೆ ತೇರು ಹೊರಟಿತು. ಬನ್ನೀಮಾಂಕಾಳಮ್ಮನಿಂದ ಹೊರಟಿದ್ದ ದ್ಯಾಮವ್ವನ ಗುಡಿಯ ಮುಂದೆ ಹಾದುಹೋಗಬೇಕು. ಅಲ್ಲೇ ಆತಂಕಕ್ಕೆ ಆರಂಭವಾಯಿತು. ಗುಡಿಯ ಮುಂದಿನ ಬಂಗಾಳೀ ಗಿಡದ ಟೊಂಗೆ ತೇರಿಗೆ ಅಡ ಬಂತು. ತೇರನ್ನು ಭವ್ಯವಾಗಿ ಕಟ್ಟುವ ಹುರುಪಿನಲ್ಲಿ ಯಾರೂ ದಾರಿಯಲ್ಲಿಯ ಗಿಡಗಳ ಬಗ್ಗೆ ಆಲೋಚನೆಯನ್ನೇ ಮಾಡಿರಲಿಲ್ಲ ಆಯಿತು. ಈಗಂತೂ ಏನೂ ಮಾಡುವ ಹಾಗಿರಲಿಲ್ಲ. ಗಿಡವಂತೂ ಬಡಿಗೇರ ಓಣಿಯವರದೇ ಆಗಿತ್ತು. ಯಾರೋ ಗಿಡ ಹತ್ತಿ ಅಡ್ಡಿಯಾದ ಒಂದೆರಡು ಟೊಂಗೆಗಳನ್ನು ಕಡಿದು ಚೆಲ್ಲಿದರು. ತೇರು ದಾಟಿ ಬಂತು.

ಅಲ್ಲಿಂದ ಮುಖ್ಯರಸ್ತೆಯಲ್ಲೇ ಹಾದು ಅಗಸಿಯ ಹತ್ತಿರದ ಹನುಮಂತದೇವರ ಗುಡಿಯ ಕಡೆಗೆ ಹೋಗಬೇಕು. ಅರ್ಥಾತ್ ನಮ್ಮ ಓಣಿಯ ಹತ್ತಿರದ ಬೇವಿನ ಮರದ ಕೆಳಗೇ ಹಾಯ್ದು ಹೋಗಬೇಕು. ತೇರು ಅಲ್ಲಿಗೆ ಬಂದಾಗ ಮತ್ತೆ ಆತಂಕ ಬಂತು. ನಮ್ಮ ನಾಗರಪಂಚಮಿಯ ಜೋಕಾಲಿ ಕಟ್ಟುವ ದೊಡ್ಡ ಟೊಂಗೆಯೇ ಅಡ್ಡಿಯಾಯಿತು. ಬಡಿಗರೇನೋ, ಕೊಡಲಿ ಹಿಡಿದುಕೊಂಡು ತಯಾರಾಗೇ ಇದ್ದರು. ಆದರೆ ಗುರುಬಸಮ್ಮ ಕೇಳುತ್ತಾಳೆಯೆ? ದೊಡ್ಡದನಿ ತೆಗೆದು ಎಲ್ಲರನ್ನೂ ಹೆದರಿಸಿಬಿಟ್ಟಳು. ಜೊತೆಗೆ ಬಸಯ್ಯನೂ ಬಂದು ಸೇರಿಕೊಂಡ. ನಮ್ಮ ಓಣಿಯ ಹಿರಿಯರಿಗೂ ಅಂಥ ದೊಡ್ಡ ಟೊಂಗೆಯನ್ನು ಕಡಿಯುವದು ಮನಸಿಗೆ ಬರಲಿಲ್ಲ. ಅದನ್ನು ಕಡಿದು ಹಾಕಿದ್ದರೆ ಇಡೀ ಮರದ ಸಮತೂಕ, ಸೌಂದರ್ಯಗಳೇ ಹಾಳಾಗುವಂತಿತ್ತು. ಹೀಗಾಗಿ ಯಾರೂ ಅದನು ಕಡಿಯಗೊಡಲಿಲ್ಲ. ಬದಲಾಗಿ ವಿಚಾರ ಮಾಡದೆ ಅಷ್ಟು ಎತ್ತರವಾಗಿ ತೇರು ಕಟ್ಟಿದ್ದಕ್ಕೆ ಎಲ್ಲರೂ ಬಡಿಗೇರ ಜನರನ್ನು ಬೈದರು. ಜೋಕಾಲಿಯ ಟೊಂಗೆ ಉಳಿದಿದ್ದಕ್ಕೆ ನಮಗೆ ಎಷ್ಟೋ ಸಮಾಧಾನವಾಯಿತು.

ಆದರೆ ಈಗೇನು ಮಾಡುವದು? ತೇರನ್ನು ಅರ್ಧಕ್ಕೆ ಹಿಂತಿರುಗಿಸುವದು ಅಮಂಗಳ. ಕಳಸವನ್ನು ತೆಗೆದು ಮುಂದಕ್ಕೆ ಎಳೆಯಬಹುದಾಗಿದ್ದರೂ ಅದೂ ನಿಷಿದ್ಧ. ಹಿರಿಯರು ವಿಚಾರ ಮಾಡಿದರು. ಕಡೆಗೆ ಗಾಲಿಯ ಕೆಳಗಿನ ನೆಲವನ್ನೇ ಕಡಿದು ತಗ್ಗು ಮಾಡಿ ತೇರನ್ನು ಮುಂದಕ್ಕೆ ತರಬೇಕಾಯಿತು. ಅಂತೂ ಗುರುಬಸಮ್ಮನ ಬೇವಿನ ಮರ ಈ ಅಪಾಯದಿಂದ ಪಾರಾಗಿ ಮುಕ್ಕಾಗದೇ ಉಳಿಯಿತು.

ನಮಗೆ ಗೊತ್ತಿದ್ದ ಹಾಗೆ ಗುರುಬಸಮ್ಮ ಅದನ್ನು ಎಂದೂ ಮುಕ್ಕಾಗಗೊಡಲಿಲ್ಲ. ಮಳೆಗಾಲದಲ್ಲಿ ಬೇವಿನಮರದ ಎಲೆ ನೀರು ಹಿಡಿದು ತೊಟ್ಟಿಕ್ಕ ತೊಡಗುತ್ತಿದ್ದವು. ಹತ್ತಿರದ ಮನೆಗಳ ಮಾಳಿಗೆ ಮೇಲೆ ಚಾಚಿದ್ದ ಟೊಂಗೆಗಳಿಂದ ನೀರು ತೊಟ್ಟಿಕ್ಕಿ, ಮಾಳಿಗೆಯ ಮಣ್ಣು ನೆನೆದು ಮನೆ ಸೋರುತ್ತಿದ್ದದ್ದೂ ಇತ್ತು. ಅಂಥ ಮನೆಯವರು ಸಿಟ್ಟಿಗೆದ್ದು ಒದರಾಡುತ್ತ ಗುರುಬಸಮ್ಮನ ಪ್ರತಿಭಟನೆಯನ್ನು ಲೆಕ್ಕಿಸದೆ ಟೊಂಗೆಯ ತುದಿಗಳನ್ನು ಮುರಿದು ಹಾಕಲು ಯತ್ನಿಸಿದ್ದರು. ಆದರೆ ಬಸಯ್ಯನೂ ಬಂದು ನಿಂತದ್ದರಿಂದ ಹೆಚ್ಚಿನ ಅನಾಹುತ ಆಗಿರಲಿಲ್ಲ. ಓಣಿಯ ಹಿರಿಯರು ಸಹ ಈ ವಿಷಯದಲ್ಲಿ ಗುರುಬಸಮ್ಮನೊಂದಿಗೆ ಶಾಮೀಲಾಗಿದ್ದರು.

ಹೀಗೆ ನಮ್ಮ ಬೇವಿನಮರ ಹಲವು ಅಪಾಯಗಳನ್ನು ಎದುರಿಸಿ ಉಳಿದುಕೊಂಡಿತ್ತು. ದಿನ ಹೋಗುತ್ತಲೇ ಇದ್ದವು. ನಾವು ಬೇವಿನಮರದ ಕೆಳಗೆ ಗುಂಡಾ, ಕಣ್ಣು ಮುಚ್ಚಾಟ, ಗುಡ-ಮಿಂಚೋಟು ಆಡುವ ವಯಸು ಕಳೆಯುತ್ತಾ ಬಂದ ಹಾಗೆ ನಮಗೆ ಬೇವಿನಮರದ ಒಡನಾಟ ಕಡಿಮೆಯಾಗುತ್ತ ಬಂತು. ಆದರೆ ನೆರಳಿನ ಉಪಯೋಗ ನನಗೆ ಮೊದಲಿನಷ್ಟು ಅನಿಸಲಿಲ್ಲ. ಕನ್ನಡ ಏಳನೆಯ ಇಯತ್ತೆ ಮುಗಿಸಿ ಮಗ್ಗಲಿನ ನರೇಗಲ್ಲ ಹೈಸ್ಕೂಲಿಗೆ ಸೇರಿದ ಮೇಲೆ ನಮ್ಮ ಆಸಕ್ತಿಗಳು ಬದಲಾದವು. ಗೆಳೆತನಗಳೂ ಬದಲಾದವು. ಮೊದಲಿನಂತೆ ಮಧ್ಯಾಹ್ನದ, ರಾತ್ರಿಯ ಊಟವಾದದ್ದೇ ತಡ, ಬೇವಿನಮರದ ಕಟ್ಟೆಗೆ ಹೋಗಿ ಹರಟೆ ಹೊಡೆಯುತ್ತ ಕೂಡ್ರಬೇಕೆನ್ನುವ ಉತ್ಕಟತೆ ಕಡಿಮೆಯಾಗುತ್ತ ಬಂತು. ಆದರೂ ಬೇವಿನಮರ ಇದ್ದೇ ಇತ್ತು, ಇತ್ತೋ ಇಲ್ಲವೋ ಎನ್ನುವ ಹಾಗೆ, ಇದ್ದೂ ನಮ್ಮ ಮನಸಿನ ಹೊರವ್ಯೆಗೆ ಗೊತ್ತಾಗದ ಹಾಗೆ.

ಈ ನಡುವೆ ಗುರುಬಸಮ್ಮನ ಮನೆಯಲ್ಲಿ ಬಹಳಷ್ಟು ಬದಲಾವಣೆಗಳು ನಡೆದಿದ್ದವು. ಚುಟ್ಟಾದ ಅಂಗಡಿಯ ಮಗ ಮೊದಲಿನಿಂದಲೂ ಬೇನೆಕೊಳಕ. ಆದ್ದಾಗಿ ಅವನು ಮದುವೆಯನ್ನೇ ಆಗಿರಲಿಲ್ಲ. ಈಗ ಅಶಕ್ತತೆ ತೀರಾ ಹೆಚ್ಚಾಗಿ ನೆಲವಟ್ಟಾಗಿದ್ದ. ಅಂಗಡಿಯ ಆದಾಯ ಬಂದಾಯಿತು. ಗಂಡ ತೀರಿಕೊಂಡು ಭಿಕ್ಷದ ಜೋಳ, ರೊಟ್ಟಿ ನಿಂತಿದ್ದವು. ಅದೂ ತೊಂದರೆಯಾಯಿತು. ಗದಗಿನಲ್ಲಿದ್ದ ಟ್ರಕ್ಕಿನ ಡ್ರೈವರನೂ, ಪ್ರಾಥಮಿಕ ಶಾಲೆಯ ಮಾಸ್ತರನೂ ತಮ್ಮ ಕುಟುಂಬಗಳೇ ತಮಗೆ ದೊಡ್ಡವಾಗಿ, ತಾವೇ ತೊಂದರೆಯಲ್ಲಿದ್ದುದರಿಂದ, ಬರಬರುತ್ತ ಮನೆಗೆ ಹಣ ಕಳಿಸುವದನ್ನು ಕ್ರಮೇಣ ಕಡಿಮೆ ಮಾಡುತ್ತ ನಿಲ್ಲಿಸಿಯೇ ಬಿಟ್ಟಿದರು. ಗುರುಬಸಮ್ಮ ತಾನೇ ಹೋಗಿ ಅವರಿಂದ ಹಣ ವಸೂಲು ಮಾಡಲು ಯತ್ನಿಸಿದಳು. ಅವರು ಆಕೆಯನ್ನೇ ತಮ್ಮಲ್ಲಿಟ್ಟುಕೊಂಡು ಹೊಟ್ಟೆ-ಬಟ್ಟೆ ನೋಡಿಕೊಳಲು ತಯಾರಿದ್ದರು. ಆದರೆ ಆಕೆಗೆ ನಮ್ಮ ಊರನ್ನು ಬಿಟ್ಟು ಹೋಗುವ ಮನಸಿರಲಿಲ್ಲ. ಸಣ್ಣ ಮಗ ಬಸಯ್ಯ ಮಾತ್ರ ಇಂಥ ತೊಂದರೆಯಲ್ಲೂ ಬದಲಾಗಿರಲಿಲ್ಲ. ದುಡಿದದ್ದರಲ್ಲಿ ಸ್ವಲ್ಪ ಹಣ ಮನೆಗೆ ಕೊಡತೊಡಗಿದ್ದನಾದರೂ ಅದು ಯಾತಕ್ಕೂ ಸಾಲುತ್ತಿರಲಿಲ್ಲ. ಅವನದೂ ಮದುವೆಯಾಗಿ ಹೆಂಡತಿ, ಮನೆಗೆ ಬಂದ ಮೇಲೆ, ಗಂಡನ ವ್ಯವಹಾರ, ಮನೆಯ ತೊಂದರೆಗಳನ್ನು ನೋಡಿ ಆಕೆಯೂ ಸ್ವತಃ ಅವರಿವರ ಹೊಲಕ್ಕೆ ಹೋಗಿ ಕೂಲಿ ಮಾಡಿ ತಂದದ್ದರಲ್ಲಿ ಹೇಗೋ ಸಂಸಾರವನ್ನು ನಿಭಾಯಿಸಿದಳು. ಆಕೆಗೂ ಮಕ್ಕಳು-ಮರಿ ಬೆಳೆಯುತ್ತ ಹೋದಂತೆ ಕಷ್ಟವಾಯಿತು. ಇದ್ದ ಒಂದು ತುಂಡು ಹೊಲವನ್ನು ಬಸಯ್ಯ ಬಡ್ಡಿಯಲ್ಲಿ ಹಾಕಿದ್ದ. ಅಸಲು ಕೊಟ್ಟು ತಿರುಗಿ ಹೊಲ ಬಿಡಿಸಿಕೊಳ್ಳುವ ಸಂಭವವೇ ಇಲ್ಲದಷ್ಟು ಅವನು ಅಸಹಾಯಕನಾದ. ಮನೆಯ ಕಟ್ಟೆಯ ಮೇಲೆ ಹೊದಿಸಿದ್ದ ನಾಲ್ಕಾರು ತಗಡುಗಳಿದ್ದವು. ಗುರುಬಸಮ್ಮ ಉಳಿದ ಮಕ್ಕಳ ಮನೆಗೆ ಹೋದ ಹೊತ್ತು ಸಾಧಿಸಿ ಅವನು ತೆಗೆಸಿ ಮಾರಿಕೊಂಡು ಅದರ ಜಾಗೆಯಲ್ಲಿ ಮಣ್ಣಿನ ಮಾಳಿಗೆ ಮಾಡಿಸಿದ. ಕೊನೆಗೆ ಅದನ್ನೇ ಒಂದು ಕೋಣೆಯಾಗಿ ಮಾಡಿ ಬಾಡಿಗೆ ಕೊಟ್ಟ. ಏನಾದರೂ ಮನೆಯವರ ಕಷ್ಟ ಹಾಗೇ ಉಳಿಯಿತು.

ದುಡಿಯಲಾರದ ತನ್ನೊಬ್ಬಳ ಹೊಟ್ಟೆ-ಬಟ್ಟೆಯಾದರೂ ಹೊರಗೆ ಹೋದರೆ ಉಳಿದವರಿಗಾದರೂ ಸರಿಯಾದೀತೇನೋ ಎಂದುಕೊಂಡು ಗುರುಬಸಮ್ಮ ಗಟ್ಟಿ ಮನಸು ಮಾಡಿ ಮಾಸ್ತರನ ಊರಿಗೆ ಹೋದಳು. ಆದರೆ ಅಲ್ಲಿ ಎರಡು ತಿಂಗಳ ಸಹ ಇರಲು ಆಗಲಿಲ್ಲ. ಸೊಸೆಯ ಕೂಡ ನಡೆಯಲಿಲ್ಲವಷ್ಟೆ ಅಲ್ಲ; ಅಲ್ಲಿ ಊರಲ್ಲಿ ಸಣ್ಣ ಮಗನ ಮಕ್ಕಳು ಉಪವಾಸ ವನವಾಸ ಮಾಡುವಾಗ ನಾನಿಲ್ಲಿ ಹೇಗೆ ಹೊಟ್ಟೆತುಂಬ ಉಣ್ಣಲಿ ಎಂದು ರಂಪಾಟ ಮಾಡತೊಡಗಿದಳಂತೆ. ಇದು ಮಾಸ್ತರನಿಗೂ ಬೇಸರವಾಯಿತು. ಇಂಥದರಲ್ಲಿ ಸಣ್ಣ ಮಗ ಬಸಯ್ಯನೂ ಅವ್ವನನ್ನು ಬಿಟ್ಟು ಇರಲಾರೆ ಎಂದು ಅಲ್ಲಿಗೇ ಹೋದ. ಕೊನೆಗೆ ಎರಡು ಹೊಸ ಸೀರೆ ಕೊಡಿಸಿಕೊಂಡು ಕೈಯಲ್ಲಿ ಒಂದಿಷ್ಟು ರೂಪಾಯಿ ತೆಗೆದುಕೊಂಡು ತಿರುಗಿ ಊರಿಗೆ ಬಂದಳು. ಬೇವಿನ ಮರದ ಋಣ ಇನ್ನೂ ಉಳಿದಿತ್ತೆಂದು ಕಾಣುತ್ತದೆ.

ನಾನು ಹೈಸ್ಕೂಲು ಮುಗಿಸಿ ಕಾಲೇಜಿಗೆಂದು ಧಾರವಾಡಕ್ಕೆ ಹೋದೆ. ಸೂಟಿಯ ಕಾಲಕ್ಕಷ್ಟೇ ಊರಿಗೆ ಬರುತ್ತಿದ್ದೆ. ಬರಬರುತ್ತ ಊರಿನ ಸಂಪರ್ಕ ಕಡಿಯತೊಡಗಿತ್ತು. ಅತ್ಯಂತ ಆತ್ಮೀಯರಾಗಿದ್ದ ಮೊದಲಿನ ಗೆಳೆಯರೂ ಅಪರಿಚಿತರಾಗುತ್ತ ಬಂದರು. ಊರಿಗೆ ಬಂದರೆ ಮನೆಯ ಒಕ್ಕಲುತನದ ವಾತಾವರಣ ಎಗ್ಗವೆ ಉಸಿರು ಕಟ್ಟಿದಂತಾಗತೊಡಗಿತ್ತು. ಬೇವಿನಮರ ಈಗಲೂ

ಇತು. ಆದರೆ ಅದರ ಬಗ್ಗೆ ಈಗ ಏನೂ ಅನಿಸು ತ್ತಿರಲಿಲ್ಲ. ಆಫೀಸಿನಿಂದ ಮನೆಗೆ, ಮನೆಯಿಂದ ಆಟಕ್ಕೆ ಹೋಗುವಾಗ ಬರುವಾಗ ಅನಿವಾರ್ಯ ವಾಗಿ ಅದರ ನೆರಳಲ್ಲಿ ನಡೆದು ಹೋದದ್ದಷ್ಟೇ. ಬಹಳವಾದರೆ, ಅಪರಿಚಿತರಿಗೆ ನಮ್ಮ ಮನೆಯ ಗುರುತು ಹೇಳುವಾಗ ಬೇವಿನಮರ ಸಹಾಯಕ್ಕೆ ಬರುತ್ತಿತ್ತು.

ಬೇವಿನಮರವೂ ಮುದಿಯಾಗುತ್ತ ಬಂದಿತ್ತೋ ಏನೋ! ಅದರ ನೆರಳಿನ ತಂಪು ಹಸಿರು ಎಲೆಗಳ ಗೋಪುರ, ಕಾಗೆಗಳ ಶಾಲೆ, ಚೈತ್ರದ ಹೂವಿನ ವಾಸನೆ ಒಂದೂ ಈಗ ಮನಸ್ಸಿಗೆ ಮುಟ್ಟುತ್ತಿರಲಿಲ್ಲ.

ಈ ನಡುವೆ ನಮ್ಮ ಊರಿಗೆ ಇಲೆಕ್ಟ್ರಿಸಿಟಿ ಬಂತು. ಊರಿನ ಓಣಿಗಳ ಸರ್ವೆ ಆಗಿ ಎಲ್ಲೆಲ್ಲಿ ಕಂಬ ಹಾಕಬೇಕು, ಎಲ್ಲೆಲ್ಲಿ ದೀಪ ಹಚ್ಚಬೇಕು ಎಂಬುದು ನಿಗದಿಯಾಯಿತು. ಊರಿನ ಮುಖ್ಯ ರಸ್ತೆಯ ಗುಂಟ ಬರುವ ಮೇನ್ ಲೈನು ನಮ್ಮ ಬೇವಿನ ಮರದ ಹತ್ತಿರ ಹಾಯ್ದು ನೆಟ್ಟಗೆ ಗೌಡರ ಓಣಿಯ ಕಡೆಗೆ ಹೋಗುವದಿತ್ತು. ಬೇವಿನ ಮರದ ಜಾಗ ಎರಡು ರಸ್ತೆಗಳು ಕವಲೊಡೆಯುವ ಸ್ಥಳವಾದ್ದರಿಂದ ಕಟ್ಟೆಯ ಎದುರಿಗೆ ಒಂದು ಕಂಬ ಹಾಕಿ ದೀಪ ಹಚ್ಚಿದರೆ ಎರಡೂ ರಸ್ತೆಗಳಿಗೆ ಬೆಳಕು ಬೀಳುತ್ತಿತ್ತು. ಅಲ್ಲಿಂದಲೇ ನಮ್ಮ ಓಣಿಯ ಮೇಲಿಂದ ಮಾಳಶೆಟ್ಟರ ಓಣಿಗೆ ಒಂದು ಲೈನು ಎಳೆಯಬಹುದಾಗಿತ್ತು. ಅದೇ ಕಂಬದಿಂದ ಸುತ್ತಲಿನ ಮನೆಗಳಿಗೆ ಕನೆಕ್ಶನ್ ಕೊಡಬಹುದಾಗಿತ್ತು. ಹೀಗೆ ಯೋಚಿಸಿ ಮೊದಲು ಕಂಬ ಹಾಕಿದರು. ಊರಿಗೆ ವಿದ್ಯುದ್ದೀಪ ಬರುತ್ತವೆಂದು ಎಲ್ಲರಿಗೂ ಸಡಗರ. ಪಂಚಾಯತಿಯವರು ವಿದ್ಯುತ್ ಇಲಾಖೆಯ ಕೆಲಸಗಾರರಿಗೆ ಎಲ್ಲಾ ರೀತಿಯಿಂದ ಸಹಾಯ ಮಾಡಿದ್ದರು.

ಆದರೆ ಕಂಬಗಳಿಗೆ ತಂತಿಯನ್ನೆಳೆಯುವಾಗ ಬೇವಿನಮರ ಸುತ್ತೂ ಕಡೆಗೆ ಅಡ್ಡ ಬರತೊಡಗಿತು. ಹೀಗೆ ಅಡ್ಡ ಬಂದ ಟೊಂಗೆಗಳನ್ನು ಕಡಿದು ಬಯಲು ಮಾಡದೆ ನಿರ್ವಾಹವೇ ಇರಲಿಲ್ಲ. ಗುರುಬಸಮ್ಮ ಸಾಕಷ್ಟು ಜಗಳಾಡಿದಳು. ಬಸಯ್ಯನೂ ಬಾಯಿ ಹಾಕಿದ. ಆದರೆ ವಿದ್ಯುತ್ ಇಲಾಖೆಯವರು ಕೇಳಲಿಲ್ಲ. ಹಸಿಗಿಡಕ್ಕೆ ತಂತಿ ತಾಕಿದರೆ ಇಡೀ ಗಿಡದ ತುಂಬ ವಿದ್ಯುತ್ ಹರಿಯುತ್ತದೆಂದೂ, ಗಿಡವನ್ನು ಯಾರೇ ಮುಟ್ಟಿದರೂ ಸಾವು ಖಂಡಿತವೆಂದೂ ಅವರು ತಿಳಿಸಿ ಹೇಳಿದ ಮೇಲೆ ಪಂಚಾಯತಿಯವರೂ ಓಣಿಯ ಹಿರಿಯರೂ ಕೂಡಿಯೇ ಅಡ್ಡ ಬರುವ ಬೇವಿನಮರದ ಟೊಂಗೆಗಳನ್ನೆಲ್ಲ ಕಡಿಯಲು ಒಪ್ಪಿದರು. ಗುರುಬಸಮ್ಮನ ಪ್ರತಿಭಟನೆಯ ನಡುವೆಯೇ ಗಿಡದ ಟೊಂಗೆಗಳು ಒಂದೊಂದಾಗಿ ಕಡಿದು ಬಿದ್ದವು. ಗಾಳಿ ಬಿಟ್ಟು ಟೊಂಗೆಗಳು ಅಲ್ಲಾಡಿದಾಗಲೂ ತಂತಿಗೆ ತಾಕದಂತೆ ನೋಡಿಕೊಳಲು ತಂತಿಯ ಸಮೀಪದ ದೊಡ್ಡ ದೊಡ್ಡ ಟೊಂಗೆಗಳನ್ನು ಸಹ ಅವಸರದಲ್ಲಿ ಕೈಗೆ ಸಿಕ್ಕಂತೆ ಕಡಿದು ಬಿಟ್ಟರು. ಅದರಲ್ಲಿ ನಮ್ಮ ನಾದರ ಪಂಚೆಮಿಯ ಜೋಕಾಲಿಯ ಟೊಂಗೆಯೂ ಹೋಯಿತು. ಮುಂದೆ ಅಲ್ಲಿಯ ಕಂಬದಿಂದ ಮನೆಗಳಿಗೆ ಕನೆಕ್ಶನ್ ಕೊಡುವಾಗ ಇನ್ನಷ್ಟು ಟೊಂಗೆಗಳನ್ನು ಕಡಿಯಬೇಕಾಯಿತು. ಬರಿಯ ತುದಿಗಳನ್ನು ಕಡಿದರೆ ಪುನಃ ಚಿಗಿತು ಮತ್ತೆ ಟೊಂಗೆಗಳು ತಂತಿಗೆ ತಾಕಬಹುದೆಂದು ಟೊಂಗೆಗಳ ಬುಡವನ್ನೇ ಕಡಿದಿದರು. ಇದೇ ಹೊತ್ತು ಸಾಧಿಸಿ ಮನೆಯ ಮೇಲಿನ ಟೊಂಗೆಗಳಲ್ಲಿ ನೀರು ಹಿಡಿದು ಮನೆ ಸೋರುತ್ತವೆಂದು ಗೊಣಗುತ್ತಿದ್ದವರೂ ತಮಗೆ ಬೇಕಾದ ಟೊಂಗೆಗಳನ್ನು ಮುರಿದು ಬಯಲು ಮಾಡಿಕೊಂಡರು.

ಇದರಲ್ಲಿ ಲಾಭವಾದದ್ದು ಬಸಯ್ಯನಿಗೆ. ಸ್ವತಃ ಕಡಿಯುವ ಶ್ರಮವಿಲ್ಲದೆ, ಕಡಿಸುವ ಖರ್ಚಿಲ್ಲದೆ ಅವನಿಗೆ ಬೇವಿನಮರದ ದೊಡ್ಡ ದೊಡ್ಡ ಟೊಂಗೆಗಳು ಮನೆಗೆ ಬಂದು ಬಿದ್ದುವು. ಒಕ್ಕಲು ತನದ [illegible] ಗೆ. ಮನೆ ತೊಲೆ ಜಂತಿಗಳಿಗೆ ಬರುವಂಥವನ್ನು ಆರಿಸಿ ಮಾರಿಕೊಂಡ. [illegible] ಕಟಿಗೆಗಳನ್ನು ಕಟ್ಟಿಗೆ ಅಡೆಯುವರಿಗೆ ಮಾರಿದ. ಮತ್ತೆ ನಾಲ್ಕು ದಿನ ಅವನ ಚೈನಿ ರಂಗಾಯಿತು.

ಹೀಗೆ ನಮ್ಮೂರಿನ ರಸ್ತೆಗಳಿಗೆ, ಮನೆಗಳಿಗೆ ವಿದ್ಯುತ್ ಬಂತು. ಆದರೆ ಅದಕ್ಕೆ ನಮ್ಮ ಬೇವಿನ ಮರವನ್ನು ಬಲಿ ಕೊಡಬೇಕಾಯಿತು. ಅಷ್ಟು ಸೊಂಪಾಗಿ, ವಿಶಾಲವಾಗಿ, ಸುತ್ತಲೂ ಟೊಂಗೆ ಚಾಚಿ, ಸದಾ ಹಸಿರು ಮುರಿಯುತ್ತ, ನಮ್ಮ ಓಣಿಗೇ ಶೋಭೆಯಾಗಿ ಮೆರೆಯುತ್ತಿದ್ದ ಮರ ಈಗ ಹೇಗಾಗಿ ಬಿಟ್ಟಿತು ಅಂತೀರಿ?

ಈಗ ಅದರ ಮಹತ್ವದ ಟೊಂಗೆಗಳೆಲ್ಲ ಹೋಗಿ, ನೆಟ್ಟಗೆ ಮೇಲಕ್ಕೆ ಚಾಚಿದ ನಾಲ್ಕಾರು ಟೊಂಗೆಗಳು ಮಾತ್ರ ಉಳಿದಿದ್ದವು. ಅವು ಸಹ ಟಿಸಿಲೊಡೆದ ಟೊಂಗೆಗಳಿಗೆ ಬಿದ್ದ ಕೊಡಲಿಯ ಕಚ್ಚುಗಳಿಂದಾಗಿ ಜೀವರಸ ಸರಿಯಾಗಿ ಆಡದೆ ಅಲ್ಲಲ್ಲಿ ಒಣಗತೊಡಗಿದವು. ಕಡಿದು ಮೋಟಾದ ಟೊಂಗೆಗಳ ಬಂಡ ಎಲೆ ವಿರಳವಾದ ಗಿಡದಲ್ಲಿ ಅಸಹ್ಯವಾಗಿ ಎದ್ದು ಕಾಣತೊಡಗಿದವು. ಸುತ್ತಲಿ ಎಲೆ ತುಂಬಿದ ಟೊಂಗೆಗಳಿದ್ದಾಗ ಮೈ ತುಂಬಿಕೊಂಡು ಮಟ್ಟಸವಾಗಿ ಭವ್ಯವಾಗಿ, ಕಾಣುತ್ತಿದ್ದ ಮರ ಈಗ ಬರೀ ಎತ್ತರವಾಗಿ ನಿಂತುಕೊಂಡಿತ್ತು. ಕಾಂಪೋಜಿಷನ್ ಇಲ್ಲದ ಚಿತ್ರದಂತೆ ಸಮತೋಲನವನ್ನು ಕಳೆದುಕೊಂಡು ವಿಕಾರವಾಗಿಬಿಟ್ಟಿತ್ತು. ಅದರ ನೆರಳಂತೂ ಈಗ ತೀರಾ ವಿರಳವಾಗಿತ್ತು. ಮೊದಲು ಮುಂಜಾನೆಯಿಂದ ಸಂಜೆಯವರೆಗೆ ಸೂರ್ಯ ಯಾವ ದಿಕ್ಕಿನಲ್ಲಿದ್ದರೂ ಎರಡೂ ರಸ್ತೆಗಳನ್ನು ತುಂಬಿಕೊಂಡಿರುತ್ತಿದ್ದುದು ಈಗ ಸೂರ್ಯನ ದಿಕ್ಕಿಗೆ ಅಧೀನವಾಯಿತು. ನೆರಳಿಲ್ಲದೆ ಮಕ್ಕಳ ಆಟಗಳಿಗೆ ಆಶ್ರಯ ತಪ್ಪಿತು. ಕಾಗೆಗಳ ಶಾಲೆಯೂ ಬಂದಾಗಿ ಮರ ಒಂಟಿಯಾಗಿ ಬಣಗುಡತೊಡಗಿತು.

ಈಚೆಗೆ ನಾನು ಆ ಮರದ ಚೆಲುವಿನ ಬಗ್ಗೆ ಅಷ್ಟು ಎಚ್ಚರದಿಂದ ಯೋಚಿಸಿರಲಿಲ್ಲ. ನಿಜ ಆದರೂ ಅದು ಎಷ್ಟು ಚೆಂದವಾಗಿತ್ತು ಎಂಬುದನ್ನು ನನ್ನ ಮನಸ್ಸಿನ ಯಾವದೋ ಮೂಲೆಯಲ್ಲಿ ಗಟ್ಟಿಯಾಗಿ ಗುರುತಿಸಿದೆ. ಅದನ್ನು ಎಚ್ಚರದಿಂದ ನೋಡದೆಯೂ ಅದರ ಚೆಲುವು ನನಗೆ ಕಾಣುತ್ತಿತ್ತು. ನೋಡಿ ನೋಡಿ, ಆ ಚೆಲುವೇ ಒಂದು ರೂಢಿಯಾಗಿ, ಚಟವಾಗಿ, ಕ್ಲೀಷೆಯಾಗಿ ಜಡ್ಡುಗಟ್ಟಿತ್ತು. ಆಷ್ಟೆ ಈಗ ಅದು ಒಮ್ಮೆಲೆ ವಿರೂಪಗೊಂಡ ಮೇಲೆ ಮೊದಲಿನ ಪರಿಚಿತತೆಯ ಆವರಣ ಹರಿದು ಹೋಗಿ, ಮತ್ತೆ ಅದರ ಚೆಲುವಿನ ನೈಜ ಸ್ವರೂಪ ಪ್ರತೀತಿಯಾಯಿತು. ಯಾರಿಗೆ ಗೊತ್ತು, ಕೆಲವು ದಿನಗಳ ಬಳಿಕೆಯ ನಂತರ ಮನಸ್ಸು ಈ ಕುರೂಪಕ್ಕೂ ಒಗ್ಗಿ ಹೋಗಿ ಆ ಚೆಲುವಿನ ನೆನಪೂ ಮಾಸಿಹೋಗುತ್ತದೋ ಏನೋ! ಆದರೆ ಯಾವಾಗಾದರೊಮ್ಮೆ ಊರಿಗೆ ಬರುತ್ತಿದ್ದ ನನಗೆ ಈ ವಿಕಾರವಾದ ಮರವನ್ನು ನೋಡಲು, ನೋಡಿ ಸಹಿಸಲು ಕಷ್ಟವಾಯಿತು.

ಇಷ್ಟರಲ್ಲಿ ನನ್ನ ಕಾಲೇಜಿನ ವಿದ್ಯಾಭ್ಯಾಸ ಮುಗಿದು ನೌಕರಿಗೆ ಸೇರಿಕೊಂಡು ಊರಿಗೆ ದೂರವಾಗುತ್ತ ಹೋದೆ. ಮದುವೆಯಾಗಿ ಹೆಂಡರು–ಮಕ್ಕಳು ಜೀವಕ್ಕೆ ಅಂಟಿಕೊಂಡ ಮೇಲೆ ನನ್ನದೇ

---

## ಪೇಚಿಗೆ ಸಿಕ್ಕಿದಾಗ....

ಅಧ್ಯಕ್ಷ ಟೆಡ್ಡಿ ರೂಸವೆಲ್ಟರವರು ಒಕ್ಲಾಹೋಮಾ ಪ್ರಾಂತ್ಯದಲ್ಲಿ ಪ್ರವಾಸ ಮಾಡುತ್ತಿದ್ದರು. ಆಗ ಅವರು ತಮ್ಮ ಹಳೆಯ ಸ್ನೇಹಿತ ಕ್ವ್ಯಾನಾಪಾರ್ಕರ್‌ನ್ನು ನೋಡಲು ಹೋದರು. ಪಾರ್ಕರ್ ಕೋಮಾಂಚೆಸ್ ಎಂಬ ಜನಾಂಗದ ಮುಖ್ಯಸ್ಥ. ಈತ ಫೋರ್ಟ್ ಸಿಲ್‌ನಿಂದ ಹನ್ನೆರಡು ಮೈಲಿಗಳ ದೂರ ಪ್ರದೇಶದಲ್ಲಿ ವಾಸಿಸುತ್ತಿದ್ದ. ಜಂಬದಿಂದ ಪಾರ್ಕರ್ ತಾನು ವಾಸಿಸುತ್ತಿದ್ದ ಮನೆ ತಾನು ತೊಟ್ಟುಕೊಳ್ಳುತ್ತಿದ್ದ ಬಿಳಿಯರು ತೊಡುವ ಬಟ್ಟೆ ಬರೆಗಳು, ಬಿಳಿಯರು ಓದುವ ಶಾಲೆಯಲ್ಲಿ ಪ್ರವೇಶ ದೊರಕಿಸಿ ಓದುತ್ತಿರುವ ತನ ಮಕ್ಕಳು ಎಲ್ಲವನ್ನು ತೋರಿಸಿದ.

"ಬಿಳಿಯರ ನಡವಳಿಕೆ ಅವರ ಆಚಾರವಿಚಾರಗಳನ್ನು ಮನ್ನಿಸಿ ಅವರ ಕಾನೂನನ್ನು ನೀನು ಪಾಲಿಸಿ ನೀನೊಬ್ಬ ನಿನ್ನ ಜನಾಂಗಕೆ ಮಾದರಿ ವ್ಯಕ್ತಿಯಾಗಬಾರದು. ಬಿಳಿಯನಿಗೆ ಒಬ್ಬಳೇ ಹೆಂಡತಿಯಿರುತ್ತಾಳೆ. ಆದರೆ ಇಲ್ಲಿ ನೀನು ಐದು ಜನ ಹೆಂಡತಿಯರೊಡನೆ ಬಾಳುತ್ತಿದ್ದೀಯೆ. ನೀನೇಕೆ ಇವರ ಪೈಕಿ ನಾಲ್ವರನ್ನು ಬಿಟ್ಟು ಐದನೆಯವಳಿಗೆ ನಿಷೆಯಿಂದಿರಬಾರದು? ಆಗ ನೀನು ನೈಜವಾಗಿ ಬಿಳಿಯನಂತೆ ಬಾಳಲು ಸಾಧ್ಯವಾಗುತ್ತದ"

—ಎಂದು ರೂಸ್‌ವೆಲ್ಟ್ ಬುದ್ಧಿವಾದ ಹೇಳಿದರು.

ಪಾರ್ಕರ್ ರೂಸ್‌ವೆಲ್ಟ್‌ರ ಸಲಹೆಯನ್ನು ಕೆಲಕ್ಷಣ ಕೂಳಹಾಕಿ ಅಳೆದೂ ಸುರಿದೂ ಮಾಡಿ ನೋಡಿ ಹೇಳಿದ.

"ನೀವು ನನ ಮಹಾನ್ ಬಿಳಿಯ ತಂದೆ. ನನಗೆ ಮುಕ್ತಿ ನೀಡುವವರು. ನೀವು ಹೇಳಿದ ನಿಬಂಧನೆಗಳನು ನಾನು ಚಾಚೂತಪ್ಪದೆ ಪಾಲಿಸುತೇನೆ. ಆದರೆ ಒಂದು ಕಂಡೀಷನ್."

"ಏನು?" ಕುತೂಹಲ ಹಾಗೂ ಅಚ್ಚರಿಯಿಂದ ರೂಸ್‌ವೆಲ್ಟ್ ಪ್ರಶ್ನಿಸಿದರು.

"ನಾನ ಜೊತೆಯಲ್ಲಿಟ್ಟುಕೊಂಡು ಸಂಸಾರ ಮಾಡಬೇಕಾದ ಹೆಣ್ಣನ್ನು ಈ ಐವರಿಂದ ಹೊರತು ಪಡಿಸಿ ಉಳಿದ ನಾಲ್ವರಿಗೆ ನೀವೇ ಹೇಳಿ."

—ಎಂದು ಹೇಳಿದ.

ಎಸ್. ವಿಶ್ವನಾಥ

---

ಸಂಸಾರದಲ್ಲಿ ನಾನು ಮುಳುಗಿಬಿಟ್ಟೆ. ತಂದೆ-ತಾಯಿಗಳು ಬದುಕಿರುವವರೆಗೆ ಊರಿನ ಬಂಧನ ವ್ಯಾಮೋಹ ಇನ್ನೂ ಉಳಿದಿತ್ತು. ಆಗಾಗ ಹೋಗಿ ಬರುತ್ತಲೂ ಇದ್ದೆ. ಅವರು ತೀರಿಕೊಂಡ ಮೇಲೆ ನನ್ನ ಮನೆಗೇ ನಾನು ಪರಕೀಯನಾದೆ. ತಮ್ಮಂದಿರು ಹೊಲ-ಮನೆ ಮಾಡಿಕೊಂಡಿದ್ದರು. ಅವರ ಹೆಂಡರು-ಮಕ್ಕಳಿಂದ ತುಂಬಿ ಮನೆ ಗಿಜಿಗಿಜಿ ಎನ್ನುತ್ತಿತ್ತು. ನನಗೆ ಮೊದಲಿನಿಂದಲೂ ಹೊಲ-ಒಕ್ಕಲುತನ ಎಂದರೆ ಏನೇನೂ ಆಸಕ್ತಿ ಇರಲಿಲ್ಲ. ಈಗ ಇದ್ದ ಬಿದ್ದ ಆಸ್ತಿಯನ್ನೆಲ್ಲ ತಮ್ಮಂದಿರಿಗೇ ಬಿಟ್ಟು ನನ್ನ ನೌಕರಿಯನ್ನೇ ನೆಚ್ಚಿಕೊಂಡಿದ್ದೆ. ಹೀಗಾಗಿ ಈಚೆಗೆ ೮-೧೦ ವರ್ಷ ಊರಿನ ಕಡೆಗೆ ಹೋಗಿರಲೇ ಇಲ್ಲ.

ಮೊನ್ನೆ ಆಕಸ್ಮಿಕವಾಗಿ ಊರಿನವರಿಂದ ಪತ್ರ ಬಂತು. ಎರಡು ವರ್ಷದ ಹಿಂದೆ ನಮ್ಮೂರಿನಲ್ಲೂ ಹೈಸ್ಕೂಲು ಪ್ರಾರಂಭವಾಗಿತ್ತು. ಈ ವರ್ಷದ ಆದರೆ ಗ್ಯಾದರಿಂಗಿಗೆ ನನ್ನನ್ನು ಮುಖ್ಯ ಅತಿಥಿ ಎಂದು ಆಗ್ರಹದಿಂದ ಆಮಂತ್ರಿಸಿದ್ದರು. ಬಹಳ ದಿನಗಳ ನಂತರ ಊರಿಗೆ ಹೋಗಿ ಬರಲು ಇದೊಂದು ಅವಕಾಶ ಸಿಕ್ಕಿತೆಂದು ಕಾರ್ಯಕ್ರಮಕ್ಕಿಂತ ಎರಡು ದಿನ ಮುಂಚೆಯೇ ಊರಿಗೆ ಹೋದೆ.

ಬಸ್‌ಸ್ಟ್ಯಾಂಡಿನಲ್ಲಿ ಇಳಿದೊಡನೆ ಊರ ಹಿರಿಯರು ಎದುರುಗೊಂಡರು. ಇಳಿದು ನೋಡಿದರೆ ಎಷ್ಟೆಲ್ಲಾ ಬದಲಾವಣೆ! ಅಗಸಿಯ ಹಳೆಯ ಬಾಗಿಲು ಹೋಗಿ ಅದಿದ್ದ ಸ್ಥಳದಲ್ಲಿ ಎರಡು ಕಲ್ಲಿನ ಕಂಬ ಕಟ್ಟಿಸಿದ್ದರು. ಅದಕ್ಕೆ ಹೊಂದಿ ಸಾಲಾಗಿ ನಾಲ್ಕು ಚಹದಂಗಡಿ, ಒಂದು ಸೋಡಾ ಅಂಗಡಿ, ಒಂದು ದವಾಖಾನೆ, ಎಲ್ಲಕ್ಕೂ ಇಂಗ್ಲೀಷು, ಕನ್ನಡ ಭಾಷೆಗಳಲ್ಲಿ ಹೆಸರಿನ ಬೋರ್ಡುಗಳು. ಬಲಗಡೆಯ ಕೆಂಪು ಕೆರೆಯ ದಂಡೆಯ ಮೇಲೆ ಎತ್ತರವಾದ ಟ್ಯಾಂಕು. ಅದೇನೆಂದು ಕೇಳಿದೆ. ಊರಿಗೆ ನಳ ಬಂದಿದೆ ಎಂದರು. ನನಗೆ ಆಶ್ಚರ್ಯ. ಹತ್ತಿರದ ಗದಗಿನಂಥ ದೊಡ್ಡ ಶಹರಕ್ಕೆ ಇನ್ನೂ ನಳ ಇಲ್ಲ. ಅಲ್ಲದೆ ನಮ್ಮ ಊರಲ್ಲಿ ಒಣಗೊಂದು ಭಾವಿ, ಊರ ಹೊರಗೆ ದೊಡ್ಡ ಕೆಂಪು ಕೆರೆ. ನನಗೆ ಗೊತ್ತಿದ್ದ ಹಾಗೆ ಎಂಥ ಬರಗಾಲದಲ್ಲೂ ನಮ್ಮ ಊರಿಗೆ ನೀರಿನ ಅರಬು ಬಂದಿರಲಿಲ್ಲ. ಅಂಥದರಲ್ಲಿ ಊರಿಗೆ ನಳ ಬಂದಿದೆ ಎಂದರೆ ಊರು ಬಹಳ ಸುಧಾರಿಸಿದೆ ಎನಿಸಿತು.

ಅಗಸಿಯ ಬಾಗಿಲಿಗೆ ಏನಾಯಿತು, ಎಂದೆ. ಅದನ್ನು ತೆಗೆಸಿ ಹಾಕಿ ಮೊದಲಿನಂತೇ ನಡುವೆ ದ್ವಾರ ಬಿಟ್ಟು ಪಂಚಾಯತಿಗೆ ಹೊಸ ಕಟ್ಟಡ ಕಟ್ಟಿಸಬೇಕೆಂದು ಯೋಜನೆ ತಯಾರಾಗಿ ಮಂಜೂರಾಗಿತ್ತು. ಹಾಗೆಂದು ಇನ್ನೂ ತಕ್ಕ ಮಟ್ಟಿಗೆ ಗಟ್ಟಿಯಾಗೇ ಇದ್ದ ಅಗಸಿಯನ್ನು ಕೆಡವಿಸಿದರು. ಆದರೆ ನಂತರ ಸರಕಾರದ ವ್ಯವಹಾರದಲ್ಲಿ ಎಲ್ಲಿಯೋ ಅಡಚಣೆ ಬಂದು, ಆ ಯೋಜನೆಯನ್ನು ಕೈಬಿಡಬೇಕಾಯಿತಂತೆ. ಈಗ ಹಳೆಯ ಚಾವಡಿಯನ್ನೇ ಸರಿಯಾಗಿ ರಿಪೇರಿ ಮಾಡಿಸಿ ಪಂಚಾಯತಿಗೆ ಕೊಟ್ಟಿದ್ದರು.

ಬಸ್ ಸ್ಟ್ಯಾಂಡಿನಿಂದ ಸೆಟ್ಟಗೆ ಹೈಸ್ಕೂಲಿಗೆ ಹೋಗಿ ಚಹ ತೆಗೆದುಕೊಂಡು ನಂತರ ನಮ್ಮ ಮನೆಗೆ ಹೋಗುವದಿತ್ತು. ಮೊದಲಿನ ಅಗಸಿ ಇದ್ದ ಜಾಗವನ್ನು ದಾಟಿ, ಮುಖ್ಯ ರಸ್ತೆಗೆ ಕಾಲಿಡುತ್ತಲೇ ನಮಗೆ ಎದುರಾದದ್ದು ರಜ್ಜು, ಆ ರಜ್ಜಿನಲ್ಲಿ ಸಣ್ಣಗೆ ಹರಿಯುತ್ತಿದ್ದ ನೀರು. ನೋಡುವಷ್ಟರಲ್ಲಿ ಈ ರಜ್ಜಿನ ಮೂಲ ಅಲ್ಲೇ ಕಾಣುತ್ತಿದ್ದ ಒಂದು ಸಾರ್ವಜನಿಕ ನಳದ ಬಳಿ ಇದೆಯೆಂದು ಅರ್ಥವಾಯಿತು. ಈ ರಜ್ಜಿನ ಧಾರೆಯನ್ನು ಕಿರಿದಾಗಿದ್ದಲ್ಲಿ ದಾಟುತ್ತ, ಅಗಲವಾಗಿದ್ದಲ್ಲಿ, ಜಿಗಿಯುತ್ತ, ಇನ್ನೂ ಅಗಲವಿದ್ದಲ್ಲಿ ಅನಿವಾರ್ಯ ತುಳಿಯುತ್ತ ಮುಂದೆ ನಡೆದೆವು. ಈ ರಜ್ಜಿನಲ್ಲಿ ಅಡ್ಡಾಡಿ ರೂಢಿಯಾಗಿದ್ದ ಊರ ಹಿರಿಯರು ಎಲ್ಲಿ ಜಿಗಿಯಬೇಕು. ಎಲ್ಲಿ ದಾಟಬೇಕು ಎಂಬ ಬಗ್ಗೆ ಆಗಾಗ ನನಗೆ ಅಮೂಲ್ಯ ಸಲಹೆಗಳನ್ನು ಕೊಟ್ಟು ಸಹಾಯ ಮಾಡಿದರು.

ಹೈಸ್ಕೂಲನ್ನು ನೀರ ಅಗಸಿಯ ರಸ್ತೆಯಲ್ಲಿದ್ದ ಬಾವಾನ ಮಹಲಿನಲ್ಲಿ ನಡೆಸುತ್ತಿದ್ದರು. ಹೊರಗೆ ದೊಡ್ಡ ಅಕ್ಷರಗಳಿಂದ ಬರೆಸಿದ್ದ ಬೋರ್ಡು ಇತ್ತು. ಆಕಾರದಲ್ಲೂ ಸ್ವಲ್ಪ ಮಾರ್ಪಾಟಾಗಿತ್ತು. ಮೊದಲು ಈ ಮನೆಗೆ ಸಾಕಷ್ಟು ಗಾಳಿ-ಬೆಳಕು ಬರಲು ಕಿಟಕಿ ಬೆಳಕಂಡಿಗಳಿರಲಿಲ್ಲ. ಈಗ ಹೈಸ್ಕೂಲಿಗೆ ಎಂದರೆ ಗಾಳಿ-ಬೆಳಕು ಬೇಕೇ ಬೇಕಲ್ಲ! ಅದಕ್ಕಾಗಿ ಮಹಲಿನ ಐದಾರು ಫೂಟು ಅಗಲದ ಗೋಡೆಗಳನ್ನು ಒಡೆದು ಕಲ್ಲಲ್ಲಿ ಕಿಟಕಿಗಳನ್ನು ಹಚ್ಚಿದ್ದರು. ಹಾಗೆ ಒಡೆಯುವಾಗ ಗೋಡೆಗಳಲ್ಲಿ ಉದ್ದುದ್ದ ಬಿರುಕು ಕಾಣಿಸಿಕೊಂಡಿದ್ದವು. ಆ ಹಳೆಯ ಮನೆಗೂ ಹೊಸ ಕಿಡಕಿಗಳಿಗೂ ಹೊಂದಾಣಿಕೆ ಆಗದೆ ವಿಚಿತ್ರವಾಗಿ ಕಾಣುತ್ತಿದ್ದವು. ಒಳಗಿನ ಕೋಣೆಗಳಲಿ ಹೀಗೆ ಕಿಡಕಿಗಳ ಮೂಲಕ ಬಂದ ಹೊಸ ಬೆಳಕು ಸಹ ಅಲ್ಲಿಯ ವಾತಾವರಣಕ್ಕೆ ಪರಕೀಯವಾಗಿ ಕಾಣಿಸಿತು. ಆದರೂ ಊರಿಗೆ ಹೈಸ್ಕೂಲು ಆದದ್ದು ಒಳ್ಳೆಯದಾಯಿತೆಂದು ಹೇಳಿದೆ. ನಾವು ಸಣ್ಣವರಿದ್ದಾಗ ನರೇಗಲ್ಲಿನ ಹೈಸ್ಕೂಲಿಗೆ ದಿನವೂ ಎರಡೂವರೆ ಮೈಲಿ ನಡೆದು ಹೋಗಬೇಕಾಗಿದ್ದ ಕಷ್ಟವನ್ನು ನೆನಪಿಸಿಕೊಂಡೆ. ನಮ್ಮ ಕಾಲದಲ್ಲಿ ಇದ್ದಂತೆ ಈಗಿನ ಹುಡುಗರಲ್ಲಿ ಕಷ್ಟಪಟ್ಟು ಕಲಿಯುವ ಪ್ರವೃತ್ತಿ ಇಲ್ಲ ಎಂದು ಹಿರಿಯರು ಹೇಳಿದರು.

ಚಹ ಕುಡಿದು ಅಲ್ಲಿಂದ ಮತ್ತೆ ಮುಖ್ಯ ರಸ್ತೆಗೆ ಬಂದೆವು. ಮೊದಲಿನ ಚಾವಡಿ ಅಥವಾ ಈಗಿನ ಪಂಚಾಯತಿ ಇದ್ದಲ್ಲಿಗೆ ಬಂದಾಗ ರಜ್ಜು ಕ್ರಮೇಣ ಅಗಲವಾಗುತ್ತ ಬಂದು ಈಗ ರಸ್ತೆಯ ಒಂದು ಅಂಚಿನಿಂದ ಇನ್ನೊಂದು ಅಂಚಿನವರೆಗೆ ಏಕವಾಗಿಬಿಟ್ಟಿತ್ತು. ರಸ್ತೆಗೆ ಅಡ್ಡವಾಗಿ ಬಂದು ಕೂಡಲು ಸಂದಿಗಳೆಲ್ಲ ತಮ್ಮ ಪಾಲಿನ ರಜ್ಜು-ನೀರನ್ನು ತಂದು ಮುಖ್ಯ ರಸ್ತೆಗೆ ಕೂಡಿಸಿದ್ದವು. ಮುಖ್ಯ ರಸ್ತೆಯ ಪ್ರತಿಯೊಂದು ಮನೆಯ ಬಚ್ಚಲ ಹರಿಯೂ ಅಷ್ಟಷ್ಟು ನೀರು ಬಿಟ್ಟಿದ್ದವು. ರಸ್ತೆಯಲ್ಲಿ ತಗ್ಗಿದ್ದಲ್ಲಿ ಅಲ್ಲಲ್ಲೇ ದೊಡ್ಡ ಮಡುವು ನಿಂತಿದ್ದವು. ಅನೇಕ ಕಡೆ ನೀರು ಪಾಚಿಗಟ್ಟಿ ನಾರುತ್ತಿತ್ತು. ನಿಂತ ನೀರಿನ ಮೇಲೆ ಗುಂಗಾಡುಗಳು ತೆಪ್ಪಗಟ್ಟಿ ತೇಲುವದು ಸ್ಪಷ್ಟವಾಗಿ ಕಾಣುತ್ತಿತ್ತು.

ನಮ್ಮ ಊರಿನಲ್ಲಿ ಎಂದೂ ಹೀಗೆ ರಸ್ತೆಯಲ್ಲಿ ನೀರು ನಿಲ್ಲುತ್ತಿರಲಿಲ್ಲ. ಊರನ್ನು ಮಸಾರಿಯ ಗಟ್ಟಿ ನೆಲದಲ್ಲಿ ಆರಿಸಿ ಕಟ್ಟಿದ್ದರಿಂದ ಮಳೆ ಬಂದರೂ ನೀರು ತಕ್ಷಣ ಹರಿದುಹೋಗಿ ನೆಲ ಒಣಗಿ ಬಿಡುತ್ತಿತ್ತು. ಉದ್ದಕ್ಕೂ ಉರುಟಾದ ಉಸುಕು ತುಂಬಿರುತ್ತಿತ್ತು. ಈ ಉಸುಕಿನಲ್ಲಿ ನಾವು ಸಣ್ಣವರಿದ್ದಾಗ ಕಾಲು ಹುಗಿದು ಮನೆ ಮಾಡಿದ್ದಿದೆ; ಪೆಟ್ಟಾಗದಂತೆ ಕುಸ್ತಿ ಆಡಿದ್ದಿದೆ, ಬೇವಿನಮರದ ಕಟ್ಟೆಯ ಕೆಳಗೆ ಉಸುಕಿನ ರಾಶಿ ಮಾಡಿ ಕಟ್ಟೆಯ ಮೇಲಿಂದ ಉಸುಕಿನ ರಾಶಿಯಲ್ಲಿ ಜಿಗಿದಿದ್ದಿದೆ. ನೀರು ಮಾತ್ರ ಎಂದೂ ನಿಲ್ಲುತ್ತಿರಲಿಲ್ಲ.

ಇದೆಲ್ಲ ಹೀಗೇಕಾಯಿತು ಎಂದು ಹತ್ತಿರದವರನ್ನು ಕೇಳಿದೆ. ಎಲ್ಲಾ ನಳದ ಪ್ರಭಾವ ಎಂದರು. ಊದುವದನ್ನು ಕೊಟ್ಟು ಒದರುವದನ್ನು ತೆಗೆದುಕೊಂಡಂತಾಗಿದೆ ಎಂದರು. ಮುಂಚೆ ಭಾವಿಯಿಂದ ನೀರನ್ನು ಸೇದಿ ಹೊತ್ತು ತರಬೇಕಾಗುತ್ತಿತ್ತು. ಜನ ಹಿಡಿತದಿಂದ ನೀರು ಬಳಸುತ್ತಿದ್ದರು. ಈಗ ಧಾರಾಳವಾಗಿ ನೀರು ಮನೆಗೆ ಬರುತ್ತಿರುವದರಿಂದ ಬಳಕೆ ಹೆಚ್ಚಾಗಿದೆ. ಮೊದಲು ಅರಿವೆ ಒಗೆಯಲು ಊರ ಹೊರಗಿನ ಕೆರೆ. ತೋಟದ ಭಾವಿಗಳಿಗೆ ಹೋಗುತ್ತಿದ್ದವರು ಈಗ ಮನೆಯ ಮುಂದೇ ಒಗೆದುಕೊಳ್ಳತೊಡಗಿದ್ದಾರೆ. ಬಸ್‌ಸ್ಟ್ಯಾಂಡಿನಲ್ಲಿಯಷ್ಟೇ ಅಲ್ಲದೆ. ಮುಖ್ಯ ರಸ್ತೆಯ ಗುಂಟ ಆರಂಭವಾಗಿದ್ದ ನಾಲ್ಕೈದು ಚಹದಂಗಡಿಗಳವರು ಕಪ್ಪು ಬಸಿ ತೊಳೆದು ನೀರನ್ನು ರಸ್ತೆಗೇ ಬಿಡುತ್ತಾರೆ. ಸಾರ್ವಜನಿಕ ನಳಗಳಲ್ಲಿ ನೀರಿನ ಚೆಲ್ಲಾಟ ಯಾವಾಗಲೂ ಹೆಚ್ಚೇ. ಹೀಗಾಗಿ ರಸ್ತೆಗಳ ಗುಂಟ ನೀರು ಸತತವಾಗಿ ಹರಿಯತೊಡಗಿತು. ಹೇಗೂ ನೀರು ಹರಿಯುತ್ತದಲ್ಲ ಎಂದುಕೊಂಡು ಮೊದಲು ಇಂಗು ಬಚ್ಚಲಗಳಿದ್ದ ಮನೆಯವರು ಸಹ ಬಚ್ಚಲ ನೀರನ್ನು ರಸ್ತೆಗೇ ಬಿಟ್ಟರು. ಇದೆಲ್ಲದರ ಒಟ್ಟು ಪರಿಣಾಮ ಈ ರಜ್ಜು. ಇದನ್ನು ತಡೆಯಲು ಪಂಚಾಯತಿಯವರಿಗೆ ಸಾಧ್ಯವಾಗಿರಲಿಲ್ಲ. ಯಾರಿಗೆಂದು ಹೇಳಬೇಕು?

ಇದಕ್ಕೆ ಒಂದೇ ಉಪಾಯವೆಂದರೆ, ನೀರು ನಿಲ್ಲದಂತೆ ಸರಿಯಾಗಿ ಹರಿದು ಹೋಗಲು ಗಟಾರ ಮಾಡಿಸಬೇಕು. ಆದರೆ ಅದಕ್ಕೆ ಬೇಕಾದ ಹಣ ಇಲ್ಲ. ಹಾಗೆ ನೋಡಿದರೆ. ಊರಲ್ಲಿ ಬೇಕಾದಷ್ಟು ಭಾವಿ ಇರುವಾಗ ನಳದ ಅವಶ್ಯಕತೆಯೇ ಇರಲಿಲ್ಲ. ಈಗೆ ಐದಾರು ವರ್ಷಗಳ ಹಿಂದೆ ಪಂಚಾಯತಿಯದೊಂದು ನ್ಯಾಯ; ನಡೆದು ಮೂರು ನಾಲ್ಕು ವರ್ಷ ಪಂಚಾಯತಿಯ ಎಲ್ಲ ಕೆಲಸಗಳೂ ಬಂದಾಗಿದ್ದವು. ಹೀಗಾಗಿ ಖರ್ಚಾಗದೆ ಇಂತಿಷ್ಟು ಹಣ ಕೂಡಿಬಿತ್ತು. ಅದೇ ಹೊತ್ತಿಗೆ ಊರಿನ ಅಳಿಯರೊಬ್ಬರು ಜಿಲ್ಲೆಯ ಗ್ರಾಮೀಣ ನೀರು ಸರಬರಾಜು ಯೋಜನೆಯ

## ತಪ್ಪುಜಾಗ

ಒಸುನಾದ ಡ್ಯೂಕ್ ಕೈದಿಗಳಿಂದ ತುಂಬಿದ ಹಡಗೊಂದನು ನಿರೀಕ್ಷಿಸುತ್ತ ಹೋದರು. ನಿನಗೆ ಈ ಶಿಕ್ಷೆ ಅದೇಕೆ ಸಿಕ್ಕಿತು! ಎಂದು ಪ್ರತಿಯೊಬ್ಬ ಕೈದಿಯನ್ನು ಕೇಳಿದರವರು.

ಉತ್ತರವಾಗಿ ಪ್ರತಿಯೊಬ್ಬನೂ ತಾನು ನಿರ್ದೋಷಿಯೆಂದೂ ತಪ್ಪಾಗಿ ಈ ಶಿಕ್ಷೆ ಕೊಡಲಾಯಿತೆಂದೂ ಹೇಳುತ್ತಿದ್ದ.

ಆದರೆ ಒಬ್ಬ ಮಾತ್ರ ಹೀಗೆಂದ- ನನಗೆ ಶಿಕ್ಷೆ ಸರಿಯಾಗಿಯೇ ಸಿಕ್ಕಿತು. ಹಣದ ಅಡಚಣೆಯಿಂದ ನಾನು ಕಳವು ಮಾಡಿ ಶಿಕ್ಷೆಗೀಡಾದೆ.

ಡ್ಯೂಕ್ ಈ ಎಲ್ಲ ನಿರ್ದೋಷಿಗಳ ನಡುವೆ ದೋಷಿಯಾದ ನೀನೊಬ್ಬ ಇರುವುದು ಸರಿಯಲ್ಲ ಎಂದು ಅವನನ್ನು ಬಿಡುಗಡೆ ಮಾಡಿದರು.

**ಸವ್ಯಸಾಚಿ**

ಅಧಿಕಾರಿಗಳಾಗಿ ಬಂದರು. ಅವರು ಒತ್ತಾಯ ಮಾಡಿ ಈ ಯೋಜನೆಯನ್ನು ಮಂಜೂರು ಮಾಡಿದರು. ಪರಿಣಾಮವಾಗಿ ಈಗ ಊರಿನ ತುಂಬ ಆಡಾಡಲು ಬರದಷ್ಟು ರಜ್ಜು, ಗುಂಗಾಡುಗಳ ಕಾಟ. ನಳದ ಯೋಜನೆಗೂ ಗಟಾರದ ಯೋಜನೆಗೂ ಸರಕಾರಿ ಇಲಾಖೆಗಳಲ್ಲಿ ಸಂಬಂಧವಿಲ್ಲ. ನಳದ ಯೋಜನೆ ಅನಿವಾರ್ಯ ಸೇವೆಗಳಿಗೆ ಸಂಬಂಧಿಸಿದ್ದು ಗಟಾರದ ಯೋಜನೆ ಹೊಟ್ಟೆ ತುಂಬಿದವರಿಗೆ.

ಹಳೆಯ ಚಾವಡಿ ಈಗ ಗುರುತು ಸಿಗದಷ್ಟು ಬದಲಾಗಿದೆ. ಪಂಚಾಯತಿ ಆಫೀಸ ಕುರ್ಚಿ–ಮೇಜುಗಳು ಬಂದಿವೆ. ಅದನ್ನು ದಾಟಿ ಮುಂದಕ್ಕೆ ಬಂದರೆ ಅದರ ಬೆನ್ನಿಗೆ ಹತ್ತಿಯೇ ಹಾಳು ಬಿದ್ದ ಮಲ್ಲಿಕಾರ್ಜುನ ದೇವರ ಗುಡಿ ಬರಬೇಕಾಗಿತ್ತು. ಆದರೆ ಅದರ ಜಾಗದಲ್ಲಿ ಈಗ ಕಾಂಕ್ರೀಟಿನ ಎರಡಂತಸ್ತಿನ ಹೊಸ ಕಟ್ಟಡ ಎದ್ದಿದೆ. ಅದು ಅಕ್ಕನ ಬಳಗದ ಕಟ್ಟಡ. ಮಲ್ಲಿಕಾರ್ಜುನ ಗುಡಿಯ ಈಶ್ವರಲಿಂಗವನ್ನು ಒಳಗೇ ಇಟ್ಟು ಅದರ ಜೊತೆಗೆ ಅಕ್ಕಮಹಾದೇವಿಯ ಮೂರ್ತಿಯೊಂದನ್ನು ನಿಲ್ಲಿಸಿದ್ದಾರೆ. ಇಲ್ಲಿ ಈಗ ಮುಂಜಾನೆ ಬಾಲವಾಡಿಯ ಶಾಲೆ ನಡೆಯುತ್ತದೆ; ಮಧ್ಯಾಹ್ನ ಹೆಣ್ಣು ಮಕ್ಕಳ ಹೊಲಿಗೆಯ ಕ್ಲಾಸು ಇತ್ಯಾದಿ.

ಇದನ್ನು ದಾಟಿದ ಕೂಡಲೆ ಎದುರಿಗೆ ಬೇವಿನ ಮರ ಮತ್ತು ಅದರ ಕಟ್ಟೆ ಕಾಣಬೇಕು. ಆದರೆ ಓಸ್ತೆಯ ಉದ್ದಗಲಕ್ಕೂ ತುಂಬಿದ ರಜ್ಜನಲ್ಲಿ ಪ್ಯಾಂಟಿನ ತೋಳುಗಳನ್ನು ಮೇಲಕ್ಕೆ ಎತ್ತಿ ಹಿಡಿದುಕೊಂಡು, ಹೆಜ್ಜೆ ಇಡಲು ಸ್ವಲ್ಪಾದರೂ ಗಟ್ಟಿಯಾಗಿರಬಹುದಾದ ಜಾಗೆಗಳನ್ನು ಹುಡುಕುತ್ತ ಕೆಲಸಲ ಜಿಗಿಯುತ್ತ, ಕೆಲ ಸಲ ಒಂದು ಕಾಲನ್ನು ಊರಿ ಇನ್ನೊಂದನ್ನು ಎಲ್ಲಿಡಬೇಕೆಂದು ಯೋಚಿಸುತ್ತ, ಜೋಲಿ ಸಂಬಾಳಿಸಲು ಕಸರತ್ತು ಮಾಡುವ ಭರಾಟೆಯಲ್ಲಿ ಆ ಮರದ ಕಡೆಗೆ ಲಕ್ಷ್ಯವೇ ಹೋಗಿರಲಿಲ್ಲ. ಒಮ್ಮೆಲೆ ಕವಲುದಾರಿಗೆ ಬಂದಾಗ ನೋಡಿದರೆ ಅಲ್ಲಿ ಬೇವಿನಮರವೂ ಇಲ್ಲ, ಕಟ್ಟೆಯೂ ಇಲ್ಲ. ಮೊದಲು ಕಟ್ಟೆ ಇದ್ದ ಜಾಗದಲ್ಲಿ ಈಗ ಒಂದು ಸಾರ್ವಜನಿಕ ನಳ ಮಾತ್ರ ಇದೆ.

ಬಹಳ ದಿನಗಳಿಂದಲೂ ಆ ಮರವನ್ನು ಆ ಕೂಡುದಾರಿಯಲ್ಲಿ ನೋಡುತ್ತ ಬಂದಿದ್ದ ನನ್ನ ಕಣ್ಣು–ಮನಸುಗಳಿಗೆ ಆ ದೃಶ್ಯ ಒಂದು ಬಗೆಯ ಅಭ್ಯಾಸವಾಗಿ ಬಿಟ್ಟಿತ್ತು. ಆ ಮರವನ್ನು ಎಚ್ಚರದಿಂದ ಗಮನಿಸಿ ನೋಡದಿದ್ದರೂ ಅದು ಅಲ್ಲಿರುವವರೆಗೆ ಎಲ್ಲಾ ಸರಿಯಾಗಿಯೇ ಇದೆ ಎಂಬ ಭಾವನೆ ಇತ್ತು. ಆ ಬೇವಿನಮರ ಮತ್ತು ಕೂಡುದಾರಿಗಳ ನಡುವೆ ನನ್ನ ಮನಸ್ಸು ಒಂದಕ್ಕೊಂದು ಎಂಥ ಸಂಬಂಧವನ್ನು ಬೆಸೆದು -ಬಿಟ್ಟಿತ್ತೆಂದರೆ, ಈಗ ಮರವಿಲ್ಲದ ಕೂಡುದಾರಿಯನ್ನು ಒಪ್ಪಲಿಕ್ಕೆ ಅದು ಸಿದ್ಧವಾಗಲಿಲ್ಲ. ಈ ಹಿಂದೆ ಊರಿಗೆ ವಿದ್ಯುತ್ ಬಂದಾಗ ಟೊಂಗೆಗಳನ್ನು ಕಳೆದುಕೊಂಡು ಮರ ವಿರೂಪವಾಗಿ ನೋಡಿದಾಗಲೆಲ್ಲ ಕಣ್ಣಿಗೆ ಅಳುಕುತ್ತಿತ್ತು. ಆದರೂ ಅದು ಇನ್ನೂ ಅಲ್ಲಿ ಇತ್ತೆಂಬ ಸಂಗತಿಯಿಂದಾಗಿಯೋ ಏನೋ, ಒಮ್ಮೆಲೆ ಇಷ್ಟು ಭಣಭಣ ಅನಿಸಿರಲಿಲ್ಲ. ಆ ಮರಕ್ಕೆ ಕ್ರಮೇಣ ಒದಗಿದ ಅವಸ್ಥಾಂತರಗಳು ದೀರ್ಘ ಕಾಲಾವಧಿಯಲ್ಲಿ ಹಂಚಿಹೋಗಿರಬಹುದಾದ್ದರಿಂದ, ಅದನ್ನೆಲ್ಲ ನೋಡುತ್ತ ಬಂದಿದ್ದ ಊರಿನ ಜನರಿಗೆ ಆ ಮರವಿಲ್ಲದ್ದು ಒಂದು ವಿಶೇಷವೆಂದೂ ಬಹುಶಃ ಅನಿಸಿರಲಿಕ್ಕಿಲ್ಲ. ಆದರೆ ಅನೇಕ ವರ್ಷಗಳ ನಂತರ ಒಮ್ಮಿಂದೊಮ್ಮೆಲೆ ಅದು ಇಲ್ಲದುದನ್ನು ನೋಡಿದ ನನಗೆ ನನ್ನ ಸುತ್ತಲಿನ ನೆಲ, ಆ ಕೂಡುದಾರಿ, ಅಲ್ಲಿಂದ ಕವಲೊಡೆದು ಬಲಕ್ಕೆ ತಿರುಗುವ ನಮ್ಮ ಮನೆಯ ಹಾದಿ, ಹುಟ್ಟಿ ಬೆಳೆದ–ಮನೆ ಎಲ್ಲಾ ಅಪರಿಚಿತವೆನಿಸಿಬಿಟ್ಟಿದ್ದವು.

ಅಲ್ಲಿದ್ದ ಬೇವಿನಮರಕ್ಕೆ ಏನಾಯಿತೆಂದು ವಿಚಾರಿಸಿದೆ. ನಳ ಬಂತಲ್ಲ, ಆಗ ಆಯಕಟ್ಟಿನ ಸ್ಥಳವೆಂದು ಒಂದು ಸಾರ್ವಜನಿಕ ನಳವನ್ನು ಆ ಬೇವಿನಮರದ ಕಟ್ಟೆಯ ಮುಂದೆಯೇ ಹಾಕಿದರು. ನೀರಿನ ಬಳಕೆಯಿಂದಾಗಿ ಈಗ ಆಗಿರುವಂತೆ ಸುತ್ತಲೂ ನೀರು ನಿಲ್ಲತೊಡಗಿ ರಜ್ಜಾಯಿತು. ಬಹಳ ದಿನಗಳ ಹಿಂದಿನ ಬೇವಿನಮರದ ಕಟ್ಟೆ ನೀರಿನಲ್ಲಿ ನೆನೆದು ಕುಸಿದು ಬಿತ್ತು. ಬೇವಿನ ಮರದ ಬಸಯ್ಯ ಆ ಕಟ್ಟೆಯ ಕಲ್ಲುಗಳನ್ನೆಲ್ಲ ಹೊರಿಸಿಕೊಂಡು ಹೋದ. ಈಗ ಗುರುಬಸಮ್ಮನೂ ಸತ್ತಿದ್ದಳು. ಆದ್ದರಿಂದ ಮನೆಗೆ ಅವನೇ ಯಜಮಾನ. ಕಲ್ಲುಗಳನ್ನು ಮಾರಿಕೊಂಡ. ಇಲ್ಲಿಯವರೆಗೆ ಬೊಡ್ಡೆಯ ಸುತ್ತಲೂ ಆಧಾರವಾಗಿದ್ದ ಕಟ್ಟೆಯ ಸಹಾಯದಿಂದ ಬದ್ರವಾಗಿ ನಿಂತಿದ್ದ ಬೇವಿನ ಮರಕ್ಕೆ ಈಗ ಆಧಾರ ತಪ್ಪಿದಂತಾಯಿತು. ಅದರ ದೊಡ್ಡ ದೊಡ್ಡ ಬೇರುಗಳು ಹೊರಗೇ ಕಾಣತೊಡಗಿದವು. ಇದರಿಂದಾಗಿ ಮರ ಯಾವಾಗ ಉರುಳಿಕೊಂಡು ಬೀಳುತ್ತದೋ ಎನ್ನುವಂತಾಯಿತು. ಸುತ್ತಲಿನ ಮನೆಯವರು ಮರ ತಮ್ಮ ಮನೆಯ ಮೇಲೆ ಉರುಳಿದರೆ ಏನು ಗತಿಯೆಂದು ತಕರಾರು ಮಾಡಿದರು. ಓಣಿಯಲ್ಲಿ ಜನ ಅಡ್ಡಾಡುವಾಗ, ಹುಡುಗರು ಆಡುವಾಗ ಮರ ಬಿದ್ದುಬಿಟ್ಟರೆ ಹೇಗೆಂದು ಓಣಿಯ ಹಿರಿಯರಿಗೂ ಆತಂಕವಾಯಿತು. ಮರವನ್ನು ಕಡಿಸಿ ಬಿಡಲು ಪಂಚಾಯತಿಯವರು ಬಸಯ್ಯನಿಗೆ ತಾಕೀತು ಮಾಡಿದರು. ಹಿಂದೆ ವಿದ್ಯುತ್ ಬಂದಾಗ ಕಡಿದಿದ್ದ ಗಿಡದ ಕೆಲ ಭಾಗಗಳನ್ನು ಮಾರಿ ಸವಿಗಂಡಿದ್ದ ಬಸಯ್ಯ ಕಡಿದು ಒಯ್ಯುವ ಕರಾರಿನ ಮೇಲೆ ಗಿಡವನ್ನೇ ಮಾರಿಕೊಂಡು ಬಿಟ್ಟ. ಹೀಗೆ ಬೇವಿನಮರದ ಕಥೆ ಮುಗಿದಿತ್ತು. ಕಟ್ಟೆಯ ಮೇಲಿದ್ದ ಮುಕ್ಕ ಬಸವಣ್ಣ ಈಗ ಮಲ್ಲಿಕಾರ್ಜುನ ದೇವರ ಗುಡಿ ಸೇರಿದ್ದ.

ಹಿಂದೆ ನಾವು ಆಡುತ್ತಿದ್ದ ಜಾಗದಲ್ಲಿ ಈಗ ಬರಿ ರಜ್ಜು, ನೀರು. ಗೌಡರ ಓಣಿಯ ಇಳುಕಲದಿಂದ ಹರಿದು ಬರುವ ನೀರೂ, ನಮ್ಮ ಓಣಿಯ ಮೂಲಕ ಬಂದ ನೀರೂ ಅದೇ ಕೂಡುದಾರಿಗೆ ಬಂದು ಸೇರಿ ಅಲ್ಲೊಂದು ಸಂಗಮವೇ ಏರ್ಪಟ್ಟಿತ್ತು. ನಾವು ಆಡುತ್ತಿದ್ದ ಜಾಗೆಯ ಗುರುತೂ ಉಳಿದಿರಲಿಲ್ಲ. ಈಗ ಓಣಿಯ ಸಣ್ಣ ಹುಡುಗರು ಎಲ್ಲಿ ಆಟವಾಡಿಕೊಳ್ಳುತ್ತಾರೊ ಎಂದು ಅಶ್ಚರ್ಯವಾಯಿತು.

ಈ ಸಂಗಮವನ್ನು ತಲುಪಿದ ಮೇಲೆ ನೀರಲ್ಲಿ ಕಾಲಿಡದಂತೆ ನಡೆಯುವ, ಜಿಗಿಯುವ ಪ್ರಯತ್ನಗಳೆಲ್ಲ ವ್ಯರ್ಥವೆಂದು ಖಾತ್ರಿಯಾಯಿತು. ಸರಳವಾಗಿ ನೀರಲ್ಲಿ ನಡೆದುಕೊಂಡೇ ಮನೆಗೆ ಹೋದೆ.

ಆದರೆ ಊರು ಬಿಡುವವರೆಗೂ ಈಗ ಇಲ್ಲದ ಆ ಬೇವಿನಮರ ವಿಚಿತ್ರವಾಗಿ ಮನಸ್ಸನ್ನು ಮುತ್ತಿಕೊಂಡು ಬಿಟ್ಟಿತ್ತು. ●

# ಹಬ್ಬದ ದಿನಗಳಲ್ಲಿ ಅತ್ಯುತ್ತಮವಾದ ಉಡುಗೊರೆಯನ್ನು ಕೊಳ್ಳಿರಿ! ಜೊತೆಗೆ ನಿಮ್ಮ ಹಣದ ಉಳಿತಾಯವನ್ನೂ ಸಾಧಿಸಿರಿ!

ಕಾರ್ಪೊರೇಷನ್ ಬ್ಯಾಂಕಿನ
ಪ್ಲಾಟಿನಮ್ ಜ್ಯುಬಿಲಿ
ಕ್ಯಾಷ್ ಸರ್ಟಿಫಿಕೇಟುಗಳು
ನಿಮಗೆ ತ್ರಿವಿಧ ಸವಲತ್ತುಗಳನ್ನು ನೀಡುತ್ತವೆ.




★ ನಿಮ್ಮ ಠೇವಣಿಯು ವಾ. ಶೇ. 10 ರಂತೆ ಬಡ್ಡಿಯನ್ನು ಗಳಿಸುವುದು

★ ಬಹುಮಾನ ಕೂಪನು ಒಂದನ್ನು ನೀವು ಪಡೆಯುವಿರಿ

★ ನಗದು ಬಹುಮಾನವಾಗಿ ರೂ. 1 ಲಕ್ಷ ಹಾಗೂ 2605 ಇತರ ಬಹುಮಾನಗಳನ್ನೂ ನೀವು ಪಡೆಯಬಹುದಾಗಿದೆ

ಹೆಚ್ಚಿನ ವಿವರಗಳಿಗೆ ಸಮೀಪದಲ್ಲಿರುವ ನಮ್ಮ ಶಾಖೆಯನ್ನು ಸಂದರ್ಶಿಸಿರಿ.

## ಕಾರ್ಪೊರೇಷನ್ ಬ್ಯಾಂಕ್ ಲಿಮಿಟೆಡ್



— ಸ್ನೇಹ ಸೌಹಾರ್ದ ನಮ್ಮ ವಿಶಿಷ್ಟ ಪರಂಪರೆ

ರಿಜಿಸ್ಟರ್ಡ್ ಕಛೇರಿ: ಉಡುಪಿ    ಆಡಳಿತ ಕಛೇರಿ: ಮಂಗಳೂರು.

ಚೆಯರ್‌ಮೇನ್: ಎಸ್. ಎನ್. ಪೈ



# ಪ್ರಸಂಗ

ದು. ನಿಂ. ಬೆಳಗಲಿ

**ಹೊರಗೆ ಹೊರಡಲು ಬಾಗಿಲು ತೆರೆಯಬೇಕೆನ್ನುವದರಲ್ಲಿ.... ಅದು ತಾನೇ ಮುಂದೂಡಿ ಬಂದಿದ್ದು, ಕತ್ತಲಲ್ಲಿ ಮತ್ತೆ ಒಂದು ಬಗೆಯ ಭೀತಿ ಆವರಿಸುತ್ತದೆ. ಕಂಪಿಸುತ್ತಾಳೆ. ನಾಲಗೆ ಕಟ್ಟಿ ಹೋಗುತ್ತದೆ.**







ಪ್ರದೇಶದ ಪೋಜಣೆಯನ್ನು ತಾಯಿ ಮಾಡಿದ್ದ ಅರಿವಿದೆ. ಕಿವಿಯ ಮುಂಬದಿಗಿಳಿದ ಕಿರುಮುಂಗುರುಳಿನ ಉಯ್ಯಾಲೆಯನ್ನು ಕಾಣುವಂತೆ ಆಕೆ ಬೇಕೆಂತಲೇ ತೂಗಿಸಿದ್ದಾಳೆ. ಎದೆಯ ಎತ್ತರವನ್ನೂ ತಾಯಿ ಅಳೆದಿರಬೇಕು. ಕಂಠಕವನ್ನೂ ತಿಳಿದಿರಬೇಕು. ತಾಯಿಯ ಕಣ್ಣು ಆಕೆಯ ತುಟಿಯ ರಂಗಿನಷ್ಟೇ ರಕ್ತ ತುಂಬಿಕೊಂಡರೂ, ಅದಕ್ಕೆ ಆಕೆ ಅಸಡ್ಡೆ ಮಾಡಿದ್ದಾಳೆ.

ರವಿವಾರದ ಬಿಡುವಿನಲ್ಲಿಯೂ ಯಾವುದೋ ಮಿಲ್ ಏಜಂಟನ ಜತೆ ಚರ್ಚಿಸುತ್ತ ಮೊಗಸಾಲೆಯಲ್ಲಿ ಕುಳಿತ ತಂದೆಯ ಕಕ್ಕರದ ದೃಷ್ಟಿ ಕಾಣದಿದ್ದರೂ, ಆತನ ಅಸಹನೆಯ ಕುದುರೆಯ ಹೇಕರಿಕೆಯ ಧ್ವನಿಯನ್ನು ಚೆನ್ನಾಗಿ ಆಲಿಸಿದ್ದಾಳೆ. ಆದರೂ ಆಕೆ ಎದೆಯನ್ನು ಗಟ್ಟಿ ಮಾಡಿಕೊಳ್ಳುತ್ತಲಿದ್ದಾಳೆ.

ಇಲ್ಲಿ ಅವಳ ಕಾಲಿಗೆ ಬಲವಿಲ್ಲ. ಸ್ಥಿರವಾಗಿ ನಿಲ್ಲಲಾರಳು. ಒಂದು ಬಗೆ ... ಕಂಪನ, ಇನ್ನೂ ನಡುಕು. ಗಟ್ಟಿಯಾಗಲು ಸಾಹಸಪಡುತ್ತಾಳೆ. ಉಕ್ಕಾಗಿ ಪರಿವರ್ತಿಸಲು ಬಯಸುತ್ತಾಳೆ. ತಾಯಿ, ತಂದೆ, ಅಣ್ಣ, ಸ್ವಾಮಿ, ಸರೋಜಾ ಇವರ ಉಪದೇಶಗಳು, ಭೈರಿಗೆ ಹಾಕಿ ತಲೆ ಕೊರೆದಂತಹ ನೀತಿ ಮಾತುಗಳು ಏನೂ ಮಾಡಲಾರವು. ಮುಂದಿಟ್ಟ ಹೆಜ್ಜೆಯನ್ನು ಹಿಂದಿಟ್ಟು ಹೇಡಿಯಾಗಬಾರದೆಂದು ದಿಟ್ಟತನವನ್ನೂ, ಧೈರ್ಯವನ್ನೂ, ತನ್ನ ಎದೆಗೆ ಬಾಚಿ ತಬ್ಬಿಕೊಳುತ್ತಾಳೆ. ಯಾರ ಹಿತವಚನಗಳೂ ನೀತಿ ಮಾತುಗಳೂ ಅವಳನ್ನು ಏನೂ ಮಾಡಲಾರವು. ಅವೆಲ್ಲ ನೈತಿಕ ಬಲವಿಲ್ಲದ ಸಾಬೂನು ನೀರಿನ ಗುಳ್ಳೆಗಳು ಅಷ್ಟೇ.

ಇಂದು ಸಾಯಂಕಾಲದ ಆಕೆಯ ಅಲಂಕಾರವನ್ನು ಖಂಡೇ ತಾಯಿ ಮುಖ ಸಿಂಡರಿಸಿದ್ದನ್ನು ಅರಿತಿದ್ದಾಳೆ, ಆಕೆಯ ಟೊಂಕದ ಕೆಳಗೆ ಸರಿದ ಸೀರೆಯಿಂದ, ಬೆನ್ನಿಗೇರಿದ ಚೋಳಿಯ ಮಧ್ಯದ ವಿಸ್ತೃತ ಬಯಲು

ಮೊಗಸಾಲೆ ದಾಟಿ ಹೋಗುತ್ತಿರುವಲ್ಲಿ "ಪ್ರಿಯಾ ಈ ಕಪ್ ಒಳಗಿಡು" ಎಂದು ತಂದೆ ಆಳಿಗೆ ಹೇಳಿದಂತೆ ಆಕೆಗೆ ಆಜ್ಞಾಪಿಸಿದಾಗ ಹಿರಿಯರೆಂದು ಅವರ ಸಿಡುಕಿಗೆ ಗೌರವ ಕೊಟ್ಟು ಅವರು ಚಹ ಕುಡಿದಿಟ್ಟ ಖಾಲಿ ಕಪ್ಪು ಒಳಗಿಟ್ಟು ಬರುತ್ತಾಳೆ.

"ಮಿಸ್ ಯುನಿವರ್ಸ್‌ನ ತಯಾರಿ ಎಲ್ಲಿಗೋ ಕಾಣತೆತಲ್ಲ" ಎಂದ ನಡುಮನೆಯಲ್ಲಿದ್ದ ಅಣ್ಣ ಉಮೇಶನ ತಾತ್ಸಾರದ ಮಾತಿನ ಅರ್ಥವೂ ಆಗದಿಲ್ಲ. ಏನು ಮಾಡಬೇಕು? ಸಂತಾಪವಾಗುತ್ತದೆ. ಸೈರಿಸಿಕೊಳ್ಳುತ್ತಾಳೆ.

"ನಾ ಉಡಬೇಕೆಂದ ಸಿಲ್ಕ್ ಜಾರ್ಜೆಟ್ ಈಕೆನ ಉಟ್ಟುಬಿಟ್ಟಳಲ್ಲ..." ಎಂದು ತಂಗಿ ತನ್ನ ಕೋಣೆಯ ಬಾಗಿಲಲ್ಲಿ ನಿಂತು ಮೂಗು ಕುಣಿಸಿದ್ದನ್ನು ಅರಿತಿದ್ದಾಳೆ. ತನ್ನ ಸಡಗರದ ಪ್ರಸಂಗದಲ್ಲಿ ಇವರೆಲ್ಲ ಅಡ ಬಂದ ಬೇಲಿಗಳಂತೆ ಕಾಣುತ್ತಾರೆ.

ತಂದೆಯ ಸ್ವರಮೇಳಕ್ಕೆ ಪಲ್ಲವಿ ನುಡಿಯುತ್ತಿರುವ

ತಾಯಿಯ ಹಿತೋಪದೇಶವಾಗಲಿ, ಶಿವಗಿರಿಸ್ವಾಮಿಗಳ ನೈತಿಕ ಪ್ರವಚನವಾಗಲಿ, ತಾಯಿಯ ಗೆಳತಿ ಸರೋಜಳ ಬುದ್ಧಿ ಮಾತಾಗಲಿ ಪ್ರಿಯಾಳಿಗೆ ಏನೂ ಮಾಡಲಾರವು. ಆಕೆಯೂ ಅದೇ ಕೇಳುತ್ತಾಳೆ. ತನಗೆ ನೀತಿ ಉಪದೇಶ ಮಾಡಲಿಕ್ಕೆ ಇವರಾರು? ಇರಲಿ, ಇವರೆಲ್ಲ ಒಂದೊಂದು ರೀತಿಯಿಂದ ಸಂಬಂಧಿಸಿದವರಾದರೂ, ಹೀಗೆ ಹಿತನುಡಿ ಹೇಳುವುದಕ್ಕೆ ಇವರಲ್ಲಿ ಅದಾವ ನೈತಿಕ ಬಲವಿದೆ?

ಮನೆಯಲ್ಲಿ ಎಲ್ಲರಿಗೂ ಪ್ರಿಯಾಳ ಬಗೆಗೆ ಸಂದೇಹ. ಆಕೆ ಸ್ವೇಚ್ಛಾ ವಿಹಾರಿಯೆಂದು ಆರೋಪ. ಅದಕ್ಕನುಗುಣವಾಗಿಯೇ ಪ್ರಿಯಾ ಅತ್ತಿತ್ತ ಸುತ್ತುವುದು ಅಸತ್ಯ ಸಂಗತಿಯಾಗಿರಲಿಲ್ಲ.

ಪ್ರಿಯಾಳ ಸೌಂದರ್ಯ ಮತ್ತು ವ್ಯಕ್ತಿತ್ವದ ಬಗೆಗೆ ಹಲವರು ಹೊಗಳುತ್ತಾರೆ. ಕೆಲವರು ಅಸಹನೆಯಿಂದ ಮಾತ್ಸರ್ಯಪಡುತ್ತಲೂ ಇದ್ದಾರೆ. ಅದಕ್ಕೆ ಆಕೆ ಗಮನವಿತ್ತಿಲ್ಲ. ಇಂಥ ಹೊಟ್ಟೆಕಿಚ್ಚಿನವರು ತನ್ನ ಉಂಗುಟಕ್ಕೆ ಸಮವೆಂದೂ, ಭಾವಿಸಿದ್ದಾಳೆ. ಅದು ಹೋಗಲಿ.

ಈಗ ಆಕೆ ಹೊರಟಿದ್ದು, ಮತ್ತೆಲ್ಲಿಯೂ ಅಲ್ಲ, ಪ್ರಭುವಿನ ಕೋಣೆಗೆ. ಅನೇಕ ಸಲ ಆತ ಸಂಕೇತಿಸಿ, ಯಾರಿಲ್ಲದ ಸಮಯ ಬಾಯಿ ಬಿಚ್ಚಿ, ಕೈ ಹಿಡಿದು ವಿನೀತನಾಗಿ ಕೇಳಿಕೊಂಡಿದ್ದಾನೆ ಪ್ರಾರ್ಥಿಸಿದ್ದಾನೆ. ಈ ಹಿಂದೆ ಅದೆಷ್ಟೋ ಸಾರೆ ಅತ್ತ ಹೋಗಬೇಕೆಂದರೆ ಆಕೆಗೆ ಎದೆಯಾಗಿರಲಿಲ್ಲ. ಒಂದೆರಡು ಸಲ ಆತನ ಕೋಣೆಯ ಬಾಗಿಲವರೆಗೂ ಹೋಗಿ ಬಂದಿದ್ದಾಳೆ. ಅರಿಯದ ಯಾವುದೋ ಒಂದು ರೀತಿಯ ಭಯ, ಕಾಣದ ಕಂಪನ. ಅದು ಆಕೆಯ ಹೇಡಿತನವೇನಲ್ಲ. ಹಿಂಸರಿತವೂ ಅಲ್ಲ. ಒಂದು ಬಗೆಯ ಹೆಣ್ಣಿನ ಸ್ವಾಭಾವಿಕ ಸಂಕೋಚ ಅಷ್ಟೆ.

ಈ ದಿನ ಮಾತ್ರ ಆತನಿಗೆ ಮಾತು ಕೊಟ್ಟು ಹೋಗುತ್ತಲಿದ್ದಾಳೆ. ಪ್ರಿಯಾ ಅಲ್ಲಿಯೇ ಹೋಗುತ್ತಾಳೆಂದು ಯಾರಿಗೂ ತಿಳಿದಿಲ್ಲ. ಆದರೂ ಆಕೆ ನಿತ್ಯ ಸಾಯಂಕಾಲ ಹೊರಟರೆ, ಮನೆಯಲ್ಲಿ ಎಲ್ಲರೂ ಕೆಕ್ಕರಿಸಿ ನೋಡುತ್ತಾರೆ. ಅವರಿಗೆಲ್ಲ ಸಂದೇಹ, ಅದೇನೋ ಶಂಕೆ. ಆಕೆಯ ಸ್ವಾತಂತ್ರ್ಯ, ದಿಟ್ಟ ನಡತೆ, ಅತಿ ಅಲಂಕಾರ, ಇವೆಲ್ಲ ಎಲ್ಲರ ಸಂಶಯ ದೃಷ್ಟಿಗೆ ಶೋಧನೆಯ ಮೋಟರ್ ಹಚ್ಚಿರಬೇಕು.

ಪ್ರಿಯಾಳಿಗೆ ಪ್ರಭುವಿನ ಪರಿಚಯ ಅಣ್ಣನಿಂದಲೇ ಆದದ್ದು. ಆತ ಅಣ್ಣನ ಸ್ನೇಹಿತ. ಅಂಗಡಿಯ ವ್ಯವಹಾರಕ್ಕಾಗಿ ದಿನನಿತ್ಯ ಬ್ಯಾಂಕಿನ ಸಂಬಂಧ ವಿರಿಸಿದ ಅಣ್ಣ ಅಲ್ಲಿನ ತನ್ನ ಸ್ನೇಹಿತ ಪ್ರಭುವನ್ನು ಮನೆಗೆ ಕರೆ ತರುತ್ತಿರುತ್ತಾನೆ. ಪ್ರಭುವಿನ ಮಧುರ ನಡೆ ನುಡಿ, ಮುಕ್ತ ಮನಸ್ಸು, ವಿನೋದೀ ಸ್ವಭಾವ, ಶಿಸ್ತಿನ ವೇಷ ಭೂಷಣ ಇವುಗಳಿಗೆ ಮಾರು ಹೋದಂತೆ ಹಗಲು ರಾತ್ರಿ ಆತ ಆಕೆಯನ್ನೇ ಸುತ್ತಿಕೊಂಡಿರುತ್ತಾನೆ. ಸ್ನಾನ, ಅಲಂಕಾರ, ಊಟ, ಪಾಠ, ಆಟ, ನಿದ್ರೆ, ಕನಸಿನಲ್ಲಿಯೂ ಸದಾ ಕಾಲ ಅವನೇ ಆವರಿಸಿರುತ್ತಾನೆ.

ಅವನ ಬಗ್ಗೆ ಒಂದು ಬಗೆಯ ಒಲವು, ಆಕರ್ಷಣೆ ಪ್ರಿಯಾಳ ಈ ಭಾವನೆಗೆ ಇನ್ನೂ ನೂರೆಂಟು ಹೆಸರಿಡಬಹುದಾದಷ್ಟು ಅದು ವ್ಯಾಪಕವಾಗಿದೆ. ಇದೆಲ್ಲ ಯಾಕೆ ಎಂದು ಪ್ರಿಯಾ ಪ್ರಶ್ನಿಸಿಕೊಳ್ಳುತ್ತಾಳೆ. ಆತನ ತಾರುಣ್ಯದ ಆಕರ್ಷಣೆ ಆಕೆಯ ತರುಣ ಮನಸ್ಸಿಗೆ ಆಪ್ಯಾಯಮಾನವಾಗಿರುತ್ತದೆ. ಹಿತವಾದಂತೆ ಅನ್ನಿಸುತ್ತಿರುತ್ತದೆ. ಅದೇ ಒಮ್ಮೆ ಪ್ರಭುವಿನತ್ತ ಹೋಗಿ ಬರಬೇಕೆಂಬ ಬಲವಾದ ಆಶಯ,

ಹೋಗಿ ಬಂದರೇನು ಹಾನಿ, ಎಂಬ ಅನಿಸಿಕೆ. ಹಾಗೆ ಭವಿತವ್ಯದ ಒಳಿತು ಕೆಡುಕಿನ ಬಗೆಗೆ ಚಿಂತಿಸಲು ಮನಸು ಒಪ್ಪದು. ಒಮ್ಮೆ ಹೋಗಿ ಬಂದರೆ ಮುಗಿಲೇನು ಹರಿದುಕೊಂಡು ಬೀಳುವುದಿಲ್ಲ. ಮಹಾಪ್ರಳಯವೂ ಆಗದು. ಭೂಕಂಪನವೂ ಸಾಧ್ಯವಿಲ್ಲ. ಕಂಡರಿಯದ ಸುಖಕ್ಕೆ ಏಕೆ ಎರವಾಗಬೇಕು?

ಪ್ರಿಯಾ ಅದನ್ನೇ ಚಿಂತಿಸುತ್ತಾಳೆ. ಈಗ ತನ್ನ ಕೋಣೆಯ ಒಳ ಬಾಗಿಲು ಸೇರಿ, ತರ್ಕ ವಿತರ್ಕಗಳ ವಿಚಾರಗಳ ಆಳಕ್ಕೆ ಪಾತಾಳ ಗಡ ಹಾಕಿ ಅವರಿವರ ಪ್ರಸಂಗಗಳನ್ನು ಬಿಡಿಯಾಗಿ, ಇಡಿಯಾಗಿ ಮೇಲೆತ್ತಲು ಪ್ರಯತ್ನಿಸುತ್ತಾಳೆ.

ತಾಯಿಯೇನು? ಅಕ್ಕನ ಬಳಗವಾಯಿತು, ಮಹಿಳಾ ಸಮಾಜವಾಯಿತು,ಸಭೆ ಸಮಾರಂಭಗಳಾದವು. ಸ್ವಾಮಿಗಳ ಸತ್ಕಾರವಾಯಿತು. ಆ ಸಂಘ, ಈ ಸಂಸ್ಥೆಯ ಸಹಾಯ ನಿಧಿ ಸಂಗ್ರಹ ಕಾರ್ಯವಾಯಿತು ಎಂದು ದಿನದ ಹೆಚ್ಚಿನ ವೇಳೆ ಹೊರಗೇ ಕಳೆಯುತ್ತಾಳೆ. ಪರಪುರುಷರ ಜತೆಗೆ ಯಾವ ಸಂಕೋಚವಿಲ್ಲದೆ ವ್ಯವಹರಿಸುತ್ತಾಳೆ. ಶಿವಗಿರಿ ಸ್ವಾಮಿಗಳ ಪವಿತ್ರ ಪಾದ ಮನೆಯಲ್ಲಿ ಬಿದ್ದರಂತೂ ಮುಗಿದು ಹೋಯಿತು! ಆಕೆಗೆ ಬಾಹ್ಯ ಜಗತ್ತೇ ಶೂನ್ಯ. ಅದೇನು ಭಕ್ತಿಯೋ, ಆರಾಧನೆಯೋ, ಪೂಜೆಯೋ, ಪುನಸ್ಕಾರವೋ, ಸಿನೇಮಾದಲ್ಲಿ ಪರಿವರ್ತಿತವಾಗುವ ದೃಶ್ಯಗಳಂತೆ ಒಮ್ಮೆಲೇ ಜಾಗೃತವಾಗುತ್ತವೆ. ಸಹ್ಯವಾಗದಷ್ಟು. ಸದಾ ಕಾಲ ಸ್ವಾಮಿಗಳನ್ನನುಸರಿಸಿಯೇ ಇರುತ್ತಾಳೆ.

ತಂದೆ? ಇಂದು ಬೆಂಗಳೂರು, ಮದ್ರಾಸ್, ನಾಳೆ ಮುಂಬಯಿ, ಅಹ್ಮದಾಬಾದ್ ಎಂದು ಸುತ್ತಾಡುವರು. ಪ್ರಖ್ಯಾತ ಬಟ್ಟೆ ಗಿರಣಿಗಳ ಏಜನಿಯುಳ್ಳ "ಪ್ರಣವ ಕ್ಲಾಥ್ ಎಂಪೋರಿಯಂ" ಮಾಲೀಕನಾದ ಆತನ ವ್ಯವಹಾರದಲ್ಲಿ ತುರಿಸಿಕೊಳ್ಳುವುದಕ್ಕೂ ಪುರುಸೊತ್ತಿಲ್ಲ. ಆತ ತನ್ನ ಕೋಣೆಯಲ್ಲಿ ವಿದೇಶಿ ಮದ್ಯ ಸೇವಿಸುತ್ತಿರುತ್ತಾನೆ. ಅತ್ತ ಮುಂಬಯಿ ಬೆಂಗಳೂರುಗಳಲ್ಲಿ ದೊಡ್ಡ ದೊಡ್ಡ ಹೋಟೆಲುಗಳ ವಿವಿಧ ರುಚಿಗಳನ್ನೂ ನೋಡುತ್ತಾನೆಂದು ಪ್ರತೀತಿ. ಸರೋಜಳ ಜತೆಯ ಆತನ ಸಂಬಂಧವಂತೂ ಸಾರ್ವಜನಿಕ ರಹಸ್ಯವಾಗಿ ಹೋಗಿದೆ.

ಇತ್ತ ತಾಯಿ ಅಕ್ಕಮಹಾದೇವಿಯ ವೇಷ ಧರಿಸಿ ಲಿಂಗ ಪೂಜೆ ಮಾಡಿಕೊಳ್ಳುತ್ತಿರುತ್ತಾಳೆ. ಎಲ್ಲವೂ ತೋರಿಕೆ, ಕೇವಲ 'ಶೋ'! ಡಂಭಾಚಾರದ ಭಕ್ತಿ. ತಂದೆಯೂ ಹಾಗೇ. ಸ್ವಾಮಿಗಳೆದುರು ತನ್ನ ದೇಹದ ಮಿತಿಗೂ ಮೀರಿ ದೀರ್ಘ ದಂಡ ನಮಸ್ಕಾರ ಹಾಕುತ್ತಾನೆ. ಗೂಟಕ್ಕೆ ಇಳಿ ಬಿಟ್ಟ ಲಿಂಗವಿಲ್ಲದ ಕರಡಿಗೆಯನ್ನು ನೆಪಕ್ಕೆ ಕೊರಳಿಗೆ ಸಿಕ್ಕಿಸಿಕೊಳ್ಳುತ್ತಾನೆ. ಆ ನಿರ್ಜೀವ ಬೆಳಿ ಕರಡಿಗೆಗೇನು? ಗೋಡೆಯ ಗೂಟವೂ ಅಷ್ಟೆ. ತಂದೆಯ ಕೊರಳೂ ಅಷ್ಟೆ.

ಅಣ್ಣ ಉಮೇಶ ಅವಿವಾಹಿತ. ಅಂಗಡಿಗೆ ಬಟ್ಟೆ ಖರೀದಿಗಾಗಿ ಬರುವ ತರುಣಿಯರ ಅಂಗಾಂಗಗಳನ್ನೆಲ್ಲ ಕಣ್ಣು ಮೀಟರ್ ಪಟ್ಟಿಯಿಂದ ಅಳತೆ ಮಾಡುತ್ತಾನೆ. ಹಲ ಕೆಲವು ತರುಣಿಯರಿಗೆ ಪುಕ್ಕಟೆಯಾಗಿ ಸೀರೆ–ಜಂಪರ್ ಪೀಸುಗಳನ್ನು ಕೊಟ್ಟ ವಿಷಯವನ್ನು ಇತರ ನೌಕರರು ಗುಸು ಗುಸು ಮಾತನಾಡುತ್ತಾರೆ. ಆತ ಊರಲ್ಲಿಯ ಯಾವ ಇಸ್ಲಾಮಿಯಾ , ಮರಾಠಾ ಖಾನಾವಳಿಗಳನ್ನೂ ಬಿಟ್ಟಿಲ್ಲ. ಮನೆಯವರ ಕಣ್ಣು ತಪ್ಪಿಸಲು ಪರ ಊರಿನಲ್ಲಿಯೂ , ಸ್ನೇಹಿತರಲ್ಲಿಯೂ ಕುಡಿಯುತ್ತಾನಂತೆ. ಶಿವಗಿರಿ ಸ್ವಾಮಿಗಳು ಮನೆಗೆ ಬಂದಾಗ ವಿಭೂತಿ ಧರಿಸಿ ಆತನೂ ಮಹಾ ಶರಣನ ಸೋಗು ಹಾಕುತ್ತಾನೆ ಅಷ್ಟೆ.

ಬಸವ ತತ್ತ್ವ ಗಳಹುವ ಸ್ವಾಮಿಗಳ ಸ್ವರೂಪವಂತೂ ಮುಗಿದೇ ಹೋಗಿದೆ. ಬೆ ವಿಕೊಂಡು ಹೊಟ್ಟೆ ಹೊರೆಯುವ ಬಹುರೂಪಗಾರರು ಪ್ರಾಮಾಣಿಕವಾಗಿ ವೇಷ ಧರಿಸುತ್ತಾರೆ. ಈ ಸ್ವಾಮಿಗಳಂತೂ ಶಿಷ್ಯ ಕೋಟಿಯ ಕಣ್ಣಲ್ಲಿ ಮಣ್ಣು ತೂರಿ ವೇಷ ಧರಿಸಿದ್ದಾರೆ. ಭಕ್ತರು ಇನ್ನೂ ಕುರಿಗಳೇ ಇದ್ದಾಗ ಅವರಿಗೆ ಅದಾವ ಭಯ? ಸ್ವಾಮಿಗಳ ಸಿಲ್ಕ್, ಟ್ಯಾರೀನ್, ನೈಲಾನ್ ಕಾವಿ ಬಟ್ಟೆಯೇನು? ಶೃಂಗಾರ ಸಾಧನಗಳೇನು? ಈಗಿನ ಹಿಪ್ಪಿ ಕೂದಲಂತೂ ಅವರಿಗೆ ತುಂಬ ಉಪಕಾರ ಮಾಡಿವೆ. 'ಕಾಯಕವೇ ಕೈಲಾಸ' ಎಂದು ಹೇಳಿ, ಬಿಟ್ಟಿ ತಿಂದ ತೇಜಸ್ಸಿನಿಂದೊಡಗೂಡಿದ ಲಕ ಲಕಿಸುವ ಪಿಂಡ, ಗಮಗಮ ಪರಿಮಳ ಸದಾ ಕಾಲ ಅವರಿಂದ ಹರಿದು ಬರುತ್ತಲಿರುತ್ತದೆ. ಪದವೀಧರರಾಗಿ ಸನ್ಯಾಸಾಶ್ರಮ ಸ್ವೀಕರಿಸಿದ ಅವರ ಮಾತಿನಲ್ಲಿ ಒಮ್ಮೊಮ್ಮೆ ಶರಣರು ಮರೆಯಾದಂತೆ ಸೂಚ್ಯವಾಗಿ ವಾತ್ಸಾಯನ ಕಲ್ಯಾಣ ಮಲ್ಲ ಹೇಗೂ ಬಂದಿರಲಿ, ಹ್ಯಾವಲಾಕ್ ಎಲ್ಲಿಸ್ ಕೂಡ ತಪ್ಪುವುದಿಲ್ಲ. ಹೆಂಗಸರ ತಂಡದೆದುರು ಎಲುಬಿಲ್ಲದ ನಾಲಗೆಯನ್ನು ಅಭಿನಯದೊಂದಿಗೆ ಮುಕ್ತವಾಗಿ ಅಲ್ಲಾಡಿಸುವುದಕ್ಕೆ ಅವರಿಗೆ ತುಂಬ ಅಭಿಮಾನ.

ಇವರೆಲ್ಲರನ್ನು ಕಂಡು ಥೂಕರಿಸುವಷ್ಟು ಸಂತಾಪವಾಗುತ್ತದೆ ಪ್ರಿಯಾಳಿಗೆ. ಎಲ್ಲರೂ ಆಚಾರ ಹೇಳಿ ಬದನೆ ಕಾಯಿ ತಿನ್ನುವವರೇ. ಎಲ್ಲರೂ ಆಕೆಗೆ ಹಿತೋಪದೇಶ ಮಾಡುವವರು. ತಮ್ಮ ಸುಖಾನುಭವಗಳಿಗೆ ಅವರಿಗೆಲ್ಲ ಮುಕ್ತ ಸ್ವಾತಂತ್ರ್ಯವಿದ್ದಾಗ ತಾನೇ ಆದರ್ಶದ ಬೆನ್ನು ಹತ್ತಿ ಸುಖ ಸಂತೋಷಗಳಿಗೆ ವಂಚಿತಳಾಗಬೇಕೆ? ಅದೂ ಹೋಗಲಿ, ಆಕೆಯ ವಿವಾಹದ ಬಗೆಗೆ ಚಿಂತಿಸಲು ಅದಾರಿಗೆ ಬಿಡುವಿದೆ? ಮೂವತ್ತು ಮೀರಿದ ಉಮೇಶನೇ ಇನ್ನೂ ಗಣೇಶ ವ್ರತ ಹಿಡಿದಾಗ ಇಪ್ಪತ್ತು ದಾಟಿದ ತನ್ನದೇನು ?

ಅನ್ಯ ಜಾತಿಯ ಪ್ರಭುವಿನ ಜತೆ ವಿವಾಹ ಅಸಾಧ್ಯ, ಎನ್ನುವುದಕ್ಕಿಂತ ಆತನನ್ನು ವರಿಸಲು ಪ್ರಿಯಾಳಿಗೂ ಮನಸ್ಸಿಲ್ಲ. ಬರೀ ಆತನ ಸಾಮಿಪ್ಯದ ಆತುರವಷ್ಟೆ. ಆಕೆಯ ಹಸಿವು, ತೃಪ್ತಿ ಪಡಬೇಕಾಗಿದೆ, ಅದಕ್ಕೇ ಹಾತೊರೆಯುತ್ತಿರುವುದು.

ಪ್ರಿಯಾಳ ಪ್ರಭುವಿನ ಸನ್ನೆ–ಸಂಕೇತ, ಮಾತು ಕಥೆ ಇವುಗಳನ್ನು ಅಪ್ಪಿ ತಪ್ಪಿ ಮನೆಯವರು ಒಂದೆರಡು ಸಲ ಗಮನಿಸಿರಬೇಕು. ಆದರೆ ಬಾಯಿ ಬಿಟ್ಟು ಯಾರೂ ಹೇಳುವಂತಿರಲಿಲ್ಲ. ಮನೆಗೆ ಬಾರದಂತೆ ಈಗ ಪ್ರಭುವನ್ನು ಪ್ರತಿಬಂಧಿಸಬೇಕೆಂದರೆ, ಉಮೇಶನಿಗೆ ಧೈರ್ಯವಿಲ್ಲ.

ಬಹಳ ದಿನಗಳಿಂದಲೇ ಪ್ರಿಯಾಳ ಬಯಕೆ, ಪ್ರಭುವಿನ ಕೋಣೆಗೆ ಹೋಗಬೇಕು. ಪ್ರಸಂಗದ ಮುಕ್ತ ವಾತಾವರಣದ ಸ್ವಾತಂತ್ರ್ಯ ಪಡೆಯಬೇಕು. ಆತನ ಸೆರೆಯಲ್ಲಿ ಕಠಿಣ ಶಿಕ್ಷೆ ಹೊಂದಿದ ಬಂದಿಯಾಗಬೇಕು, ಆ ಹಿಡಿತದಲ್ಲಿ ವಿಲಿ ವಿಲಿ ಒದ್ದಾಡಬೇಕು. ಹಿಂಡಿ ಹಿಪ್ಪೆಯಾಗಬೇಕು. ಈ ತೆರನಾಗಿ ಮನಸ್ಸು ಎಂದಿನಿಂದಲೋ ಕಾತರಿಸುತ್ತಲಿದೆ. ಹಾಗೆ ಹಂಬಲಿಸುತ್ತಲಿದೆ.

ಬೆಳಿಗ್ಗೆ ಮನೆಗೆ ಬಂದ ಪ್ರಭು ಪ್ರಿಯಾಳಿಗೆ ಸಿಗುವಂತೆ ಒಂದು ಕಾಗದದ ತುಂಡಿನ ಮೇಲೆ, ಸಂಜೆ ಏಳು ಗಂಟೆಗೆ ತನ್ನ ಕೋಣೆಗೆ ಬರಲೇಬೇಕೆಂಬಂತೆ ಸಂದೇಶ ಬರೆದಿದ್ದು, ಅದಕ್ಕೆ ಸಂವಾದಿಯಾಗಿ, ಪ್ರಿಯಾ ಒಪ್ಪಿಗೆಯ ಕಣ್ ಸನ್ನೆ ಮಾಡಿ ತಿಳಿಸಿರುತ್ತಾಳೆ. ಎದ್ದು ಹೋಗುವಾಗ ಆತ ಸೋಫಾದ ಬಳಿ ಯಾರಿಗೂ ಕಾಣಿಸದಂತೆ ಬೀಗದ ಕೈ ಬಿಟ್ಟು ಹೋಗಿರುತ್ತಾನೆ.

'ಊರಿಗೆ ಹೋಗುವುದಾಗಿ ಉಮೇಶನಿಗೆ ನೆಪ ಹೇಳಿದ್ದೇನೆ. ಮುಂಚಿತ ಬೀಗ ತೆಗೆದು ನನ್ನ ಕೋಣೆಯಲ್ಲಿ ನಿರೀಕ್ಷಿಸು. ನಾನು ಏಳೂವರೆ ಗಂಟೆಗೆ ಬರುತ್ತೇನೆ. ಎಂಬ ವಿವರವನು ಮತ್ತೆ ಮತ್ತೆ ಪ್ರಿಯಾ ಮೆಲುಕಾಡಿಸುತ್ತಾಳೆ. ಆತನ ಸುಲಭ ಉಪಾಯವನ್ನು ಮೆಚ್ಚಿರುತ್ತಾಳೆ.

ಇನ್ನೊಮ್ಮೆ ತರ್ಕದ ಹುಳುವೊಂದು ಪ್ರಿಯಾಳ ಮಿದುಳನ್ನು ಮೇಯುತ್ತದೆ. ವಿವಾಹ ಪೂರ್ವದಲ್ಲಿ ಇದು ಸರಿಯೆ? ಮನೆತನದ ಅಂತಸ್ತು, ಗೌರವ? ತನ್ನ ಮಾನ–ಮರ್ಯಾದೆ? ಆತನನ್ನು ವಿವಾಹವಾಗುವುದಂತೂ ಸಾಧ್ಯವಿಲ್ಲವಲ್ಲ.

ಸರಿಯೋ, ತಪ್ಪೋ ಆಕೆ ಹಾಗೆ ಗೊಂದಲಿಸಲು ಹೋಗುವುದಿಲ್ಲ. ಆ ತರ್ಕ ವಿತರ್ಕದ ಕಗ್ಗಂಟಿನಲ್ಲಿ ಸಿಕ್ಕಲಾರಳು. ಈಗ ತಾಯಿ, ತಂದೆ, ಅಣ್ಣ, ಸರೋಜ ದೇವತಾ ಸ್ವರೂಪವೆಂದು ಹೇಳುವ ಸ್ವಾಮಿಗಳು ನಡೆನುಡಿಗಳಿಗೆ ಯಾವ ಪ್ರಾಮಾಣಿಕತೆ, ಮರ್ಯಾದೆಗಳ ಸೀಮೆಗಳಿವೆ? ಅವರೇ ಎಲ್ಲವನ್ನೂ ಹಾಳು ಮಾಡಿ ಹತ್ತಿ ಬತ್ತಿದಾಗ ತನ್ನದೇನು? ಹೊಟ್ಟೆ ಹಸಿದಾಗ ಅನ್ನ ಬಯಸಿದಂತೆ ಅದೇನು ಅಪರಾಧ?

ಮುಂದೆ ಯಾವ ಮಹಾನುಭಾವ ಲಗ್ನವಾಗುವನೋ ಏನೋ! ಆ ಚಿಂತೆ ಈಗೇಕೆ? ಗೆಳತಿಯರಾದ ಯಶೋದಾ, ಅರುಣಾ, ಕಾಮಾಕ್ಷಿ ಹಾದಿಗೆಟ್ಟು ಹೋಗಿದ್ದರೂ, ಅನಂತರ ಯಾವವೋ ಬಕರಾಗಳನ್ನು ಹಿಡಿದು "ನೀವೇ ಪ್ರಾಣಪ್ರಿಯರು, ದೇವರು, ನಮ್ಮ ದೈವದಲ್ಲಿ ನೀವೇ ಇದ್ದಿರಿ!" ಎಂದು ತಮ್ಮ ಗಂಡಂದಿರ ಮುಖದ ಮೇಲೆ ಕೈ ಎಳೆದು ನಾಟಕವಾಡಿ ಈಗ ದಾಂಪತ್ಯ ಜೀವನ ನಡೆಸುತ್ತಿಲ್ಲವೆ ? ಹಾಗೇ ತನ್ನದೂ ಯಾಕಾಗಬಾರದು?

ಈಗ ಪ್ರಭುವಿನ ಸಾಮೀಪ್ಯ ಸುಖ ಪಡೆದರೇನು ಅಪರಾಧ ? ಒದಗಿಬರಲಿರುವ ಸುಖಕ್ಕೆ ಯಾಕೆ ವಿಮುಖಳಾಗಬೇಕು ? ಇಂದಿನ ಪ್ರಸಂಗವನ್ನು ಯಾಕೆ ಕಳೆದುಕೊಳಬೇಕು? ಸರಿ, ಪ್ರಿಯಾಳ ಕಾಲು ಇನ್ನೂ ಸ್ಥಿರವಾಗುತ್ತಿವೆ, ಉಕ್ಕಿನ ಕಾಲುಗಳಾಗುತ್ತಿವೆ.

ಎಡೆಗೆ ಮೇಲ್ಕೆತ್ತಿ ಸಮಯ ನೋಡಿಕೊಳ್ಳುತ್ತಾಳೆ. ಆರೂವರೆ ಗಂಟೆ. ಅವಸರಪಡುತ್ತಾಳೆ. ಕಂಪೌಂಡ ಗೇಟಿಗೆ ಬರುತ್ತಾಳೆ. ಉಮೇಶ ಅಲ್ಲಿ ಮೊದಲೇ ಬಂದು ನಿಂತಿರುತ್ತಾನೆ. ಕಂಗಿಯನ್ನು ಇಂದಿನ ಅವಸರದಿಂದ ಆತನಿಗೇನೂ ಭಯವಿಲ್ಲ. ಪ್ರಭು ಊರಿಗೆ ಹೋದ ಸಮಾಚಾರ ಆತನಿಗೆ ಗೊತ್ತು. ಅದೇ ಧೈರ್ಯದಿಂದ ಆಕೆ ಹೆಜ್ಜೆಯ ಗತಿಯನ್ನು ತೀವ್ರಗೊಳಿಸುತ್ತಾಳೆ.

ಸಂದಿ ಗೊಂದಿ ಹಾಯ್ದು ಇನ್ನೂ ಇಕ್ಕಟ್ಟಾದ ರಸ್ತೆಗೆ ಬರುತ್ತಾಳೆ. ಅತ್ತಿತ್ತ ಕಣ್ಣು ಬೆನ್ನಟ್ಟಿದ ಅನುಭವವಾದರೂ ಕಾಲಲ್ಲಿ ಸ್ಥಿರತೆ ತಂದುಕೊಳುತ್ತಲಿರುತ್ತಾಳೆ. ಆದರೂ ಒಂದು ಬಗೆಯ ಕಂಪನ ನಡುಕ. ಇನ್ನೊಂದು ಬಗೆಯ ಹೆಣ್ಣಿನ ಸ್ವಾಭಾವಿಕ ಸಂಕೋಚ ! ಸುತ್ತು ಕಣ್ಣು ಹಾಯಿಸುವ ಸಾಹಸ ಮಾಡದೆ ಕೈ ಕಂಪಿಸುತ್ತಲಿದ್ದರೂ ಬೀಗ ತೆಗೆಯುತ್ತಾಳೆ.

ಬಾಗಿಲು ಮುಚ್ಚಿ ಒಳ ಬಂದಾಗ ಒಂದಿಷ್ಟು ಜೀವನದಲ್ಲಿ ಜೀವ ಬಂದಿರುತ್ತದೆ. ಆದರೂ ಒಂದು ಬಗೆಯ ಅಳುಕು. ಅಪರಾಧಿ ಮನೋವೃತ್ತಿ. ಎಂಥ ಸಾಹಸಿಯಾದರೇನು ? ಆದರೂ ಆಕೆ ಹೆಣ್ಣು. ತನ್ನ ಎದೆ ಒತ್ತಿಕೊಂಡು ಒಂದು ಸ್ಥಿಮಿತಕ್ಕೆ ಬರುತ್ತಾಳೆ, ಪ್ರಭುವಿನ ಕಾಟ ಮೇಲೆ ಕುಳಿತು ಮೈ ಚಳಿಯಾದಂತಿರುವ ನಡುಕನ್ನು ತಡೆಗಟ್ಟಲು ಪ್ರಯತ್ನಿಸುತ್ತಾಳೆ. ಆ ಚಳಿಯಲ್ಲಿಯೇ ಬೆವರಿದ್ದು, ಸೆರಗಿನಿಂದ ಮುಖ ಒರೆಸಿಕೊಳುತ್ತಾಳೆ.

ಸಮಯ ನೋಡಿಕೊಳ್ಳುತ್ತಾಳೆ. ಇನ್ನೂ ಏಳು. ಒಂದರ್ಧ ಗಂಟೆಯಲ್ಲಿ ಪ್ರಭು ಬರುತ್ತಾನೆ. ಅಲ್ಲಿಯವರೆಗೆ ಒಳಚಿಲುಕ ಹಾಕಿಕೊಳ್ಳಲೇ ಎಂಬ ಒಂದು ಬಗೆಯ ಭೀತಿ. ಹೆಣ್ಣಿನ ಸ್ವಾಭಾವಿಕ ಭಯ.

ಕೋಣೆಯ ತುಂಬೆಲ್ಲ ಗುನುಗು ವಾಸನೆ. ಮಬ್ಬುಗತ್ತಲನ್ನು ಕಳೆಯಲು ಸ್ವಿಚ್ ಹಾಕಿ ದೀಪ ಉರಿಸುತ್ತಾಳೆ. ನಗರಸಭೆಯ ಕಸದಗುಂಡಿಯಂತೆ ಕೊಳೆ ತುಂಬಿದ ಕೋಣೆ. ಸಿಗರೇಟ್ ತುಂಡುಗಳು, ಖಾಲಿ ಬಾಟಲಿಗಳು ಮೂಲೆಯಲ್ಲಿ ಬಿದ್ದುಕೊಂಡಿರುತ್ತವೆ. ಕಸದಲ್ಲಿ ತತ್ತಿಯ ಕವಚಗಳು ಸೇರಿ ಗುಡ್ಡೆಯಾಗಿದೆ. ಬೆಡ್‌ಶೀಟ್, ಕವರ್ ಬಣ್ಣ ಕಳೆದುಕೊಂಡು ಎಣ್ಣೆ ಎಣ್ಣೆಯಾಗಿವೆ. ಇನ್ನೊಂದು ಬಗೆಯ ಹೊಲಸು ವಾಸನೆ. ಅದನ್ನೆಲ್ಲ ಕಂಡು ವಾಕರಿಸಿದ ಪ್ರಿಯಾ 'ಪ್ರಭು ಹೊರಗಷ್ಟೇ ಶಿಸ್ತುಗಾರನೇ?' ಎಂದು ಒಂದು ಕ್ಷಣ ಮೂಗು ಮುಚ್ಚಿಕೊಳುತ್ತಾಳೆ.

ಇನ್ನೊಂದು ಕ್ಷಣದಲ್ಲಿ ಅದೆಲ್ಲ ಮರೆತು ತನ್ನ ಮನಸ್ಸು ಕೆದಕಿ ನೋಡುತ್ತಾಳೆ ಚಾಳಿಸುತ್ತಾಳೆ. ಸೋಸುತ್ತಾಳೆ. ಈ ಸಿನೇಮಾ, ಪುಸ್ತಕ, ಪತ್ರಿಕೆ, ಸಮಾಜ ನೆರೆ ಹೊರೆ, ಮನೆ ಎಲ್ಲವೂ ಸೇರಿಕೊಂಡು 'ಪ್ರಿಯಾ ನೀನು ನಿನ್ನ ಮನ ಬಂದಂತೆ ನಡೆ ನೀನೂ ಸ್ವತಂತ್ರಳು. ಸಿಕ್ಕಲಿರುವ ಸುಖಕ್ಕೆ ಎರವಾಗ ಬೇಡ. ಎಂಬ ಸಂದೇಶವನ್ನೇ ಸಾರುತ್ತಿರುವಂತೆ ಕಾಣುತ್ತಿವೆ. ಮತ್ತೊಂದು ಕ್ಷಣದಲ್ಲಿ ಮೈ ಮೇಲಿನ ಬಟ್ಟೆಗಳನ್ನೆಲ್ಲ ಕಿತ್ತು ಹಾಕುವಂತೆ ಹುಚ್ಚುತನದ ಉದ್ರೇಕ ಪ್ರಿಯಾಳಲ್ಲಿ!

ಪ್ರಭು ಇನ್ನೂ ಯಾಕೆ ಬರಲಾರ?

ಯಾಕೆ? ಯಾಕೆ?

ತತ್‌ಕ್ಷಣದಲ್ಲಿ ಅವನನ್ನು ಹಿಂಡಿ ಹಿಪ್ಪಿ ಮಾಡುವ ಆತುರತೆ, ಅದೇ ಕಾತರತೆ. ಪತ್ರಿಕೆ ಹರಿದು ಅಂಟಿಸಿದ ನಗ್ನ ಚಿತ್ರಗಳು ಗೋಡೆಯ ಮೇಲೆ. ಆ ಮುಕ್ತ ಅಂಗ ಸೌಷ್ಠವ ಕಾಣುತ್ತಿರುವಂತೆ, ಉದ್ರಿಕ್ತ ಪ್ರಿಯಾಳ ಎಡಗೈ ಸೆರಗನ್ನು ಬಿಚ್ಚಿ ಹಿಡಿದಿತ್ತು, ಕಿಟಕಿಯಿಂದ ಹೊರ ನೋಡುತ್ತಾಳೆ. ತರುಣ ದಂಪತಿ ಜೊತೆಯೊಂದು ಕಿಲಕಿಲಿಸುತ್ತ ರಸ್ತೆಯಲ್ಲಿ ಹೋಗುತ್ತಿರುತ್ತದೆ. ಎಷ್ಟು ಮುಕ್ತ, ಎಂಥ ಸ್ವಚ್ಛಂದ ನಗು! ಇನ್ನೂ ದೃಷ್ಟಿಸುತ್ತಾಳೆ. ಮತ್ತೂ ಕುತೂಹಲಿಯಾಗುತ್ತಾಳೆ.

ಇಕ್ಕಟ್ಟಾದ ನಿರ್ಜನ ರಸ್ತೆಯಿಂದು ಗಂಡ ಮೃದುವಾಗಿ ಹೆಂಡತಿಯ ಕೆನ್ನೆ ಸವರಿ, ಆಕೆಯನ್ನು ಮೆತ್ತಗೆ ಸ್ಪರ್ಶಿಸುತ್ತಾನೆ. ಮತ್ತೆ ಕಿಲಕಿಲ ಸದ್ದು ಹರಡಿ ಕೊಳ್ಳುತ್ತದೆ. ಪ್ರಿಯಾ ಅದನ್ನೇ ನಿರೀಕ್ಷಿಸುತ್ತಾಳೆ.

ಎಂಥ ಮೋಹಕ ನಗು ಅವರದು! ಅದರಲ್ಲಿ ಎಂಥ ಪಾವಿತ್ರ್ಯ ತುಂಬಿದೆ! ಅವರ ಒಲುಮೆಯಲ್ಲಿ ಅದೆಂಥ ನೈತಿಕ ಬಲದ ಆಸರೆ ಇದೆ! ಅವರ ಮಧುರ ಪ್ರೀತಿಯ ಅನುಭವದಲ್ಲಿ ಎಂಥ ಮುಕ್ತಮನಸ್ಸು ಚೆಲ್ಲುವರಿದಿದೆ!

ಬೇಡ. ಈ ತರಾತುರಿಯಲ್ಲಿ ಕಳಂಕಿತಳಾಗಬಾರದು. ಈ ಹೊಲಸು ಪ್ರಭುವಿನ ಕ್ಷಣಿಕ ಸಾಹಚರ್ಯ ಬೇಡ. ಇಲ್ಲ, ತನ ಶೀಲವನ್ನೂ, ಪಾವಿತ್ರ್ಯವನ್ನೂ ಕಾಯ್ದುಕೊಳ್ಳಲೇ ಬೇಕು. ತನ್ನ ಭಾವಿ ಗಂಡನ ಕಣ್ಣಿಗೆ ಮಣ್ಣು ಎರಚಿ ಪಾತಿವ್ರತ್ಯದ ನಾಟಕವನ್ನಾಡಿ, ಬಣ್ಣ ಬಳಿದುಕೊಂಡ ಸೀತೆ–ಸಾವಿತ್ರಿಯಾಗಬಾರದು. ಈ ಪ್ರಭುವಿನ ಸಹವಾಸ ಬೇಡ. ಈ ತುಡುಗಿನ ಊಟ ಬೇಡ. ತಾನು ಕೀಳಾಗಬಾರದು. ಕೊಳಚೆಯಲ್ಲಿ ಮುಳುಗಬಾರದು.

ಪ್ರಿಯಾಳ ಮಿದುಳನ್ನು ಮುತ್ತಿದ್ದ ಒಂದು ಬಗೆಯ ಭ್ರಮೆಯು ಮತ್ತು ಇಳಿಯುತ್ತಿರುವಲ್ಲಿ ಆಕೆ ಆಸೆಯಿಂದ ಬಿಡುಗಡೆಯಾಗುತ್ತಿರುವಲ್ಲಿ, ಎಂಥದೋ ಅಲೌಕಿಕ ಆನಂದ ಆಕೆಯ ಎದೆಯಲ್ಲಿ ವ್ಯಾಪಿಸುತ್ತದೆ. ಈಗಿನ ಕ್ಷಣಿಕ ಸುಖಕ್ಕಾಗಿ ಮುಂದಿನ ದೀರ್ಘ ಸಂತೋಷಕ್ಕೆ ಎರವಾಗಬಾರದೆಂದು ನಿರ್ಧರಿಸುತ್ತಾಳೆ.

ಮನೆಗೆ ಮರಳಲು ನಿಂತವಳು ಸ್ವಿಚ್ ಒತ್ತಿ ದೀಪ ಆರಿಸುತ್ತಾಳೆ. ಕೋಣೆಯ ತುಂಬ ದಟ್ಟಾದ ಕತ್ತಲು ಒಂದಿಷ್ಟು ಭಯವಾದಂತೆ ಮತ್ತೆ ದೀಪ ಉರಿಸುತ್ತಾಳೆ. ತುಂಬ ಬೆಳಕು ಚೆಲ್ಲುತ್ತದೆ.

ಈಗ ಆಕೆಯ ಕಾಲಲ್ಲಿ ಕಂಪನವಿಲ್ಲ. ಎದೆಗೊಂಡಿದ್ದಾಳೆ. ನೈತಿಕ ಬಲ ಆಕೆಯಲ್ಲಿ ಉಕ್ಕಿನ ರಸ ಹರಿಸುತ್ತಲಿದೆ. ಗಟ್ಟಿಯಾಗಿದ್ದಾಳೆ. ಮತ್ತೆ ದೀಪ ಆರಿಸುತ್ತಾಳೆ. ಹೊರಗೆ ಹೊರಡಲು ಬಾಗಿಲು ತೆರೆಯ ಬೇಕೆನುವುದರಲ್ಲಿ, ಅದು ತಾನೇ ಮುಂದೂಡಿ ಬಂದಿದ್ದು, ಕತ್ತಲಲ್ಲಿ ಮತ್ತೆ ಒಂದು ಬಗೆಯ ಭೀತಿ ಆವರಿಸುತ್ತದೆ. ಮುಂದೆ ಒದಗಬಹುದಾದಂಥ ಪ್ರಸಂಗ ಸ್ಮರಿಸಿ, ಕೈಕಾಲು ಕಳೆದುಕೊಳ್ಳುತ್ತಾಳೆ, ಕಂಪಿಸುತ್ತಾಳೆ. ನಾಲಗೆ ಕಟ್ಟಿ ಹೋಗುತ್ತದೆ.

ಹೊರಗಿನಿಂದ ಬಂದ ವ್ಯಕ್ತಿ, ಒಂದೂ ಮಾತನಾಡದ ಆಕೆಯನ್ನು ಎತ್ತಿಕೊಂಡು ನೇರ ಕಾಟನತ್ತ ಬರುತ್ತದೆ. ಆತನ ಕೈಯಿಂದ ಬಿಡುಗಡೆಯಾಗಲು ಧಡಪಡಿಸುತ್ತಾಳೆ. ಆತನ ಮುಖ ಪರಚುತ್ತಾಳೆ. ಗಂಟಲಲ್ಲಿ ಧ್ವನಿ ಸಿಕ್ಕಿಹಾಕಿಕೊಂಡಿದೆ. ಆತ ಹಿಡಿತ ಬಿಗಿ ಮಾಡುತ್ತಾನೆ. ಪ್ರಿಯಾ ವಿಲಿವಿಲಿ ಒದ್ದಾಡುತ್ತಾಳೆ. ಆತನ ಉಕ್ಕಿನ ಹಿಡಿತ ಬಲವಾಗುತ್ತದೆ.

ಹೊರಗೆ ರಸ್ತೆಯ ಮೂಲೆಗೆ ನಿಂತು ಗಾಡಿ ಬಿಡಿಸಿದ ಪ್ರಭು ಒಂದು ಕ್ಷಣ ಅವಾಕ್ ಆಗುತ್ತಾನೆ. ತನ್ನ ಕೋಣೆಯ ಬಾಗಿಲು ದೂಡಿಕೊಂಡು ಉಮೇಶ ಒಳಹೊಕ್ಕಿದ್ದನ್ನು ಕಣ್ಣಾರೆ ಕಂಡಿದ್ದಾನೆ! ಇದೇನು? ಹೇಗೆ? ಎಂದು ಗೊಂದಲಿಸುತ್ತಾನೆ. ಈ ಹಿಂದೆ ಉಮೇಶನಿಗೂ ಆ ಕೋಣೆಯ ಒಂದು ಬೀಗದ ಕೈ ಕೊಟ್ಟಿದ್ದು, ತಾನಿಲ್ಲದಾಗ ಉಮೇಶ ಬೇರೆ ಹೆಣ್ಣುಗಳನ್ನು ಅಲ್ಲಿ ಕರೆಯುತ್ತಿರುವುದು ಸ್ಮರಣೆಯಾಗುತ್ತದೆ. ಇಂದೂ ಹೇಳಿರಬೇಕೇನೊ! ಅದೇ ಉಮೇಶನ ಬಾರ್ ಕೂಡ. ತಾನು ಊರಿಗೆ ಹೋಗುವ ನೆಪ ಹೇಳಿದ್ದು ಗೊಂದಲವಾಯಿತೇನೊ!

ಇಂದು ಆ ಪ್ರಸಂಗವನ್ನು ಉಮೇಶ ಹೀಗೆ ಉಪಯೋಗಿಸಬಹುದೆಂದು ಪ್ರಭು ಕಲ್ಪಿಸಿರಲಿಲ್ಲ. ಎಂಥ ವೈಪರಿತ್ಯ! ಅದೆಂಥ ಅನಾಹುತ!!

ಪ್ರಭು ಕೈ ಕೈ ಹಿಸುಕಿಕೊಳುತ್ತಾನೆ. ಆ ಪ್ರಸಂಗದ ಅರಿವಾಗಿ, ಏನೂ ತಿಳಿಯದೆ ಅಸಹಾಯಕನಾದಂತೆ ಮತ್ತೂ ಕೈ ಕೈ ಹಿಸುಕಿಕೊಳ್ಳುತ್ತಾನೆ. ತುಟಿ ಕಚ್ಚಿಕೊಳ್ಳುತ್ತಾನೆ. ●

# ಸಮಾರಂಭ ಸಂಭ್ರಮ

ಅಧ್ಯಾಪಕನಾದ ನನಗೆ ಜುಲಾಯಿ ತಿಂಗಳು ಬಂತೆಂದರೆ ಸಣ್ಣಗೆ ಚಳಿ-ಜ್ವರ ಪ್ರಾರಂಭವಾಗಿ ಬಿಡುತ್ತದೆ. ಅದು ಹವಾಮಾನದ ವೈಪರೀತ್ಯದಿಂದಾಗುವ ಅನಾರೋಗ್ಯವಲ್ಲ. ಹಾಗಾದರೆ ನನ್ನೀ ನಡುಕಕ್ಕೆ ಕಾರಣ?

ಎ. ಎಸ್. ವೇಣುಗೋಪಾಲರಾವ್



ಜುಲಾಯಿ ತಿಂಗಳು ಬಂದಿತೆಂದರೆ ನನಗೆ ಸಣ್ಣಗೆ ಚಳಿ–ಜ್ವರ ಪ್ರಾರಂಭವಾಗುತ್ತದೆ. ಇದು ಆ ತಿಂಗಳಲ್ಲಿ ಸಹಜವಾದ ಹವಾಮಾನದ ವೈಪರೀತ್ಯದಿಂದ ಅಲ್ಲ. ಅನಾಸಿನ್–ಸಾರಿಡಾನ್ ಮಾತ್ರೆಗಳಿಂದ ಮಾಯ ವಾಗುವಂತಹದೂ ಅಲ್ಲ. ಜುಲೈ ತಿಂಗಳು ರೋಮದ ಚಕ್ರಾಧಿಪತಿ ಜೂಲಿಯಸ್ ಸೀಜರನ ನೆನಪಿಗೆ ಇಟ್ಟ ಹೆಸರಂತೆ. ಪಾಂಪೆಯನ್ನು ಕೊಂದು ರಾಜ್ಯ ವನ್ನಲಂಕರಿಸಿ (ಬೆದರಿಸಿ?) "ನಾನೇ ರೋಂ ರಾಜ್ಯ" ಎಂಬಂತೆ ಮೆರೆದ ಆ ಧೀಮಂತನ ನೆನಪಿನಿಂದಲೆ ನನ್ನಂತಹ ಬಡಕಲು–ನರಪೇತಲನಿಗೆ ಭಯವಾಗುವು ದೇನೂ ಅಸಹಜ ಅಲ್ಲ. ಆದುದರಿಂದ ನಾನು ಅವ ನನ್ನು ನೆನೆಯುವ ತಂಟೆಗೆ ಹೋಗುವುದಿಲ್ಲ. ಆದರೂ ನನ್ನ ಮೈನಡುಕಕ್ಕೆ ಕಾರಣವೆಂದರೆ, ಆ ತಿಂಗಳಲ್ಲಿ ಕಾಲೇಜು–ಸ್ಕೂಲುಗಳು ಪ್ರಾರಂಭವಾಗುವುದು! ಹಾಗೆಂದರೆ, ನಾನು ವಿದ್ಯಾರ್ಥಿಗಳನ್ನೂ ಬೆಂಚು ಗಳನ್ನೂ ಎದುರಿಸಲು ಪ್ರಾರಂಭಿಸಬೇಕು ಎಂಬು ದಲ್ಲ ನನ್ನ ಭಯಕ್ಕೆ ಕಾರಣ. ವಾಸ್ತವವಾಗಿ ಅಂತಹ ಭಯದ ನಡುಕ ಇರತಕ್ಕದು ನನ್ನ ಪಾಠ ಕೇಳುವ ವಿದ್ಯಾರ್ಥಿಗಳಿಗೆ- ನನಗಲ್ಲ! ಅಲ್ಲವೆ? ಇನ್ನು ಈ ಅದಲ್ಲ ಇದಲ್ಲ ಎಂಬ ನೇತಿವಾದವನ್ನು ಸಾಕುಮಾಡಿ ನೇರವಾಗಿ, ನನ್ನ ಚಳಿಜ್ವರಕೆ ಕಾರಣವನ್ನು ಹೇಳಿ ಬಿಡುತ್ತೇನೆ. ಜುಲಾಯಿ ತಿಂಗಳಲ್ಲಿ ಸ್ಕೂಲು–ಕಾಲೇಜುಗಳು ಮಾತ್ರವಲ್ಲ, "ವಿದ್ಯಾರ್ಥಿ ಸಂಘ" ಗಳೂ ಪ್ರಾರಂಭವಾಗಿ ಬಿಡುತ್ತವೆ! ಎಂದರೆ ಅವು ಗಳ ಆರಂಭೋತ್ಸವ ಆಗಲೇಬೇಕಷ್ಟೇ? ಎಂದರೆ ಒಬ್ಬ ಉಪನ್ಯಾಸಕ ಬೇಕೇ ಬೇಕಲ್ಲ. ಕನ್ನಡ ಅಧ್ಯಾ ಪಕ ಅದರಲ್ಲೂ ಒಂದೆರಡು ಕತೆ, ಕಾದಂಬರಿ ಬರೆ ದವನಾಗಿದ್ದರೆ, ಅಂತಹ ಒಳ್ಳೆಯ 'ಮಿಕ' ಬೇರೆಲ್ಲಿ ದೊರೆಕೀತು!

ಸರಿ. ಬಂದಿತು ನನ್ನಂತಹವನಿಗೆ ಗ್ರಹಚಾರ. ನಿಮಗೆ ಆಹ್ವಾನವಿತ್ತು ಪತ್ರ ಬರೆದರೆ ನೀವು ಬರೆಯುವ ನಕಾರದ ಉತ್ತರ ಅವರಿಗೆ ಗೊತ್ತು. ಇಲ್ಲದ ತರಗತಿಯ ತರಲೆಯನ್ನೋ ಇನ್ನಾವು ದಾದರೂ ವಿಪರೀತ ಕೆಲಸದ ನೆಪವನ್ನೋ ನೀವು ಒಡ್ಡಿ ತಪ್ಪಿಸಿಕೊಳ್ಳುತ್ತೀರಿ ಎಂಬುದನ್ನು ಕಾರ್ಯ ಕರ್ತರು ಬಲ್ಲರು. ಆದುದರಿಂದ ನಿಮಗೆ ಪತ್ರ ಬರೆವ ಗೋಜಿಗೆ ಅವರು ಹೋಗುವುದೇ ಇಲ್ಲ. ತಾವೇ ಖುದ್ದಾಗಿ ನಿಮ್ಮನ್ನು ಕಾಣಲು ಬರುತ್ತಾರೆ. ನೀವು ತರಗತಿಯಲ್ಲಿ... "ಪಸರಿಪ ಕನ್ನಡಕ್ಕೊಡೆ ಯನೊರ್ವನೆ..." ಎಂದು ಆ...ಕ್ತವಾಗಿ ಪಾಠಕ್ಕೆ ತೊಡಗಿರುತ್ತೀರಿ. ಸೇವಕ ತಲೆ ಕೆರೆಯುತ್ತ ಒಂದು ಚೀಟಿ ತರುತ್ತಾನೆ. ಪ್ರಿನ್ಸಿಪಾಲರು ಹೇಳಿ ಕಳುಹಿಸಿದ್ದಾರೆ ಪುಸ್ತಕ ಕುಕ್ಕಿ... ಜಸ್ಟ್ ಎ. ಮಿನಿಟ್ ಎಂದು ಧಾವಿಸುತ್ತೀರಿ ಪ್ರಿನ್ಸಿಪಾಲರ ಕೊಠಡಿಗೆ. ಹಾಂ, ನಿಮ್ಮ ಎದೆ ಬಡಿತ ಸಕಾರಣ ವಾಗಿದೆ. ಅಲ್ಲಿದ್ದಾರೆ ಒಬ್ಬರು ಕಾರ್ಯಕರ್ತರು. ಇವರು ಇಂಥವರು ಎಂಬ ಪರಿಚಯದ ಮಾತಿನಲ್ಲೇ ಅವರ ಉದ್ದೇಶ ನಿಮಗೆ ತಿಳಿದು ಬಿಡುತ್ತದೆ. "ಸರ್ ಈ ಬುಧವಾರ. ವಿದ್ಯಾರ್ಥಿ ಸಂಘ... ಆರಂಭೋತ್ಸವ..." ಅವರ ಮುಖ ಬೆವರಿರುತ್ತದೆ. ಬಸ್ಸಿನಲ್ಲಿ ಬಂದ ಆಯಾಸ. ಷರಟು, ಬೂಟು, ಮುಟ್ಟಿದರೆ ಧೂಳು ...ವಂತಿದೆ. ನೀವು ಪ್ರಿನ್ಸಿಪಾಲರ ಕಡೆ ತಿರುಗಿ ಹೇಳುತ್ತೀರಿ.."ಸರ್. ಬುಧವಾರ ನನಗೆ ಮೂರು ಕ್ಲಾಸ್..." ತಕ್ಷಣ ಪ್ರಿನ್ಸಿಪಾಲರೆನ್ನುತ್ತಾರೆ. "ಇರಲಿ, ಹೇಗಾದರೂ ಅಡ್ಜಸ್ಟ್ ಮಾಡೋಣ... ಪಾಪ, ಬಹಳ ದೂರ ದಿಂದ ಬಂದಿದ್ದಾರೆ... ಅಲ್ಲದೆ ಇವರು ನನ್ನ ಸ್ಟೂಡೆಂಟ್ ಬೇರೆ (ಅಂತೆ)..." ನಿಮ್ಮ ಬಾಯಿ ಕಟ್ಟುತ್ತದೆ. ಇಂಥ ಪ್ರಸಂಗಗಳಲ್ಲಿ ಪ್ರಿನ್ಸಿಪಾಲರು ತುಂಬ ಧಾರಾಳಿಗಳು. ಅಲ್ಲದಿದ್ದರೆ ಕಾರ್ಯಕರ್ತರು ಅವರಿಗೇ ಗಂಟು ಬಿದ್ದು ಹಿಂಸೆ ಮಾಡುತ್ತಾರೆ ಎಂದು ಬಲ್ಲರು. ಬಹುಶಃ ಈಗಾಗಲೇ ಹಾಗೆ ಅವರನ್ನು ಹಿಂಸಿಸಿ

ಆಗಿವೆ. ಆತನು ಪ್ರೀತಿಯಿಂದ ನಿಮಗೆ ವರ್ಣಿಯಿಸಿ ನಿಮ್ಮನ್ನು ಒಪ್ಪಿಸಿ. "ತಾ ಧನ್ಯ ತಾ ಧನ್ಯ" ಎಂದು ಕಣ್ಣು ಮಿಟುಕಿಸುತ್ತಾರೆ. ಚಾದ ಕಪ್ಪನ್ನೂ ನಿಮ್ಮೆದುರು ತಳಿ ಪ್ಲೀಸ್ ಹ್ಯಾವ್ ಇಟ್ ಎಂದು ನಿಮ್ಮ ಒಣಗಿದ ಗಂಟಲಿಗೆ ನೀರೆರೆಯುತ್ತಾರೆ. ಆ ರೀತಿ ನಿಮಗೆ ಸಂತಾಪ ಸೂಚಿಸುತ್ತಾರೆ.

ಇನ್ನು ಬುಧವಾರ ಯಾವ ಬಸ್ಸಿಗೆ, ಎಷ್ಟು ಹೊತ್ತಿಗೆ ಹೊರಡಬೇಕು ಎಂದು ಕೇಳುತ್ತೀರಿ. ಆದರೆ ಕಾರ್ಯಕರ್ತರಿಗೆ ನಿಮ್ಮಲ್ಲಿ ಅಷ್ಟು ನಂಬಿಕೆ ಇಲ್ಲ. ನೀವು ಯಾವುದಾದರೂ ಕಾರಣದಿಂದ ಅಂದು ಕೈಕೊಡಬಹುದೆಂಬ ಗುಮಾನಿ ಇದ್ದೇ ಇದೆ. ಅವರು ಕಾತರರಾಗಿ ಹೇಳುತ್ತಾರೆ– "ಸರ್, ನಾವೇ ಮಧ್ಯಾಹ್ನ ಒಂದು ಗಂಟೆಗೆ ಬರುತ್ತೇವೆ. ನಿಮ್ಮನ್ನು ಕರೆದೊಯ್ಯುತ್ತೇವೆ. ಸಿದ್ಧವಾಗಿರಿ ಎನ್ನುತ್ತಾರೆ. ನೀವು ಈಗ ಪೂರ್ತಿ ಅವರ ಹಿಡಿತದಲ್ಲಿ ಸಿಕ್ಕುತ್ತೀರಿ.

ಒಮ್ಮೊಮ್ಮೆ ಕಾರ್ಯಕರ್ತರು ಯಾವುದೋ ಕಾರು ತಂದು ನಿಮ್ಮನ್ನು ಕ್ಲಾಸಿನಿಂದ ಸೆಳೆದುಕೊಂಡು ಅದರಲ್ಲಿ ಕೂರಿಸುತ್ತಾರೆ. ಆದರೆ ನೇರವಾಗಿ ಊರಿಗೆ ಹೊರಡುವುದಿಲ್ಲ. ಅವರಿಗೆ ಊಟವಾಗಿಲ್ಲ. ಒಂದು ನಿಮಿಷ ಸರ್, ಎಂದು ಹೋಟೆಲಿಗೆ ನುಗ್ಗುತ್ತಾರೆ. ನಿಮ್ಮದು ಊಟವಾಗಿದೆ, ಆದರೆ ಬೆಳಗ್ಗೆ ಹತ್ತು ಗಂಟೆಗೆ! ನಿಮ್ಮನ್ನು ಊಟಕ್ಕೆ ಕರೆದಾಗ, ಬೇಡಿ ಬೇಡಿ ಆಗಿದೆ ಎನ್ನುತ್ತೀರಿ ಸಂಕೋಚಕ್ಕಾಗಿ, ಒಂದೇ ಒಂದು ಕಪ್ಪು ಕಾಫಿ ಸಾಕು ಎನ್ನುವಿರಿ. ಅಲ್ಲಿಂದ ಪುಸ್ತಕ ಹಾಗೂ ಸ್ಟೇಷನರಿ ಅಂಗಡಿಗೆ, ಬಹುಮಾನದ ಪದಾರ್ಥಗಳನ್ನು ಕೊಳಲು ಇದು ಸಾಮಾನ್ಯವಾಗಿ ಮುಕ್ತಾಯ ಸಮಾರಂಭ ಕಾಲದಲ್ಲಿ, ಸೋಪು ಪೆಟ್ಟಿಗೆ, ಬಾಚಣಿಗೆ, ಇತ್ಯಾದಿಗಳ ಜೊತೆ ಕೆಲವು ಪುಸ್ತಕಗಳನ್ನು ಕಾರ್ಯಕರ್ತರು ಕೊಳುತ್ತಾರೆ. ನೀವು ಪ್ರೀತಿಯಿಂದ ಅವುಗಳನ್ನು ನೇವರಿಸುವಿರಿ. ನಿಮ್ಮ ಯಾವುದಾದರೂ ಕೃತಿ ಅಲ್ಲಿದೆಯೆ ಎಂದು. ನಿಮಗೆ ನಿರಾಶೆ ಖಂಡಿತ ಕಾದಿದೆ. ನಮ್ಮದೂ ಕೃತಿಗಳನ್ನು ಕೊಂಡು ಕೊಳ್ಳಿರಿ ನಾಲ್ಕಾದರೂ ಎಂದು ಹೇಳಿದೆ, (ಅರ್ಧ ಸಂಕೋಚ, ಅರ್ಧ ಆತ್ಮಾಭಿಮಾನ) ನೀವು ಮೌನ ವಹಿಸುತ್ತೀರಿ. ಮುಂದೆ ಅರ್ಧ ಡಜನ್ ಹೂವಿನ ಹಾರಗಳನ್ನು ಕೊಂಡನಂತರ ನಿಮ್ಮ ರಥ ಊರು ಬಿಡುತ್ತದೆ. ಕಿಟಕಿಯಾಚೆ ತಲೆ ಹಾಕಿ, ಹೆಮ್ಮೆಯಿಂದ, ಈಗ ಯಾರಾದರೂ ಪರಿಚಿತರು ನಿಮ್ಮನ್ನು ನೋಡಲಿ ಎಂದು ಬಯಸಿ ಸೋಲುತ್ತೀರಿ. ಸಂಜೆ ಆರರ ಸುಮಾರಿಗೆ ಹಲವಾರು ನಿಲ್ದಾಣಗಳನ್ನು ದಾಟಿ ಕಾರು ಊರು ಸೇರುತ್ತದೆ. ಸಭೆ ಐದು ಗಂಟೆಗೆ ಎಲ್ಲರೂ ಸೇರಿಯಾಗಿದೆ. ಅಲಂಕೃತ ಸಭಾಂಗಣದಲ್ಲಿ ಮೈಕಾಸುರನು ಹೃದಯ ವಿದ್ರಾವಕವಾಗಿ ನಿಮ್ಮನ್ನು ಸ್ವಾಗತಿಸುತ್ತಿದ್ದಾನೆ. ಈ ಕಾರ್ಯಕ್ರಮ ತಡವಾದದ್ದಕ್ಕೆ ನೀವು ಎಳ್ಳಷ್ಟೂ ಕಾರಣವಲ್ಲದಿದ್ದರೂ ಎಲ್ಲರ ರೇಗೂ ನಿಮ್ಮ ಮೇಲೆ. ನಿಮಗಿಂತ ಮೊದಲೇ ಆಸೀನರಾಗಿರುವ ಅಧ್ಯಕ್ಷರು, ನಿಜವಾಗಿ ಸ್ಥಳೀಯ ಪುಢಾರಿಯಾದ ಇವರೇ ಮುಖ್ಯ ಅತಿಥಿಗಳೆಂದೂ ನೀವು ನೆಪ ಮಾತ್ರಕ್ಕೆ ಕುರ್ಚಿ ತುಂಬುವವರು. ಎಂದೂ ಬಹುಬೇಗ ನಿಮಗೆ ತಿಳಿಯುತ್ತದೆ. ತಮ್ಮ ಸುದೀರ್ಘ ಉಪನ್ಯಾಸದಲ್ಲಿ ಸಕಾಲದಲ್ಲಿ ಸಭೆ ಆರಂಭಿಸುವುದರ ಔಚಿತ್ಯ, ಕಾಲದ ಮಹತ್ವವನ್ನು ಕುರಿತೇ ಅಡಿ [illegible] ಗೆರೆ [illegible]ತ್ತಾರೆ. ಸಭೆಗೆ ಮೊದಲು, ಲೈಟ್ ಆಗಿ ಕಾಫಿ ಬಿಸ್ಕತ್ತು ಒದಗಿಸಿದುದರಿಂದ ನಿಮ್ಮ ಮುಖ ಕ್ಷಣ ಕ್ಷಣಕ್ಕೂ ಸೂರ್ಯನಿಲ್ಲದ ಸರೋಜದಂತೆ ಮುದುಡುತ್ತಾ ಬರುವಾಗ ಸಭೆ ಮುಂದುವರೆಯುತ್ತದೆ. ಸಂದರ್ಭೋಚಿತವಾಗಿ ನಾಲ್ಕು ಮಾತು ಆಡಿ ಮುಗಿಸಿ, 'ಅದಕ್ಕಾಗಿ' ಚಪ್ಪಾಳೆಗಿಟ್ಟಿಸುತ್ತೀರಿ. ೯–೩೦ಕ್ಕೆ ನಾಟಕದ ವಿನಹ ಉಳಿದ ಕಾರ್ಯಕ್ರಮಗಳು ಮುಗಿಯುತ್ತವೆ. ಸಭಾಂಗಣವನ್ನು ಖಾಲಿ ಮಾಡುವ ಸಂಭ್ರಮ. ಇಳಿದು ಬಂದಾಗ ಸರ್ ಇನ್ನು ೫ ಹತ್ತು ಮಿನಿಟಿಗೆ ಕಡೇ ಬಸ್ಸು ಇದೆ. ನಾಟಕಕ್ಕೆ ಇರುತ್ತೀರಾ ಸರ್ ಎಂದು ಸೂಚ್ಯವಾಗಿ ಧ್ವನಿಪೂರ್ಣವಾಗಿ ನುಡಿದಾಗ ನೀವು "ಛೆ! ಛೆ! ಮನೇಲಿ ಅನಾನುಕೂಲ. ಹೊರಟುಬಿಡ್ತೇನೆ" ಎನ್ನುತ್ತೀರಿ. ನಿಮ್ಮ ಹಾರ, ಹಣ್ಣು ಹೊತ್ತು ಬಸ್ ಸ್ಟ್ಯಾಪ್‌ಗೆ ಒಬ್ಬ ಕಾರ್ಯಕರ್ತ ಹಾಗೂ ಸ್ವಯಂ. ಪ್ರಿನ್ಸಿಪಾಲರೇ ಬರುತ್ತಾರೆ. ಆದರೆ ನಾಟಕದಲ್ಲಿ ಅವರೂ ಪಾತ್ರವಹಿಸಿರುವುದರಿಂದ ನಿಮ್ಮನ್ನು ಎಳೆಯ ಬಾಲಕನ ವಶಕ್ಕೆ ಒಪ್ಪಿಸಿ ಎಲ್ಲರೂ ಹಿಂತಿರುಗುತ್ತಾರೆ ನೀವು ಅರ್ಧ ಘಂಟೆ ಆಕಳಿಸಿ, ಆನಂತರ ಬಂದ ಬಸ್ಸಿನಲ್ಲಿ ಕುಳಿತು ನಿಮ್ಮ ಊರಿಗೆ ಮರಳುವಾಗ ಹನ್ನೊಂದೂವರೆ ಗಂಟೆ. ನಾಲ್ಕೈದು ಬಾರಿ ಬಾಗಿಲು ತಟ್ಟಿದ ಮೇಲೆ ಮನೆಯಾಕೆ ಆಶ್ಚರ್ಯ, ಆಲಸ್ಯ, ಆಕಳಿಕೆಗಳೊಡನೆ ಬಾಗಿಲು ತೆಗೆದು "ಇವತ್ತೇ ಬಂದುಬಿಟ್ರಾ?" ಎಂದು ಸ್ವಾಗತಿಸುತ್ತಾಳೆ. ಕಾಲು ತೊಳೆಯಲು ಹೊರಟಾಗಲೇ ಅಡಿಗೆಮನೆ ಖಾಲಿಯಿರುವುದು ನಿಮ್ಮ ಗಮನಕ್ಕೆ ಬರುತ್ತದೆ. "ಊಟ ಬಹಳ ಜೋರಾ?" ಎಂದು ಕೇಳುವ ಮಡದಿಗೆ "ಒಂದು ಲೋಟ ನೀರು ತಾ" ಎಂದು ನೀವು ಹೂವಿನ ಹಾರದೊಡನೆ ಏನಾದರೂ ಹಣ್ಣೂ ಇದೆಯೋ ಎಂದು ತಡಕಾಡುತ್ತೀರಿ.



ರೀ ಮೇಲಿನ ಸಾಲಿನಲ್ಲಿ ನನ್ನ ಸಂಬಂಧಿಕರ ಫೋಟೋಗಳನ್ನ ಹಾಕಿ ಬೇಕಾದ್ರೆ, ಕೆಳಗಿನ ಸಾಲಿನಲ್ಲಿ ನಿಮ್ಮ ಸಂಬಂಧಿಕರ ಫೋಟೊ ಹಾಕ್ಕೊಳ್ಳಿ

ಆದರೆ ಇಂತಹ ಸಮಾರಂಭಗಳಿಂದ ಕೆಲವು ಅಲಭ್ಯಲಾಭಗಳೂ ಉಂಟು. ಯಾವ ರಾಜಮಹಾರಾಜನ ಹೊಗಳುಭಟ್ಟನನ್ನೂ ಮೀರಿಸುವಂತೆ ಸ್ವಾಗತಭಾಷಣಕಾರ ನಿಮ್ಮನ್ನು ಹೊಗಳುತ್ತಾನೆ. ನೀವು ಬರೆಯದೇ ಇರುವ ಅನೇಕ ಗ್ರಂಥಗಳ ಪರಿಚಯ ನಿಮಗಾಗುತ್ತದೆ. ಉದಾಹರಣೆಗೆ ನೀವು ಒಂದೆರಡು ಕತೆಗಳನ್ನು ಪತ್ರಿಕೆಯಲ್ಲಿ ಪ್ರಕಟಿಸಿದ್ದೀರಿ ಎನ್ನಿ. ಇವರು ವರಕವಿ, ಚಿರಕವಿ. ನಾಡಿನ ಎಲ್ಲಾ ಪ್ರಸಿದ್ಧ ಪತ್ರಿಕೆಗಳಲ್ಲೂ ಶ್ರೀಯುತರ ಕತೆ. ಕಾದಂಬರಿ, ಕವಿತೆಗಳು... ಇತ್ಯಾದಿಯಾಗಿಯೇ ಪ್ರಶಂಸೆ ದಕ್ಕುತ್ತದೆ. ಜೊತೆಗೆ ನೀವು ವಿದ್ವನ್ಮಣಿಗಳು ಆದರೂ ವಿನಯಪರರು, ಸರಳರು. ಇನ್ನು ವಾಗ್ಮಿಗಳಂತೂ ಸರಿಯೇ ಸರಿ. ಅವರು ಕೇಳುತ್ತಿದ್ದಂತೆಯೇ ನೀವು ಒಪ್ಪಿಕೊಂಡಿರಿ ಎಂಬ ರಹಸ್ಯವನ್ನೂ ಬಯಲು ಮಾಡಿ ಆತ ನಿಮ್ಮ ಮಾನ ಕಳೆಯುತ್ತಾನೆ. ಇಂತಹ ಸಮಾರಂಭದಲ್ಲಿ ತಾವು ಎರಡು ದಿನ ಉಪನ್ಯಾಸ ಮಾಡಿದುದಾಗಿ ಮೊನ್ನೆ ನಮ್ಮ ಹಿರಿಯರು ಹೇಳಿದಾಗ ನಾನು ಬೆಚ್ಚಿದೆ. ಸುವಿಖ್ಯಾತ ವಾಗ್ಮಿ ಕೃಷ್ಣ ಮೆನನ್ನರೂ ೮–೧೦ ತಾಸಿಗಿಂತ ಮೀರಲಿಲ್ಲ. ಇದು ಎಂತಹ ಪವಾಡ ಎಂದು ಚಕಿತನಾದೆ. ಆದರೆ ಹಿರಿಯರು ವಿವರಿಸಿದರು. ಆರು ಗಂಟೆಗೆ ಆರಂಭವಾಗಬೇಕಿದ್ದ ಸಭೆ ರಾತ್ರಿ ೧೦ ಗಂಟೆಗೆ, ಸ್ವಾಗತ, ಬಹುಮಾನ ವಿತರಣೆ ಇತ್ಯಾದಿಗಳು ಮುಗಿದು ೧೧–೩೦ಕ್ಕೆ ಬುಧವಾರ ನನ್ನ ಉಪನ್ಯಾಸ ಆರಂಭವಾಯಿತು. ಮುಗಿದದ್ದು ೧೨–೩೦ಕ್ಕೆ ಎಂದರೆ ಗುರುವಾರವಾಯಿತಲ್ಲವೋ? ಎಂದರು. ಒಪ್ಪಿದೆ!

ಇಂತಹ ಸಮಾರಂಭದಲ್ಲಿ ನನ್ನ ಮಿತ್ರರಿಗಾದ ಅನುಭವ ರೋಮಾಂಚಕವಾದುದು. ನಮ್ಮ ಭಾರತೀಯ ಸಂಸ್ಕೃತಿಯ ಸಮನ್ವಯ ಸಿದ್ಧಾಂತದ ಪ್ರತೀಕವೇ ಅದು ಎಂದರೂ ತಪ್ಪಲ್ಲ. ಒಂದು ಶಾಲಾ ಸಮಾರಂಭದಲ್ಲಿ ಸ್ವಾಮಿ ವಿವೇಕಾನಂದರ ಭಾವಚಿತ್ರ ಅನಾವರಣ ನನ್ನ ಮಿತ್ರರಿಂದ ಆಮಂತ್ರಣ ಪತ್ರಿಕೆ, ಸಭಾಂಗಣದ ಮುಂದೆ ಇರಿಸಿದ ಬೋರ್ಡು ಇತ್ಯಾದಿ ಎಲ್ಲವೂ ಈ ಅಂಶವನ್ನು ಸಾರುತ್ತಿದ್ದವು. ಸ್ವಾಗತ ಭಾಷಣದಲ್ಲೂ ಈ ಅಂಶವನ್ನು ಒತ್ತಿ ಹೇಳಲಾಯಿತು. ಮಿತ್ರರು ಆ ಸಂದರ್ಭಕ್ಕೆ ಉಚಿತವಾಗಿ ಉಪನ್ಯಾಸ ಮಾಡುತ್ತಾ ಏಳಿ. ಎದ್ದೇಳಿ ಇತ್ಯಾದಿ ವಾಕ್ಯಗಳನ್ನುದ್ಧರಿಸುತ್ತ ಹೃದಯಂಗಮ ಭಾಷಣ ಮಾಡಿ ವಿವೇಕಾನಂದರ ಭವ್ಯ ಚಿತ್ರವನ್ನು ಸಭಿಕರ ಚಿತ್ತಭಿತ್ತಿಯಲ್ಲಿ ಬರೆದೂ ಆಯಿತು. ಈಗ ಇಂತಹ ಮಹನೀಯರು ನಿಮಗೆ ನಿತ್ಯಸ್ಫೂರ್ತಿಯನ್ನೀಯಲಿ ಎಂದು ಭಾವಚಿತ್ರದ ತೆಳು ಪರದೆಯನ್ನು ಅನಾವರಣ ಮಾಡಿದರೆ ಅಲ್ಲಿದ್ದುದು ಮಹಾಭಿಕ್ಷು ಗೌತಮಬುದ್ಧನ ಧ್ಯಾನಾವಸ್ಥಿತ ಚಿತ್ರ! ಏಳಿ ಎದ್ದೇಳಿ ಎಂಬ ಸ್ಫೂರ್ತಿಯುತ ಮಾತು ಕೇಳಿ ಎಲ್ಲರೂ ಎದ್ದು ನಿಂತೇ ಈ ಭವ್ಯ ಮೂರ್ತಿಯನ್ನು ನೋಡಿ ಚಪ್ಪಾಳೆ ಕುಟ್ಟಿಯಾಗಿತ್ತು. ಮಿತ್ರರು ಒಂದು ಕ್ಷಣ ದಿಗ್ಮೂಢರಾದರು. ಆದರೆ ಪ್ರಸಂಗಾವಧಾನದ ಮರೆ ಹೊಕ್ಕು, ಸಭಿಕರನ್ನು ಕುಳ್ಳಿರಿಸಿ ಉಪನ್ಯಾಸ ಮುಂದುವರೆಸಿದರು "ಬುದ್ಧ ಬೇರೆಯಲ್ಲ ವಿವೇಕಾನಂದರ ಬೇರೆಯಲ್ಲ. ಈ ಪುಣ್ಯಭೂಮಿಯಲ್ಲಿ ಉದಿಸಿದ ಈ ಇರ್ವರೂ ಅವತಾರ

ಮೆರುಗಿತು ಬುದ್ಧ... ಬುದ್ಧಿ... ವಿವೇಕ... ಇವು ಗಳ ಸಮನ್ವಯದಿಂದ ದೊರೆಯುವ ಆನಂದ (ಅದೇ ವಿವೇಕಾನಂದ!) ಇವುಗಳನ್ನು ಸ್ಫೂರ್ತಿ ದಾಯಕವಾಗಿ ವಿವರಿಸಿದರು. ಪಾಠಾದರು. ಬುದ್ಧನು ಧರಿಸಿದ ಕಾವಿವಸ್ತ್ರ ಹಾಗೂ ಆತುರ ಎರಡೂ ಮಸಲತ್ತು ಮಾಡಿ ಕಾರ್ಯಕರ್ತರ ಕಣ್ಣಿಗೆ ಮಣ್ಣೆರ ಚಿದ್ದವು.

ಸಭೆ ಸಮಾರಂಭಗಳೆಲ್ಲ ನೀರಸ. ಯಾಂತ್ರಿಕ ಆಗುವದಿಲ್ಲ. ಚಿರ ಸ್ಮರಣೆಯಲ್ಲಿ- ಕಡೆಯ ಪಕ್ಷ ಉಪನ್ಯಾಸಕನ- ಉಳಿಯುವಂತಹವೂ ಉಂಟು. ಒಮ್ಮೆ ಕೃಷ್ಣಜನ್ಮಾಷ್ಟಮಿಯ ಸಂದರ್ಭದಲ್ಲಿ ತುಂಗಾನದೀ ತೀರದ ಒಂದು ಊರಿನಲ್ಲಿ ರಾತ್ರಿ ಹತ್ತಕ್ಕೆ ಪ್ರಾರಂಭ ವಾದ ಸಮಾರಂಭ ಇನ್ನೂ ನೆನಪಿದೆ. ಅಲ್ಲಿಗೆ ಹೋಗುತ್ತಿದ್ದಂತೆಯೇ ಮುಕ್ಕಳವಾದ, ರಸಭರಿತ ವಾದ ಕೃಷ್ಣಪೂಜಾ ಪ್ರಸಾದವೇ (ಹಾಲು ಖೀರು- ಪಚ್ಚಿಗೆ- ಅವಲಕ್ಕಿ ಮೊಸರು ಇತ್ಯಾದಿ...) ಈ ನೆನ ಪಿಗೆ ಕಾರಣವಿರಬಹುದು! ಸಮಾರಂಭದ ಮೊದ ಲು ಸೋದರಿಯೊಬ್ಬಳು ಹಾಡಿದ ಮೀರಾಭಜನೆ, ಹೋರೆತೋ ಗಿರಿಧರ ಗೋಪಾಲ, ಇಂದು ಎನಗೆ ಗೋವಿಂದ ಇತ್ಯಾದಿ ಹೃದಯ ಕಲಕುವ ದೈನ್ಯ ಸಮರ್ಪಣಾಭಾವದ ತನ್ಮಯತೆಯೂ ಕಾರಣ ವಿರಬಹುದು. ರಸಋಷಿ ಪು. ತಿ. ನ. ಅವರ ಗೋಕುಲ ನಿರ್ಗಮನವನ್ನು ಕುರಿತು ಎರಡುಗಂಟೆ ಉಪನ್ಯಾಸ ಮಾಡಿದಾಗ ಹಿರಿಯರೂ, ವೃದ್ಧರೂ ತುಂಬಿದ ವಾತ್ಸಲ್ಯದಿಂದ ಈ ಕಿರಿಯನ ಮಾತು ಗಳನ್ನು ಆಸಕ್ತಿಯಿಂದ ಕೇಳಿದಾಗ ನನ್ನ ಕಣ್ಣೀ ತುಂಬಿ ಬಂದಿತು. ಮತ್ತೊಮ್ಮೆ ನನ್ನ ತೊದಲು ನುಡಿಗಳನ್ನು ಮೆಚ್ಚಿದ, ಅಲ್ಲೇ ತುಂಬು ಅಂತಃ ಕರಣದ ಪ್ರಶಂಸೆ ಮಾಡಿ ಆನಂತರ ನನ್ನ ಬೆನ್ನ ಮೇಲೆ ಕೈಯಾಡಿ ಹರಸಿದ ಪೂಜ್ಯ ಬೇಂದ್ರೆಯ ವರ ಶ್ರೀರಕ್ಷೆಯ, ವಾತ್ಸಲ್ಯದ ಪ್ರಸಂಗವನ್ನು ನೆನೆದಾಗ ಹೃದಯ ಹಕ್ಕಿಯಂತೆ ಹಗುರವಾಗುತ್ತದೆ. ಸಭೆ ಸಮಾರಂಭಗಳಲ್ಲೂ ಅರ್ಥ/ಉಂಟು ಎನಿಸು ತ್ತದೆ. ಮುಖ್ಯವಾಗಿ ಅಲ್ಲಿ ಒದಗುವ ಸಮಾರಂಭ ವೈವಿಧ್ಯ ಬೆಡಗು, ಬಿನ್ನಾಣಗಳೂ, ಬೇಸರ, ಬಿಂಕ ಗಳೂ ಬದುಕಿಗೆ ಹೊಸ ಕಳೆಯನ್ನೇ ಕೊಡುವುದೂ ಉಂಟು. "ಸಲ್ಲಾಪಃ ಸಜ್ಜನೈಸ್ಸಹ" ಎನ್ನುವುದೂ ಯಾವ ಕಾಲಕ್ಕೂ ಸತ್ಯವಾದ ಮಾತು.

ಇಂತಹ ಅವಕಾಶಗಳನ್ನು ತಂದುಕೊಡುವ ಈ ಕನ್ನಡ 'ಅಧ್ಯಾಪಕ ಹುದ್ದೆಗೆ ನಾನು ಋಣಿಯಾಗಿ ರಲೇ ಬೇಕು. ಏಕೆಂದರೆ ಕಾರ್ಯಕರ್ತರು ನನ್ನನ್ನು ಸಭೆಗಳಿಗೆ ಆಹ್ವಾನಿಸುವುದು ನನ್ನ ಯೋಗ್ಯತೆ ಯಿಂದ ಅಲ್ಲ. ನಾನು ಅಧ್ಯಾಪಕ. ಅದರಲ್ಲೂ ಸಾಹಿತ್ಯ ಅಧ್ಯಾಪಕ ಎನ್ನುವುದರಿಂದ ಏಕೆಂದರೆ ನಾನು ಈ ಹುದ್ದೆಗೆ ಬರುವವರೆಗೂ ಬೇರೆ ಒಂದು ಇಲಾಖೆಯಲ್ಲಿದ್ದೆ. ವಾಸ್ತವವಾಗಿ ನನ್ನ ವ್ಯಾಸಂಗ ಈಗಿಗಿಂತ ಹೆಚ್ಚಿತ್ತು. ನನ್ನ ಭಾವನೆಗಳನ್ನು ಕೋಡಿ ಕೊಳುವ ಯಾವ ಅಂಗಳವೂ ದೊರೆಯುತ್ತಿರ ಲಿಲ್ಲವಾದುದರಿಂದ ಬರವಣಿಗೆಗೇ ಶರಣುಹೋಗಿ ನನ್ನ ಲೇಖನ ವ್ಯವಸಾಯವೂ ಈಗಿಗಿಂತ ಹೆಚ್ಚಾ ಗಿತ್ತು. ಆದರೆ ಅದು ಹೇಗೊ ಕಾರ್ಯಕರ್ತರಿಗೆ ಆಗ ನಾನು ಯಃಕಶ್ಚಿತ್ ಗುಮಾಸ್ತ ಮಾತ್ರ ಎನಿ ಸಿದ್ದೆ. ಈ ಹುದ್ದೆಗೆ ಬರುವ ಹಿಂದಿನ ಕ್ಷಣದವರೆಗೂ ಹಾಗಿದ್ದವನು, ತಕ್ಷಣ ಬುದ್ಧಿಜೀವಿಯಾಗಿ ಬಿಟ್ಟೆ! ಅಲ್ಲದೆ ಕನ್ನಡ ಅಧ್ಯಾಪಕರು ಸರ್ವಜ್ಞರೆಂದೂ ಕ್ಷೌರಿ ಕಸಮಾಜದ ಉದ್ಘಾಟನೆಯಿಂದ ಅದ್ವೈತ ವೇದಾಂತ ಸಭೆಯ "ಸಮಾರೋಪ"ದ ವರೆಗೂ ಅವರನ್ನು ಸೆಳೆಯಬಹುದೆಂದೂ ಈ ಕಾರ್ಯಕರ್ತರ ಭಾವನೆ. ಈ ವಿಷಯ ನನಗೆ ಸಂಬಂಧ ಪಟ್ಟುದಲ್ಲವೆಂದು ನೀವು ಅವರ ಕಾಲಿಗೆ ಬಿದ್ದು ಬೇಡಿಕೊಂಡರೂ ಅವರು ನಂಬುವುದಿಲ್ಲ. "ಛೆ! ಛೆ! ಏನಾ ರ್ ನೀವೇ ಹೀಗೆಂದರೆ" ಎಂದು ನಿಮ್ಮನ್ನು ಕಟ್ಟಿಹಾಕುತ್ತಾರೆ. ಇರಲಿ. "ಕವಿತೆ ಯೊಳ್ ಆಸೆಗೆಯ್ದು ಫಲಮಾವುದೋ ಪೂಜೆ, ನೆಗಳ್ತೆ, ಲಾಭಂ ಎಂಬಿವೆ ಫಲಂ" ಎಂದು ಆದಿ ಮಹಾಕವಿಯೇ ಸಾರಿಲ್ಲವೆ? ಮೊದಲಿನದು. ಕಡೆ ಯದು ನಾಸ್ತಿಯಾದರೂ ನಡುವಿನದಂತೂ ಭದ್ರ ವಲ್ಲವೇ?

ಸಭೆ ಸಮಾರಂಭಗಳಿಗೆ ಜಯವಾಗಲಿ! ಜೈ ಕನ್ನಡ ಮಾತೆ! ಮತ್ತು ಮಾತು!"



# ಸರ್ವಶ್ರೇಷ್ಠ ಚಿತ್ರ

ಫ್ರಾನ್ಸಿನ ಒಂದು ಪಟ್ಟಣದಲ್ಲಿ ಒಮ್ಮೆ ಚಿತ್ರಗಳ ಒಂದು ವಿಶಾಲಪ್ರದರ್ಶನ ಏರ್ಪಟ್ಟಿತು ಅತ್ಯುತ್ತಮ ಕಲಾಕಾರನಿಗೆ ಒಂದು ಅಮೂಲ್ಯ ಉಪಹಾರ ಕೊಡುವುದಾಗಿ ಪಟ್ಟಣದಲ್ಲೆಲ್ಲ ಘೋಷಿಸಲಾಯಿತು.

ಆ ಪಟ್ಟಣದಲ್ಲೇ ಮೂವರು ಉತ್ತಮ ಕಲಾಕಾರರಿದ್ದರು ಮೂವರು ಬಹುಮಾನ ಪಡೆಯಲು ನಿರ್ಧರಿಸಿದರು. ಮೊದಲನೆಯವನು ಒಂದು ಹೂವನ್ನು ಎರಡನೆಯವನು ಒಂದು ಹಣ್ಣನ್ನು ಮೂರನೆಯಾತ ಒಂದು ಪರದೆಯನ್ನು ತಯಾರಿಸಿ ದರು. ಈ ಮೂರೂ ಚಿತ್ರಗಳು ನೋಟಕ್ಕೆ ವಾಸ್ತವಿಕವಾಗಿಯೇ ತೋರುತ್ತಿದ್ದವು. ಇವುಗಳಲ್ಲಿ ಸರ್ವಶ್ರೇಷ್ಠ ಯಾವುದೆಂದು ನಿರ್ಣಯಿಸುವುದು ಕಷ್ಟವಾಗಿತ್ತು. ಪ್ರದರ್ಶನದಲ್ಲಿನ ಇತರ ಚಿತ್ರಗಳು ಇವುಗಳೆದುರು ತುಂಬಾ ಸಪ್ಪೆಯೆನಿಸುತ್ತಿದ್ದವು.

ಪಟ್ಟಣದ ಒಬ್ಬ ಪ್ರತಿಷ್ಠಿತ ಮನುಷ್ಯನಿಗೆ ತೀರ್ಪು ನೀಡುವ ಅಧಿಕಾರ ವಹಿಸಲಾಯಿತು.

ಅದೇ ವೇಳೆ ಮೊದಲನೇ ಚಿತ್ರಕಾರನ ಚಿತ್ರವನ್ನೇ ವಾಸ್ತವಿಕವೆಂದು ಬಗೆದು ಜೇನ್ನೊಣ ಆ ಹೂವಿನ ಮೇಲೆ ಕುಳಿತಿತು. ಹತ್ತಿರವೇ ನಿಂತ ನಾಯಿಯೊಂದು ಎರಡನೇ ಚಿತ್ರಕಾರನ ಹಣ್ಣನ್ನು ನಿಜವೆಂದೇ ಬಗೆದು ಅದನು ತಿನ್ನಲು ನೆಗೆಯಿತು.

ನಿರ್ಣಾಯಕ ಯಾವುದೇ ತೀರ್ಮಾನಕ್ಕೂ ಬರದಾದ. ವಿಚಾರ ಮಾಡಲೆಂದು ಆತ ಮತ್ತೊಂದು ಕೋಣೆಗೆ ಹೋಗಲು ಅನುಮತಿ ಕೇಳಿದ. ಬಾಗಿಲಿಗೆ ಇಳಿಬಿಟ್ಟಿದ್ದ ಪರದೆಯನ್ನು ಅವನು ಸರಿಸಲು ಕೈಚಾಚಿದ. ಆದರೆ ಆ! ವಾಸ್ತವವಾಗಿ ಪರದೆ ಯಿರದೆ ಮೂರನೇ ಕಲಾಕಾರ ಗೋಡೆಯಮೇಲೆ ಬಿಡಿಸಿದ ಪರದೆಯ ಚಿತ್ರವಿತ್ತು! ತನ್ನ ಈ ತಪ್ಪಿಗಾಗಿ ಆತ ನಾಚಿದ. ಇಡೀ ಕೋಣೆಯೇ ಜನರ ನಗುವಿನಿಂದ ತುಂಬಿಹೋಯಿತು. ಹೂ ಒಂದು ಕೀಟವನ್ನು ಮೋಸ ಮಾಡಿದ್ದರೆ ಹಣ್ಣು ಒಂದು ಪ್ರಾಣಿ ಯನ್ನು ವಂಚಿಸಿತ್ತು. ಆದರೆ ಪರದೆ ಒಬ್ಬ ಬುದ್ಧಿವಂತನನ್ನೇ ನಗಗೀಡುಮಾಡಿತು. ಎಂತಲೇ ಆ ಮೂರನೇ ಕಲಾಕಾರನಿಗೇ ಬಹುಮಾನ ದೊರೆಯಿತು.

(ಹಿಂದಿಯಿಂದ)

ಸವ್ಯಸಾಚಿ



ಕುಮಾರಿ ಮಧುರಿತಾ, ಕುಮಾರಿ ರಚನಾ "ಕುಮಾರ ಸಂಭವಂ" ಯಶಸ್ವಿ ಪ್ರಯೋಗದ ಶಿಲ್ಪಿಗಳು,

ವಸಂತ ಕಲಕೋಟಿ

# ಸಾರಂಗ ಸೋದರಿಯರ ನೃತ್ಯನಾಟಕ–'ಕುಮಾರ ಸಂಭವಂ'

ಮಹಾಕವಿ ಕಾಳಿದಾಸನ "ಕುಮಾರ ಸಂಭವಂ" ಭಾರತೀಯ ಸಾಹಿತ್ಯದಲ್ಲಿಯೇ ಅಪೂರ್ವ ಹಾಗೂ ಅಮರ ಕಲಾಕೃತಿ. ಕಾಳಿದಾಸನ ಕೃತಿಗಳನ್ನು ನೃತ್ಯನಾಟಕಗಳಿಗೆ ಅಳವಡಿಸಿಕೊಳ್ಳುವದು ತುಂಬ ಕಠಿಣ. ಹಾಗೆ ಅಳವಡಿಸಿಕೊಳ್ಳುವವರಿಗೆ, ಸಂಸ್ಕೃತ ಭಾಷೆಯ ಆಳವಾದ ಜ್ಞಾನ ಬೇಕು. ಕಾಳಿದಾಸನ ಪಾತ್ರಗಳ ವೈಶಿಷ್ಟ್ಯವನ್ನು ಚೆನ್ನಾಗಿ ಅರಿತಿರಬೇಕು. ಇದೆಲ್ಲಕ್ಕೂ ಮಿಗಿಲಾಗಿ ವಿಶಿಷ್ಟ ವೇಷ ರಚನೆಯ ತಿಳುವಳಿಕೆಯೂ ಬೇಕು. ಈ ಕಾರಣಗಳಿಗಾಗಿಯೇ, ಕೆಲವು ಮಾತ್ರ, ಕಾಳಿದಾಸನ ಕೃತಿಗಳು ರಂಗಮಂಚವನ್ನೇರಿವೆ.

"ಕುಮಾರ ಸಂಭವಂ" ಕೃತಿಯನ್ನು ನೃತ್ಯನಾಟಕಕ್ಕೆ ಅಳವಡಿಸಿಕೊಂಡು ಅಭಿನಯಿಸಿದ ಶ್ರೇಯಸ್ಸು ಮುಂಬಯಿಯ ನೃತ್ಯದರ್ಶನ ಸಂಸ್ಥೆಗೆ ಸಲ್ಲುತ್ತದೆ. 'ಕುಮಾರ ಸಂಭವಂ' ಕೃತಿಯನ್ನು ನೃತ್ಯನಾಟಕಕ್ಕೆ ಅಳವಡಿಸಿಕೊಂಡಿರುವ ಕು. ರಚನಾ ಸಾರಂಗ ಸುಮಾರು ಇಪ್ಪತ್ತಾರು ವಯಸ್ಸಿನ ಸುಂದರ ಯುವತಿ. 'ಕುಮಾರ ಸಂಭವಂ' ನೃತ್ಯನಾಟಕದ ದಿಗ್ದರ್ಶಿಕೆಯೂ ಹೌದು. ಅವಳು, ಅವಳ ಸೋದರಿ ಮಧುರಿತಾ, ಈ ಪ್ರಯೋಗದ ಜೀವಾಳ. ಅವರ ತಂದೆ ಡಾ॥ ಸಾರಂಗ ಈ ಪ್ರಯೋಗದ ನಿರ್ಮಾಪಕರು. ಮುಂಬಯಿ ಅಹ್ಮದಾಬಾದ್ ನಾಸಿಕ ನಗರಗಳಲ್ಲಿ ಈಗಾಗಲೇ ಕುಮಾರ ಸಂಭವಂದ ಹದಿನೇಳು ಪ್ರಯೋಗಗಳು ಯಶಸ್ವಿಯಾಗಿ ಜರುಗಿವೆ. ೧೯೭೪ರಲ್ಲಿ ಪ್ರಥಮ ಪ್ರಯೋಗದಿಂದ ಆರಂಭಗೊಂಡ ಕುಮಾರ ಸಂಭವಂ ನೃತ್ಯ ನಾಟಕ ನೃತ್ಯಪ್ರಪಂಚದಲ್ಲಿ ಒಂದು ಹೊಸ ಕ್ರಾಂತಿಯನ್ನೇ ಉಂಟು ಮಾಡಿದೆ.

'ಕುಮಾರ ಸಂಭವಂ' ಕೃತಿಯ ಕಥೆ ಹೊಸತಲ್ಲ. ಈ ಪೌರಾಣಿಕ ಕಥೆಯನ್ನು, ಗೀತನೃತ್ಯ ನಾಟಕ ರೂಪದಲ್ಲಿ ಪ್ರಸ್ತುತಗೊಳಿಸುವದು ತುಂಬ ಕಷ್ಟ. ಇಂತಹ ಕ್ಲಿಷ್ಟ ಸಮಸ್ಯೆಯನ್ನು ಎದುರಿಸುವಲ್ಲಿ ಸಾರಂಗ ಸೋದರಿಯರು ಯಶಸ್ವಿಯಾಗಿದ್ದಾರೆ. ಅವರು ಕುಮಾರ ಸಂಭವದಲ್ಲಿ ಅಳವಡಿಸಿಕೊಂಡ ಶಾಸ್ತ್ರೀಯ ಹಾಗು ಜಾನಪದ ಸಂಗೀತ ಸಂಯೋಜನೆ, ಸಮರ್ಪಕ ಪಾತ್ರ ವಿಂಗಡಣೆ ಸುಂದರ ಸಂಭಾಷಣೆ ಆಕರ್ಷಕ ಸನ್ನಿವೇಶಯೋಜನೆ, ಇವೆಲ್ಲ ಎಲ್ಲ ಬಗೆಯ ಪ್ರೇಕ್ಷಕ ವರ್ಗಕ್ಕೂ ಹಿಡಿಸುವಂಥವು.

ನೃತ್ಯದರ್ಶನ ಸಂಸ್ಥೆಯ ಕುಮಾರಿ ರಚನಾ ಸಾರಂಗ ಅವರ ದಕ್ಷ ನಿರ್ದೇಶನದಲ್ಲಿ ಪ್ರಸ್ತುತಗೊಳಿಸಿದ, 'ಕುಮಾರ ಸಂಭವಂ' ನೃತ್ಯನಾಟಕದ ಯಶಸ್ವಿ ಪ್ರದರ್ಶನದ ಹದಿಮೂರು ದೃಶ್ಯಗಳ ರಚನೆ ಹೀಗಿದೆ.

ಶಿವನಿಗೆ ಪ್ರಾರ್ಥನೆ ಸಲ್ಲಿಸುವ ಶುಭಾರಂಭದಿಂದ ಮೊದಲ ದೃಶ್ಯ ಪ್ರಾರಂಭವಾಗುತ್ತದೆ.

ಮಹಾಕವಿ ಕಾಳಿದಾಸನ ಪ್ರವೇಶ ತಪಸ್ಸಿನ ಶಕ್ತಿಯಿಂದ ಕುಮಾರಸಂಭವಂ ಕೃತಿ ರಚನೆಗಾರಂಭ. ಪಾರ್ವತಿಯ ಜನನದಿಂದ ಅವಳ ತಂದೆ ಹಿಮವಂತರಾಜನಿಗೆ ಹಾಗೂ ತಾಯಿ ಮೀನಾವ ಮಹಾರಾಣಿಗೆ ತುಂಬ ಸಂತೋಷವಾಗುತ್ತದೆ. ಪಾರ್ವತಿ ದೊಡ್ಡವಳಾಗುತ್ತಾಳೆ. ಅವಳ ಸಖಿಯರು ಅವಳ ಸೌಂದರ್ಯವನ್ನು ಪ್ರಶಂಸಿಸುತ್ತಾರೆ. ಪಾರ್ವತಿಯ ತಂದೆ ತಾಯಿಗಳಿಗೆ ಅವಳ ಮದುವೆ ಯೋಚನೆ ಆರಂಭವಾಗುತ್ತದೆ. ಆಗ ನಾರದ ಮಹರ್ಷಿಯ ಪ್ರವೇಶ. ಪೂರ್ವಜನ್ಮದಲ್ಲಿ ಪಾರ್ವತಿ ಸತಿಭವಾನಿಯಾಗಿದ್ದಳು. ಈ ಪಾರ್ವತಿಯು ಪುನಃ ಪರಮೇಶ್ವರನನ್ನೇ ವಿವಾಹವಾಗುತ್ತಾಳೆ. ಎಂದು ಹೇಳುತ್ತಾರೆ ನಾರದರು.

ಇತ್ತ ರಾಕ್ಷಸರ ಅಧಿಪತಿ ತಾರಕಾಸುರನು ದೇವತೆಗಳನ್ನು ಪೀಡಿಸುತ್ತಿರುವ. ದೇವೇಂದ್ರ ಹಾಗು ಇತರ ದೇವತೆಗಳು ತಾರಕಾಸುರನನ್ನು ನಾಶಮಾಡಲು ಬ್ರಹ್ಮದೇವನನ್ನು ಮೊರೆಯಿಡುತ್ತಾರೆ. ಕೇವಲ ಶಿವಪಾರ್ವತಿಯರ ಪುತ್ರನಿಂದ ತಾರಕಾಸುರನ ವಧೆಯಾಗಬಲ್ಲದೆಂದು ಬ್ರಹ್ಮವಾಣಿಯಾಗುತ್ತದೆ.

ದೃಶ್ಯ ನಾಲ್ಕರಲ್ಲಿ ಹಿಮಾಲಯದಲ್ಲಿ ಶಿವನು ತಪಸ್ಸು ಮಾಡುತ್ತಿರುತ್ತಾನೆ. ಪಾರ್ವತಿ ಹಾಗು ಅವಳ ಸಖಿಯರು, ಹಿಮವಂತ ರಾಜ. ಮೀನಾಮಹಾರಾಣಿ ಶಿವನ ಆರಾಧನೆ ಆರಂಭಿಸುತ್ತಾರೆ. ದೇವ ದೇವತೆಗಳನ್ನು ಸೋಲಿಸಿ ಅಪೂರ್ವ ವಿಜಯ ಸಾಧಿಸಿದ ತಾರಕಾಸುರ ತನ್ನ ಆಸ್ಥಾನದಲ್ಲಿ ವಿಶೇಷೋತ್ಸಾಹದಿಂದ ಮೆರೆಯುತ್ತಿರುತ್ತಾನೆ.

ಆರನೆಯ ದೃಶ್ಯದಲ್ಲಿ ನಾರದ ಮಹರ್ಷಿಯು ಕಾಮದೇವನನ್ನು ಶಿವನ ಮಹಾತಪಸ್ಸನ್ನು ಭಂಗಗೊಳಿಸಲು, ಹಿಮಾಲಯಕ್ಕೆ ಕಳಿಸಬೇಕೆಂದು ದೇವೇಂದ್ರನಿಗೆ ಉಪದೇಶ ನೀಡುತ್ತಾನೆ.

ಪ್ರೇಮ ದೇವತೆಎನಿಸಿದ ಕಾಮದೇವ ಹಾಗು ಅವನ ಸುಂದರ ಪತ್ನಿ ರತಿದೇವಿಯರ, ಸರಸ ಸಲ್ಲಾಪವು ಏಳನೆಯ ದೃಶ್ಯದಲ್ಲಿ ನಿರೂಪಿಸಲ್ಪಡುವುದು. ದೇವೇಂದ್ರ ಅಲ್ಲಿಗೆ ಬಂದು ಶಿವನ ತಪಸ್ಸನ್ನು ಭಂಗಗೊಳಿಸಲು ವಸಂತನನ್ನು ಕರೆದುಕೊಂಡು ಶಿವನ ಬಳಿಗೆ ಹೋಗಲು ಕಾಮನಿಗೆ ಹೇಳುತ್ತಾನೆ.

ಶಿವನು ಉಗ್ರತಪಸ್ಸಿನಲ್ಲಿ ಮಗ್ನನಾಗಿರುತ್ತಾನೆ ಕಾಮದೇವನು ವಸಂತನೊಂದಿಗೆ ಅಲ್ಲಿಗೆ ಬರುತ್ತಾನೆ.

ಶಿವನ ಪೂಜೆಗೆ ಪಾರ್ವತಿ ಬರುತ್ತಾಳೆ. ಶಿವನಿಗೆ ಪಾರ್ವತಿ ಪುಷ್ಪಹಾರಹಾಕುತ್ತಿರುವ ಸಂದರ್ಭದಲ್ಲಿಯೇ ಕಾಮದೇವನು ತನ್ನ ಪುಷ್ಪಬಾಣವನ್ನು ಶಿವನ ಮೇಲೆ

ಬಿಡುತ್ತಾನೆ. ಶಿವನ ತಪಸ್ಸು ಭಂಗವಾಗಿ ಕಣ್ಣು ತೆರೆಯು ವಾಗ ಎದುರಿಗಿರುವ ಪಾರ್ವತಿಯ ಸೌಂದರ್ಯದಿಂದ ಪ್ರಸನ್ನನಾಗುತ್ತಾನೆ. ಆದರೆ ಕಾಮದೇವನಕುತಂತ್ರದಿಂದ ತನ್ನ ತಪಸ್ಸು ಭಂಗವಾಯಿತೆಂದು ಶಿವನಿಗೆ ವಿಪರೀತ ಕ್ರೋಧ ಉಂಟಾಗಿ ತನ್ನ ಮೂರನೆಯ ಕಣ್ಣಿನ ಜ್ವಾಲೆಯಿಂದ ಕಾಮದೇವನನ್ನು ಭಸ್ಮಗೊಳಿಸುತ್ತಾನೆ. ಹಿಮವಂತರಾಜನು ಅಲ್ಲಿಗೆ ಬಂದು ಪಾರ್ವತಿಯನ್ನು ಕರೆದೊಯ್ಯುತ್ತಾನೆ. ಇದು ಎಂಟನೆಯ ದೃಶ್ಯದವಸ್ತು.

ಕಾಮದೇವನನ್ನು ಸುಟ್ಟು ಭಸ್ಮಗೊಳಿಸಿದ ನಂತರ ಶಿವನು ಪುನಃ ತಪಸ್ಸಿಗೆ ಕುಳಿತುಕೊಳ್ಳುತ್ತಾನೆ. ಕಾಮದೇವನ ಸತಿ ರತಿಯು ಪತಿಯ ಮರಣಕ್ಕಾಗಿ ವಿಲಾಪಿಸುತ್ತಾಳೆ. ಶಿವಪಾರ್ವತಿಯರ ವಿವಾಹದ ನಂತರ ರತಿದೇವಿಯು ತನ್ನ ಪತಿ ಕಾಮದೇವನನ್ನು ಪಡೆಯಬಹುದೆಂದು ಬ್ರಹ್ಮದೇವನು ಆಶ್ವಾಸನೆ ನೀಡುವ.

ಶಿವನ ಪ್ರೇಮವನ್ನು ಸಂಪಾದಿಸಲು ಪಾರ್ವತಿ ತಪಸ್ಸು ಆರಂಭಿಸುತ್ತಾಳೆ. ಅಷ್ಟರಲ್ಲಿ ಒಬ್ಬ ಬ್ರಾಹ್ಮಣನು ಶಿವ ತೀರ ಭಯಂಕರ. ಅವನ ಕೊರಳಲ್ಲಿ ಸರ್ಪವಿದೆ. ಇಂತಹವನನ್ನು ವಿವಾಹವಾಗುವದು ಸರಿಯಲ್ಲ ಎಂದು ಶಿವನ ಟೀಕೆ ಮಾಡುತ್ತಾನೆ. ಶಿವನ ಟೀಕೆ ಕೇಳಿ ಪಾರ್ವತಿಗೆ ಸಿಟ್ಟು ಬಂದು, ಆ ಬ್ರಾಹ್ಮಣನಿಗೆ "ಕೂಡಲೇ ಇಲ್ಲಿಂದ ಹೊರಟುಹೋಗು" ಎಂದು ಹೇಳುತ್ತಾಳೆ. ಕೂಡಲೇ ಶಿವನು ಬ್ರಾಹ್ಮಣನ ರೂಪತೊರೆದು. ಪಾರ್ವತಿಯ ತಪಸ್ಸಿನಿಂದ ಪ್ರಸನ್ನನಾಗಿ ಅವಳನ್ನು ವಿವಾಹವಾಗಲು, ಒಪ್ಪುತ್ತಾನೆ. ಶಿವನ ದರ್ಶನದಿಂದ ಹಾಗೂ ಅವನ ವಾಗ್ದಾನದಿಂದ ಪಾರ್ವತಿಗೆ ಪೂರ್ಣ ಸಂತೋಷವಾಗುತ್ತದೆ.

ಶಿವ ಪಾರ್ವತಿಯರ ವಿವಾಹ, ಋತುಗಳ ನರ್ತನ ಶಿವ ಪಾರ್ವತಿಯರ ನರ್ತನಗಳು ಹನ್ನೊಂದನೆಯ ದೃಶ್ಯ. ಹನೆರಡನೆಯ ದೃಶ್ಯದಲ್ಲಿ ಪಾರ್ವತಿಗೆ ಶಿಶುವಿನ ಜನನ. ಶಿವನ ಆ ಶಿಶುವಿಗೆ ಕಾರ್ತಿಕ ಎಂದು ನಾಮಕರಣ ಮಾಡಿ, ಈ ಕಾರ್ತಿಕೇಯನು ತಾರಕಾಸುರನ ವಧಮಾಡಿ ದೇವದೇವತೆಗಳ ದುಃಖವನ್ನು ಪರಿಹರಿಸುತ್ತಾನೆಂದೂ ಹೇಳುತ್ತಾನೆ.

ದೃಶ್ಯ ಹದಿಮೂರರಲ್ಲಿ ದೇವೇಂದ್ರ, ನಾರದಮಹರ್ಷಿ ಹಾಗು ಇತರ ದೇವತೆಗಳು ತಾರಕಾಸುರನನ್ನು ಕೊಲ್ಲಲು ಕಾರ್ತಿಕೇಯನಿಗೆ ಆಜ್ಞೆ ನೀಡುವಂತೆ ಪರಮೇಶ್ವರನಲ್ಲಿ ಪ್ರಾರ್ಥಿಸುತ್ತಾರೆ. ಕಾರ್ತಿಕೇಯ ಹಾಗು ತಾರಕಾಸುರರ ನಡುವೆ ಘೋರಯುದ್ಧ ಶುರುವಾಗುತ್ತದೆ. ಯುದ್ಧದಲ್ಲಿ ಕಾರ್ತಿಕೇಯನು ತಾರಕಾಸುರನನ್ನು ಕೊಲ್ಲುತ್ತಾನೆ. ದೇವ ದೇವತೆಗಳಿಗೆಲ್ಲ ತಾರಕಾಸುರನ ವಧೆಯಿಂದ ಆನಂದವಾಗುತ್ತದೆ.

ಅಲ್ಲಿಗೆ "ಕುಮಾರ ಸಂಭವಂ" ನೃತ್ಯನಾಟಕ ಮುಕ್ತಾಯ. ಎರಡು ಅಂಕಗಳಲ್ಲಿ ಸುಮಾರು ಎರಡೂವರೆ ಗಂಟೆಗಳವರೆಗೆ ಜರುಗುವ ಕುಮಾರ ಸಂಭವಂ ನೃತ್ಯ ನಾಟಕ ಪ್ರದರ್ಶನ, ಎಲ್ಲಿಯೂ ಬೇಸರ ತರಿಸುವುದಿಲ್ಲ. ಶ್ರೀನಂದ ಕಿಶೋರ ಮಿತ್ತಲ ಹಾಗೂ ರಾಧೇಶ್ಯಾಮ ರಚಿಸಿದ ಗೀತೆಗಳಿಗೆ ಶ್ರೀ ಮಹಾವೀರ ಮಧುರ ಸಂಗೀತ ನೀಡಿದ್ದಾರೆ. ಕುಮಾರಿ ಉಷಾ ಮಂಗೇಶಕರ, ಈ ಗೀತೆಗಳಿಗೆ ಕಂಠ ನೀಡಿ ಹಾಡಿನ ಮಹತಿಯನ್ನು ಎತ್ತರಕ್ಕೇರಿಸಿದ್ದಾರೆ. ಹಾಗೆಯೇ ಹಿನ್ನೆಲೆಗಾಯಿಕೆಯರಾದ ಶ್ರೀಮತಿ ಪುಷ್ಪಾ ಪಾಗಧಾರೆ, ಶ್ರೀ ಕೆ. ಮಹಾವೀರ ಶ್ರೀ ಹಜಾರಿಲಾಲ, ಹಾಗೂ ಮದನ ಪ್ರಕಾಶ ಕುಮಾರ ಸಂಭವಂ ನೃತ್ಯ ನಾಟಕವನ್ನು ಸಂಗೀತಮಯವನ್ನಾಗಿ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ಶ್ರೀ ಪ್ರತಾಪ ಮೆಹತಾ ಆಕರ್ಷಕ ವಿದ್ಯುದ್ದೀಪಗಳನ್ನು ಸಂಯೋಜಿಸಿ, ನಾಟಕವನ್ನು ರಂಗುರಂಗಾಗಿ ಮಾಡುತ್ತಾರೆ.

ಈ ನೃತ್ಯ ನಾಟಕದ ಪಾತ್ರಧಾರಿಗಳಲ್ಲಿ, ಕು. ರಚನಾ ಸಾರಂಗ ಪಾರ್ವತಿಯಾಗಿ, ಹಾಗೂ ಕುಮಾರಿ ಮಧುರಿತಾ ಸಾರಂಗರು ಪೂಜಾರಿನ್, ರತಿ, ಅಸ್ಥಾನ ನರ್ತಕಿ ಹಾಗೂ ಕಾರ್ತಿಕೇಯರ ಪಾತ್ರಗಳಲ್ಲಿ ಉತ್ಕೃಷ್ಟ ಅಭಿನಯ ನೀಡಿ ಆ ಪಾತ್ರಗಳನ್ನು ಸಜೀವಗೊಳಿಸಿದ್ದಾರೆ. ಹಾವ, ಭಾವ, ಲಯ ನಾಟ್ಯ ಪ್ರದರ್ಶನದಲ್ಲಿ ಈ ಸೋದರಿಯರದು ಎತ್ತಿದ ಕೈ. ಇವರ ನೃತ್ಯದ ಮಾರ್ದವತೆ, ಹಾಗೂ ವೈಶಿಷ್ಟ್ಯಪೂರ್ಣ ಪಾದ ಚಲನವಲನಗಳು ಎಂತಹ ಅರಸಿಕರನ್ನೂ ಆಕರ್ಷಿಸಬಹುದು. ರಚನಾ ಹಾಗೂ ಮಧುರಿತಾ ಅವರ ನೈಜ ಸೌಂದರ್ಯ ಅವರ ಪಾತ್ರಗಳಿಗೆ ಹೆಚ್ಚಿನ ಮೆರಗನ್ನಿತ್ತಿವೆ.

ಶಿವನ ಪಾತ್ರದಲ್ಲಿ ಜೈ ಕುಮಾರ, ಕಾಮದೇವನಾಗಿ ಹೋಶೀಮುಲ್ಲಾ, ವಸಂತನಾಗಿ ದಿಲೀಪ ಮ್ಹಾಪಸೇಕರ, ಕಾಳಿದಾಸ ಹಾಗೂ ವಿಪ್ರನ ಪಾತ್ರಗಳಲ್ಲಿ ಶ್ರೀ ಹೀರಾಲಾಲ, ನಾರದರ ಪಾತ್ರದಲ್ಲಿ ನರೇಂದ್ರ, ತಾರಕಾಸುರನಾಗಿ ಚಂದ್ರಕಾಂತ ಹಚಕರ್ ಹಿಮವಂತರಾಜನ ಪಾತ್ರದಲ್ಲಿ ರಾಧೇಶ್ಯಾಮ ಕೌಶಿಲ್, ಅಸ್ಥಾನ ನರ್ತಕಿಯಾಗಿ ಕುಮಾರಿ ಸವಿತಾ, ಮಹಾರಾಣಿ ಮೀನಾಳ ಪಾತ್ರದಲ್ಲಿ ಇಂದುಮತಿ ಬೇಟೆ ಚನ್ನಾಗಿ ಅಭಿನಯಿಸಿ ಪ್ರಯೋಗ ಯಶಸ್ವಿಗೊಳಿಸಿದ್ದಾರೆ. ಈ ಸಾರಂಗ ಸೋದರಿಯರ 'ಕುಮಾರ ಸಂಭವಂ' ಪ್ರಯೋಗವು ಮುಂಬಯಿಯ ನೃತ್ಯ ಪ್ರಪಂಚದಲ್ಲೇ ಹೊಸ ಕ್ರಾಂತಿಯನ್ನುಂಟುಮಾಡಿದೆ. ಜನಸಾಮಾನ್ಯರ ಮೆಚ್ಚುಗೆ ಗಳಿಸಿದೆ. ಪತ್ರಿಕೆಗಳಂತೂ ವಿವಿಧ ಕೋನದಿಂದ ನೋಡಿ, ಮುಕ್ತ ಕಂಠದಿಂದ ಪ್ರಶಂಸಿವೆ.

"ಕುಮಾರ ಸಂಭವಂ" ನೃತ್ಯನಾಟಕವನ್ನು ಭಾರತದಾದ್ಯಂತ ಪರಿಚಯ ಮಾಡಲೆತ್ನಿಸುತ್ತಿರುವ ಸಾರಂಗ ಸೋದರಿಯರದು ತುಂಬ ವರ್ಣಮಯ ವ್ಯಕ್ತಿತ್ವ. ಈ ಹಿಂದೆ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ಘೋಷಿಸಿದ ೨೦ ಅಂಶಗಳ ಕಾರ್ಯಕ್ರಮ ಕುರಿತು ನೃತ್ಯ ನಾಟಕವನ್ನು ಪ್ರದರ್ಶಿಸಿ ಕೀರ್ತಿ ಗಳಿಸಿದ ಶ್ರೇಯಸ್ಸು ಈ ಸೋದರಿಯರದು. "Epics of India" ನೃತ್ಯ ನಾಟಕವನ್ನು ರಚಿಸಿ, ಅದರ ನಾಲ್ಕೈದು ಪ್ರಯೋಗಗಳನ್ನು ಯಶಸ್ವಿಯಾಗಿ ನಡೆಸಿಕೊಟ್ಟಿದ್ದಾರೆ. ಮೆಹ್ಮೂದ್‌ನ "ಸಬ್‌ಸೆ ಬಡಾ ರೂಪಯ್ಯಾ" ಹಾಗೂ "ಗರೀಬಿ ಹಟಾವೋ" ಚಿತ್ರಗಳಲ್ಲಿ ನೃತ್ಯ ನೀಡಿ, ಸಿನಿಪ್ರಿಯರಿಗೂ ಪರಿಚಿತರಾಗಿದ್ದಾರೆ.

ಕಥಕ್ ಹಾಗೂ ಭರತ ನಾಟ್ಯದಲ್ಲಿ ನುರಿತ ಈ ಸೋದರಿಯರು ಸಧ್ಯ ಮುಂಬಯಿಯ ಅಪೇರಾ ಹೌಸ್



"ಕುಮಾರ ಸಂಭವಂ" ನೃತ್ಯ ನಾಟಕದ ಆರಂಭದಲ್ಲಿ ಶಿವನ ಪ್ರಾರ್ಥನೆ

ಚಿತ್ರ ಮಂದಿರದ ಬಳಿ, "ನೃತ್ಯ ದರ್ಶನ" ಎಂಬ ಸಂಸ್ಥೆಯನ್ನ ಆರಂಭಿಸಿ ನೃತ್ಯ ಶಿಕ್ಷಣವನ್ನು ನೀಡುತ್ತಿದ್ದಾರೆ. ಕು.ರಚನಾ ಸಾರಂಗ ಈಗ ೪೦ ವಿದ್ಯಾರ್ಥಿನಿಯರ ಶಿಕ್ಷಕಿ.

ಡಾ॥ ರಾಮಚಂದ್ರ ಸಾರಂಗ ಮೂಲತಃ ರಾಜಸ್ಥಾನಕ್ಕೆ ಸೇರಿದವರು. ೧೯೩೮ ರಲ್ಲಿ ಮುಂಬಯಿಗೆ ಬಂದು ನೆಲೆಸಿದರು. ಡಾ। ಸಾರಂಗರಿಗೆ ಯೋಗಾಭ್ಯಾಸ ಮನಶ್ಶಾಸ್ತ್ರ ಮತ್ತು ಸಮ್ಮೋಹಿನಿ ವಿದ್ಯೆಯಲ್ಲಿ ಅತಿಯಾದ ಆಸಕ್ತಿ. ವಿಶೇಷ ಪರಿಣತಿ. ಈ ವಿಷಯದಲ್ಲಿ ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದಿದ್ದಾರೆ. ಶ್ರೀ ಸಾರಂಗ ಹೈದರಾಬಾದಿನ ಜಾನಿಯೊಂದಿಗೆ ಪ್ರೇಮ ವಿವಾಹವಾದರು. ಶ್ರೀಮತಿ ಜಾನಿ ಸಾರಂಗ ಹಿಂದೆ ಚಲಚಿತ್ರಗಳಲ್ಲಿ ಅಭಿನಯಿಸಿದ್ದಾರೆ. ಇವರಿಗೆ ಸಂಗೀತ ಮತ್ತು ನೃತ್ಯದಲ್ಲಿ ಅತಿಯಾದ ಆಸಕ್ತಿ. ಆದರೆ ಡಾ। ಸಾರಂಗರ ಅಭಿರುಚಿ ಇದಕ್ಕೆ ತದ್ವಿರುದ್ಧ. ಅವರಿಗೆ ತಮ್ಮ ವೃತ್ತಿಯೆಡೆ ಲಕ್ಷ್ಯ. ಭಾರತ ದಾದ್ಯಂತ್ಯವಲ್ಲದೆ, ತಮ್ಮ ವಿದ್ಯೆ ಪ್ರದರ್ಶಿಸಲು ಪರದೇಶಕ್ಕೂ ಹೋಗ ತೊಡಗಿದರು.

ಡಾ॥ ಸಾರಂಗರ ಮಕ್ಕಳು ಕು. ರಚನಾ ಮತ್ತು ಮಾಧುತಾರ ಅಭಿರುಚಿ ತಾಯಿಯದೇ. ತಾಯಿ ನೆಟ್ಟ ಆಸಕ್ತಿಯ ಬೀಜ ಮೊಳಕೆಯೊಡೆದು ಸಸಿಯಾಗಿ, ಮರವಾಗಿ ಹೂ ಬಿಡ ತೊಡಗಿತು.

(ನಾನು ಸಾರಂಗ ಸೋದರಿಯರಿಬ್ಬರಿಗೂ ಕರ್ಮವೀರದ ಬಗೆ ತಿಳಿಸಿ ಸಂದರ್ಶನಕ್ಕೆ ಆರಂಭಿಸಿದಾಗ ಸಾರಂಗ ಸೋದರಿಯರು ಸಂತಸದಿಂದಲೇ ನನ್ನ ಪ್ರಶ್ನೆ ಸ್ವಾಗತಿಸಿದರು.

"ನೋಡಿ ರಚನಾ ಅವರೆ. ನೀವೀಗ ನಿಮ್ಮ ಪರಿಶ್ರಮದಿಂದ ತುಂಬ ಹೆಸರು ಪಡೆದಿದ್ದೀರಿ ನಿಮಗೆ ಸ್ಫೂರ್ತಿ ಹೇಗ ಬಂತು. ಬೆಳೆದು ಬಂದ ಬಗೆ ಹೇಳ್ತೀರಾ?"

ರಚನಾ ನಗು ಮೊಗದಿಂದಲೇ ಹೇಳಿದರು "ನನ್ನಲ್ಲಿ ನೃತ್ಯದ ಬಗೆಗೆ ಆಸಕ್ತಿ ಮೂಡಿದುದು ಒಂದು ಆಕಸ್ಮಿಕ. ನಾನಾಗ ಚಿಕ್ಕವಳಿದ್ದೆ. ತಂದೆ ತಾಯಿಯ ಜತೆ ಸಿನೇಮಾಕ್ಕೆ ಹೋಗಿದ್ದೆ. ಆ ಸಿನೇಮಾದಲ್ಲಿಯ ನೃತ್ಯವೊಂದನ್ನು ಕಂಡು ನಾನು ಕಾಲು ಕುಣಿಸಲು ಪ್ರಾರಂಭಿಸಿದೆನಂತೆ. ನನ್ನ ಈ ಅಭಿರುಚಿಯನ್ನು ಗುರುತಿಸಿದ ತಾಯಿ– ಆ ದಿಶೆಯಲ್ಲಿ ಮುಂದುವರಿಯಲು ಪ್ರೇರೇಪಿಸಿದಳು. ನೃತ್ಯದ ವಿವಿಧ ಹಂತಗಳನ್ನೇರುವಲ್ಲಿ ನನ್ನ ಗುರುವರ್ಗದ ಮಾರ್ಗದರ್ಶನ ಸಹಾಯ ಮಾಡಿತು. ಜೈಪುರ ಘರಾಣಾದ ಖ್ಯಾತ ಕಥಕ್ ನೃತ್ಯ ಕಲಾವಿದ ಪಂಡಿತ ಸುಂದರ ಪ್ರಸಾದರು ನನಗೆ ಕಥಕ್ ನೃತ್ಯದ ಪಾಠ ಆರಂಭಿಸಿದರು. ನಂತರ ಲಖನೌ ಘರಾಣಾದ ಪಂಡಿತ ಲಚ್ಚು ಮಹಾರಾಜ ಹಾಗೂ ಬಿಟ್ಟೂ ಮಹಾರಾಜ್ ಅವರ ಬಳಿ ನನ್ನ ಅಭ್ಯಾಸ ಮುಂದುವರಿಯಿತು. ಸುಮಾರು ೧೨ ವರ್ಷ ನಾನು ಕಥಕ್ ನೃತ್ಯದ ಅಭ್ಯಾಸ ಮಾಡಿದೆ. ಕಥಕ್‌ದೊಂದಿಗೆ ನಾನು ತಂಜಾವೂರ ಸಾಂಪ್ರದಾಯದ ಗುರು ಚಂದ್ರಶೇಖರ ಪಿಳ್ಳೆ ಅವರ ಮಾರ್ಗದರ್ಶನದಲ್ಲಿ ಭರತನಾಟ್ಯ ನೃತ್ಯವನ್ನು ಕಲಿಯಲು ಆರಂಭಿಸಿದೆ. ನಂತರ ಮಾತುಂಗಾದಲ್ಲಿರುವ ಶ್ರೀ ರಾಜ ರಾಜೇಶ್ವರಿ ಭರತನಾಟ್ಯ ವಿದ್ಯಾಮಂದಿರದ ಗುರು ಕಲ್ಯಾಣ ಸುಂದರಂ ಅವರ ಮಾರ್ಗದರ್ಶನದಲ್ಲಿ ಭರತನಾಟ್ಯ ನೃತ್ಯಪಾಠ ಮುಂದುವರೆಸಿದೆ."

ಕಥಕ್ ಬಿಟ್ಟು ಭರತನಾಟ್ಯವನ್ನು ಆರಂಭಿಸಿದ ಬಗ್ಗೆ ನಾನು ಕೇಳಿದಾಗ ಉತ್ತರ ಕೊಟ್ಟವರು ರಚನಾ ಅಲ್ಲ. ತಂದೆ ಸಾರಂಗ. ಡಾ. ಸಾರಂಗರ ಹೇಳಿಕೆಯ ಪ್ರಕಾರ ಕಥಕ್ ಶಿಕ್ಷಕರಲ್ಲಿ ಒಮ್ಮತವಿಲ್ಲ. ಆದರೆ ಭರತನಾಟ್ಯದ ಶಿಕ್ಷಕರು ತಮ್ಮ ವಿದ್ಯೆಯನ್ನು ಕಲಿಯಲು ಪ್ರೋತ್ಸಾಹಿಸುತ್ತಾರೆ ಈ ಕಾರಣಕ್ಕಾಗಿ ಗುರು ಚಂದ್ರಶೇಖರ ಪಿಳ್ಳೆಯವರ ಬಳಿ ಹೋಗಿ ಸಾರಂಗ ಸೋದರಿಯರಿಗೆ ಭರತನಾಟ್ಯ ನೃತ್ಯ ಕಲಿಸಲು ಡಾ. ಸಾರಂಗ ಕೇಳಿಕೊಂಡರಂತೆ.

ಅಂದ ಮಾತ್ರಕ್ಕೆ ಕಥಕ್ ನೃತ್ಯವನ್ನು ದೂರುವುದಿಲ್ಲ. ಅದರ ಬಗ್ಗೆ ಅವಳಿಗೆ ಗೌರವವಿದೆ. ಕಥಕ್ ನಮ್ಮ ದೇಶದ ಉತ್ತರ, ಪೂರ್ವ, ಪಶ್ಚಿಮ ಭಾಗಗಳಲ್ಲಿ ತುಂಬ ಖ್ಯಾತಿ ಪಡೆದಿದೆ ಎಂದು ರಚನಾ ಹೇಳಿದರಲ್ಲದೆ ಅದು ರಚನಾತ್ಮಕ ಕಲೆ ಎಂದು ಶ್ಲಾಘಿಸಿದರು. ಹಾಗೆಯೇ, ದಕ್ಷಿಣ ಭಾರತದಲ್ಲಿ ಜನಪ್ರಿಯತೆ ಪಡೆದ



← ರತಿ–ಕಾಮದೇವ ನೃತ್ಯ "ಕುಮಾರ ಸಂಭವಂ"ದ ಈ ನೃತ್ಯದಲ್ಲಿ ಪಾತ್ರವಹಿಸಿದವರು. ಹೊ.ಶಿ ಮುಲ್ಲಾ (ಕಾಮ) ಮಧುಮಿತಾ (ರತಿ)



ಕುಮಾರ ಸಂಭವಂ"ದಲ್ಲಿ ಶಿವ ಪಾರ್ವತಿಯ ವಿವಾಹ.
ಶಿವನಾಗಿ ಜೈಕುಮಾರ್ ಪಾರ್ವತಿಯಾಗಿ ರಚನಾ ಸಾರಂಗ



ಶಿವ ಪಾರ್ವತಿಯೊಂದಿಗೆ ಕಾರ್ತಿಕೇಯ ಚಂದ್ರಕಾಂತ (ಶಿವ) ರಚನಾ (ಪಾರ್ವತಿ)



ಕಾರ್ತಿಕೇಯ ತಾರಕಾಸುರನನ್ನು ಕೊಲ್ಲುತ್ತಿರುವಾಗ. "ಕುಮಾರ →
ಸಂಭವಂ" ದಲ್ಲಿಯು ಈ ಎರಡು ಪಾತ್ರಗಳಲ್ಲಿ ಕುಮಾರಿ ಮಧುರಿತಾ
ಸಾರಂಗ ಮತ್ತು ಚಂದ್ರಕಾಂತ ಹಚಕರ್.

ಭರತನಾಟ್ಯದ ಬಗೆಗೂ ರಚನಾಳಿಗೆ ಆಸಕ್ತಿ ಹೆಮ್ಮೆ.

ನೃತ್ಯ ನಾಟಕವನ್ನು ದಿಗ್ದರ್ಶಿಸಿ ಹೆಸರು ಪಡೆದ ರಚನಾ ಆ ದಿಶೆಯಲ್ಲಿ ಅನೇಕ ಸಮಸ್ಯೆಗಳನ್ನೆದುರಿಸಿದ್ದಾರಂತೆ. ನೃತ್ಯ ನಾಟಕವನ್ನು ಆರಂಭಿಸುವ ಮೊದಲು ಕಲಾವಿದರನ್ನು ಹುಡುಕುವದು ನಾಟಕಕ್ಕೆ ಪೂರಕವಾಗಿ ಸಂಗೀತ ಬೆಳಕು ನೀಡುವವರನ್ನು ಹುಡುಕುವದು ಇವರೆಲ್ಲರನ್ನೂ ಸೇರಿಸಿ ರಂಗತಾಲೀಮು ಮಾಡುವದು ಇವೆಲ್ಲ ಮುಗಿಸಿದ ಬಳಿಕ ನೃತ್ಯವನ್ನು ಸಂಘಟಿಸಿದವರ ಮನಸಿಗೆ ಹಾಗೂ ಪ್ರೇಕ್ಷಕರಿಗೆ ತೃಪ್ತಿಯಾಗುವಂತೆ ಪ್ರಯೋಗಿಸುವುದು ಇವೆಲ್ಲ ಸಮಸ್ಯಾ ಸಮೂಹಗಳೇ ಎನ್ನುತ್ತಾರೆ ರಚನಾ ಸಾರಂಗ ಸುಮಾರು ೯೦,೦೦೦ ರೂಪಾಯಿಗಳ ಅದ್ದೂರಿ ಖರ್ಚಿನಲ್ಲಿ ಕುಮಾರ ಸಂಭವ ನೃತ್ಯ ನಾಟಕವನ್ನು ಪ್ರಯೋಗಿಸಿದ ಧೀರೆಯರು ಈ ಸಾರಂಗ ಸೋದರಿಯರು.

೧೯೭೪ರಲ್ಲಿ ಮುಂಬಯಿಯ ಭುಲಾಭಾಯಿ ಸಭಾಗೃಹದಲ್ಲಿ ಕುಮಾರ ಸಂಭವ ಯಶಸ್ವಿಯಾಗಿ ಪ್ರದರ್ಶಿತಗೊಂಡಾಗ ಕು. ಸಾರಂಗ ಸೋದರಿಯರಿಗೆ ಮರೆಯಲಾಗದ ಕ್ಷಣವಂತೆ. ತಮ್ಮ ಶ್ರಮ ಸಾರ್ಥಕ ರೂಪು ಪಡೆದಾಗ ಕಲಾವಿದನಿಗೆ ಆಗುವ ಸಂತಸ ವರ್ಣಿಸಲಸದಳ-ಎನ್ನುತ್ತಾರೆ ಈ ಸೋದರಿಯರು.

ಕು. ಸಾರಂಗ ಸೋದರಿಯರು ನೃತ್ಯ ನೀಡಿದಲ್ಲೆಲ್ಲ ಪ್ರಶಂಸೆಯನ್ನು ಗಳಿಸಿದ್ದಾರೆ. ಶ್ರೀಮತಿ ಇಂದಿರಾಗಾಂಧಿಯವರು ಘೋಷಿಸಿದ ೨೦ ಅಂಶಗಳ ಕಾರ್ಯಕ್ರಮ ಪ್ರಾಧಾನಿಸಿ ನೀಡಿದ ನೃತ್ಯನಾಟಕ 'ನಯೀ ಶುಭಹಕೀ ನಯೀ ಕಿರಣ್" ದೂರದರ್ಶನದಲ್ಲಿ ಪ್ರಸಾರಗೊಂಡು, ತುಂಬ ಕೀರ್ತಿ ತಂದಿದೆ.

ಕು॥ ರಚನಾ ಸಾರಂಗರಿಗೆ ಚಿತ್ರರಂಗದ ಬಗ್ಗೆ ಗೌರವವಿಲ್ಲ. ಭರವಸೆ ಇಲ್ಲ. ಸಬ್‌ಸೆ ಬಡಾ ರೂಪಯ್ಯಾ ಮತ್ತು ಗರೀಬಿ ಹಟಾವೊ ಚಿತ್ರಗಳಲ್ಲಿ ನಟಿಸಿದುದಕ್ಕಾಗಿ ಕು॥ ಸಾರಂಗ ಸೋದರಿಯರಿಗೆ ತುಂಬ ವ್ಯಥೆಯಾಗಿದೆ. ಚಿತ್ರರಂಗದಲ್ಲಿ ಒಳ್ಳೆಯ ಹೆಸರಿಗಿಂತ ಕೆಟ್ಟ ಹೆಸರೇ ಬರುತ್ತದೆ ಎಂಬುದು ಅವರ ನಂಬಿಗೆ.

ಹಿಂದೆ ಭಾವನಗರದಲ್ಲಿ ನಡೆದ ಎಂಟು ದಿವಸಗಳ ಅಖಿಲಭಾರತ ನೃತ್ಯಮಹೋತ್ಸವದಲ್ಲಿ ಆಗಿನ್ನೂ ಚಿಕ್ಕವಳಾಗಿದ್ದ ರಚನಾ. ಬಿರಜು ಮಹಾರಾಜ. ರವಿಶಂಕರ್ ಸೀತಾರಾದೇವಿ ಮುಂತಾದ ಖ್ಯಾತ ವಿದ್ವಾಂಸರ ಮುಂದೆ ನೃತ್ಯ ಪ್ರದರ್ಶನ ನೀಡಿ ಬೆನ್ನು ತಟ್ಟಿಸಿಕೊಂಡಿದ್ದಾಳೆ.

ಕು॥ ರಚನಾ ಸಾರಂಗರಿಗೆ ಈಗ ವಿವಾಹ ನಿಶ್ಚಯವಾಗಿದೆ. ಪತಿ ಕೂಡ ಕಲಾಪ್ರೇಮಿಯಾದುದರಿಂದ, ತನ್ನ ಕಲಾಸೇವೆ ನಿರಂತರವಾಗಿ ನಡೆಯುವ ಆಸೆಯನ್ನು ಕು॥ ಸಾರಂಗ ಹೊಂದಿದ್ದಾಳೆ. "ಕುಮಾರ ಸಂಭವಂ, ರಾಮಾಯಣ ನೃತ್ಯನಾಟಕಗಳನ್ನು ಟಿ. ವಿ.ಯಲ್ಲಿ ಪ್ರದರ್ಶಿಸುವ ವಿಚಾರವಿದೆ. ಇವರಿಗೆ- ಕೃಷ್ಣಲೀಲಾ. ಅದ್ಭುತಕನ್ಯಾ ರಾಮಾಯಣ ನೃತ್ಯನಾಟಕಗಳನ್ನು ರಂಗಮಂಚದಲ್ಲಿ ತರುವ ಸಿದ್ಧತೆ ನಡೆಸಿರುವರು. ಅವರ ಸಾಧನೆ ಮೆಚ್ಚಿ. ಅವರ ಮುನ್ನ ದೇವದಾರಿಗೆ ಯಶಸ್ಸು ಕೋರಿ ಬೀಳ್ಕೊಂಡೆ. ●

## ಜ್ಞಾನದ ಉಪಯೋಗ

ಓರ್ವ ಮಹಾತ್ಮರ ಬಳಿ ಒಬ್ಬ ಶಿಷ್ಯನಿದ್ದ ಆದರೆ ಶಿಷ್ಯ ಮಹಾ ಮುಂಗೋಪಿ. ತನ್ನ ಜ್ಞಾನದ ಬಗೆಗೆ ಅಸಾಧ್ಯ ಗರ್ವ ಅವನಿಗಿತ್ತು. ತನಗೆ ಎಲ್ಲರೂ ಗಡಗಡ ನಡುಗಬೇಕೆಂಬುದು ಅವನಿಚ್ಛೆ. ಅವನ ಗರ್ವ, ಅಟ್ಟಹಾಸ ಗುರುವಿಗೆ ತುಂಬ ನೋವನ್ನುಂಟುಮಾಡಿತು.

ಒಂದು ದಿನ ಗುರು- ಆ ಶಿಷ್ಯನನ್ನು ಕರೆದುಕೊಂಡು ಹೊಲಕೆ ಹೋದ. ಹೊಲದಲ್ಲಿ ನಟ್ಟು ಕಡಿಯುತ್ತಿದ್ದವನ ಬಳಿ ನಿಂತರು. ಆ ಒಕ್ಕಲಿಗ ಗುರು ಶಿಷ್ಯರನ್ನು ನೋಡಲೂ ಇಲ್ಲ. ಮಾತನಾಡಿಸಲೂ ಇಲ್ಲ ಶಿಷ್ಯನಿಗೆ ತುಂಬ ವಿವಂಚನೆಯುಂಟಾಯಿತು ಅಲ್ಲಿ ನಿಲ್ಲದೆ ಗುರುವನ್ನು ಕರೆದುಕೊಂಡು ಹೊರಟ. ದಾರಿಯಲ್ಲಿ ಗುರುವನ್ನು ಕುರಿತು ಶಿಷ್ಯನೆಂದ— "ಗುರುವೇ ಅವನಿಗೆಷ್ಟು ಸೊಕ್ಕು?" "ಸೊಕ್ಕಲ್ಲ" ಗುರು ನುಡಿದ. ಅವನು ಸದುಪಯೋಗಿ ಕೆಲಸವನ್ನೇ ಮಾಡುತ್ತಿದ್ದಾನೆ. ಆದರೆ ನೀನು ಹೇಳುವ ಗರ್ವಿಷ್ಠ ಮಾತ್ರ ಯಾವ ಕೆಲಸವನ್ನೂ ಮಾಡುವದಿಲ್ಲ. ಶ್ರಮದಲ್ಲಿಯೇ ಜ್ಞಾನದ ಸಾರ್ಥಕ್ಯ ಕಾಣಬೇಕು ಎಂದಾಗ ಶಿಷ್ಯನ ಕಣ್ಣು ತೆರೆದಿತ್ತು.


ಜಗಳ ಬೇಡ! ಟಾಸಿನಲ್ಲಿ ಸೋತವರು ಶಿಬಿರಕ್ಕೆ ಹೋಗಬೇಕು!!


ಮೀಶಿ ಹೊತ್ತ ಗಂಡಸ ನೀನು!
ಶಿಬಿರಕ್ಕ ಹೋಗಲಕ್ಕೆ ಹೆದರತೀ?


ಬುದ್ಧೀನ ಕಡಿಮಿ ನಿನಗ! ನಮ್ಮಂಗ ೭ ಮಕ್ಕಳು ಇದ್ದರೂ ಗಂಗಿಗಂಡ ಎರಡs ಅಂತ್ಹೇಳಿ ೧೦೯ರೂ ತಂದಾನ!!


ಮತ್ತೊಮ್ಮೆ ಮಾಡಿಬಿಡಿರಿ, ಡಾಕ್ಟರ್ರಿ!! ಮನ್ಯಾಗ ಖರ್ಚಿಗಿ ಒಂದ ಪೈಸಾನೂ ಇಲ್ಲ!




ಯಾರೋ ಸುಳ್ಳು ರಿಪೋರ್ಟ ಮಾಡ್ಯಾರ್ರೀ
ನನಗ ಇನ್ನೂ ಮದವೇನ ಆಗಿಲ್ಲೇss

ಪುಟ್ಟಲಕ್ಷ್ಮತ್ತೆ ಅಲಿಯಾಸ್ ಪ್ರಮೀಳಾದೇವಿ ಮನೆಕಟ್ಟಿಸಿ ಗೃಹಪ್ರವೇಶ ಮಾಡಿದಳು. ನಮಗೆಲ್ಲ ಆಮಂತ್ರಣ. ಭರ್ಜರಿ ಆತಿಥ್ಯ ನಡೆಯಿತು. ತಾಂಬೂಲ ಮೆಲ್ಲುತ್ತಿದ್ದಾಗ ಆಕೆ ತನ್ನ ದ್ವಿಪಾತ್ರದ ಪರಿಚಯ ಮಾಡಿಸಿದಳು.

ಟಿ. ಸುನಂದಮ್ಮ

# ದ್ವಿಪಾತ್ರ



ನಿಮ್ಮ ನೆಚ್ಚಿನ ನಟ ಶಾಮಕುಮಾರ...ದ್ವಿಪಾತ್ರದಲ್ಲಿ

—ಇದು, ಬಿಡುಗಡೆಯಾದಂವ ಅನೇಕ ಚಿತ್ರಗಳ ಜಾಹೀರಾತಿನ ಒಂದು ವಾಕ್ಯ. ನೀವು ನೋಡಿರುವ ಒಂದೇ ವ್ಯಕ್ತಿ ಕಳಾಪೂರಿತ. ಯುವಕನೂ ಆಗುತ್ತಾನೆ, ಖಳನಾಯಕನೂ ಆಗುತ್ತಾನೆ; ರಸಿಕನೂ ಆಗುತ್ತಾನೆ ವೃದ್ಧನೂ ಆಗುತ್ತಾನೆ; ಅವನೇ ಎಲ್ಲ ಆಗುತ್ತಾನೆ!

ಇದು, ಕೇವಲ ಚಿತ್ರ ಪ್ರಪಂಚದಲ್ಲಿ ಮಾತ್ರವೆಂದು ತಿಳಿಯಬೇಡಿ. ನಿಜ ಜೀವನದಲ್ಲಿ ಇಂಥ ಅನೇಕಾನೇಕ ವ್ಯಕ್ತಿಗಳುಂಟು. ಅವರ ಬಾಳು ಭರ್ತಿ ದ್ವಿಮುಖ ಪಾತ್ರವೇ...ಅಂಥ ಒಂದು ವ್ಯಕ್ತಿತ್ವ ನಮ್ಮ ಪುಟ್ಟ ಲಕ್ಷ್ಮಮ್ಮತ್ತೆಯದು.

"ಬ್ರಹ್ಮಗಂಟು?"......"ಋಣಾನುಬಂಧ"—ಇವು ಹಿಂದಿನ ಪೀಳಿಗೆಯವರ ಭಾಷಾ ನಿಘಂಟಿನಲ್ಲಿ ಹಗಲೆಲ್ಲ ಚಲಾವಣೆಯಾಗುತ್ತಿದ್ದ ಪದಗಳು. ತೊಟ್ಟಿಲ ಮಕ್ಕಳಿಗೆ ಗಂಡ ಹೆಂಡಿರ ಪಟ್ಟಕಟ್ಟಡುತ್ತಿದ್ದ ಕಾಲವಲ್ಲಿ. ಅಥವಾ "ಸೋದರ ಕಡೆ"ಯದೊಂದು ಹೆಣ್ಣೋ ಗಂಡೋ ಇದೆ ಎಂದು ತಿಳಿದಕೂಡಲೆ Match-Making ನಡೆಯುತ್ತಿದ್ದ ದಿನಗಳಲ್ಲಿ ಪದೇ ಪದೇ ಕಿವಿಗೆ ಬೀಳುತ್ತಿದ್ದ ಪದಗಳಿವು. ಹೆಸರಿಟ್ಟ ಮೇಲೆ ತೀರಿತು- ವರಪರೀಕ್ಷೆ ವಧುಪರೀಕ್ಷೆ ಇಲ್ಲ!—ಅವರು ದಂಪತಿಗಳಾಗಲೇಬೇಕು! ಅವರೂ-"ಪಾಲಿಗೆ ಬಂದದ್ದು ಪಂಚಾಮೃತ" ಎಂತಲೋ "ಕೂಡಿದವರಿಗೆ ಕೊಡಗೆಮಂದ್ದು" ಎನುವ ಪೆಚ್ಚು ಸಮಾಧಾನ ಹೇಳಿಕೊಂಡೋ ಅಣಿಯಾಗಿ ಬಾಳುವೆ ಮಾಡುತ್ತಿದ್ದರೆನ್ನಿ! ಇಂತಹ ಮದುವೆಗಳಲ್ಲಿ "ವರಸಾಮ್ಯ"ದ ಪ್ರಶ್ನೆಯೇ ಏಳುತ್ತಿರಲಿಲ್ಲ. ಗಂಡಹೆಂಡಿರು, "Laurel and Hardy"ಹಾಗೋ "ಅಯ್ಯನವರು ಕಡುರು ಅಮ್ಮನವರು ಕುಡುರು" ಎನ್ನುವ ಗಾದೆಗೆ ಸಾಕ್ಷೀಭೂತವಾಗಿಯೋ. ಬಣ್ಣದಲ್ಲಿ ಕಾಫಿಪುಡಿ ಸಕ್ಕರೆಗಳಷ್ಟು ಅಂತರ ಹೊಂದಿಯೋ. ಇರುತ್ತಿದ್ದುದು ತೀರ್ಮ ಸಾಮಾನ್ಯ ಸಂಗತಿ.

ಇಂಥದೊಂದು ಅಪರೂಪ ಜೋಡಿ ನಮ್ಮ ಪುಟ್ಟ ಲಕ್ಷ್ಮತ್ತೆ ಅವರ ಪತಿವರ್ಯ ಭೀಮರಾಯರದು. ಎಲ್ಲಾದರಲ್ಲೂ ವಿರೋಧಾಭಾಸದ ದಾಂಪತ್ಯ. ಮೊದಲಿಗೆ [illegible] "ಪುಟ್ಟಲಕ್ಷ್ಮಿ".

ಹೆಸರಿನಲ್ಲೇ ಮೋಸ! ಪುಟ್ಟಲಕ್ಷ್ಮಮ್ಮ ಐದಡಿ ಎಂಟಂಗುಲದ ಭವ್ಯನಿಲುವಿನ ದೊಡ್ಡ ಲಕ್ಷಮ್ಮ! ಭೀಮರಾಯರ ತೂಕ ಎಂಟು ಇಂಟು ಹತ್ತು ಪೌಂಡುಗಳ ಅಕ್ಕಪಕ್ಕಕ್ಕಿಂತ ಎಂದೂ ಮೇಲೇರಲೇ ಇಲ್ಲ!

ನಮ್ಮೂರಿನಲ್ಲೊಂದು ಶ್ರೀನಿವಾಸದೇವರ ದೇವಾಲಯವಿದೆ.(ಅಮ್ಮನವರು ಮಹಾಲಕ್ಷ್ಮಿ ಎಂದು ಹೇಳಬೇಕಾಗೇ ಇಲ್ಲವಲ್ಲ?) ಹೀಗಾಗಿ, ಪ್ರತಿಕುಟುಂಬದಲ್ಲೂ ಮನೆದೇವರ ಗೌರವಾರ್ಥವಾಗಿ ಒಂದು ಶ್ರೀನಿವಾಸ ಒಂದು ಲಕ್ಷ್ಮಿ ಇದ್ದೇ ಇರಬೇಕಾಗಿ ಬಂದು, ಶ್ರೀನಿವಾಸರೆಲ್ಲ ದೊಡ್ಡ ಶ್ರೀನಿವಾಸ, ಚಿಕ್ಕಶ್ರೀನಿವಾಸ, ಪುಟ್ಟ ಶ್ರೀನಿವಾಸ, ಮೀಸೆ ಶ್ರೀನಿವಾಸ. ಮೆಳ್ಳೆ ಶ್ರೀನಿವಾಸ, ಬೇಲಿಮನೆ ಶ್ರೀನಿವಾಸ, ಬೇವಿನಮರದ ಶ್ರೀನಿವಾಸ-ಇತ್ಯಾದಿ "ಹಿಂಬಿರುದು"ಗಳಿಂದ ಗುರುತಿಸಲ್ಪಡುತ್ತಾರೆ. ಹಾಗೆಯೇ ಹೆಣ್ಣುಮಕ್ಕಳೂ ಸಹ! ವರಲಕ್ಷ್ಮಿ, ಶ್ರೀಲಕ್ಷ್ಮಿ, ಗಜಲಕ್ಷ್ಮಿ, ಅಜಲಕ್ಷ್ಮಿ, ಮಹಲಕ್ಷ್ಮಿ, ಸುಬ್ಬಲಕ್ಷ್ಮಿ...! ಈ ನಮ್ಮ "ನಾಯಕಿ"ಯ ಸರತಿ ಬಂದಾಗ

ಇನ್ನು ಭೀಮರಾಯರ ನಾಮಧೇಯವೂ ಅಷ್ಟೇ ಅತಂತ್ರ. ಅವರಮ್ಮ-ಕೆಂಪು ತ್ರಿಕೋಣವನು ಕಂಡು ಯದ ಆ ಕಾಲದಲ್ಲಿ- ಅದೆಷ್ಟೋ ಮಕ್ಕಳನ್ನು ಕಳೆದು ಕೊಂಡು, ವಿದುರಾಶ್ವತ್ಥ ಸುಬ್ರಹ್ಮಣ್ಯ, ಧರ್ಮಸ್ಥಳ, ನಾಗಪ್ರತಿಷ್ಠೆ ಸೇತುಸ್ನಾನ, ವೇಣೀದಾನ, ಗಂಗಾಸ್ನಾನ ಎಂದೇನೋ ಪ್ರಯತ್ನ ನಡಸಿ, ಅಳಿದುಳಿದುಕೊಂಡ ತನ್ನ ಏಕೈಕ ಪುತ್ರರತ್ನನಿಗ "ಭೀಮನಂತೆ ಬಾಳಿಕೊಂಡಿರು ಬಾಳು!" ಎಂದು ಹಾರೈಸಿ ಪಾಂಡವ ವೀರನ ಹೆಸರಿಟ್ಟದ್ದುಂಟಂತೆ; ಪುಷ್ಟಿ ಆಹಾರ ಹಣ್ಣು ಹಂಪಲ ಬಾದಾಮಿ ಬೆಣ್ಣೆ ಸಜ್ಜಿಗೆ ಹಾಲು ಚ್ಯವನಪ್ರಾಶ ಕೂಷ್ಮಾಂಡಲೇಹ ಅಮೃತ ಕಷಾಯ ಅಖಂಡ ಚೂರ್ಣ- ಏನೆಲ್ಲ ಅವನ ಹೊಟ್ಟೆಗೆ ತುಂಬಿ ಮಗ ಬೇಗ ಬೆಳೆಯಲು ಪ್ರಯತ್ನಿಸಿದ್ದುಂಟಂತೆ. ತುಂಬಿದಷ್ಟೂ ರೋಗಾಲಾಪನೆಮಾಡಿಕೊಂಡೇ ದೊಡ್ಡವನಾದ ಈ 'ಖೋಟಾ' ಭೀಮ, ಐದಡಿ ಎರಡಂಗುಲದ ನರಪೇತಲ ನಾರಾಯಣನಾಗಿಯೇ ಉಳಿದನಂತೆ!......

Marriages are made in heaven ಎನ್ನು

ವುದೊಂದು ನಾಣ್ಣುಡಿ: ಆದರೆ ಪುಟ್ಟಲಕ್ಷ್ಮಿ ಭೀಮಣ್ಣರದು Marriage made in cradle ಇವರಿಬ್ಬರ ಈಡಿಲ್ಲದ ಜೋಡಿ, ಯಥಾಪ್ರಕಾರ ಸೋದರಿಕೆಯ ಫಲಿತಾಂಶ!

ನಡೆವಳಿಕೆಯೂ ಅಷ್ಟೆ. ಇಬ್ಬರದ್ದೂ ಉತ್ತರ-ದಕ್ಷಿಣ ಬಾಂಧವ್ಯ. ವ್ಯಕ್ತಿತ್ವಕ್ಕೆ ತಕ್ಕ ಸಾಧು ಸ್ವಭಾವ ಭೀಮರಾಯರದು; ಆದರೂ, ಮನೆಯೊಡೆಯ ಎನ್ನುವ 'ಗತ್ತು' ಉಳಿಸಿಕೊಳ ಬೇಕೆಂದಾತ ಪ್ರಯತ್ನ ಮಾಡಿದ್ದುಂಟು, ಸಂಸಾರ ಹೂಡಿದ ಮೊದಲ ದಿನಗಳಲ್ಲಿ. ಆದರೆ ಪತ್ನಿಯ ಗುಡುಗಿಗೆ ಮತ್ತೂ ಕರಗತೊಡಗಿದ ಆತ! ಎಷ್ಟು ಕರಗಿದನೆಂದರೆ ಆತನಿಗೊಂದು ಸಣ್ಣ ಶಸ್ತ್ರಚಿಕಿತ್ಸೆ ಆಗಿದ್ದಾಗ, ಆಸ್ಪತ್ರೆಯ ಬೆಡ್ಡೊಂದರ ಮೇಲೆ ಈತ ಮುಸುಕಿಕ್ಕಿ ಮಲಗಿದಾಗ, ಆತನ ಮೇಲೆ ಬೇರೊಬ್ಬ ಪೇಷಂಟನ್ನು ತಂದು ಮಲಗಿಸಿದರಂತೆ! ಅಂದಿನಿಂದ ಆತ ಎಚ್ಚರಿಕೆ ವಹಿಸಿ, ತನ್ನ ಪಾಡಿಗೆ ತಾನಿದ್ದು ಬಿಟ್ಟರೆ ತೀರ ಪಾರದರ್ಶಕ ಪ್ರಾಣಿಯಾಗಿಬಿಡುವ ಅಪಾಯ ತಪ್ಪೀತೆಂದು ಅರಿತು, ಪುಟ್ಟಲಕ್ಷ್ಮಮ್ಮನ ಪಟ್ಟದ ಸರ್ವಾಧಿಕಾರವನ್ನು ಒಪ್ಪಿಕೊಂಡು ಬಿಟ್ಟನಂತೆ! ಕಛೇರಿ-ಕ್ಲಬ್ಬುಗಳೇ ಆತನ ಪ್ರಪಂಚ: ಊಟ ತಿಂಡಿ ನಿದ್ದೆಗೆ ಮಾತ್ರ ಮನೆಯನ್ನಾಧರಿಸಿ ಹೆಂಡತಿ ಹಾಕಿದ ಗೆರೆ ದಾಟದ ಕಲಿಗಾಲದ ಪತಿದೇವ!

ಪುಟ್ಟಲಕ್ಷ್ಮಮ್ಮನ ಪಟ್ಟುಗಳೇ ಬೇರೆರೀತಿ'ಆಕೆ ಏನು ಮಾಡಿದರೂ 'ದ್ವಿಮುಖ ಸರ್ಕಾರ'ವೇ-ಎರಡು ಉದ್ದೇಶ, ಬಹುಶಃ ಆಕೆಯ ಡಬಲ್ ನಾಮಧೇಯದ ಪರಿಣಾಮವೋ ಏನೋ? ಅಂದ ಹಾಗೆ ಮರೆತೆ– ಸಮಾಜ ಸಂಘ ಸಂಸ್ಥೆಗಳಲ್ಲಿ ಸಾಕಷ್ಟು ಚಟುವಟಿಕೆ ಚಲಾಯಿಸುವ ಈಕೆ, ಆ ಕ್ಷೇತ್ರದಲ್ಲಿ ಪ್ರಮೀಳಾದೇವಿ, "ಗೊಡ್ಡು ಹೆಸರು ಪುಟ್ಟಲಕ್ಷ್ಮಿ. ಗೌರವಾನೇ ಬರಲ್ಲ!" ಎನ್ನುತ್ತ, ತಾನೇ ಎರಡನೇ ಬಾರಿ ನಾಮಕರಣ ಮಾಡಿಕೊಂಡಿದ್ದಾಳೆ.

ಆಕೆಯ ವ್ಯಕ್ತಿತ್ವ, ಅದಕ್ಕೆ ತಕ್ಕಂತೆ ರೂಪುಗೊಂಡಿದ್ದು: ಆಕೆಯ ಪ್ರತಿಯೊಂದು ಕ್ರಿಯೆಗೂ ಏನೋ ಒಂದು ಹಿನ್ನೆಲೆ ಇರುತ್ತದೆನ್ನುವುದು ನಮಗೆ-ಅಂದರೆ ನೆಂಟರಿಗೆ ಗೆಳೆಯರಿಗೆ ತಿಳಿದ ವಿಷಯ.

ಪೂಜೆ ಪುನಸ್ಕಾರ ವ್ರತ ನಿಯಮ–ಇವುಗಳನ್ನು ಬಹು ಆಸಕ್ತಿಯಿಂದ ನಡೆಸುತ್ತಾರೆ. ಆಕೆ ಆ ಸಮಯದಲ್ಲಿ ಥೇಟ್ ಪುಟ್ಟಲಕ್ಷ್ಮಿಯಾಗಿ ದೊಡ್ಡ ಕುಂಕುಮ ಕೆನ್ನೆಗೆ ಅರಿಸಿನ ಮಾರಂಚಿನ ರೇಶ್ಮೆ ಸೀರೆ ಕೈತುಂಬ ಬಳೆ ಮೈತುಂಬ ಒಡವೆ ಮುಡಿ ತುಂಬ ಹೂಧರಿಸಿ ಆದರ್ಶ ಭಾರತೀಯ ನಾರಿಯಾಗಿ ರಾರಾಜಿಸುತ್ತಾಳೆ. ದಸರೆಯಲ್ಲೊಂದು ದಿನ ಹದಿನಾರು ಮಂದಿ ಮುತ್ತೈದೆಯರನ್ನು ಹೂವೀಳ್ಯಕ್ಕೆ ಆಹ್ವಾನಿಸಿದ್ದರು. ಆದರದಿಂದ ಒಳಕ್ಕೆ ಕರೆದರು. ಮಣೆ ಮೇಲೆ ನಿಲ್ಲಿಸಿದರು, ಕಾಲ್ತೊಳೆದರು. ಕುಂಕುಮ ವಿರಿಸಿದರು; ಪಾನಕ ಮಜ್ಜಿಗೆ ಕೋಸಂಬರಿ ಹಣ್ಣು ಫಲ ವಿಳ್ಯ ಕೊಟ್ಟರು. (ಭೀಮರಾಯರವತಿಯಿಂದ ಕಚೇರಿಯಲ್ಲಿ ಲಾಭ ಪಡೆದ ಮಹಾಶಯರಾರೋ ಹಣ್ಣಿನ ಬುಟ್ಟಿ ಸೇವೆ ಸಲ್ಲಿಸಿದ್ದು, ಅವು ಇಳಿ ವಯಸ್ಸಿಗೆ ಬಿದ್ದು ಕೊಳೆತು ಹೋಗುವ ಪರಿಸ್ಥಿತಿಯಲ್ಲಿದ್ದುದರಿಂದ ಈ ಉದಾರತೆ ಎನ್ನುವುದು ನಂತರ ಕಿವಿಗೆ ಬಿದ್ದ ವಿಚಾರ)...ಮುಖ್ಯವಾದ ಉದ್ದೇಶ, ಆಕೆ ಹೊಸದಾಗಿ ಮಾಡಿಸಿಕೊಂಡಿದ್ದ ಕೆಂಪಿನ ಬಳೆ ಪ್ರದರ್ಶನ ಹಾಗೂ ಪ್ರಚಾರ. ಎಲ್ಲರೆದುರು ತಟ್ಟೆಯಲ್ಲಿರಿಸಿ ಕೈಮುಗಿದು ಕೈಗೇರಿಸಿಕೊಂಡು ಹದಿನಾರು ಜೋಡಿ ಕಣ್ಣಿಗೆ ಕಾಣಿಸಿ ಹದಿನಾರು ಜೋಡಿ ಕಿವಿಗಳಿಗೆ ಅದರ ಬಣ್ಣ ತೂಕ ವರ್ಣಿಸಿದಾಗ ತೃಪ್ತಿ! (ಸುದ್ದಿ ಸಾಕಷ್ಟು ಮರುಪ್ರಸಾರವಾಗುವುದೆಂದು ಆಕೆಗೆ ತಿಳಿದ ವಿಷಯ.)

ಈ ವರ್ಷ, ಸಂಕ್ರಾಂತಿ ಎಳ್ಳನ್ನು ಮನೆ ಮನೆಗೆ ಬಂದು ಹಂಚಿದರು. ಪುಟ್ಟಲಕ್ಷ್ಮಮ್ಮ ಅಲಿಯಾಸ್ ಪ್ರಮೀಳಾದೇವಿ. ಮನೆಯಲ್ಲಿ ಸಣ್ಣ ಮಕ್ಕಳಿಲ್ಲ. ಹದಿನೆಂಟರ ಹುಡುಗಿಯೇ ಕೈಕೂಸು–ಇದೇನು ಇದ್ದಕ್ಕಿದ್ದಂತ ಸಂಪ್ರದಾಯ ಸ್ಫೂರ್ತಿ ಎಂದು ಸಂಶಯ ಬಂತು. ಕುತೂಹಲ ಹತ್ತಿಕ್ಕಲಾರದೆ ಕೇಳಿಯೇ ಬಿಟ್ಟೆ. "ನಿಮ್ಮ ಮಾವನ ಗ್ರಹಗತಿ ಅಷ್ಟು ಚೆನ್ನಾಗಿಲ್ಲ ಕಣೇ ಅದಕ್ಕೇ ಸಂಕ್ರಮಣದ ದಿನ ಎಳ್ಳು, ಬೆಲ್ಲ ನೀಡಿದರೆ ಶಾಂತಿ ಆಗುತ್ತೆ ಅಂತ ಹತ್ತು ಮನೆಗೆ ಹಂಚಿದೆ" ಎಂದು ನಿಟ್ಟುಸಿರಿಟ್ಟರು. ಮಾವನಿಗೊದಗಿದ ದಿಢೀರ್ ಪ್ರಾಮುಖ್ಯತೆಗೆ ಹಿಗ್ಗಿ ಅವರು ಹೊರಟು ಹೋದ ನಂತರ ಎಳ್ಳು ತಟ್ಟೆ ನೋಡಿದೆ: ಬಹುಸಿಂಗಾರವಾಗಿತ್ತು! ಕ್ರೇಪ್ ಕಾಗದದ ಸುರುಳಿಯೊಂದು, ಅಂದವಾದ ದೋಣಿ, ಪೇಯಿಂಟ್ ಮಾಡಿದ ಕಮಲ ಪುಷ್ಪ, ಪುರಾಣಿ ಬಟ್ಟೆಬೊಂಬೆ ಮಣಿ ಹೆಣೆದ ಮಿನಿ ಪರ್ಸು. ಇದರಲ್ಲಿ ಎಳ್ಳೆಲ್ಲಿ ಬೆಲ್ಲವೆಲ್ಲಿ ಕಬ್ಬು ಕೊಬ್ಬರಿ ಎಲ್ಲಿ ಎಂದು ಹುಡುಕಿದಾಗ–ಕಾಗದದ ಸುರುಳಿಯೊಳಗೆ ಕಿರು ಬೆರಳುದ್ದ ಕಬ್ಬಿನ ತುಂಡು ಸಿಕ್ಕಿತು. ದೋಣಿ ಯಾಕಾರಕ್ಕೆ ಗಿಡ್ಡ ಬೆಂಡೇಕಾಯಿನಷ್ಟು ಕೊಬ್ಬರಿ ಬಳಿಸಿದ್ದು ಕಂಡು ಬಂತು: ಮನಿಪರ್ಸಿನೊಳಗೆ ಆರುಕಾಳು ಕುಸುರೆಳ್ಳು ಅಡಗಿತ್ತು; ಪೇಪರ್ ಕಮಲದ ಕುಸುಮ, ಅರ್ಧ ಚಮಚೆ ಬೆರೆಸಿದ ಎಳ್ಳು ತುಂಬಿಕೊಂಡಿತ್ತು!

–ಆಗ, ನೆನಪಿನಕೊಂಡಿ ಥಟ್ಟನೆ ಬಿಚ್ಚಿಕೊಂಡಿತು: ತಾಯಿ ಮಗಳು, ಅದಾವುದೋ ಕಲಾ ಶಾಲೆಗೆ ದಾಖಲಾಗಿದ್ದಾರೆನ್ನುವ ಸುದ್ದಿ ಕಿವಿಗೆ ಬಿದ್ದಿತ್ತಲ್ಲ? ಸಂಕ್ರಾಂತಿ ಸಂಭ್ರಮ, ಕಲಾಪ್ರದರ್ಶನ. ಹಬ್ಬದ ಉದ್ದೇಶದ ಅಷ್ಟಿಟ್ಟು ಕೊಲೆ!

ಪುಟ್ಟಲಕ್ಷ್ಮಮ್ಮ ಪ್ರಮೀಳಾದೇವಿಯಾದಾಗ ವೇಷಭೂಷಣವೂ ಪೂರ್ಣ ಬದಲಾವಣೆ ಆಗುತ್ತದೆ: ವಿದೇಶೀ ನೈಲೆಕ್ಸ್ ಸೀರೆ ಅದಕ್ಕೊಪ್ಪುವ ತೋಳಿಲ್ಲದ ರವಿಕೆ ಕಿವಿಗೆ ಕೋಡುಬಳೆ ಆಳತೆಯ ಉಂಗುರ, ಎತ್ತರ ಹಿಮ್ಮಡಿಯ ಷೂಸು, ಪುಟ್ಟ ಹೋಲ್ಡಾಲಿನಂತಹ ಜಂಭದ ಚೀಲ... ಹೀಗೆ! ಕಳೆದ ವರ್ಷ, ಅ-ರಾ-ಮ ವರ್ಷ ಅರ್ಥಾತ್ ಅಂತಾರಾಷ್ಟ್ರೀಯ ಮಹಿಳಾ ವರ್ಷ ತಾನೇ? ಆ ಸಾಲಿನಲ್ಲಿ ಅತ್ತೆ ಹೆಚ್ಚು ಕಡಿಮೆ ಪೂರ್ತಿ ಪ್ರಮೀಳಾದೇವಿಯಾಗಿಯೇ ಉಳಿದಿದ್ದಳು. ಆಕೆ ಮಾಡಿದ ಭಾಷಣಗಳೆಷ್ಟು, ಸುತ್ತಿದ ಊರುಗಳೆಷ್ಟು ಉದ್ಘಾಟಿಸಿದ ಸಭೆಗಳೆಷ್ಟು ಬಿತ್ತರಿಸಿದ ಉಪನ್ಯಾಸಗಳೆಷ್ಟು! ವಿಧವಾ ಸಮಸ್ಯೆ, ವಿಚ್ಛೇದನ ಸಮಸ್ಯೆ ಅನಾಥ ಸಮಸ್ಯೆ ಆಸ್ತಿವಿಭಾಗ ಸಮಸ್ಯೆ ಉದ್ಯೋಗ ಸಮಸ್ಯೆ, ಸರಿಸಮಾನತೆ ಸಮಸ್ಯೆ– ಒಂದೇ ಎರಡೇ ಆಕೆ ಅರಿಸಿಕೊಂಡವಸ್ತು? ಮೂಢನಂಬಿಕೆ ವಿರುದ್ಧವಂತೂ ಆಕೆ ಪ್ರಚಾರದ ಮಾತುಗಳಾಡಿದ ವೈಖರಿಗೆ ನೆರೆದಿದ್ದ ನಾರೀಮಣಿಯರೆಲ್ಲ ಆ ವರೆಗೆ ತಮಗೆ ಆವರಿಸಿದ ಮೂರ್ಖತನಕ್ಕೆ ಮಮ್ಮಲ ಮರುಗಿ ತಲೆ ತಗ್ಗಿಸಿರಲೇಬೇಕು!

ಹೊಸಮನೆ ಕಟ್ಟಿಸಿದ್ದಾರೆ ಅತ್ತೆ. ಬೆಳಗ್ಗೆ ಪುಟ್ಟಲಕ್ಷಮ್ಮನಾಗಿ ಗೃಹಪ್ರವೇಶದ ಶಸ್ತ್ರಗಳನ್ನೆಲ್ಲ ಮಾಡಿಕೊಂಡು, ಸಂಜೆಗೆ ಪ್ರಮೀಳಾದೇವಿಯ ಹೆಸರಿನಲ್ಲಿ ಟೀಪಾರ್ಟಿಗೆ ಆಹ್ವಾನ ಕೊಟ್ಟಿದ್ದರು. ಗೃಹಪ್ರವೇಶವಾದರೂ ನಮಗೇನು 'ಗೃಹಪ್ರವೇಶದ ಹಿನ್ನಲೆ ಕಾದಿದೆಯೋ ಎಂದು ಅಳುಕುತ್ತಲೇ ಆಹ್ವಾನಿತೆಯರು ಅವರಲ್ಲಿಗೆ ಹೋದರು. ಸೊಗಸಾದ ಆತಿಥ್ಯ-ಎರಡು–ಸಿಹಿ ಎರಡು ಕಾರ ಹಣ್ಣು ಕಾಫಿ ಟೀ ಕೂಲ್ ಡ್ರಿಂಕ್ಸ್ ಬೀಡ! ತಾಂಬೂಲ ಜಗಿಯುತ್ತಿದ್ದಾಗ ಪುಟ್ಟಲಕ್ಷ... ಅಲ್ಲ...ಪ್ರಮೀಳಾದೇವಿ ಮುಗುಳುನಗುತ್ತ ನುಡಿದರು– "ಈ ಸಾರಿ ಸಮಾಜದ, ಅದರ ಅಂಗವಾದ ಸಹಕಾರ ಸೊಸೈಟಿಯ, ಅಧ್ಯಕ್ಷ ಸ್ಥಾನಕ್ಕೆ ಅಭ್ಯರ್ಥಿಯಾಗಿ ನಿಂತುಕೊಳೋಣಾಂತಿದೀನಿ, ನೀವೆಲ್ಲ...ಹಿಹಿ... ನನಗೇ ಓಟು ಕೊಡ್ತೀರಲ್ಲ?"

'ಉಂಡ ಮನೆಗೆ ಎರಡು ಬಗೆಯ'ಲಾರದೆ (ಹಿಂದೆ ಆಕೆ ಕೈ ಹಿಡಿದಿದ್ದೆರಡು ಸಂಸ್ಥೆಗಳಿಗಾದ ಅಧೋಗತಿ ಅರಿತಿದ್ದೂ ಸಹ) ಕುರಿಗಳಂತೆ ತಲೆದೂಗಿ, ಆಕೆಗೆ ಮತದಾನ ನೀಡಿದೆವು!

ಅಂದಹಾಗೆ, ಅತ್ತೆಯ ಇತ್ತೀಚಿನ ಬಿಸಿಬಿಸಿ ಚಟುವಟಿಕೆ– "ಪವಾಡ ವಿರುದ್ಧ ಚಳುವಳಿ"; ವಿಶ್ವವಿದ್ಯಾಲಯದವರು ಮೊಲ್ಪಂಗಿತ್ತ ಹಾಕಿಕೊಟ್ಟಿದಾರೆ; ಅವರಿಗೆ ಬೆಂಬಲವಾಗಿ ನಾನೊಂದು ಬೇರೆ ಗುಂಪೇ ಕಟ್ಟುತ್ತೇನೆ" ಎಂದು "ಆಪರೇಷನ್ ಪವಾಡ ಪ್ರತಿಭಟನೆ" ಸಂಸ್ಥೆ ಆರಂಭಿಸಿಕೊಂಡಿದ್ದಾರೆ. ಆಂಜನೇಯ ಮೈಮೇಲೆ ಬಂದವ ಅಬ್ಬರಿಸಿದ ಕಡೆ, ತಾಯಿತ ಕಟ್ಟಿ ಕೈಗೆ ಕೊಡಳಿಗೆ ಕಟ್ಟುವ ಜಾಗದಲ್ಲಿ, ಬೂದಿ ಮಂತ್ರಿಸಿ ಭೂತ ಬಿಡಿಸಿ ಪರಕೆ ಚಚ್ಚಿ ಪ್ರೇತ ಓಡಿಸಿ ಸವತಿಕಾಟ ತಪ್ಪಿಸಿ ಉಪಕಾರ ಮಾಡುವ ಮಾಂತ್ರಿಕ (?)ರ ಮನೆಯಂಗಳದಲ್ಲಿ, ಯಂತ್ರ ಮಂತ್ರ 'ಹ್ರಾಂ ಹ್ರೂಂ' ಯಜ್ಞ ಹೋಮದ ಹೊಗೆ ಕಂಡ ಕೂಡಲೇ– 'ಆ-ಪ-ಪ್ರ' ಸಂಘದ ಅಧ್ಯಕ್ಷಿಣಿ ಹಾಗೂ ಸದಸ್ಯೆಯರು ಪ್ರತ್ಯಕ್ಷ! ತಾಸು ಗಟ್ಟಲೆ ಭಾಷಣಮಾಡಿ ಬೋಧನೆ ನೀಡಿ ಮೂಢ ಮಂದಿಯ ಕಣ್ಣು ತೆರೆಯಿಸುವ ಪ್ರಯತ್ನದ ಮಹತ್ಕಾರ್ಯ ಸಾಧನೆ! ಪತ್ರಿಕೆಗಳಲ್ಲಿ, ಆಕಾಶವಾಣಿಯಲ್ಲಿ, ಸಂದರ್ಶನ ಕಾರ್ಯಕ್ರಮಗಳಲ್ಲಿ, ನೀವೂ ಈ ಬಗ್ಗೆ ಸಾಕಷ್ಟು ಓದಿದೀರಲ್ಲ? ಕೇಳಿದೀರಲ್ಲ?

ನಮ್ಮ ಕುಮಾರ ಕಂಠೀರವನನ್ನು– ಭಾರಿ ಇಂಜನಿಯರಾಗುವನೆನ್ನುವ ಭಾರಿ ಆಸೆ ಹೊತ್ತು, ಭಾರಿ ಮೊತ್ತದ ಡೊನೇಷನ್ ಕೊಟ್ಟು–ಕಾಲೇಜಿಗೆ ಸೇರಿಸಿದವು ಮೂರು ವರ್ಷಗಳ ಹಿಂದೆ; ಆದರವನು ಒಂದೊಂದು ಪರೀಕ್ಷೆಯಲ್ಲೂ 'Halt and proceed' ನಿಯಮವನ್ನನುಸರಿಸುತ್ತಿದ್ದಾನೆ. ಮೊನ್ನೆ ಸೆಮಿಸ್ಟರ್ ಪರೀಕ್ಷೆ ಪರಿಣಾಮ ಬರುವ ಹಿಂದಿನ ವಾರ 'ಸಂಕಟ ಬಂದಾಗ ವೆಂಕಟರಮಣ' ಎಂದುಕೊಂಡು ಭವಿಷ್ಯ ಹೇಳುವ ಗುಡಿ ಪೂಜಾರಿಯ ಬಳಿಗೆ ಓಡಿದೆ. ಅಕ್ಕಿ ಬೆಲ್ಲ ಹಣ್ಣು ಕಾಯಿ ದಕ್ಷಿಣೆ ಕಟ್ಟಿ ಆತನ ಮುಂದಿರಿಸಿ ನಮಸ್ಕರಿಸಿ ತಲೆ ಎತ್ತಿದಾಗ ಪಕ್ಕದಲ್ಲೊಂದು ಅಂತಹದೇ ತಟ್ಟೆ ಕೂಡಿತು: ಇರಿಸಿದ ಕೈಗಳು, ಪುಟ್ಟಲಕ್ಷಮ್ಮನವು...! "ಪಮ್ಮಿಗೆ (ಅವರ ಇಪ್ಪತ್ತಾರು ವರ್ಷದ ಕುಮಾರಿ) ಯಾವ ಗಂಡೂ ಸರಿ ಹೋಗ್ತಿಲ್ಲ ಕಣೇ: ಅವಳಿಗೆ ಕಂಕಣ ಬಲ ಯಾವಾಗ ಕೂಡುತ್ತೋ ಅಂತ... ಹಿಹಿ... ಕೇಳಿ ಯಂತ್ರ ತೆಗೆದ್ಕೊಂಡು ಹೋಗೋಣ ಅಂತ ಬಂದೆ!"– ಪಿಸುಗುಟ್ಟಿದರಾಕೆ!

ಪುಟ್ಟಲಕ್ಷಮ್ಮನಂತೆ 'ದ್ವಿಪಾತ್ರ'ಧಾರಿಗಳಾಗಿ ಬಾಳುವವರು ಬಹಳಷ್ಟು ಮಂದಿ; ಸ್ವಂತ ಜೀವನದಲ್ಲಿ, ಸಮಾಜದಲ್ಲಿ, ಸಾರ್ವಜನಿಕ ಕ್ಷೇತ್ರದಲ್ಲಿ– 'ದ್ವಿಮುಖಿ' ಯಾಗಿ ನಡೆದುಕೊಳ್ಳುವವರು ನಾಗರಿಕ ಪ್ರಪಂಚದಲ್ಲಿ ಅಪರೂಪವೇನಲ್ಲ! ●

# ಇಳೆ ಮಳೆ

ಇಳೆಯಂಗಸೌಷ್ಟವಕೆ ಹೊಸ ಸೀರೆಯೆನಂ ತಂದು
ತೊಡಿಸಿ ಚೆಲುವೆಯ ರೂಪ ನೋಡುತ್ತಿಹ
ಒಳಗೆ ಪಾತಾಳಕ್ಕೆ ಮಳೆ ಬಂದು ಇಳಿ ಇಳಿದು
ಸುರತ ಕ್ರಿಯೆಯಲಿ ತೊಡಗಿ ಬಿಗಿದಪ್ಪಿಹ.

ಸಸ್ಯಸಂತಾನಕ್ಕೆ ಹರೆ ತರುಣಿ ಅಣಿಯಾಗಿ
ಮಾಸು ಬಟ್ಟೆಯ ತೊಟ್ಟು ಕಾಯ್ದಿದ್ದಳು
ಮಳೆರಾಯ ವರಿಸಿದನ ಗಂಧರ್ವ ಲಗ್ನದಲಿ
ಸೂರ್ಯ–ಚಂದ್ರರು ಸಾಕ್ಷಿ ಹಾಗಿದ್ದರು

ಎಡೆಬಿಡದೆ ಸಂತಾನ ಸೂಜಿ ಪಿಡುವಿಡದಪ್ಪು
ಹೊಸ ಹುರುಪು ಕೆಲವ ದಿನ ಈ ಜೋಡಿಗೆ

ವಂಕಿ, ಶಸ್ತ್ರಚಿಕಿತ್ಸೆ ರಂಭಾಟ ಹೇಳದಿರು
ತಕ್ಷಣವೆ ಸಂಯಮವು ರೂಢಿ ಹೇಗೆ ?

ಆರು ತಿಂಗಳು ಹೊರಟು, ವಿರಹ ಹುಳಿ ಸವಿವನಕ
ಮಿತಿ ಬಂತು ಸಸ್ಯ ಸಂತಾನಕ್ಕೆ
ಬಹಳ ಸತ್ತವು, ಕೆಲವೆ ಬದುಕಿದುವು ಅಲ್ಲಲ್ಲಿ
ಬಲಗೊಳ್ಳುತಿದೆ ಭೂಮಿ ಮರುಮಿಲನಕೆ

ಇಳೆ ಮಳೆಯ ಸುರತ ಕ್ರಿಯೆ ಸತತ ಸಾಗದು ಬೆಳೆಗೆ
ಅನ್ನ ಅರಕೆಯು ಕೂಗು ಸೂರ್ಯನಡಿಗೆ
ಮನುಜ ವರ್ಗದ ಗಂಡು ಹೆಣ್ಣುಗಳ ಕೂಡುವಿಕೆ
ಎಡೆಬಿಡದೆ ನಡೆದಿಹುದು ಯಾವ ಸುಖಕೆ ?

— ಕೆ. ವಿರೂಪಾಕ್ಷಗೌಡ





# ಮಮತೆಯ ಮಡಿಲು

ಅನಸೂಯಾ ರಾಮರೆಡ್ಡಿ

"ತಾ..ತ......ತ...ತಾ" ಎನ್ನುತ್ತಾ ಮಗು ಅರಳಿದ ಹೂವನ್ನು ನೋಡಿ, ಚಪ್ಪಾಳೆ ತಟ್ಟಿ ನಕ್ಕಿತು. ತಂಗಾಳಿಯ ಅಲೆಯೊಂದು ತೀಡಿ ಬಂದು ಹೂವನ್ನು ಚುಂಬಿಸಿದಾಗ, ಅದು ತಲೆ ಹಾಕುತ್ತಾ ಮುಂದಕ್ಕೆ ಬಾಗಿತು. ಮಗು ಅದಕ್ಕೆ ಕೈ ಹಾಕಿ, ಸ್ವಲ್ಪ ದೂರದಲ್ಲಿ ಕುಳಿತಿದ್ದ ತಂದೆ ತಾಯಿಗಳ ಕಡೆ ನೋಡಿತು.

"ಬೇಡ ಮರಿ, ಕೀಳ್ಬಾರದು."

ತಾಯಿ ಎಚ್ಚರಿಸಿದಳು, ತುಂಟ ಮಗು ಹೂವನ್ನು ಕೈಲಿ ಹಿಡಿದೇ ಬಾಯಿಯನ್ನು ಅಗಲವಾಗಿ ಅರಳಿಸಿದಾಗ, ಅದರ ಕಣ್ಣು ಒಳಕ್ಕೆ ಹೋಗಿ ಗಲ್ಲ ಉಬ್ಬಿತು.

ತಾಯಿ ಎದ್ದು ಬಂದು ಎತ್ತಿಕೊಳ್ಳುವಷ್ಟರಲ್ಲಿ ಹೂವು ದಳಗಳೆರಡನ್ನು ಕಳಚಿಕೊಂಡು, ಮಗುವಿನ ಕೈ ಸೇರಿತ್ತು.

"ಕಿತ್ತೇಬಿಟ್ಟೆಯಾ ತುಂಟ? ನಿನ್ನ ಹಾವಳಿ ಅತಿಯಾಯ್ತು."

ಎತ್ತಿಕೊಂಡು ಮುದ್ದಾಡುತ್ತಾ, ಗಂಡನ ಕಡೆ ನೋಡಿ ನಕ್ಕು,

"ಎಲ್ಲಿ ಹೋದ್ರೂ ಇವನ ಅವಾಂತ್ರ ತಪ್ಪೊಲ್ಲ ನೋಡ್ರಿ" ಎಂದಳು.

ಅಷ್ಟಿಗೆ ಸ್ವಲ್ಪ ದೂರದಲ್ಲಿ ಕಲ್ಲು ಬೆಂಚಿನ ಮೇಲೆ ಕುಳಿತ ಆಕೆಯ ಪತಿ

"ಈ ಅವಾಂತರದವನಿಗಾಗಿಯೇ ಅಷ್ಟೇನು ವ್ರತ...ನಿಯಮ ಹರಕೆ...ಗಿರಕೆ ಮಾಡಿ ನೀನು ಪಡೆದದ್ದು?"

ಆತ ಎದ್ದು ಬಂದು ಹೆಂಡತಿಯ ಕಡೆ ನೋಡುತ್ತಾ ಮಗುವಿನ ಗಲ್ಲಕ್ಕೆ ಮೆಲ್ಲನೆ ಪೆಟ್ಟನ್ನು ಕೊಟ್ಟ.

ಸ್ವಲ್ಪ ಹೊತ್ತಿನ ವರೆಗೆ ಮಗುವನ್ನು ಮುದ್ದಾಡುತ್ತಿದ್ದು,ನಂತರ ಅವರಿಬ್ಬರೂ ಅದನ್ನು ತಮ್ಮ ತೋಳುಗಳಲ್ಲೆತ್ತಿಕೊಂಡು ಬಂದು, ಕಾರಿನಲ್ಲಿ ಕುಳಿತರು. ಕಾರು ನಿಧಾನವಾಗಿ ಸರಿದು ಮರೆಯಾಯಿತು.

ಈ ಅಪೂರ್ವ ದೃಶ್ಯವನ್ನು ಎವೆಯಿಕ್ಕದೆ ನೋಡುತ್ತಿದ್ದ ಸುನಿತ ನೀಳವಾಗಿ ನಿಡುಸುಯ್ದಳು.

ಗುಲಾಬಿ ಗಲ್ಲದ,ಚಂಚಲ ಕಣ್ಣಿನ,ಪುಟ್ಟ ಬಾಯಿಯ ಗುಂಡು ಗುಂಡಾಗಿದ್ದ ಆ ಮಗು, ಅವಳ ಕಣ್ಣಿನ ಮುಂದೆಯೇ ಸುಳಿದಾಡುತ್ತಿರುವಂತೆ ತೋರುತ್ತಿತ್ತು. ಭಾವಪರವಶಳಾಗಿ, ಆ ಚಿತ್ರವನ್ನೇ ಸವಿಯುತ್ತಾ ಕುಳಿತಿದ್ದಳು.

"ಏನು ಸುನಿ, ಮಾತಿಲ್ಲದೆ ಕುಳಿತಿಟ್ಟೆ?"

ಎಚ್ಚರಿಸಿದ ಆನಂದ.

"ಏನಿಲ್ಲ" ಎಂದು ಎತ್ತಲೋ ನೋಡುತ್ತಿದ್ದೇ, ಮತ್ತೆ ಹೇಳಿದಳು.

"ಆ ಮಗು ಇಷ್ಟು ಹೊತ್ತು ಎಷ್ಟು ಚೆನ್ನಾಗಿ ಆಟ ವಾಡ್ತಿತ್ತಲ್ಲ!"

"ಓ! ಆ ಬಾಲಕೃಷ್ಣನ ಆಟ ಮುಗಿದು ಹೋಯ್ತೂಂತ ಬೇಸರವೆ? ಅಂಥವನು ನಿನಗೂ ಆಗಬಹುದು. ಆಗ ಎಷ್ಟು ಹೊತ್ತು ಬೇಕಾದ್ರೂ ಕೂತ್ಕೊಂಡು ಆಟವಾಡಿಸುವಂತೆ."

"ಉಫ್ ! ನಿಜ್ವಾಗ್ಲೂ ನನಗೆ ಅಂಥಾ ಅದೃಷ್ಟ ಇದೆಯಾಂತ?"

"ಇಷ್ಟು ನಿರಾಶೇನಾ? ಯಾವಾಗ್ಲೂ ಆಶಾವಾದಿಯಾಗಿರ್ಬೇಕು ಸುನಿ...ಏಳು ಚಳಿಯಾಗ್ತಿದ್ದೆ"

ಸುನೀತಳಿಗೆ ಶಾಲನ್ನು ಹೊದಿಸಿ ಹೇಳಿದ ಆನಂದ.

ಒಮ್ಮೆ ಪತಿಯ ಕಡೆ ಪ್ರೀತಿಯಿಂದ ನೋಡಿ ಮೇಲೆ ಎದ್ದಳು ಸುನಿತ.

ಆನಂದ...ಸುನೀತ ಮನೆಗೆ ಬರುವ ವೇಳೆಗೆ ಆಳು ಕೆಂಪಯ್ಯ ಮನೆಯನ್ನೆಲ್ಲಾ ಚೆನ್ನಾಗಿ ಗುಡಿಸಿ, ದೀಪಗಳನ್ನು ಹೊತ್ತಿಸಿ, ಊದಿನಕಡ್ಡಿಗಳನ್ನು ಹಚ್ಚಿಟ್ಟಿದ್ದ.

ನಡುಮನೆಯೊಳಗೆ ಅಡಿಯಿರಿಸುತ್ತಲೂ ಧೊಪ್ಪನೆ ಸೋಫಾದಲ್ಲಿ ಕುಸಿದು ಕುಳಿತಳು ಸುನಿತ.

ಊದುಬತ್ತಿಯಿಂದ ಸುರುಳಿ ಸುರುಳಿಯಾಗಿ ಹೊಗೆಯೇಳುತ್ತಿರುವಂತೆ ಅವಳ ಹೃದಯದಲ್ಲಿ ಅಡಗಿಸಿ ತಡೆ ಹಿಡಿದಿದ್ದ ಭಾವನೆಗಳು ಒಂದೊಂದಾಗಿ ಏಳತೊಡಗಿದವು.

ಪ್ರೀತಿಸುವ ಪತಿ! ಅಚ್ಚುಕಟ್ಟಾದ ಸುಂದರವಾದ ಮನೆ! ತಿರುಗಾಡಲು ಕಾರು! ಬಯಸಿದ್ದು, ಬೇಡಿದ್ದು ಮನೆ ಬಾಗಿಲಿಗೆ ಬಂದು ಬೀಳುವುದು. ತನಗೆ ಎಲ್ಲಾ ಸುಖ ಸಂಪತ್ತಿದೆ. ಆದರೆ ಏನು ಸುಖ! ಮುದ್ದು ಮಾತುಗಳಿಂದ ಮನ ತಣಿಸುವ ಮಕ್ಕಳಿಲ್ಲ!

ದೇವರ ಮೂರ್ತಿಯಿಲ್ಲದ, ಭವ್ಯ ದೇವಾಲಯದಂತೆ, ಹೂವು ಕಾಯಿಲ್ಲದ ಹಸಿರಾದ ಮರದಂತೆ ತನ ಬಾಳಿಗೊಂದು ಅರ್ಥವಿಲ್ಲ. ಅರ್ಥವಿಲ್ಲದ ಬಾಳು ವ್ಯರ್ಥವೆ!

ಅವಳ ಹೃದಯದ ಈ ನೋವು ಕಣ್ಣೀರಿನ ರೂಪದಲ್ಲಿ ಕಾಣಿಸಿಕೊಂಡಿತು.

ಆನಂದ ತನ್ನ ಕೊಠಡಿಗೆ ಹೋದವನು ಉಡುಪು ಬದಲಾಯಿಸಿ ಅವಳನ್ನು ಕೂಗುತ್ತಾ ಬಂದ.

"ಸುನೀ!"

ಸುನೀತಳ ಕೊರಳು ಬಿಗಿದು ಬಂದಿತ್ತು. ಉತ್ತರ ಬರಲಿಲ್ಲ.

"ಓ! ಇದೇನು ಅಮ್ಮನವರು ತಪಸ್ಸು ಮಾಡ್ತಿರೋ ಹಾಗಿದೆ!" ಅವನು ಸೋಫಾದಲ್ಲಿ ಅವಳ ಬಳಿ ಕುಳಿತುಕೊಳ್ಳುತ್ತಾ ಕೇಳಿದ.

ಸುನಿತಳ ಬಿಕ್ಕು ಏಕೆಯೋ ಅವನ ಮಾತಿಗೆ ಉತ್ತರವಾಯಿತು.

"ಅರೆ! ಇದೇನಿದು ಕಣ್ಣಲ್ಲಿ ಗಂಗಾಪ್ರವಾಹ! ಯಾಕೆ? ಏನಾಯ್ತು ಸುನಿ?"

ಅವಳು ಕಣ್ಣುಗಳನ್ನೊರಸಿಕೊಂಡು ಎದುರಿಗಿದ್ದ ಚಿತ್ರದ ಕಡೆಗೆ ನೋಡಿದಳು. ಗೋಡೆಯ ಮೇಲೆ ತೂಗು ಹಾಕಿದ್ದ ಫೋಟೋದಲ್ಲಿ ಬಾಲಕೃಷ್ಣ ನಗುತ್ತಿದ್ದ.

"ಇದಕ್ಕೇನಾ ಇಷ್ಟು ದುಃಖ! ಅಲ್ಲಿರೋ ಅಂತಹ ಬಾಲಕೃಷ್ಣ ನಿನಗಿಲ್ಲಾಂತ ತಾನೆ? ಯಾಕಳ್ತಿ? ನೋಡು ನಿನ್ಮುಂದೇನೆ ಕುಳಿತ್ತಿದ್ದಾನೆ."

ಸುನೀತ ಥಟ್ಟನೆ ತನ್ನ ದೃಷ್ಟಿಯನ್ನಿತ್ತ ತಿರುಗಿಸಿ ಆಸೆ ತುಂಬಿದ ಕಣ್ಣುಗಳಿಂದ ನೋಡಿದಾಗ, ಆನಂದನ ಹಾಸ ಅವಳಿಗೆ ಅರ್ಥವಾಯಿತು. ಅವಳ ತುಟಿಯ ಮೇಲೆ ನಗೆ ಮಿಂಚು ಸುಳಿಯುತ್ತಿದ್ದಂತೆ,

"ಈ ಕೃಷ್ಣ ಬೇಡ್ವೇನು? ಆ ಕೃಷ್ಣನೇ ಬೇಕಾ?"

"ಹೂಂ...ಆ ಕೃಷ್ಣನೇ ಬೇಕು.!"

ಸುನೀತಳ ಮುಖದಲ್ಲಿ ಮತ್ತೆ ಮಂದಸ್ಮಿತ ತೇಲಿತು.

"ರಾಧಾ ಆನಲಿಕ್ಕೆ ಈ ಮಗು, ಯಶೋದಮ್ಮ ಆನಲಿಕ್ಕೆ ಆ ಮಗು, ಇಬ್ಬರೂ ಬೇಕೂಂತ ಹೇಳು" ಎನ್ನುತ್ತಾ ಆನಂದ ತನ್ನ ಮುಖವನ್ನು ಅವಳ ಮುಖದ ಹತ್ತಿರ ತಂದಾಗ ಅವಳು ಸ್ವಲ್ಪ ಹಿಂದೆ ಸರಿದು,

"ಥೂ ಏನು ತುಂಟರಪ್ಪಾ!" ಮೇಲೆದ್ದು ನಿಂತಳು.

"ಅಮ್ಮಾ...ತಟ್ಟೆ ಇಟ್ಟು...ಮೇಜಿನ ಮೇಲೆ ಎಲ್ಲಾ ಅಣಿ ಮಾಡಿಟ್ಟಿದೀನಿ"

ಕೆಂಪಯ್ಯ ಒಳಗಿನಿಂದಲೇ ಹೇಳಿದ.

"ಎಲ್ಲಾ ಆಯ್ತು? ಇನ ನೀನು ಹೋಗು ಕೆಂಪಯ್ಯ"

ಕೆಂಪಯ್ಯ ಹೋದ ಮೇಲೆ ಇಬ್ಬರೂ ಊಟಕ್ಕೆದ್ದರು.

- ೨ -

ಆನಂದ ಕಾರ್ಗಲ್ ಪ್ರಾಜೆಕ್ಟ್‌ನಲ್ಲಿ ಇಂಜನಿಯರ್ ಆಗಿ ಕೆಲಸ ಮಾಡುತ್ತಿದ್ದ. ಹಗಲೆಲ್ಲಾ ಅವನಿಗೆ ಪ್ರಾಜೆಕ್ಟ್‌ನ ಕೆಲಸ. ಸುನಿತಳಿಗೆ ಕಾಲ ಹೋಗುವುದೇ ಕಷ್ಟ.

ಬೆಳಗ್ಗೆ ಎದ್ದ ಕೂಡಲೇ ಗಿಡಗಳ ನಡುವೆ ತಿರುಗಾಟ. ನಂತರ ಸ್ನಾನ...ಉಪಹಾರ...ಹತ್ತು ಗಂಟೆಯ ವರೆಗೆ ಆನಂದ ಮನೆಯಲ್ಲಿರುತ್ತಾನೆ. ಕಾಲ ಹೇಗೋ ಕಳೆದು ಹೋಗುತ್ತದೆ. ಅಲ್ಲಿಂದ ಮತ್ತೆ ಸಂಜೆಯ ವರೆಗೆ ಎಲ್ಲಿಲ್ಲದ ಬೇಸರ. ಮಧ್ಯಾಹ್ನ ಆನಂದ ಊಟಕ್ಕೆ ಒಮ್ಮೊಮ್ಮೆ ಬರುತ್ತಿದ್ದ...ಒಮ್ಮೊಮ್ಮೆ ಆಫೀಸಿಗೇ ತರಿಸಿಕೊಳ್ಳುತ್ತಿದ್ದ. ಸಂಜೆ ಅವನು ಬಂದ ಮೇಲೆ ತಿರುಗಾಟಕ್ಕೆ ಹೊರಡುತ್ತಿದ್ದರು.

ಬೆಟ್ಟದ ತಪ್ಪಲಿಗೋ......ಪಾರ್ಕ ಕಡೆಗೋ ನದಿಯ ಕಡೆಗೋ ಇದೇ ಯಾಂತ್ರಿಕ ಜೀವನ!

ಏರು ಪೇರಿಲ್ಲದ ಜೀವನ ಮೂರು ವರ್ಷಗಳಿಂದ.

ಈ ಪ್ರಾಜೆಕ್ಟ್‌ನ ಕೆಲಸ ಮುಗಿದು ಬೇರೆ ಕಡೆ ಹೋಗಲು ಇನ್ನೂ ಮೂರು ನಾಲ್ಕು ವರ್ಷಗಳಾದರೂ ಬೇಕು.

ಅಬ್ಬಾ! ಅಷ್ಟು ವರ್ಷ ಹೇಗಿರಬೇಕು ಈ ಕಾಡಿನಲ್ಲಿ ಎನ್ನಿಸುವುದು ಒಮ್ಮೊಮ್ಮೆ ಸುನೀತಗೆ.

ಅಕ್ಕಪಕ್ಕದಲ್ಲಿ ಇನ್ನಿಬ್ಬರು ಇಂಜನಿಯರರ ಮನೆಗಳಿವೆ... ಓವರ್‌ಸೀಯರ್‌ಗಳು ಡಾಕ್ಟರರೊಬ್ಬರು... ಇವರ ಕ್ವಾರ್ಟರ್ಸ್‌ಗಳೂ ಹತ್ತಿರ ಹತ್ತಿರದಲ್ಲೇ ಇವೆ. ಇನು ಳಿದ ಕೆಲಸಗಾರರ ಮನೆಗಳು ಒಂದು ಫರ್ಲಾಂಗ್ ದೂರದಲ್ಲಿ...ಅದೂ ಅಲ್ಲೊಂದು ಇಲ್ಲೊಂದು.

ತನ್ನ ಅಕ್ಕಪಕ್ಕದಲ್ಲಿರುವ ಅಧಿಕಾರಿಗಳಾರೂ ಕುಟುಂಬಗಳನ್ನು ಕರೆದು ತಂದಿಲ್ಲ. ನಾವೇನು ಹುಲಿ ಚಿರತೆಗಳೇ ಆ ಕಾಡಿನಲ್ಲಿರೋದಕ್ಕೆ ಎಂದಿದ್ದರಂತೆ ಅವರ ಮಡದಿಯರು. ಎಂತಲೇ ಆ ಅಧಿಕಾರಿಗಳು ಮದುವೆಯಾದರೂ ಬ್ರಹ್ಮಚಾರಿಗಳಾಗಿದ್ದರು.

ಈ ಕಾರಣದಿಂದ ಗೆಳತಿಯರೇ ಇಲ್ಲವಾಗಿತ್ತು ಸುನಿತಗೆ.

ಮದುವೆಯಾದ ಕೂಡಲೇ ತವರೂರಿನ ಸಂಬಂಧ ಕಡಿದು ಹೋಗಿತ್ತು. ಇವಳಿಗೆ ಚೆನ್ನಾಗಿ ಗಳಿಸುವ ಗಂಡ ಸಿಕ್ಕನೆಂದು ಮಲತಾಯಿಗೆ ಸಂಕಟವಾಗಿತ್ತು. ಎಂತಲೇ ಕತ್ತಿಗೆ ತಾಳಿ ಬೀಳುತ್ತಿದ್ದಂತೆಯೇ ಸುನೀತ ತವರು ಮನೆಗೆ ದೂರವಾಗಬೇಕಾಯಿತು.

ಇನು ಗಂಡನ ಮನೆಯದೂ, ಅಷ್ಟೇ. ಇವಳನ್ನು ತಂದುಕೊಳ್ಳಲು ಆನಂದನ ತಂದೆ ತಾಯಿಗಳಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ವರದಕ್ಷಿಣೆ, ವರೋಪಚಾರವಿಲ್ಲದೆ ಮಲತಾಯಿ ಕೈಲಿ ಬೆಳೆದ ಹುಡುಗಿಯನ್ನು ಸೊಸೆಯನ್ನಾಗಿ ತಂದುಕೊಳ್ಳಲು ಅವರು ಇಷ್ಟಪಡದೆ ಇದ್ದುದು ಅಚ್ಚರಿಯೇನಲ್ಲ.

ಆದರೆ ಆನಂದ ಅಪ್ಪ ಅಮ್ಮನ ಇಷ್ಟಕ್ಕೆ ವಿರೋಧವಾಗಿ ಸುನೀತಳನ್ನು ಮದುವೆಯಾಗಿ ಅವರನ್ನು ದೂರ ಮಾಡಿಕೊಂಡಿದ್ದ.

ಹೀಗೆ ಬಂಧು ಬಳಗದ ಪ್ರೀತಿಯ ಆಸರೆಯಿಲ್ಲದೆ, ಅದಕ್ಕಾಗಿ ಅವಳು ಹಂಬಲಿಸುತ್ತಿದ್ದುದು ಸ್ವಾಭಾವಿಕವೇ ಆಗಿತ್ತು.

ಕರುಳು ಕುಡಿಯಿಟ್ಟರೆ, ತನ್ನ ಅತ್ತೆ ಮಾವ ಹತ್ತಿರ ಬಂದಾರೇನೋ ಎನ್ನಿಸುವುದು ಒಮ್ಮೊಮ್ಮೆ.

ಹಾಗನ್ನಿಸಿದಾಗ ತನ್ನ ಹೊಟ್ಟೆಯಲ್ಲಿ ಎಂಥಾದ್ದಾದರೂ ಒಂದಾಗಬಾರದೆ? ಎಂದುಕೊಳ್ಳುವಳು. ಒಂಟಿ ಬಾಳಿನ ಬೇಸರ ಕಳೆದೀತು! ಬಂಜೆಯೆಂಬ ಕಳಂಕ ತೊಲಗೀತು! ಎನಿಸುವುದು. ಆದರೆ ಅವಳ ಅಭಿಲಾಷೆ ನೆರವೇರದೆ ಹೋಗಿತ್ತು.

ಒಂದು ದಿನ ಆನಂದ ಮನೆಯೊಳಕ್ಕೆ ಬರುತ್ತಿದ್ದ ಹಾಗೆಯೇ "ಹ್ಯಾಪಿ ನ್ಯೂಸ್ ಸುನಿ" ಎನ್ನುತ್ತಾ ಬಂದ.

"ಏನು ಅಂಥಾದ್ದು!" ಉತ್ಸಾಹದಿಂದ ಓಡಿ ಬಂದಳು ಅವಳು.

"ನನ್ನ ಫ್ರೆಂಡ್ ಒಬ್ಬನು ರವಿ ಅಂತಾ ಇದ್ದಾನೆಂತ ಹೇಳಿದ್ನಲ್ಲಾ ಇಲ್ಲಿಗೆ ಬರ್‍ತಾನೆ"

"ಇಷ್ಟೇನಾ!"

"ನಿನಗೆ ಇಷ್ಟೇ ಅನ್ನಿಸಬಹುದು. ನನಗೆ ಮಾತ್ರ ತುಂಬಾ! ಅವ ಮರತೆ ಒಬ್ನೇ ಅಲ್ಲ ವೈಫ್ ಬರ್‍ತಾನೆ"

"ಹೌದೇ! ಯಾವಾಗ ಬರ್‍ತಾರಂತೆ? ಅವರ ಮಿಸೆಸ್ ಹೆಸರೇನು?"

"ಅಬಬಬಬಾ! ವೈಫ್ ಅಂದ ಕೂಡೇ ನೋಡು ಎಷ್ಟು ಚುರುಕಾದೆ! ಅವರ ಹೆಸರೇ...ವಿಮಲಾಂತ"

"ಹಾಗಾದ್ರೆ ಮೊದಲು ಅವರು ಇಲ್ಲಿಗೇ ಬರಲಿ. ಏನೇನು ಐಟಮ್ ಇರಲಿ ತಿಂಡಿಗೆ, ಊಟಕ್ಕೆ? ಅವ್ರಿಗೆ ಯಾವ ರೂಂನಲ್ಲಿ ಮಂಚ ಹಾಕಿಸಲಿ?"

ಉತ್ಸಾಹದ ಬುಗ್ಗೆಯಾದಳು ಸುನಿತ.

"ಈಗೇನಂಥಾ ಅವಸರ? ಅವರು ಬರೋದಿನ್ನೂ ನಾಳೆ. ಇಪ್ಪತ್ತು ನಾಲ್ಕು ಗಂಟೆ ಟೈಂ ಇದೆ."

"ಮರ್ತೇ ಹೋಯ್ತು, ಊಟಕ್ಕೇಳಿ...ಹೊತ್ತಾಗಿದೆ"

ಎಂದಿನಂತೆ ಅವನ ಕೋಟಿಗೆ ಕೈ ಹಾಕಿ, ಬಿಡಿಸಲು ಹೋದಳು.

"ಈಗ ಬಂತೆ ನನ ಕಡೆ ಗಮನ! ಅಲ್ಲಾ ಇನ್ಮೇಲೆ ಒಬ್ಬ ಗೆಳತಿ ಸಿಕ್ತಾಳೇ ಅನ್ನೋ ಸಂತೋಷದಲ್ಲಿ ನನ್ನ ಎಲ್ಲಿ ಮರೆತು ಬಿಡ್ತೀಯೋ ಅಂತ, ಹೆದ್ರಿಕೆ ಆಗಿತ್ತು."

ಬಿಚ್ಚಿದ ಕೋಟನ್ನು ಸುನೀತಳ ಹೆಗಲ ಮೇಲೆ ಹಾಕುತ್ತಾ ನಕ್ಕ ಆನಂದ.

ಮರುದಿನ ಬೆಳಗಾಗುತ್ತಿದ್ದಂತೆಯೇ ಲಗುಬಗೆಯಿಂದ ಮನೆ ಕೆಲಸಕ್ಕೆ ತೊಡಗಿದಳು ಸುನಿತ.

ಬಾಗಿಲು ಕಿಟಕಿಗಳ ಪರದೆಗಳನ್ನು ಬದಲಾಯಿಸಿದಳು. ತಮ್ಮ ಬೆಡ್ ರೂಂ ಪಕ್ಕದಲ್ಲೇ ಇದ್ದ ಇನ್ನೊಂದು ರೂಂನಲ್ಲಿ ಮಂಚವನ್ನು ಹಾಕಿಸಿ ಶುಭ್ರವಾದ ಮಗ್ಗಲು ಹಾಸಿಗೆಯನ್ನು ಹಾಸಿದಳು. ಹೊರಗಿನ ಕೆಲಸ ಮುಗಿಸಿಕೊಂಡು ಅಡುಗೆ ಮನೆಗೆ ನಡೆದಳು.

ಕೆಂಪಯ್ಯ ಆಗಲೇ ಅಡುಗೆ ತಯಾರಿಗೆ ನಡೆದಿದ್ದ. ಇವಳೂ ಜೊತೆಗೆ ಸೇರಿದ ಮೇಲೆ ಸ್ವಲ್ಪ ಹೊತ್ತಿನಲ್ಲೇ ಒಳಗಿನ ಕೆಲಸವಾಯಿತು. ಊಟಕ್ಕೆ ಎಲೆ ಬೇಕಾಗಿತ್ತು. ಮನೆಯಲ್ಲಿ ಅದು ಮುಗಿದು ಹೋಗಿದ್ದುದರಿಂದ ಕೆಂಪಯ್ಯನನ್ನು ಅಂಗಡಿಗೆ ಎಲೆ ತರಲು ಕಳುಹಿಸಿ ಸುನೀತ ಹಾವಿಗೆ ಹುರಿಯಲು ಕುಳಿತಳು. ಕೈ ಕೆಲಸ ಮಾಡುತ್ತಿದ್ದರೂ ಮನಸ್ಸೆಲ್ಲಾ ವಿಮಲೆಯ ಮೇಲೆ.

ಹೇಗಿದ್ದಾಳೋ ಏನೋ! ಹೊಸದಾಗಿ ಮದುವೆಯಾಗಿರುವವರು! ಹಕ್ಕಿಗಳಂತೆ ಹಾಯಾಗಿ ತಿರುಗಾಡಿ ಕೊಂಡಿದ್ದಾರೇಂತ ಕಾಣುತ್ತೆ. ಆಕೆಗೆ ಇಲ್ಲಿ ಸರಿ ಹೋಗುತ್ತೋ ಇಲ್ಲವೋ! ನಾಲ್ಕು ದಿನ ಇದ್ದ ಹಾಗೆ ಮಾಡಿ ತವರಿಗೆ ಹೊರಟು ಬಿಟ್ಟರೆ! ಮತ್ತೆ ನಾನು ಒಂಟಿಯೆ!



ಇಲ್ಲ ಏನಾದ್ರೂ ಮಾಡಿ ಈ ಸ್ಥಳ ಹಿಡಿಸೋ ಹಾಗೆ ಮಾಡ್ಬೇಕು. ಆಕೆ ಮನಸ್ಸಿಗೆ ಸ್ವಲ್ಪಾನೂ ಬೇಸರ ಬರದ ಹಾಗೆ ನೋಡ್ಕೋಬೇಕು. ಆನಂದ...ರವಿ ಇಬ್ಬರೂ ಡ್ಯೂಟಿಗೆ ಹೋದ ಮೇಲೆ ನಾವಿಬ್ಬರೇ ಮನೆಗಳಲ್ಲಿ. ಹೇಗೂ ಹತ್ತಿರದಲ್ಲೇ ಇದೆ ಅವರ ಮನೆ! ಒಂದೇ ಮನಸ್ಸಾಗಿರಬೇಕು ನಮ್ಮಿಬ್ಬರದೂ! ಇನ್ಮೇಲೆ ಮೊದಲಿನ ಹಾಗೆ ಬೇಸರ ಪಡಬೇಕಾದು ದಿಲ್ಲ ಒಂಟಿಯಾಗಿ. ಹಗಲೆಲ್ಲಾ ಮಂಕಾಗಿ ಕುಳಿತ್ಕೋಬೇಕಾಗಿಲ್ಲ!

"ಸುನೀ!" ಗಂಡನ ಕೂಗು ಅವಳನ್ನೆಚ್ಚರಿಸಿತು

ಖೀರನ್ನು ಮುಗಿಸಿ ಸಂಡಿಗೆ ಕರಿಯುತ್ತಿದ್ದಳು. ಬಾಣಲೆಯಲ್ಲಿ ಹಾಕಿದ್ದ ಕೊನೇ ಸಂಡಿಗೆಯನು ಜಾಲರ ಸೌಟಿನಿಂದ ತೆಗೆಯುತ್ತಾ.

"ಬಂದೇ! ಆಯ್ತು!" ಸಂಡಿಗೆಯನ್ನು ಮೇಲೆತ್ತಿಟ್ಟು ಬಂದಳು.

ಅವಳು ಹೊರಗೆ ಬರುತ್ತಿದ್ದಂತೆ, ಆನಂದ ಟೈ ಕಟ್ಟಿಕೊಳ್ಳುತ್ತಾ ರೂಮಿನಿಂದೀಚೆಗೆ ಬಂದ.

"ನಮ್ಮ ಆಫೀಸಿನ ಹತ್ರಾನೆ ಅವರ ಕಾರು ಬರಬಹುದು. ಅಲ್ಲಿಂದ ಕರ್‍ಕೊಂಡು ಬರ್‍ತೀನಿ. ಅಡಿಗೆ ರೆಡಿ ತಾನೆ?" ಟೈ ಕತ್ತಿಗೆ ಬಿಗಿದಾದ ಮೇಲೆ ಸ್ವಲ ಮೇಲಕ್ಕೆತ್ತಿದ್ದ ಕತ್ತು, ಕೆಳಗಿಳಿಯಿತು. ಹಾಗೆಯೇ ಕಣ್ಣು ಅವಳ ಕಡೆ ತಿರುಗಿತು.

ಸುನಿತ ನಿರಿಗೆಯನ್ನು ಮೇಲೆತ್ತಿ ಕಟ್ಟಿ ಸೊಂಟಕ್ಕೆ ಸೆರಗು ಬಿಗಿದಿದ್ದಳು. ಒಲೆಯ ಮುಂದೆ ಇದುವರೆಗೂ ಕುಳಿತಿದ್ದುದರಿಂದ ಮುಖ ಕೆಂಪಡರಿ ಅಲ್ಲೊಂದು ಇಲ್ಲೊಂದು ಬೆವರಿನ ಹನಿಗಳು ಹೊಳೆಯುತ್ತಿದ್ದವು.

ಒಳಗೆ ಬಂದ ಸುನೀತ ಊಟದ ಮೇಜಿನ ಹೊದಿಕೆಯನ್ನು ಬದಲಿಸಿ...ವಾಸ್‌ನಲ್ಲಿ ಹೂವುಗಳನ್ನು ಜೋಡಿಸಿ ತಂದಿಟ್ಟಳು. ಸೀರೆ ಬದಲಾಯಿಸಿ ಹೊರಗೆ ಬರುತ್ತಿದ್ದಂತೆಯೇ ಕಾರಿನ ಶಬ್ದ ಕೇಳಿಸಿತು.

ಓಡಿ ಬಂದು ಪೋರ್ಟಿಕೋದಲ್ಲಿ ನಿಂತಳು. ಕಾರು ನಿಂತ ಕೂಡಲೇ ಮುಗುಳ್ನಗುತ್ತಾ ಒಂದೆರಡು ಹೆಜೆ ಮುಂದೆ ಬಂದಳು.

ಆನಂದ...ರವಿ ವಿಮಲೆಯರೊಂದಿಗೆ ಇಳಿದುಬಂದ, ಆನಂದ ಬರುತ್ತಿದ್ದಂತೆ "ನೋಡು ಇವರೇ ವಿಮಲಾ ರವಿ...ಇವರು ಮಿಸೆಸ್ ಆನಂದ್" ವಿಮಲೆ ಸುನಿತೆಯರಿಗೆ ಪರಸ್ಪರ ಪರಿಚಯ ಮಾಡಿಸಿದ.

"ನಮಸ್ತೆ. ನೀವು ಇಲ್ಲಿಗೆ ಬಂದಿದ್ದು ಬಹಳ ಸಂತೋಷ. ಒಳಗ್ಬನ್ನಿ." ರವಿ ವಿಮಲೆಯರಿಗೆ ಕೈ ಜೋಡಿಸಿದಳು ಸುನೀತ.

ವಿಮಲೆ ಮೃದುವಾಗಿ ನಕ್ಕಳು.

"ನಿಮ್ಮನ್ನು ತುಂಬಾ ಕಾಯಿಸಿ ಬಿಟ್ಟೆವು ಅಂತ ಕಾಣುತ್ತೆ. ಕಾರು ದಾರಿಯಲ್ಲಿ ಕೆಟ್ಟು ಹೋಗಿತ್ತು" ಕುಳಿತುಕೊಳ್ಳುತ್ತಾ ಅಂದಳು ವಿಮಲ.

"ಹೌದು... ಕೆಟ್ಟು ಹೋಗಿತ್ತು. ಅದನ್ನ ಇವಳು ಸರಿ ಮಾಡಿದಳು" ಹೆಂಡತಿಯ ಕಡೆ ನೋಡಿ ನಕ್ಕ ರವಿ.

"ಇರಬಹುದು. ಹೆಂಗಸರು ಯಾವುದರಲ್ಲೇನು ಕಡಿಮೆ!"

ಮಾತು ಸೇರಿಸಿದ ಆನಂದ.

"ಯಾಕಾಗಬಾರದು! ಆದ್ರೆ ಬರೀ ಇಂಥಾ ಮಾತಾಡೋದ್ರಲ್ಲಿ ಗಂಡಸರು ಹೆಂಗಸರಿಗಿಂತಲೂ ಒಂದು ಹೆಜ್ಜೆ ಮುಂದೇನೇ ಅಲ್ವಾ ವಿಮಲ?"

ಆನಂದನ ಕಡೆ ಓರೆಗಣ್ಣು ಹಾಯಿಸಿದಳು ಸುನೀತ.

"ನೋಡಿದೆಯಾ ರವಿ ಹೇಗಿದೆ ಮಾತಿನ ಘಾಟೂ?"

ಆನಂದ ಹೀಗೆ ಹೇಳಿದಾಗ ಇನ್ನೊಮ್ಮೆ ಎಲ್ಲರೂ ನಕ್ಕರು.

"ಓ ಬರಿ ಮಾತಿನ ಉಪಚಾರಾನೆ ಆಯ್ತು ಬಂದೆ."

ಸುನಿತ ಷರಬತ್ತಿನ ಗ್ಲಾಸುಗಳನ್ನು ತಂದು ಎಲ್ಲರ ಮುಂದೆಯೂ ಇರಿಸಿದಳು.

ರವಿ ಆನಂದ, ಕುಡಿದು ಮುಗಿಸಿ, ಸಿಗರೇಟುಗಳನು ಹೊತ್ತಿಸಿದರು.

"ಹೊಟ್ಟೆ ತಂಪಾಯ್ತು, ಸರಿ ಇಂಜಿನ್ ಸ್ಟಾರ್ಟ್ ಮಾಡಿ ಬಿಟ್ರು. ಆಯ್ತು. ಊಟ ವಿಶ್ರಾಂತಿ ಒಂದೂ ಬೇಡ. ಹೀಗೇ ಎಷ್ಟು ಹೊತ್ತು ಬೇಕಾದ್ರೂ ಒಂದಾದರ ಮೇಲೊಂದು ಸೇದುತ್ತಾ ಕೂತ್ಕೊಂಡು ಬಿಡ್ತಾರೆ." ವಿಮಲ ರವಿಯ ಕಡೆ ನೋಡುತ್ತಾ ಅಂದಾಗ

"ಆಗ್ಲೇ ಏನೋ ಕಂಪ್ಲೇಂಟ್ ಶುರು ಮಾಡಿದೆಯಲ್ಲಾ ಈ ಬಡಪಾಯಿಯ ಮೇಲೆ"

ರವಿ ಬೂದಿಯನು ಆಷ್‌ಟ್ರೇನಲ್ಲಿ ಕೊಡವುತ್ತಾ ಅಂದ.

ಸುನಿತ ವಿಮಲ ನಕ್ಕರು.

ಸ್ವಲ್ಪ ಹೊತ್ತಿನ ಮೇಲೆ ಮೇಜಿನ ಮೇಲೆ ತಟ್ಟೆ ಲೋಟಗಳನ್ನಿರಿಸಿ, ಬಂದವರನ್ನು ಊಟಕ್ಕೆಬ್ಬಿಸಿದಳು.

ಎಲ್ಲರೂ ಕೈ ಕಾಲು ತೊಳೆದು ಬಂದರು. ಸುನಿತ ತಾನೂ ಕುಳಿತುಕೊಳ್ಳದೆ ಬಡಿಸಲು ನಿಂತಿದ್ದನ್ನು ನೋಡಿ,

"ನೀವೂ ಕೂತ್ಕೊಬಹುದಾಗಿತ್ತು ಸುನಿತ ಈಗ್ಲೆ" ವಿಮಲೆ ಅಂದಳು.

"ಮೊದಲು ನಿಮ್ಮದಾಗಲಿ"

"ಓ ಮಕ್ಕಳು ಸ್ಕೂಲಿನಿಂದ ಬಂದ್ಮೇಲೆ ಒಟ್ಟಿಗೆ ಊಟ ಮಾಡ್ತೀರೇನೊ!"

ಸುನಿತಗೆ ಮಕ್ಕಳಿದ್ದಾರೆಂದೇ ತಿಳಿದಿದ್ದಳು ವಿಮಲ. ರವಿ ಇವರ ವಿಷಯವನ್ನು ಅವಳಿಗೆ ಇನ್ನೂ ಸರಿಯಾಗಿ ತಿಳಿಸಿರಲಿಲ್ಲ.

ಮಕ್ಕಳ ಸುದ್ದಿಯನ್ನು ಕೇಳಿದ ಕೂಡಲೆ ಸುನೀತಳ ಮುಖದ ಮೇಲೆ ಚಿಂತೆಯ ಕಾರ್ಮೋಡ ಮುಸುಕಿತು. ಒಂದು ಕ್ಷಣ ಬಡಿಸುವ ಕೈ ಥಟ್ಟನೆ ನಿಂತಿತು.

ಆ ಸುದ್ದಿಯನ್ನೇಕೆತ್ತಿದೆ ಎನ್ನುವಂತೆ ರವಿ ವಿಮಲೆಯ ಸೊಂಟಕ್ಕೆ ಮೆಲ್ಲನೆ ತಿವಿದು, ಕಣ್ಣು ಸನ್ನೆ ಮಾಡಿದ.

ಮಕ್ಕಳಿಲ್ಲವೆಂಬ ಕೊರಗನ್ನು ಸುನೀತ ತುಂಬಾ ಹಚ್ಚಿಕೊಂಡಿದ್ದಾಳೆಂದು ಒಮ್ಮೆ ಆನಂದ ಅವನಿಗೆ ತಿಳಿಸಿದ್ದ.

ಮರುಕ್ಷಣವೆ ಅತಿಥಿಗಳೆದುರಿಗೆ ಬೇಸರಪಟ್ಟುಕೊಳ್ಳುವುದು ಸರಿಯಲ್ಲವೆಂದು ಕೊಂಡಳು ಸುನಿತ. ಅವಳ ಮುಖದ ಮೇಲಿನ ಕಾರ್ಮೋಡ ಚದುರಿ ಮಂದಹಾಸ ಮೂಡಿತು. ಆದರೂ ಅಪರಾಧಿನಿಯಂತೆ ತಲೆ ಬಾಗಿಸಿ ಅವಳು.

"ಆ ಭಾಗ್ಯ ಪಡೆದು ಬಂದಿಲ್ಲವೇನೊ ವಿಮಲ" ಎಂದಳು.

ಸುನೀತ ನಗು ನಗುತ್ತಾ ಅಂದಿದ್ದರೂ ಆ ಮಾತು ಅದೆಷ್ಟು ಅಪಾರ ಯಾತನೆಯಿಂದ ಕೂಡಿದೆಯೆನ್ನುವುದು ತಿಳಿಯದೆ ಹೋಗಲಿಲ್ಲ ವಿಮಲೆಗೆ. ತಾನು ಯಾಕಾದರೂ ಆ ಮಾತನ್ನೆತ್ತಿದೆನೊ ಎಂದು ಪರಿತಪಿಸು



ವೆಂತಾಯಿತು. ರವಿ...ಹೀಗೇಂತ ಮುಂಚೆಯೇ ತಿಳಿಸ ಬಾರದಾಗಿತ್ತೆ! ಎಂದು ಒದ್ದಾಡಿದಳು.

ಜಿಲೇಬಿ, ಖೀರು, ನಿಂಬೆ ಹುಳಿ ಚಿತ್ರಾನ್ನ, ಬೋಂಡ ಕೋಸಂಬರಿ, ಹುರುಳಿಕಾಯಿ ಪಲ್ಯ, ಹಪ್ಪಳ ಸಂಡಿಗೆ ಹುಳಿ ಸಾರು ಒಂದಕ್ಕಿಂತ ಒಂದು ರುಚಿಯಾಗಿತ್ತು.

"ಪ್ರಿಪರೇಷನ್ ತುಂಬಾ ಚೆನ್ನಾಗಿದೆರೀ ಸುನೀತ. ಈ ಹುಡುಗಿಗೆ ಏನೇನೂ ಬರೊಲ್ಲ. ಇನ್ಮೇಲೆ ಸ್ವಲ್ಪ ಚೆನ್ನಾಗಿ ಟ್ರೈನಿಂಗ್ ಕೊಟ್ಟುಡಿ." ಎಂದ ರವಿ.

"ನೀವು ಸ್ವಲ್ಪ ವಿಶ್ರಾಂತಿ ತಗೊಳ್ಳಿ ವಿಮಲ. ನಾನೂ ಬೇಗ್ನೆ ಬಂದ್ಬಿಡ್ತೀನಿ...ಈ ರೂಮಿನಲ್ಲಿ ಮಂಚ ಹಾಕಿದೆ." ರೂಮಿನ ಕಡೆ ಕೈ ಮಾಡಿ ಹೇಳಿದಳು ಸುನಿತ.

"ನಿಮ್ಮದೂ ಊಟ ಆಗ್ಲಿ ...ನಾನು ಬಡಸ್ತೀನಿ. ಆ ಮೇಲೆ ಇಬ್ರೂ ಹೋದ್ರೆ ಆಯ್ತು."

"ಬೇಡ...ಬೇಡ...ನೀವು ದಣಿದೀರಿ... ಬೇಗ ಬಂದ್ಬಿಡ್ತೀನಿ ನಾನೂ," ಬಲವಂತ ಮಾಡಿ ಹೊರಗೆ ಕಳುಹಿಸಿ ಬಂದಳು. ಸುನಿತ.

ಕೆಂಪಯ್ಯನಿಗೆ ಒಂದು ಕಡೆ ಬಡಿಸಿ, ತಾನೂ ಬಡಿಸಿಕೊಂಡಳು. ಒಂದೆರಡು ತುತ್ತು ತಿಂದಿರಲಿಕ್ಕಿಲ್ಲ ವಿಮಲ ಅಂದಿದ್ದ ಮಾತು ನೆನಪಿಗೆ ಬಂತು. ಮಕ್ಕಳ ಜೊತೆಗೆ ಊಟ ಮಾಡ್ತೀರಾ? ಕಿವಿಯಲ್ಲಿ ಇನ್ನೂ ಮೊರೆದಂತಾಗುತ್ತು, ಒಳಗೆ ಹೋಗದಾಯಿತು.

ಮದುವೆಯಾಗಿ ಐದು ವರುಷಗಳ ಮೇಲಾಗಿತ್ತು ಇನ್ನು ಮುಂದೆ ಆಗಬಹುದೆಂಬ ಆಸೆ ತೀರಾ ಕಡಿಮೆಯಾಗಿತ್ತು.

ಮನೆಗೆ ಯಾರೇ ಬರಲಿ...ಆಸ್ತಿ ಪಾಸ್ತಿ ಕೇಳೋದಕ್ಕಿಂತ ಮುಂಚೆ ಮಕ್ಕಳೆಷ್ಟು ಎಂದೇ ಕೇಳುವುದು ನಿಜ...ಮಕ್ಕಳೇ ಮನೆಗೆ ಆನಂದ! ಅಂತಹ ಆನಂದ ಆನಂದವನು ತಾನು ಪಡೆದು ಬಂದಿಲ್ಲವೇನೋ! ನಿರಾಶೆಯ ರೇಖೆಯೊಂದು ಅವಳ ಮುಖದ ಮೇಲೆ ಸುಳಿಯಿತು.

ಹೊರಗೆ ರವಿ...ಆನಂದ ಏನೇನೂ ಮಾತಾಡುತ್ತಾ ಕುಳಿತಿದರು. ಆಗಾಗ ಅವರು ಜೋರಾಗಿ ನಗುತ್ತಿದ್ದುದು ಕೇಳಿಸುತ್ತಿತ್ತು.

ಅವರಿಗಂತೂ ಮಕ್ಕಳಾಗಲಿಲ್ಲವೆಂಬ ಯೋಚನೆ ಇಲ್ಲ...ಏನಾದ್ರಾಗಲಿ ಗಂಡಸರು...ಸುಖಿಗಳು...ಬಂಜೆ ಅಂತ ನನ್ನನ್ನೇ ತಾನೇ ಅವರಿವರು ಅನ್ನುವುದು. ಅವರನ್ನೇನೆಂದಾರು! ಒಂದಾದರೂ ಆಗಿದ್ದಿದ್ದರೆ ಈ ಮನೆಗೆ ಎಷ್ಟು ಕಳೆ ಇರುವುದು!

ಹೆಣ್ಣಿನ ಸಾಭಾವಿಕವಾದ ಈ ಬಯಕೆ, ಅವಳ ಮುಂದೆ ಎದ್ದದ್ದು ಕುಣಿಯ ಹತ್ತಿತು. ಕಣ್ಣಿನಲ್ಲಿ ನೀರು ಚಿಮ್ಮಿ ತಟ್ಟೆಯಲ್ಲಿ ಜಾರಿ ಬಿತ್ತು. ತಟ್ಟೆಯಲ್ಲಿ ಉಳಿದಿದ್ದನು ಹಾಗೆಯೇ ಬಿಟ್ಟು ಕೈ ತೊಳೆದೆದ್ದಳು.

ರವಿ...ವಿಮಲ ಎರಡು ದಿನವಿದ್ದು, ಸ್ವಲ್ಪವೇ ದೂರದಲ್ಲಿದ್ದ ತಮ್ಮ ಕ್ವಾರ್ಟರ್ ಗೆ ಹೋದರು. ವಿಮಲೆಗೆ ಅಡಿಗೆಯ ಕೆಲಸ ಹೊಸದು. ಸುನಿತೆಳೇ ಓಡಾಡಿ ಅಡಿಗೆ ಮನೆಯಲ್ಲಿ ಸಾಮಾನುಗಳನ್ನೆಲ್ಲ ಸರಿಯಾಗಿ ಜೋಡಿಸಿಟ್ಟು ವಿಮಲೆಗೆ ಅಡಿಗೆ ಮಾಡುವ ವಿಧಾನವನು ಹೇಳಿಕೊಟ್ಟಳು. ಅಡುಗೆಗೆ ಸಹಾಯವಾಗಲೆಂದು ಒಬ್ಬ ಹುಡುಗಿಯನ್ನು ಗೊತ್ತು ಮಾಡಿಕೊಂಡಿದ್ದರೂ, ಎಲ್ಲವನೂ ತಾನೇ ಮಾಡಬೇಕೆಂಬ ಆಶೆ ವಿಮಲೆಗೆ.

ತನಗೆ ಅಕ್ಕನಂತಿದ್ದು ಆಗಾಗ ಸಹಾಯಕ್ಕೆ ಬರುತ್ತಿದ್ದ ಸುನಿತಳ ಮೇಲೆ ಎಲ್ಲಿಲ್ಲದ ಭಕ್ತಿ ಗೌರವ.

"ನಿಮ್ಮನ್ನ ಇನ್ಮೇಲೆ ಅಕ್ಕಾಂತ ಕರಿಯ್ತೀನಿ, ಸುನಿತ ಆಗಬಹುದು ತಾನೆ?" ಪ್ರೀತಿಯಿಂದ ಒಂದು ದಿನ ಕೇಳಿದಳು.

ಸುನೀತಳ ಹೃದಯದಲ್ಲಿ ಆನಂದದ ತೆರೆಗಳೆದ್ದವು. ಸಂತೋಷದಿಂದ ಮೂಕಳಾದಳು.

"ಯಾಕೆ ಅಕ್ಕಾ! ಹಾಗೆ ಕರೆಯೋದು ನಿಮಗೆ ಚೆನ್ನಾಗಿ ಕಾಣಿಸೋದಿಲ್ವೆ?"

"ಸರಿಯಾಗಿಲ್ಲದೆ ಏನು ವಿಮಲ! ಅಕ್ಕಾ ಅಂತ ಅನ್ನಿಸೋಳ್ತಿರೋದು ಇದೇ ಮೊದಲು ನನ್ನ ಜೀವಮಾನದಲ್ಲಿ, ನನಗೊಬ್ಬ ತಂಗಿ ಸಿಕ್ಕಿದ್ದಾಳೆ ಅಂತ ನನಗೆ ಅದೆಷ್ಟು ಸಂತೋಷವಾಗಿದೆ ಗೊತ್ತಾ!"

"ಯಾಕೆ? ನಿಮ್ಮ ಒಡ ಹುಟ್ಟಿದವರು ಯಾರೂ ಇಲ್ಲವೆ?"

"ಇ...ದ್ದಾ...ರೆ' ಮುಂದೆ ಏನನ್ನೋ ಹೇಳಲು ಹೋದಳು ಸುನೀತ. ಆದರೆ ಅವಳ ಗಂಟಲಿಂದ ಮಾತೇ ಹೊರಡಲಿಲ್ಲ.

ತನ್ನ ಚಿಕ್ಕಮ್ಮನ ಮಕ್ಕಳು ತಂಗಿಯರಲ್ಲವ ತನಗೆ? ಆದೆ, ಒಂದು ದಿನಕ್ಕಾದರೂ ಅಕ್ಕ ಅಂದಿದ್ದರೆ? ನನ್ನನ್ನು ಸೋದರೀಂತ ಕೂಡ ಭಾವಿಸದೆ ಹೋದರು. ನನ್ನ ತಂದ್ರೆ ಮೊದಲು ಆದ್ರಾನ ಇರ್ಲಿಲ್ಲವಲ್ಲಾ? ಏನೋ ಕಷ್ಟಪಟ್ಟು ಓದಿ ಚೆನ್ನಾಗಿ ಮಾರ್ಕು ತೆಗೆಯ್ತಿದ್ದೆ. ಅಪ್ಪ ಮುಂದೆ ಓದಿಸಿದ್ರು, ಆನಂದನ ಪರಿಚಯವಾಗಿ ಅವರ ಕೈ ಹಿಡಿಯೋ ಸೌಭಾಗ್ಯ ದೊರೆಯ್ತು. ಇಲ್ಲದೆ ಹೋಗಿದ್ರೆ ತನ್ನ ಸ್ಥಿತಿ ಈ ಹೊತ್ತಿಗೆ ಏನಾಗ್ತಿರ್ತಿತ್ತೋ

"ಏನಕ್ಕಾ ಇಷ್ಟೊಂದು ಯೋಚಿಸ್ತಿದೀರಿ?"

"ನನಗೇನ್ಥಾ ಯೋಚ್ನೆ ವಿಮಲ"

"ಅಕ್ಕಾ ಇನ್ನೊಂದಾತು"

"ಏನು ವಿಮಲ ಅದು?"

"ನಾನು ಈಗ ನಿಮಗೆ ತಂಗಿ ಅಲ್ವೆ?"

"ಅಲ್ಲಾಂತ ಯಾರು ಹೇಳಿದ್ರು?"

"ಇನ್ಮೇಲೆ ನೀವು ಬನ್ನಿ...ಹೋಗ್ನಿ ಅನ್ನೋ ಬಹುವಚನ ಬಿಟ್ಬಿಡಿ. ನೀನು...ಬಾ...ಹೋಗು ಅನ್ನಿ."

"ಹಾಗೇ ಆಗಲಿ ವಿಮಲ."

ಸುನೀತ ಮನೆಗೆ ಹಿಂತಿರುಗಿದಾಗ ಮನಸ್ಸು ಎಷ್ಟೋ ಹಗುರವಾಗಿತ್ತು.

ಈ ಅಕ್ಕ ತಂಗಿಯರ ಸಂಬಂಧ ರವಿಯ ಕಿವಿಗೂ ಬಿದ್ದಿತ್ತು. ಒಂದು ದಿನ ಯಾವುದೋ ಮಾತಿಗೆ ಸುನಿತಳ ವಿಷಯ ಬಂದಾಗ. ರವಿ ನಗುತ್ತಾ,

"ನಿನ್ನಂಥಾವಳ ಈ ಕಾಡ್ನಲ್ಲಿ ಪಳಗಿಸೋದಕ್ಕೆ ನಿನ್ನ ಸುನಿತಕ್ಕ ಇಲ್ಲದೆ ಹೋಗಿದ್ರೆ ಈ ನನ್ನ ಹುಡುಗಿ ಯಾವಾಗ್ಲೋ ಬೆಂಗಳೂರಿಗೆ ಹಾರಿ ಬಿಡ್ತಿದ್ದಳೇನೊ"

"ಹೂಂ...ನಿಜ...ನೀವು ಎಂದಾದ್ರೂ ಲೇಟ್ ಆಗಿ ಬಂದ ದಿನ ಎಷ್ಟು ಹೆದ್ರಿಕೆಯಾಗ್ತಿರುತ್ತೇಂತ. ಸುನಿತಕ್ಕ ಇಲ್ಲದೆ ಹೋಗಿದ್ರೆ ಒಂದು ಕ್ಷಣವೂ ಇಲ್ಲಿ ಇರೋದಕ್ಕಾಗ್ತಿರ್ಲಿಲ್ಲ. ನನ ಕೆಲಿ."

ಭಯಗೊಂಡವಳಂತೆ ವಿಮಲ ತನ ಅಗಲವಾದ ಕಣ್ಣನ ರಳಿಸಿದಳು.

"ಭಯಚಕಿತ ಹರಿಣಿ ನೋಡೋದಕೆ ಬಲು ಚೆಂದ ಅಲ್ಲ?"

ರವಿ ಅವಳ ಕೊರಳಿಗೆ ತನ್ನ ಬಾಹು ಮಾಲೆಯನ್ನು ಹಾಕುತ್ತಾ ಅಂದಾಗ.

"ಏನು ತುಂಟರಪ್ಪಾ" ಎನ್ನುತ್ತಾ ಅವನ ಎದೆಗೊರಗಿದಳು ವಿಮಲ.

× × ×

ರವಿ...ವಿಮಲ, ಆನಂದ–ಸುನೀತ, ಈ ಎರಡು ಜೋಡಿಗಳು ನಿತ್ಯ ಸಾಯಂಕಾಲ ತಿರುಗಾಟದ ಅಭ್ಯಾಸವನ್ನಿಟ್ಟುಕೊಂಡಿದ್ದರು. ಕಚ್ಚೇರಿಯ ಬಳಿ ಬಹಳ ಕೆಲಸವಿದ್ದ ದಿನ ಆನಂದನಿಗೆ ಸಾಯಂಕಾಲ ಮನೆಗೆ ಬರಲೇ ಆಗುತ್ತಿರಲಿಲ್ಲ. ಒಂದೊಂದು ದಿನ ಮನೆಗೆ ಹಿಂದಿರುಗಿದರೂ ಬಹಳ ಆಯಾಸಗೊಂಡವನಂತಿರುತ್ತಿದ್ದ.

ಅಂತಹ ದಿನಗಳಲ್ಲಿ ರವಿ. ವಿಮಲ ಸುನೀತ ಮೂವರೇ ಹೋಗುತ್ತಿದ್ದರು. ಒಟ್ಟಿನಲ್ಲಿ ರವಿಯ ಸಂಸಾರ ಬಂದ ಮೇಲೆ ಮಡದಿಯನ್ನು ಸುತ್ತಾಡಿಸಿಕೊಂಡು ಬರುವ ಹೊಣೆ ಸ್ವಲ್ಪ ಕಡಿಮೆಯೇ ಆಗಿತ್ತು ಆನಂದನಿಗೆ.

ಒಂದು ದಿನ ಸಂಜೆ ರವಿ ವಿಮಲ ಸುನೀತ ಹೊರಟರು.

ರವಿ ಮುಂದೆ ಮುಂದೆ ಹೆಜ್ಜೆ ಹಾಕಿಕೊಂಡು ಹೊರಟಿದ್ದ. ವಿಮಲ ಸುನಿತೆಯರು ಸ್ವಲ್ಪ ಹಿಂದೆ ಮಾತಾಡಿಕೊಂಡು ನಿಧಾನವಾಗಿ ನಡೆದು ಬರುತ್ತಿದ್ದರು.

ಕೂಲಿಕಾರರ ಷೆಡ್‌ಗಳ ಬಳಿ ಬಂದಾಗ ಚಿನ್ನಮ್ಮನ ಮಗು ಮನೆಯ ಮುಂದೆ ಬೆತ್ತಲೆಯಾಗಿ ಅಳುತ್ತ ನಿಂತಿತ್ತು.

"ಎಲ್ಲೋ ಮತ್ತೇ...?" ಎಂದು ಹುಡುಗನನು ಕೂಗುತ್ತಾ ಹೊರಗೆ ಬಂದ ಚಿನ್ನಮ್ಮ ಸುನಿತೆ ವಿಮಲೆಯನು ನೋಡಿ.

"ಏನಮ್ಮಾವ್ರೆ? ಗಾಳಿ ಕುಡಿಯಾಕೊಂಟ್ರಾ?"

"ಹೂಂ ಚಿನ್ನಮ್ಮ, ಇದೇನು ಇವನು ಬರೀ ಮೈಲಿ ನಿಂತಿದಾನಲ್ಲಾ?" ಎಂದಳು ಸುನಿತ.

"ನೋಡ್ರಮ್ಮಾವ್ರೆ ಕೆಸರ್ನಲ್ಲೆಲ್ಲೋ ಜಾರ್ಕಂಡು ಬಿದ್ದು ಬಂದವ್ನೆ. ಅಂಗಿಯೆಲ್ಲಾ ಕೊಳಕಾಗಿತ್ತು. ಬಿಡಿಸಿದೆ. ತೊಡ್ಸೋಣಾಂದ್ರೆ ಬೇರೆ ಅಂಗಿಯಿಲ್ಲ. ಅದಕ್ಕೆ ಅತ್ಕಂಡು ನಿಂತವ್ನೆ. ನನ್ನಂತಾ ಬಡವಳ ಹೊಟ್ಟ್ಯಾಗೆ ಹುಟ್ಟೋದು ಬಿಟ್ಟು ನಿಮ್ಮಂತಾ ಭಾಗ್ಯವಂತರ ಹೊಟ್ಟೇಲಾದ್ರೂ ಹುಟ್ಟಬಾರದಾಗಿತ್ತೆ? ಎಲ್ಲಾ ಶಿವನಾಟ! ಬೇಡಾ ಅಂದವ್ರಿಗೆ ಕೊಡ್ತಾನೆ, ಇರೋದು...ಬೇಕೂ ಅಂದವ್ರಿಗೆ ಕೊಡಾಕಿಲ್ಲ. ಕಾಲಾ...ಹೋಗಿ ಬರ್ರವ್ವ."

ಚಿನ್ನಮ್ಮ, ಆಗಾಗ್ಗೆ ಅಕ್ಕಿ ಬೇಳೆ ಹಸನು ಮಾಡಲು ಸುನೀತಳ ಮನೆಗೆ ಬರುತ್ತಿದ್ದಳು. ತುಂಬಾ ಮಕ್ಕಳ ತಾಕೆಗೆ.

ಆಕೆಯ ಮಾತಿಗೆ ವಿಮಲೆಗೆ ನಗು ಬಂದಿತು. ಸುನೀತ ಮಾತ್ರ ಗಂಭೀರ ಭಾವ ತಳೆದಳು. ಮುಂದೆ ನಡೆಯುತ್ತಿದ್ದಂತೆ ಅವಳ ಮನಸ್ಸು ಚಿನ್ನಮ್ಮನ ಮಾತನ್ನೇ ಮೆಲುಕು ಹಾಕುತ್ತಿತ್ತು.

ಹೌದು...ಬೇಕು ಅಂದವ್ರಿಗೆ ಆಗೊಲ್ಲ. ಸಾಕು ಸಾಕು ಅನ್ನುವವರಿಗೆ ಆಗ್ತಾನೆ ಇರ್‍ತವೆ ಮಕ್ಕಳು. ತನಗೇತರ ಕಡಿಮೆ! ಒಂದಾದ್ರೂ ಆಗಿದಿದ್ರೆ...ಅದೆಷ್ಟು ಸುಖವಾಗಿರಬಹುದಿತ್ತು!

ಮನೆ ತುಂಬಾ ಆಟದ ಸಾಮಾನು! ಬಣ್ಣ ಬಣ್ಣದ ರಾಶಿ ರಾಶಿ ಬಟ್ಟೆಗಳು! ದಿನಕ್ಕೊಂದು ಅಲಂಕಾರ! ಹಣ್ಣು, ಹಾಲು...ತರಕಾರಿ......

ರವಿ ತುಂಬಿ ಹರಿಯುತ್ತಿದ್ದ ನಾಲೆಯ ಬಳಿ ನಿಂತಿದ್ದ. ಇವರೂ ಅಲ್ಲಿಗೆ ಬಂದರು. ಅಲ್ಲಿದ್ದ ಹಾಸುಗಲ್ಲಿನ ಮೇಲೆ ಕುಳಿತರು

ನೀರಿನಲ್ಲಿ ಮುಳುಗಿ ಏಳುತ್ತಿದ್ದ ಮೀನುಗಳನ್ನೇ ದಿಟ್ಟಿಸಿ ನೋಡುತ್ತಾ ಕೇಳಿದ ರವಿ.

"ಆ ಗುಡಿಸಲುಗಳ ಹತ್ತಿರ ಯಾತಕ್ಕೆ ನಿಂತ್ರಿ ವಿಮಲ?"

"ಸುನೀತಕ್ಕನ ಮನೆಗೆ ಬರ್‍ತಿರ್ತಾಳಲ್ಲ ಅಕ್ಕಿ ಹಸನು ಮಾಡಲಿಕ್ಕೆ ಚಿನ್ನಮ್ಮಾಂತ, ಆಕೆ ಹತ್ರ ಮಾತಾಡ್ತಿದ್ವಿ" ಎಂದಳು ವಿಮಲ.

"ಪಾಪ! ಆ ಚಿನ್ನಮ್ಮನಿಗೆ ಏಳೋ ಎಂಟೋ ಮಕ್ಕಳು ಗಂಡ ಏನೋ ಕೂಲಿ ಕೆಲಸಮಾಡ್ತಾನೆ. ಎಲ್ಲಾ ಪುಟ್ಟ ಮಕ್ಕಳು. ಬಟ್ಟೆಗಿದ್ರೆ ಹೊಟ್ಟೆಗಿಲ್ಲ. ಹೊಟ್ಟೆಗಿದ್ರೆ ಬಟ್ಟೆಗಿಲ್ಲ" ನಿಡುಸುಯ್ದಳು ಸುನಿತ.

"ಅಲ್ಲಕ್ಕಾ ಅಷ್ಟು ಮಕ್ಕಳ್ನ ಯಾಕೆ ಮಾಡ್ಕೋಬೇಕಿತ್ತೂಂತ! ಕೇಳಿದ್ರೆದೇವರು ಕೊಡ್ತಾನೆ ಮಾಡೋದೇನು ಅನ್ನೊದು ಕೂಲಿ ಕೆಲಸಮಾಡ್ಕೊಂಡು ಅಷ್ಟು ಮಕ್ಕಳ್ನ ಸಾಕೋದಾದ್ರೂ ಹೇಗೆ ಬೆಳಸೋದಾದ್ರೂ ಹೇಗೆ? ತಮ್ಮ ಸ್ಥಿತಿ ಏನು ಅನ್ನೊ ಅರಿವಾದ್ರೂ ಬೇಡಾ ಅವ್ರಿಗೆ."

ಆವೇಶದಿಂದ ನುಡಿದ ವಿಮಲೆ ಹುಲ್ಲುಗರಿಕೆಯೊಂದನ್ನು ಚಟ್ ಎಂದು ಕಿತ್ತು, ಹಲ್ಲಿನ ನಡುವೆ ತೂರಿಸಿಕೊಂಡು ಕಡಿಯತೊಡಗಿದಳು.

ಸುನೀತ ಯಾವುದೋ ಯೋಚನೆಯಲ್ಲಿ ಮುಳುಗಿದ್ದಳು.

ರವಿ ಹೇಳತೊಡಗಿದ.

"ಒಂದು ರೀತಿ ಮೂಢನಂಬಿಕೆ ಅಂತ ಹೇಳಬಹುದು ಆದ್ರೂ ತುಂಬಾ ಮಕ್ಕಳಾದ್ರೆ ಕಷ್ಟವೇ ಅನ್ನೋದು ಅವ್ರಿಗೆ ತಿಳಿಯದ ವಿಷಯವೂ ಅಲ್ಲ. ಏನ್ಮಾಡೋದು ವಿಮಲ! ಒಂದು ರೀತೀಲಿ ಅವರು ಅಸಹಾಯಕರು. ಅಷ್ಟು ಮಕ್ಕಳಾದ್ರೂ ಬಡತನವಿದ್ರೂ ಅದ್ರಲ್ಲೇ ಸುಖ ಕಾಣ್ತಾರೆ. ಹೆಂಡತಿ ಮಕ್ಕಳಲ್ಲದೆ ಆ ಜನಗಳಿಗೆ ಇನು ಯಾವ ಸುಖ...ಸಂತೋಷ...ಅಥವಾ ಮನೋರಂಜನೆಯ ಸಾಧನಗಳಿವೆ?

ಶ್ರೀಮಂತರಾದ್ರೂ ಆದ್ರೆ ಕ್ಲಬ್ಬು...ಬಾರ್... ಸಿನೆಮ...ನಾಟಕ–ವಿಹಾರ ಇವೆಲ್ಲಾ ಮನೋರಂಜನೆಯ ಸಾಧನೆಗಳಿರುತ್ತವೆ. ಆದ್ರೆ ಕೂಲಿ ಕುಂಬಳಿ ಮಾಡುವವರಿಗೆ ಗಂಡನಿಗೆ ಹೆಂಡತಿಯ ಆಕರ್ಷಣೆ. ಹೆಂಡತಿಗೆ ಗಂಡನದು, ಆಕರ್ಷಣೆಯಿಂದ ಪಾಪಿಷ್ಟ ಸಾಮೀಪ್ಯದ ಪ್ರತಿಫಲ ಸಂತಾನ!

ಅವರ ಸುಖ ಸಂತೋಷ ಮನೋರಂಜನೆ ಎಲ್ಲವೂ ಇಷ್ಟರಲ್ಲೇ ಅಡಕವಾಗಿರುತ್ತೆ."

ರವಿಯ ಮಾತು ವಿಮಲೆಗೆ ಹಿಡಿಸಲಿಲ್ಲ. ಅವಳು ಸುಮ್ಮನೆ ಕುಳಿತಳು.

ಸುನೀತೆಗೆ ಮಾತ್ರ ರವಿಯ ಮಾತು, ನೂರಕ್ಕೆ ನೂರು ಸತ್ಯವೆನ್ನಿಸಿತು. ತಾನು ಮಕ್ಕಳಿಗಾಗಿ ಹಂಬಲಿಸುವುದು ಪರಿಹಾಸ್ಯವಾಗಿತ್ತು. ಆನಂದನಿಗೆ ಒಂದುದಿನಕ್ಕೂ ಅವನು ಅವಳ ಮನೋಭಿಲಾಷೆಯನ್ನು ತಿಳಿದುಕೊಳಲು ಪ್ರಯತ್ನಿಸಿರಲಿಲ್ಲ. ಅವಳು ಯಾವಾಗಲಾದರೊಮ್ಮೆ ಈ ಕೊರತೆಯನ್ನು ತೋಡಿಕೊಂಡಾಗ ಹೇಳುತ್ತಿದ್ದ.

"ಅದೇನು ಮಕ್ಕಳು ಮಕ್ಕಳೂಂತೀಯ ಸುನಿ! ಫ್ರೀಯಾಗಿ...ಹಾಯಂತ ಹೀಗೇ ಇದ್ರೆ ಚೆನ್ನ ಸ್ವಲ್ಪ ದಿನ. ನಿನಗೆ ಬೇಸರವಾದ್ರೆ ಹೇಳು ಎಲ್ಲಾದ್ರೂ ಒಂದು ಒಳ್ಳೆಯ ಸ್ಥಳಕ್ಕೆ ಹೋಗಿ ಚೆನ್ನಾಗಿ ಎಂಜಾಯ್‌ಮಾಡಿ ಬರೋಣ"

ತನ್ನ ಅಪೇಕ್ಷೆಯನ್ನು ಪ್ರವಾಸ...ಪಾರ್ಟಿಗಳ ಮೂಲಕ ಮರೆಸಲು ಪ್ರಯತ್ನಿಸುತ್ತಿದ್ದ. ಇದ್ರಿಂದಲೇ ಏನೋ ಶ್ರೀಮಂತರಿಗೆ ಮಕ್ಕಳು ಕಡಿಮೆಯಾಗೋದು. ಎನ್ನಿಸುತ್ತಿತ್ತು ಅವಳಿಗೆ.

ಇದನು ನೆನೆಸಿಕೊಂಡು ಓಡುವ ಮೋಡಗಳನ್ನೇ ದಿಟ್ಟಿಸುತ್ತಾ

"ರವಿ ಹೇಳ್ತಿರೋದು ನಿಜ ಅನಿಸುತ್ತೆ ವಿಮಲ"

"ಸರಿ, ನಿಮ್ಮದೂ ಅದೇ ಅಭಿಪ್ರಾಯವೆ ಸುನೀತಕ್ಕ? ಹಿಡಿ ಕೂಳು ಕಾಣದ ಹಿಂಡು ಹಿಂಡು ಮಕ್ಕಳಿಂದ ತಂದೆ ತಾಯಿಗಳಿಗೆ ಏನು ಸುಖ? ಸಮಾಜ–ದೇಶ, ಉದ್ಧಾರವಾದ ಹಾಗೆಯೇ. ಇದಕ್ಕೆ ಪರಿಹಾರವೆ ಇಲ್ಲವೆ?"

"ಇದಕ್ಕೆ ಪರಿಹಾರವಿದೆ. ಅವರಿಗೂ ಮನರಂಜನೆಯ ಸಾಧನಗಳನ್ನು ಸುಲಭ ರೂಪದಲ್ಲಿ ದೊರಕೋ ಹಾಗೆ ಮಾಡಿದಾಗ, ಸ್ವಲ್ಪ ಮಟ್ಟಿಗೆ ವಿದ್ಯಾರ್ಜನೆ ಮಾಡಿದಾಗ, ಮಿತ ಸಂತಾನದ ಮಹತ್ವ ತಿಳಿದು ಬಂದಾಗ ಮೂಢ ನಂಬಿಕೆ ತೊಲಗಿ, ತಿಳುವಳಿಕೆ ಮೂಡುತ್ತೆ." ಇಷ್ಟನ್ನೂ ಆವೇಶ ಬಂದವನಂತೆ ನುಡಿದ ರವಿ. ಒಂದೆರಡು ಗಳಿಗೆಗಳು ಸುಮ್ಮನಿದ್ದು ಮತ್ತೆ:

"ಹೇಗಿದ್ರೂ ನಿನಗೆ ಮನೇಲಿ ಕೆಲ್ಸ ಇರೋದು ಅಷ್ಟರಲ್ಲೇ ಇದೆ. ಪ್ರತಿಯೊಂದು ಗುಡಿಸಲಿಗೂ ಹೋಗಿ ಮಿತ ಸಂತಾನದ ಮಹತ್ವ ತಿಳಿಸಿಯಾ ಅವರಿಗೆ ತಿಳುವಳಿಕೆ ಕೊಡಬಾರದೂಂತೀನಿ? ಬರೀ ಫ್ಯಾಮಿಲಿ ಪ್ಲಾನಿಂಗ್ ಡಿಪಾರ್ಟ್‌ಮೆಂಟ್‌ನಿಂದ ಎಷ್ಟು ಮಾಡಿದ್ರೂ ಸಂಪೂರ್ಣ ಸಕ್ಸೆಸ್ ಆಗೊಲ್ಲ. ಮೊದಲು ಅವರ ಮನಸ್ಸಿನಲ್ಲಿ ತಿಳುವಳಿಕೆ ಮೂಡ್ಬೇಕು" ಎಂದು ವಿಮಲೆಗೆ ತಿಳಿಸಿದ.

"ಹೌದು. ನೀವು ಹೇಳೋದು ಸರಿ. ಇನ್ಮೇಲೆ ಆ ಕೆಲ್ಸ ಮಾಡ್ತೀನಿ"

"ಎಲ್ಲಾದ್ರೂ ಮರೆತು ನೀನೇ ಮುಂಚೆ ಫ್ಯಾಮಿಲಿ ಪ್ಲ್ಯಾನಿಂಗ್‌ನ ಆರಾಧಕಳಾಗಿ ಬಿಟ್ಟೀಯ ವಿಮಲ! ಪುಟ್ಟ ಡಾಕ್ಟರರನ್ನು ನೋಡೋದಕ್ಕೆ ನಾವೆಲ್ಲಾ ಕಾತರರು"

ಸುನೀತಳ ಮಾತನ್ನ ಕೇಳಿ ವಿಮಲೆಯ ಮುಖ ರಂಗೇರಿತು. ಅವಳು ತನ್ನ ಕೊನೆಗಣ್ಣು ಹಾಯಿಸಿ ರವಿಯನ್ನು ಪ್ರೇಮಪೂರ್ವಕವಾಗಿ ನೋಡಿದಾಗ.

ಮೋಹದ ಮಡದಿಯ ಕಡೆ ದೃಷ್ಟಿ ಹರಿಸಿ ನಕ್ಕ ರವಿ.

ಕಾಲುವೆಯ ನೀರಿನಲ್ಲಿ ಚಿಕೆ ಪುಟ ಅಲೆಗಳು ವಿಳುತ್ತಿದ್ದವು. ಸಂಧ್ಯಾರಾಣಿ ಈ ಕಲಬರಗಳನ್ನು ನಿರಿಗೆ ಹಾಕಿಕೊಳ್ಳುತ್ತಿರುವಳೇನೋ ಎನ್ನುವಂತಿತ್ತು. ರವಿಯ ರಂಗು ರಂಗಿನ ರಶ್ಮಿಗಳು, ರೇಷ್ಮೆ ಎಳೆ ಜೋಡಿಸು ತ್ತಿರುವ ನಿರಿಗೆಗಳಲ್ಲಿ ತೂರಿಕೊಳ್ಳುತ್ತಿದ್ದವು.

ಸುಂದರ ಶಾಂತಮಯ ವಾತಾವರಣ! ರಮ ಣೀಯ ನೋಟ!

ಸುನೀತಳ ಕಣ್ಣು ಈ ರಮಣೀಯ ದೃಶ್ಯದ ಸೌಂದರ್ಯವನ್ನು ತುಂಬಿಕೊಳ್ಳುತ್ತಿದ್ದವು. ನಿಸರ್ಗದ ಪ್ರೇಮಿ ಅವಳು.

ರವಿಯೂ ಅಷ್ಟೇ, ತನ್ಮಯವಾಗಿ ನೋಡುತ್ತಾ ಕುಳಿತನು. ಪ್ರಕೃತಿಯ ಚಿತ್ರಗಳನು ಬಿಡಿಸುವುದರಲ್ಲಿ ಆಸಕ್ತಿ ಅವನಿಗೆ. ಬಣ್ಣಗಳನು ಕೊಂಡು. ಕುಂಚ ಓಡಿಸಿ ವಿದ್ಯಾರ್ಥಿಯಾಗಿದ್ದಾಗ ಹಲವಾರು ಚಿತ್ರಗಳನು ಬರೆ ದಿದ್ದ. ಮೆಡಿಕಲ್‌ಗೆ ಹೋದ ಮೇಲೆ ಓದುವುದು ಹೆಚ್ಚಾ ಗಿದ್ದುದರಿಂದ ತನ ಆಸಕ್ತಿಯನು ಹತ್ತಿಕ್ಕ ಬೇಕಾಗಿತ್ತು. ಈ ಪ್ರಶಾಂತ ಸ ಳಕ್ಕೆ ಬಂದಾಗಲೆಲ್ಲಾ ಏನನಾ ದರೂ ಬಿಡಿಸುವ ಕುತೂಹಲವುಂಟಾಗುವುದು. ಬಣ್ಣ ಕುಂಚಗಳನ್ನು ಇನ್ನೂ ತರಿಸಿರಲಿಲ್ಲವಾದ್ದರಿಂದ ಆ ಕೆಲ ಸಕ್ಕೆ ಇನ್ನೂ ಕೈ ಹಾಕಿರಲಿಲ್ಲ.

ವಿಮಲೆಗೆ ಪ್ರಕೃತಿ ವೀಕ್ಷಣೆಗೀಕ್ಷಣೆ ಸೇರದು! ಅವಳು ಒಂದು ಪಕ್ಕಕ್ಕೆ ತಿರುಗಿ ಕೈಲಿದ್ದ ಚಾಕ್‌ಲೇಟ್ ಪೊಟ್ಟಣವನ್ನು ಬಿಚ್ಚಿದಳು. ತಾನೊಂದನ್ನು ಬಾಯಲ್ಲಿ ಹಾಕಿಕೊಂಡು ಪೊಟ್ಟಣವನ್ನು ಸುನಿತಳ ಮುಂದೆ ಹಿಡಿದಳು.

ಕಾಗದದ ಪೊಟ್ಟಣ ಸರ ಸರ ಎಂದದ್ದನು ಕೇಳಿ ಸುನಿತ ಭಾವ ಸಮಾಧಿಯಿಂದ ಎಚ್ಚೆತ್ತು ತಿರುಗಿ ನೋಡಿದಳು.

ವಿಮಲೆಯ ಕೈಯಲ್ಲಿ ಚಾಕಲೇಟು...ಮುಖದಲ್ಲಿ ಮಂದಹಾಸ, ಸುತ್ತಲಿನ ಪ್ರಕೃತಿಯಂತೆ ಅವಳೂ ನಗುತ್ತಿದ್ದಾಳೆ.

ಸುನೀತ ಒಂದನ್ನೆತ್ತಿಕೊಂಡು ಕಿರು ನಗೆಸೂಸಿದಳು.

ಅಲ್ಲಿಂದ ಪೊಟ್ಟಣ ರವಿಯ ಮುಂದೆ ಹೋಯಿತು. ತನ ಮುಂದೆ ಏನೋ ಸುಳಿದಂತಾಗಿ, ಅವನು ಒಂದೆ ರಡು ಬಾರಿ ರೆಪ್ಪೆ ಬಡಿದು ನಂತರ ಸರಿಯಾಗಿ ನೋಡಿದ.

ವಿಮಲೆಯ ಕರಕಮಲ ಚಾಕ್‌ಲೇಟ್ ಹಿಡಿದ ಅವನ ಕಣ್ಣಿನ ಮುಂದೆಯೇ ಇತ್ತು.

"ಹೊಟ್ಟೆಬಾಕಿ, ಯಾವಾಗೂ ತಿನ್ನುವುದರಲ್ಲೇ ಮನಸ್ಸೆಲ್ಲಾ!"

ಮೆಲ್ಲಗೆ ಅನುತ್ತಾ, ಚಾಕ್‌ಲೇಟ್‌ನೊಂದಿಗೆ ಅವಳ ಚಿಗುರು ಬೆರಳಿನ ರುಚಿಯನ್ನೂ ನೋಡಿದ.

"ಆಹ್!!" ಏನು ಕೆಟ್ಟವರಪ್ಪ, ವಿಮಲ ಬೆರಳನು ಸಟ್ಟನೆ ಹಿಂತೆಗೆದುಕೊಂಡಳು.

ಏನಾಯಿತೋ ಎಂದುಕೊಂಡು ಸುನಿತ ಇತ್ತ ತಿರುಗಿದಳು.

"ನೋಡಿ ಸುನೀತ, ಎಲ್ಲಿಹೋದ್ರೂ ಈ ಮಗೂಗೆ ತಿಂಡಿ ಇದ್ದೇ ಇರ್ಬೇಕು. ಜೊತೇಲಿ ತಂದಿದಾಳೆ ಬುತ್ತೀನ, ಅದಕೆ ಹೊಟ್ಟೆಬಾಕಿ ಅಂದೆ. ಅಷ್ಟಕ್ಕೇ ಏನಾಯ್ತೋ ಅನ್ನೋಳ ಹಾಗೆ ಕಿರುಚಿ ಬಿಡೋದೆ?"

ರವಿಯ ತುಟಿಯಲ್ಲಿ ತುಂಟ ನಗು ತೇಲಿ ಬಂತು. ಇದನ್ನು ನೋಡಿದ ವಿಮಲೆಯ ಮುಖದ ಮೇಲ ಹುಸಿ ಮುನಿಸಿನ ಮುದ್ರೆ ಮೂಡಿತು. ಥೂ ಎಷ್ಟು ಕೆಂಪಗಾಗೋ ಹಾಗೆ ಕಚ್ಚಿದ್ದಲ್ಲದೆ, ಸುಳ್ಳು ಬೇರೆ ಹೇಳೋದು. ಸುನೀತಕ್ಕ ಇಲ್ಲಿ ಇಲ್ಲದೆ ಹೋಗಿದ್ರೆ, ನಾನೂ ಸೇಡು ತೀರಿಸ್ಕೋಬಹುದಾಗಿತ್ತು ಎನಿಸಿತು.

ತುಂಟನೋಟವನು ಹರಿಸಿದಳು ರವಿಯ ಕಡೆ.

ಆ ತುಂಟ ನೋಟವನು ಎದುರಿಸುತ್ತಾ ರವಿ ಹೇಳಿದ.

"ಇಲ್ಲಿಗೇ ತಿಂಡಿನ ಹೊತ್ಕೊಂಡು ಬಂದ್ಮೇಲೆ, ಮನೆ ಯಲ್ಲಿ ಇನು ಎಷ್ಟು ತಿನ್ನಬಹುದು ಹೇಳಿ ಸುನಿತ. ಯಾವಾಗೂ ತಿನ್ನೋದೊಂದನ್ನು ಬಿಟ್ಟು ಬೇರೆ ಕೆಲ ಸವೇ ಇಲ್ಲ ತಿಳ್ಕೊಂಡು ಬಿಡಿ."

"ಹೌದಕಾ ಇವರ ಹಾಗೆ ಯಾವಾಗೂ ಸಿಗ ರೇಟು ತಿಂತಾ ಇರೋಕೆ ಯಾರಿಂದ ಆಗುತ್ತೆ ಹೇಳಿ?"

"ಇಲ್ಲರೀ ಸುನೀತ... ನಾನೇನು ಅಷ್ಟು ಸಿಗರೇಟು..."

"ಇಲ. ಸುನೀತಕ ನಾನಷ್ಟು ತಿನ್ನೋದು..."

ಈ ಮಕ ಲಾಟವನ್ನು ಬಹಳ ಮೋಜಿನಿಂದ ನೋಡು ತ್ತಿದ್ದಳು ಸುನೀತ.

"ಹೇಳಕ್ಕ ಇವರು ಹೇಳೋ ಹಾಗೆ ತಿನ್ನೋದೊಂದೇ ನನ ಕೆಲ್ಸಾನ?"

"ಹೇಳಿ ಸುನಿತ, ಇವಳು ಅನ್ನೋ ಹಾಗೆ, ನಾನು ಯಾವಾಗೂ ಸಿಗರೇಟು ಸೇದುತಿರ್ತೀನಾ?"

"ಸ್ವಲ್ಪ ಇರಿ. ಈ ನ್ಯಾಯಾಧೀಶಳಿಗೆ ಸ್ವಲ್ಪ ಅವ ಕಾಶ ಕೊಟ್ರೆ, ನಾಳೆ ಕೋರ್ಟಿನಲ್ಲಿ, ನಿಮ್ಮಿಬ್ಬರ ಸ್ಟೇಟ್ ಮೆಂಟ್ ಕೇಳಿದ ಮೇಲೆ ತೀರ್ಪು ಕೊಡಲಾಗುವುದು."

ಸುನೀತ ಹೀಗಂದಿದ್ದನ್ನು ಕೇಳಿ ರವಿ... ವಿಮಲೆ ಯರು ಜೋರಾಗಿ ನಗತೊಡಗಿದರು.

ಸುನೀತಗೂ ನಗು ತಡೆಯದಾಯಿತು. ಮೂವರ ನಗುವಿನ ತೆರೆಗಳು ಗಾಳಿಯೊಂದಿಗೆ ಸೇರಿ ಸುತ್ತಲೆಲ್ಲಾ ಹರಡಿತು.

ತಿಳಿಯಾದ ಆಕಾಶದಲ್ಲಿ ತಾರೆಗಳು ಒಂದೊಂದಾಗಿ ಮೂಡಿ ಬಂದಾಗ. ಮೂವರೂ ಅಲ್ಲಿಂದೆದ್ದು ಮನೆಗಳ ಕಡೆ ಹೊರಟರು.

ರಾತ್ರಿ ಮನೆಯೊಳಕ್ಕೆ ಬರುತ್ತಿದ್ದಂತೆ ಆನಂದ,

"ಎಕ್ಸ್‌ಕ್ಯೂಸ್ ಮಿ ಸುನಿ. ಈ ಸಂಜೆ ವಾಕ್ ಹೋಗೋಣ ನಿನ ಜೊತೇಲೀಂತ ಎಷ್ಟು ಪ್ರಯತ್ನ ಮಾಡಿದ್ರೂ ಬೇಗ್ನೆ ಬರೋದಕ್ಕೇ ಆಗ್ಲಿಲ್ಲ."

ಸುನೀತ ಏನೂ ಹೇಳದೆ ಮುಗುಳಕ್ಕಳು ಅಷ್ಟೇ.

"ಸದ್ಯ...ನಾನು ಬರದೆ ಇದ್ದದ್ದಕ್ಕೆ ಮುಖದ ಮೇಲೆ ಕಾರ್ಮೋಡ ಮುಸುಕಲಿಲ್ವಲ್ಲ! ರವಿ...ವಿಮಲ ನಮ್ಮ ತಿರುಗಾಟದ ಪ್ರಾಬ್ಲಮ್‌ನ ಎಷ್ಟೋ ಮಟ್ಟಿಗೆ ಸಾಲ್ವ ಮಾಡಿದಾರೆ. ನಾಳೆ ಅವ್ರಿಗೆ ನನ ಥ್ಯಾಂಕ್ಸ ತಲುಪಿಸಿಬಿಡು."

"ಸರಿ... ಹಾಗಂತ ಎಲ್ಲಾದ್ರೂ ದಿವ್ಯಾ ಚಕ್ಕರ್ ಹೊಡೆಯೋದಕ್ಕೆ ಶುರು ಮಾಡಿಬಿಟ್ಟೀರಿ!!"

"ಆಗಿ ಮಾಡಿದ್ದೂ... ತಮ್ಮ ಅಪ್ಪಣೆ."

ನಲ್ಲೆಯ ಗುಲಾಬಿ ಗಲ್ಲವನ್ನು ಮೆಲ್ಲನೆ ಚಿವುಟಿ, ಒಳಕ್ಕೆ ಹೋದ ಆನಂದ.

ಸುನೀತ ಸಡಗರದಿಂದ ಒಳಕ್ಕೆ ಹೋಗಿ, ಊಟಕ್ಕೆ ಅಣಿಮಾಡಿದಳು.

ಆನಂದನಿಗೆ ದಣಿವೂ ಹಸಿವೂ ಆಗಿತ್ತು. ಚೆನ್ನಾಗಿ ಊಟ ಮಾಡಿದ. ದಿಂಬಿಗೆ ತಲೆಯಿಡುತ್ತಲೂ ನಿದ್ದೆಯಾ ವರಿಸಿತು.

ಮಗುವಿನಂತೆ ನಿದ್ರಿಸುತ್ತಿದ ಪತಿಯನ್ನೇ ನೋಡು ತ್ತಲಿದ್ದ ಸುನೀತಗೆ,ಬಹಳ ಹೊತ್ತಿನ ಮೇಲೆಯೇ ಕಣ್ಣು ಹತ್ತಿದ್ದು.

ಮರುದಿನ ಆನಂದ ಆಫೀಸಿಗೆ ಹೋದಮೇಲೆ; ಸುನೀತ, ಹೊರಗೆ ಗಿಡದ ಕೆಲಸ ಮಾಡುತ್ತಿದ್ದ ತಿಮ್ಮ ನನ್ನು ಕೂಗಿ; "ತಗೋ ಇದನ ದರ್ಜಿ ಹತ್ರ ತಗೊಂಡು ಹೋಗಿ, ಚಿಕ ಮಗುವಿಗೆ, ಒಂದು ಜೊತೆ ನಿಕ್ಕರ್, ಅಂಗಿಯನ್ನು ಹೊಲಿಯಲು ಹೇಳು." ಎಂದು ಆನಂದನ ಹಳೆಯ ಉಲನ್ ಪ್ಯಾಂಟು ಮತ್ತು ಬುಷ್ ಷರ್ಟನ್ನು ಅವನಿಗೆ ಕೊಟ್ಟಳು.

ಯಾರಿಗೇಂತ ಅವ್ವಾವ್ರು ಇದನ್ನ ಹೊಲಿಸೋದು! ಏನಾದ್ರೂ ಮಗಗಿಗ ಆಗೋ ಹಂಗ್ಯತೊ ಏನೋ! ಎನ್ನಿಸಿ. ಮತ್ತೆ, ಆದ್ರೆ ಅವರೂಪದ ಮಗೂಗೆ...ಹಳೆ ಬಟ್ಟೆ ಹೊಲಿಸ್ತಾರಾ ಎಲ್ಲಾದ್ರೂ! ಹಂಗಾದ್ರೆ ಮತ್ತೆ ಯಾರಿಗೇಂತಾ! ಎಂದುಕೊಂಡು ತಲೆ ಕೆರೆಯುತ್ತಾ ನಿಂತ ಅವನು.

"ಏನೋ ಹಾಗೆ ನಿಂತೆ? ನಾನು ಹೇಳಿದ್ದು ಕೇಳಿಸಲಿಲ್ವೇನೂ?"

"ಕೇಳಿಸ್ತವ್ವ... ಆ...ದ್ರೂ..."

"ಏನೋ ಅದು. ಬಾಯಿ ಬಿಟ್ಟಾದ್ರೂ ಹೇಳ್ಬಾರದೆ?"

"ಯಾರ ಅಳತೆಗೆ ಹೊಲಿಸ್ಬೇಕ್ರವ್ವ, ಆ ದೊಗಲೆ ಪೈಜಾಮದ ಸಾಬಿ ಚೆಂದಾಕಿ ಒಲಿಯಾಕಿಲ್ರವ್ವ"

ಇಲ್ಲಿನ ಟೈಲರ್‌ಗೆ ಚೆನ್ನಾಗಿ ಹೊಲಿಯುವುದಕೆ ಬರುತ್ತಿಲ್ಲವಾದ್ದರಿಂದ, ಆನಂದನ ಬಟ್ಟೆ... ಸುನಿತಳ ಚೋಲಿಗಳನ್ನು ಬೆಂಗಳೂರಿನಿಂದಲೋ... ಭದ್ರಾವತಿಯಿಂದಲೋ ಹೊಲಿಸಿ ತರುತ್ತಿದ್ದರು. ಎಂತಲೇ ಅವನು ಹಾಗೆ ಕೇಳಿದ್ದು.

"ಅವನು ಹೇಗಾದ್ರೂ ಹೊಲಿಯ್ಲೀಳು. ಈಗ ಅರ್ಜೆಂಟ್ ಬೇಕಾಗಿದೆ. ಆ ಚಿನ್ನಮ್ಮ ಇದಾಳಲ್ಲ. ಆಕೆ ಮಗನೀಗೇಂತ ಹೊಲಿಸ್ತಿರೋದು. ಸುಮಾರು ಒಂದೂವರೆ... ಎರಡು ವರ್ಷದ್ದಿರ ಬೇಕಲ್ವೆ ಆ ಮಗು?"

ಆ ಚೋಟುದ್ದ ಹುಡುಗನಿಗೆ, ಇಷ್ಟೊಳ್ಳೆ ಬಟ್ಟೇನಾ! ತನಗೇನಾದ್ರೂ ಕೊಟ್ಟಿದ್ದಿದ್ರೆ ಏನಿ ಸಿತು ಅವನಿಗೆ.

ತಿಮ್ಮನಿಗೆ ಮಕ್ಕಳು ಮರಿಯಿರಲಿಲ್ಲ. ಆನಂದನ ಹಳೆಯ ಬಟ್ಟೆಗಳೆಲ್ಲಾ ಕೆಂಪಯ್ಯನಿಗೂ... ಇವನಿಗೂ ಮೀಸಲು. ಇಷ್ಟಾದರೂ ಅವನಿಗೆ ತೃಪ್ತಿಯಿರಲಿಲ್ಲ. ಹೇಳಿದ.

"ಆ ಸೆರೆ ಕುಡುಕನ ಮಗನಿಗೇನ್ರವ್ವಾ! ದುಡ್ಡಿದ್ದೆಲ್ಲಾ ಸಿಕ್ಕಾ ಬಟ್ಟೆ ಕುಡಿಯೋಕೆ ಹಾಕ್ತಾನೆ. ಸುಮ್ಕಿರ್ರವ್ವ. ಅಂಥಾವ್ರಿಗೆ ಕೊಟ್ಟು ಕಲಿಸ್ಬಾರ್ದು"

"ಸಾಕು ನಿನ್ನ ವೇದಾಂತ. ತಗೊಂಡು ಹೋಗಿ, ಬೇಗ್ನೆ ಹೊಲ್ಕೊಡೋದಕ್ಕೆ ಹೇಳು"

ತಿಮ್ಮ ಮರುಮಾತಾಡದೆ ಅಲ್ಲಿಂದ ಹೊರಟ.

ಹಿಂದಿನ ದಿನ ಸುನೀತ ಎಚ್ಚರಿಸಿದಂತೆ ಆನಂದ, ಸಂಜೆ ಬೇಗನೆ ಮನೆಗೆ ಬಂದ. ಎರಡು ಜೋಡಿಗಳೂ ತಿರುಗಾಡಲು ಹೊರಟವು.

ಚಿನ್ನಮ್ಮ ಇವರ ಬರವನ್ನೇ ಕಾಯುತ್ತಾ ಮಗುವನ್ನೆತ್ತಿಕೊಂಡು, ತನ್ನ ಗುಡಿಸಲು ಮುಂದೆ ನಿಂತಿದ್ದಳು. ಹೊಸ ಅಂಗಿಯನ್ನು ತೊಡಿಸಿ ಮಗನನ್ನು ಕಂಕುಳಲ್ಲೆತ್ತಿಕೊಂಡಿದ್ದಳು. ಅಚ್ಚ ಬಿಳುಪಾದ ಉಡುಪು ಅದರ ಶಾಮಲ ವರ್ಣಕ್ಕೆ ಬಹಳ ಚೆನ್ನಾಗಿ ಒಪ್ಪಿತ್ತು, ಬಿಳಿಯ ಪ್ರಭಾವಳಿಯ ನಡುವೆ ಕಪ್ಪು ಶಿಲಾಮೂರ್ತಿಯಂತೆ!

"ಅವ್ವಾವ್ರಿಗೆ ಕೈ ಮುಗಿ" ಅವರು ಅಲ್ಲಿಗೆ ಬಂದ ಕೂಡಲೆ ಚಿನ್ನಮ್ಮ ಮಗನ ಕೈಗಳನ್ನು ಹಿಡಿದು ಜೋಡಿಸುತ್ತಾ ಅಂದಳು.

"ಇರಲಿ ಬಿಡು ಚಿನ್ನಮ್ಮ"ಎಂದ ಸುನೀತ ಅವನನ್ನು ಮಾತಾಡಿಸುತ್ತಾ.

"ಏನೋ ಮರಿ! ಅಂಗಿ ಚೆನ್ನಾಗಿದೆಯಾ?" ಕೇಳಿದಳು.

ಹುಡುಗ ನಗುತ್ತಾ ತಾಯಿಯ ಸೆರಗಿನಲ್ಲಿ ಮುಖ ಹುದುಗಿಸಿದ.

"ಪುಟ್ಟಾಗಿ ಬಹಳ ಮುದ್ದಾಗಿದೆ ಅಲ್ವೆ ಅಕ್ಕ?"

ಅಲ್ಲಿಂದ ಮುಂದೆ ಬಂದ ಮೇಲೆ ವಿಮಲ ಹೇಳಿದಳು.

"ಬಹಳ ಚೆನ್ನಾಗಿದೆ" ಹೂಂ ಗುಟ್ಟಿದಳು ಸುನೀತ.

ಆ ದಿನ ಪಾರ್ಕ್‌ನಲ್ಲಿ ನೋಡಿದ ಕಂದ, ಅವಳ ಕಣ್ಣ ಮುಂದೆ ಬಂದು ನಿಂತಂತಾಗಿತ್ತು. ಬಣ್ಣವೊಂದನ್ನು ಬಿಟ್ಟರೆ ಆ ಹುಡುಗನಂತೆಯೇ ಚಿನ್ನಮ್ಮನ ಮಗುವೂ ಕೂಡ. ಅಗಲವಾದ ಕಣ್ಣಿನ...ಪುಟ್ಟ ಬಾಯಿಯ ದುಂಡನ್ನ ಮುಖ!

ಈ ವೇಳೆಗೆ ಗಂಡಸರು ಬಹಳ ಮುಂದೆ ಹೋಗಿಬಿಟ್ಟಿದ್ದರು.

"ಅವರು ಮುಂದೆ ಹೋದರು" ವಿಮಲ ಬೇಗ ಬೇಗನೆ ನಡೆದಾಗಸುನೀತಳ ನಡಿಗೆಯ ವೇಗವೂ ಹೆಚ್ಚಿತು.

ಎಲ್ಲರೂ ಬೆಟ್ಟದ ತಪ್ಪಲಿಗೆ ಬಂದರು. ಸೂರ್ಯದೇವನು ಪಡುವಣ ದಿಶೆಗೆ ನಿಧಾನವಾಗಿ ಇಳಿಯುವ, ಸಿದ್ಧತೆ ನಡೆಸಿದ್ದ. ಮಾಲೆ ಮಾಲೆಯಾಗಿ ದೂರದವರೆಗೂ ಹಬ್ಬಿದ ಗಿರಿ ಶಿಖರಗಳ ಮೇಲೆ ಹೊನ್ನ ಕಿರೀಟವನ್ನಿರಿಸಿದ್ದ.






ಆಡು ಕುರಿಗಳನ್ನು ಮೇಯಿಸುತ್ತಿದ್ದ ಹುಡುಗರು ಅವುಗಳನ್ನು ಒಂದು ಕಡೆ ಕೂಡಿಸಿಕೊಳ್ಳುತ್ತಾ ಇಳಿದು ಬರುತ್ತಿದ್ದರು. ನಾಲ್ವರೂ ಒಂದು ಕಡೆ ಚನ್ನಾಗಿ ಬೆಳೆದು ಮಟ್ಟಸವಾಗಿದ್ದ ಹುಲ್ಲು ಹಾಸಿಗೆಯ ಮೇಲೆ ಹೋಗಿ ಕುಳಿತರು. ಮಾತಿನ ಮಧ್ಯೆ ಆನಂದ ಕೇಳಿದ.

"ಇಲ್ಲಿಗೆ ಪೋಸ್ಟ್‌ಮಾಡಿದ್ರಲ್ಲಾ ಎಲ್.ಎಂ.ಓ. ಬಂದಿದಾರಾ ರವಿ?

"ಇಲ್ಲ. ಅವರು ಕ್ಯಾನ್ಸಲೇಷನ್‌ಗೆ ಟ್ರೈಮಾಡಿದಾರೇಂತ ಕೇಳಿದೆ. ಈಗ ಸದ್ಯಕ್ಕೆ ಎರಡೂ ನಾನೇ?" ಎಂದು ರವಿ ನಕ್ಕ.

"ನಿಮ್ಮ ಆಸ್ಪತ್ರೆಗೆ ಕಾಯಿಲೆ ಕೇಸುಗಳು ಹೆಚ್ಚಾಗಿ ಬರುತ್ತವೋ ಇಲ್ಲ ಹೆರಿಗೆ ಕೇಸುಗಳೋ?" ಮಧ್ಯೆ ಬಾಯಿ ಹಾಕಿದಳು ವಿಮಲ.

ಸ್ವಲ್ಪ ತಮಾಷೆ ಮಾಡಬೇಕೆನ್ನಿಸಿತು ರವಿಗೆ. ಹೇಳಿದ.

"ಸಮ ಸಮ. ಹೆಂಗಸ್ರೆಲ್ಲಾ ಹೆರಿಗೆಗೆ, ಗಂಡಸ್ರೆಲ್ಲಾ ಕಾಯಿಲೆಯಿಂದ ಬರ್ತಾರೆ."

"ಹೆರಿಗೆಗೆ ಹೆಂಗಸರು ಬರದೆ ಗಂಡಸರು ಬರ್ತಾರಾ?"

"ಆ ಕಾಲವೂ ಬರಬಹುದು ಅಲ್ವೆ ಆನಂದ್?" ಇನ್ನೊಮ್ಮೆ ನಕ್ಕ ರವಿ.

"ನನಗೂ ಹಾಗೇ ಅನ್ನಿಸುತ್ತೆ. ಏನಂತೀಯ ಸುನಿ?"

ಆನಂದ ಸುನೀತೆಯ ಕಡೆ ತಿರುಗಿ ಕಂಡ.

ಸುನೀತ ಏನನ್ನೂ ಹೇಳಲಿಲ್ಲ. ಸಣ್ಣಗೆ ನಕ್ಕಳು ಅಷ್ಟೆ.

ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನೆ ಕುಳಿತರು.

ರವಿಯೇ ಮತ್ತೆ ಮಾತಿಗೆ ತೊಡಗಿದ.

"ನಿನ್ನೆ ಒಂದು ಟಾಪಿಕ್ ಮೇಲೆ ಬಹಳ ಗರಮಾ ಗರಮ್ ವಾಗ್ವಾದ ನಡೆಯ್ತು ಆನಂದ್" ವಿಮಲೆಯ ಕಡೆ ನೋಡಿ ಅಂದ ರವಿ.

"ಹೌದೆ? ಏನಂಥಾದ್ದೂ" ಕುತೂಹಲಗೊಂಡ ಆನಂದ.

"ಮಿತ ಸಂತಾನದ ವಿಷಯ. ಇದರ ಬಗ್ಗೆ ಒಂದು ಗೋಷ್ಠಿಯೇ ನಡೆಯಿತೂಂತ ಇಟ್ಕೊ. ವಿಮಲಾ ದೇವಿಯವರು ಮಿತಸಂತಾನದ ವಿಷಯವಾಗಿ ದೀರ್ಘಭಾಷಣ ಮಾಡಿದರು. ಅವರು ಇನ್ಮುಂದೆ ಪ್ರತಿಯೊಂದು ಗುಡಿಸಿಲಿಗೂ ಹೋಗಿ, ಅತಿ ಸಂತಾನ ಕಡಿಮೆಮಾಡಿಕೊಳ್ಳಬೇಕೆಂದು ಉಪದೇಶ ಮಾಡ್ತಾರಂತೆ."

"ಒಳ್ಳೆಯದನ್ನೇ ಯೋಚಿಸಿದಾರೆ, ಎಷ್ಟಾಗಲಿ ಮಿತ ಸಂತಾನ ಹಿತಕರವಾದುದೇ. ಅತಿಯಾಗಿಯೂ ಇರಕೂಡದು. ತೀರಾ ಇಲ್ಲದೆಯೂ ಇರಕೂ..."

ಇದ್ದಕ್ಕಿದ್ದಂತೆ ಥಟ್ಟನೆ ಕೊನೆಯ ನುಡಿಯನ್ನು ತಡೆಹಿಡಿದ ಆನಂದ.

ಸುನೀತ ಪಕ್ಕದಲ್ಲಿ ಕುಳಿತಿರುವುದನ್ನು ಮರೆತೇ ಹೋಗಿದ್ದ. ತೀರಾ ಮಕ್ಕಳಿಲ್ಲದೆಯೂ ಇರಕೂಡದು ಎಂದಾಗ ಅವಳಿಗೆ ತುಂಬಾ ನೋವಾಗುವುದೆನ್ನಿಸಿತು.

ಸುನೀತೆಗೆ ಅವನ ಅಭಿಪ್ರಾಯ ಅರ್ಥವಾಗಿ,ಮುಖ ತೀರಾ ಇಳಿದು ಹೋಯಿತು.

ಮನಸ್ಸು ಮಾಡಿದ್ರೆ ಮಿತ ಸಂತಾನವನ್ನು ಹೇಗೋ ಮಾಡಿಕೊಳ್ಳಬಹುದು. ಆದರೆ ಮಕ್ಕಳನ್ನು ಮಾಡಿಕೊಳ್ಳುವುದು ಸಾಧ್ಯವೆ?

ಇದೇ ಗುಂಗಿನಲ್ಲಿ ಸುನಿತ ಬೆಟ್ಟಗಳ ಮೇಲೆದ್ದಿದ್ದ ಹೆಬ್ಬಂಡೆಗಳ ಕಡೆ ನೋಡಿದಳು, ಈ ಹೆಬ್ಬಂಡೆಗಳನ್ನು ಇಷ್ಟಪಟ್ಟರೆ ಮೇಲಿನಿಂದ ಉರುಳಿಸಬಹುದು. ಆದ್ರೆ ಪುನಃ ಇವುಗಳ್ನ ಯಥಾ ಸ್ಥಾನದಲ್ಲಿರಿಸುವುದು ಸಾಧ್ಯವೆ? ಹೀಗೆಂದು ಕೊಳ್ಳುತ್ತಾ ಮಂಕಾದಳು.

ಬಾಯಿ ...ಚುಟ ಚುಟ ಎನ ತೊಡಗಿತು ಆನಂದನಿಗೆ. ಜೇಬಿನಿಂದ ಸಿಗರೇಟು ಪ್ಯಾಕ ಹೊರತೆಗೆದು, ತಾನೊಂದನ್ನು ತೆಗೆದುಕೊಂಡು, ರವಿಯ ಮುಂದೆ ಪ್ಯಾಕನ್ನು ಹಿಡಿದ.

ತೆಗೆದುಕೊಳ್ಳಲು ರವಿಗೆ ಹೆದರಿಕೆ. ನಿನ್ನೆಯಿನ್ನೂ ವಿಮಲ ಹಂಗಿಸಿದ್ದಳಲ್ಲಾ! ನೀವು ತುಂಬಾ ಸೇದುತ್ತೀರೀಂತ. ಪಕ್ಕಕ್ಕೆ ತಿರುಗಿದ. ವಿಮಲೆ ಇರಲಿಲ್ಲ, ಹಾಗೇ ನೋಡಿದಾಗ ಸ್ವಲ್ಪ ದೂರದಲ್ಲಿ, ಕಾಡು ಗಿಡವೊಂದರಲ್ಲಿ ಬಿಟ್ಟಿದ್ದ ಹೂ ಗೊಂಚಲನ್ನು ಮುರಿಯುತ್ತಾ ನಿಂತಿದ್ದಳು.

ಅವಳು ಬರೋ ಹೊತ್ತಿಗೆ, ಒಂದೆರಡು ದಮ್

ಎಳೆದು ಎಳೆದು ಬಿಡಬೇಕೆಂದು, ಪ್ಯಾಕಿನಿಂದ ಒಂದ ನ್ನೆತ್ತಿಕೊಂಡು, ಕಡಿ ಕೊರೆದು ಹಚ್ಚಿ, ಪಕ್ಕಕ್ಕೆ ತಿರುಗಿ ದೀರ್ಘವಾಗಿ ಹೊಗೆಯನ್ನು ಹೀರಿದ. ಎರಡನೆಯ ಸಾರಿ ಹೀರಿ, ಉಫ್ ಎಂದು ಹೊಗೆಯನ್ನು, ಕರಿಮೋಡ ವನ್ನು ಉಂಟು ಮಾಡಿದ. ಆ ಮೋಡ ಚದುರುತ್ತಿದ್ದ ಹಾಗೆಯೇ ಪ್ರತ್ಯಕ್ಷಳಾದಳು ವಿಮಲೆ.

ಮಾಂತ್ರಿಕನು ಬೂದಿಯನ್ನೆರಚಿದಾಗ, ಅದರ ನಡುವೆ ಸುಂದರ ರಾಜಕುಮಾರಿಯೊಬ್ಬಳು ಕಾಣಸಿ ಕೊಂಡಂತೆ.

ಇದಿರಿಗೆ ನಿಂತ ವಿಮಲ ಅವನ ಕಡೆಗೇ ನೋಡು ತ್ತಿದ್ದಳು. ಕಳ್ಳ ಸಿಕ್ಕಿ ಬಿದ್ದೆಯಾ ಎನ್ನುವಂತಿತ್ತು ಅವಳ ನೋಟ.

ಅವಳ ಮಾತನ್ನು ಸಮರ್ಥಿಸುತ್ತಿದೆಯೋ ಎನ್ನು ವಂತೆ, ಅವಳ ಕೈಲಿದ್ದ ಹೂ ಗೊಂಚಲೂ ತಲೆ ಹಾಕಿತು.

ಗಲಿಬಿಲಿಗೊಂಡ ರವಿ, ಸಿಗರೇಟಿನ ತುಣುಕನು ಬೂಡ್ಸಿನ ಕೆಳಗೆ ನುಸುಳಿಸಿದ.

ತಿಳಿಯಾದ ವ್ಯಂಗ್ಯ ನಗುವಿನ ರೇಖೆಯೊಂದು ವಿಮಲಳ ಪುಟ್ಟ ಬಾಯಲ್ಲಿ ಸುಳಿಯಿತು.

ರವಿ ಅಪರಾಧಿಯಂತೆ ತಲೆ ತಗ್ಗಿಸಿ ಕುಳಿತ.

ಅವನ ಅವಸೆಯನ್ನು ನೋಡಿ ಕುಲುಕುಲು ನಗುತ್ತಾ

"ನೋಡಕ್ಕಾ ನನ್ನನ್ನ ಹಾಗೆ ತಿಂತಾಳೆ, ಹೀಗೆ ತಿಂತಾಳೆ ಅಂತಿರ್ತಾರೆ. ಜೊತೆಗೆ ತಾವು ಹೆಚ್ಚು ಸಿಗ ರೇಟು ಸೇದೋದೇ ಇಲ್ಲಾಂತ ಎಷ್ಟೆಲ್ಲಾ ವಾದಿಸಿ ದರು. ನೋಡಿ, ಅಲ್ಲಿ ಕಳ್ಳರ ಹಾಗೆ ಸೇದಿ ಬಿಸಾಡಿದಾರೆ. ಈಗ ಸರಿಯಾಗಿ ತೀರು ಕೊಡಿ" ಎಂದಳು ವಿಮಲೆ.

"ಓ ಮರೆತೆ. ನಿನ್ನೆ ಹೇಳಿದ ಹಾಗೆ ತೀರ್ಪು ಕೊಡ ಬೇಕಾಗಿತ್ತು. ಇರಲಿ, ನೋಡು ವಿಮಲ, ಏನೋ ಮರೆತು ಸೇದಿ ಬಿಟ್ಟಿದಾರೆ. ಈಗ ಎಚ್ಚರಿಕೆ ಕೊಡೋಣ. ಇನ್ಮೇಲೇನಾದ್ರೂ ಸೇದಿದ್ರೆ, ಅವರ ಮೇಲೆ ಕ್ರಮ ಜರುಗಿಸೋದು"

ಹೀಗೆಂದು ಸುನೀತ ರವಿ ಆನಂದರ ಕಡೆ ನೋಡಿ ಜೋರಾಗಿ ನಕ್ಕಳು.

"ಇಲಕ್ಕೆ ಇವತ್ತೇ ಫೈಸಲಾಗ್ಬೇಕು. ತೀರ್ಪುಗಾ ರರು ಪಾರ್ಶಿಯಾಲಿಟಿ ಮಾಡ್ಬಾರದು. ನಾನೇನಾದ್ರೂ ಈಗ ಚಾಕಲೇಟ್ ತಿಂದಿದ್ರೆ ಇವರು ಸುಮ್ನೆ ಬಿಡ್ತಿದ್ರಾ!"

ಹೀಗೆಂದ ವಿಮಲೆಯ ತಂಟೆಯಿಂದ ನಡುವಿನ್ನೂ ಆಳಿಸಿರಲಿಲ್ಲ.

"ಏನು ಸಮಾಚಾರ ಸುನೀ! ತೀರ್ಪು ಗೀರ್ಪು ಅಂತಿದ್ರೆಲ್ಲಾ," ಕೇಳಿದ ಆನಂದ.

ನಿನ್ನೆ ರವಿ ವಿಮಲೆಯರ ಮಧ್ಯೆ ಆದ ಪುಟ್ಟ ಜಗ ಳದ ವಿಷಯವನ್ನು ಚುಟುಕಾಗಿ ಹೇಳಿ ಮುಗಿಸಿದಳು ಸುನಿತ.

"ಇಷ್ಟೇನಾ!" ಎಂದು ಆನಂದ ವಿಮಲೆಯ ಕಡೆ ತಿರುಗಿ,

"ಹೋಗ್ಲಿ ಬಿಡಿ ವಿಮಲ. ನಾವು ಗಂಡಸರು ಎಷ್ಟಾ ದರೂ ದುರಭ್ಯಾಸದದಾಸರು. ಹೆಂಗಸರಹಾಗೆ ಸಂಯ ಮಿಗಳಾಗಿರಲು ಹೇಗೆ ಸಾಧ್ಯ?"

"ಈಗ ದೇವಿಯವರಿಗೆ ಸ್ವಲ್ಪ ಸಮಾಧಾನವಾಗಿರ ಬೇಕಲ್ವೆ? ಈಗ ಇನ್ನೊಂದನ್ನು ಸೇದಲು ಅಭ್ಯಂತರ ವೇನೂ ಇಲ್ಲ ತಮ್ಮದ್ದೂಂತ ಕಾಣುತ್ತೆ"

ವಿಮಲೆಯನ್ನು ನೋಡಿ ಹೀಗೆಂದ ರವಿ. ಸಿಗರೇ ಟಿಗಾಗಿ ಆನಂದನ ಮುಂದೆ ಕೈ ಚಾಚಿದ.

ತನ್ನನ್ನು ರೇಗಿಸೋದಕ್ಕೆ ಹೀಗೆಲ್ಲಾ ಮಾಡ್ತಿದಾ ರೆಂದುಕೊಂಡ ವಿಮಲೆಯ ಮುಖ ಕೆಂಪಾಯಿತು. ನಸು ಕೋಪದಿಂದ.

ರವಿ ಕೈಲಾಡಿಸುತ್ತಿದ್ದ ಗ್ಲಾಸನ್ನು ಕಣ್ಣಿಗೇರಿಸಿ ಅವಳ ಕಡೆ ತಿರುಗಿದ. ಅದೇ ಗ್ಲಾಸಿನ ಬಣ್ಣ ನೀಲಿಯ ಜಾರ್ಜೆಟ್ ಸೀರೆ, ಅದೇ ಬಣ್ಣದ ಕುಪ್ಪಸದಲ್ಲಿ ವಿಮಲೆ ಬಹಳ ಮುದ್ದಾಗಿ ಕಂಡಳು,ಸರೋವರದ ನೀಲ ಕಮಲದಂತೆ.

"ಇನ್ಮೇಲೆ ಹೊಗೆ ವಾಸನೆ ಏಳುತ್ತೆ, ನಡೆಯಕ್ಕಾ ಮನೆಗೆ ಹೋಗೋಣ"

ನಿಂತಲ್ಲಿಂದ ಸರಸರನೆ ಸುನೀತಳ ಹತ್ತಿರ ಬಂದು ಹೇಳಿದಳು ವಿಮಲ.

"ಓ ಅಗ್ಲೆ ಹೊಟ್ಟೆ ಕಿರಿಯ್ತಿರ್ಬೇಕು ಅದಕ್ಕೇ ಅಷ್ಟು ಆತುರ ಇವಳದು. ನೀವು ಈ ಮಗೂನ ಬಹಳ ಹಚ್ಚಿ ಸ್ಕೊಂಡು ಬಿಟ್ಟಿದೀರಿ ಸುನೀತ. ಹೇಗೂ ನಿಮಗೆ ಮಕ ಳೊಂದ್ರೆ ಬಹಳ ಇಷ್ಟ. ಇವಳ್ನೇ ಸಾಕಿಕೊಂಡು ಬಿಡಿ. ಮನೇಲಿ ಬಹಳ ತಂಟೆ ಮಾಡುತ್ತೆ."

ತುಂಟ ನೋಟ ಹಾಯಿಸಿದ ರವಿ ವಿಮಲೆಯ ಕಡೆ

"ನಾನೇನೊ ಸಾಕ್ಕೊಳ್ಳೋಕೆ ರಡೀನೆ. ಆದ್ರೆ ಈ ಮಗುವಿನ ಒಡೆಯರು, ಹಿಂದೆ ಹಿಂದೇನೆ ಬಂದ್ರೆ ಮಾಡೋದೇನು ಆಗ!"

ಸಣ್ಣಗೆ ನಗುತ್ತಾ ಅಂದಳು ಸುನೀತ.

ಜೊತೆಗೆ ಎಲ್ಲರ ನಗುವೂ ಸೇರಿತ್ತು.

೩

ಒಂದು ದಿನ ಜಿನಿ ಜಿನಿ ಮಳೆ ಸುರಿಯುತ್ತಿತ್ತು. ಪ್ರಕೃತಿ ಮಾತೆ ಮುಸುಕು ಹೊದೆದು ಮೌನವಾಗಿ ರೋದಿಸುತ್ತಿರುವಂತೆ, ಕಪ್ಪು ಮೋಡಗಳು ಮುಸುಕಿ, ಹೊರಗೆಲ್ಲಾ ಕತ್ತಲೆಯಾಗಿ ಹನಿ ಉದುರುತ್ತಿತ್ತು. ಒಳ ಗಡೆಯೂ ಅದೇ ರೀತಿ ಮೌನ!

ಆನಂದ ಆಫೀಸಿಗೆ ಹೋಗಿದ್ದ. ಸುನೀತ ಒಬ್ಬಳೆ ಮನೆಯಲ್ಲಿ ಬೇಸರದಿಂದ ಅತ್ತಿಂದಿತ್ತ ಅಡ್ಡಾಡಿದಳು. ಚಳಿಯೆಂದು ತಲೆಗೆ ಮಫ್ಲರ್ ಸುತ್ತಿ, ತುಂಬ ತೋಳಿನ ಸ್ವೆಟರ್ ಹಾಕಿಕೊಂಡು, ಮ್ಯಾಗ್ಜೀನ್ ಒಂದನು ಹಿಡಿದು ಕುಳಿತಳು. ಸ್ವಲ್ಪ ಹೊತ್ತಿನ ಮೇಲೆ ಅದೂ ಬೇಸರ ಬಂತು. ರೇಡಿಯೋ ಆನ್ ಮಾಡಿದಳು. ಕರೆಂಟು ಇರ ಲಿಲ್ಲ. ವಿಮಲೆಯ ಮನೆಗೆ ಹೋಗೋಣವೆಂದರೆ ಮಳೆ ಬರುತ್ತಿದೆ. ಹಾಳು ಬೇಸರ! ಏನ್ಮಾಡೋಣ ಎಂದು ಯೋಚನೆಗೊಳಗಾದಳು ಸುನಿತ.

ಇದ್ದಕ್ಕಿದ್ದಂತೆ ತನ ತಂಬೂರಿಯ ನೆನಪಾಯಿತು. ತೆಗೆದು ಹಾಡಬೇಕೆನ್ನಿಸಿತು. ಮೂಲೆಯಲಿ ಗೌಸು ಹೊದೆದು ಕುಳಿತಿದ್ದ ತಂಬೂರಿಯನ್ನೆತ್ತಿಕೊಂಡು, ಧೂಳ ನ್ನೊರಸಿದಳು. ತಂತಿಗಳ ಮೇಲೆ ಬೆರಳಾಡಿಸಿದಾಗ, ಟೊಂಯ್... ಟೊಂಯ್ ಎಂದು ಅಪಸ್ವರ ಹೊರ ಟಿತು.

ಅದರ ಕಿವಿಗಳನು ಆ ಕಡೆ ಈ ಕಡೆ ತಿರುಗಿಸಿ, ಸರಿ ಯಾಗಿ ನಾದ ಬರುವಂತೆ ಮಾಡಿದಳು. ನಿಧಾನವಾಗಿ ಮೀಟುತ್ತಾ, ನಾದವನ್ನು ಆನಂದದಿಂದ ಆಲಿಸತೊಡಗಿ ದಳು.

ಆನಂದನಿದ್ದಾಗ ಅವಳು ಇಷ್ಟು ತನ್ಮಯಳಾಗುವು ದಕ್ಕಾಗುತ್ತಿರಲಿಲ್ಲ. ಅವನಿಗೆ ಸಂಗೀತ ಸೇರದು.ಸುನೀತ ಎಂದಾದರೂ ಹಾಡಲು ಕುಳಿತಾಗ. ಅದನ್ನು ಕೇಳುವುದು ಹಾಗಿರಲಿ, ಕೊಂಯ್ ಪೊಂಯ್ ಅಂತ ಅದೇನು ಹಾಳು, ಎತ್ತಿಡಬಾರದೆ ಸುನೀ ಆ ಬುರುಡೇನ ಎನುತ್ತಿದ್ದ. ಸಂಗೀತದ ಹಿರಿಮೆ, ಅದರಿಂದುಂಟಾಗುವ ಅನಿರ್ವಚ ನೀಯವಾದ ಆನಂದ, ಪುಣ್ಯದಿಂದ, ಸಂಸ್ಕಾರ ದಿಂದ ಲಭಿಸುವ ಆ ವಿದ್ಯೆಯ ಮಹಿಮೆಯ ಬಗ್ಗೆ, ಎಷ್ಟೋ ಸಾರಿ ಅವನಿಗೆ ಹೇಳಿದರೂ ಅದರಿಂದ ಯಾವ ಪ್ರಯೋಜನವೂ ಆಗಿರಲಿಲ್ಲ.

ಅವನಿಗಿಷ್ಟವಿಲ್ಲವೆಂದು ತಿಳಿದ ಮೇಲೆ, ಸುನೀತ ಆನಂದ ಇಲ್ಲದ ವೇಳೆ ನೋಡಿ ಹಾಡಿಕೊಳ್ಳುತ್ತಿದ್ದಳು. ಈಚೆಗೆ ರವಿ ವಿಮಲ ಬಂದ ಮೇಲೂ ಅದನ್ನು ಮುಟ್ಟಿಯೇ ಇರಲಿಲ್ಲ. ಈಗ ಬೇಸರವೆನಿಸಿದ್ದರಿಂದ ಹಾಡಲು ಶ್ರುತಿಮಾಡಿದಳು.

ಗಂಟಲನ್ನು ಸರಿಪಡಿಸಿಕೊಂಡು ಹಾಡಬೇಕೆಂದಿರು ವಷ್ಟರಲಿ ಹೊರಗಡೆ ಬಾಗಿಲು ತಟ್ಟಿದ ಶಬ್ದ ಕೇಳಿಸಿತು. ಕೈಲಿದ್ದ ತಂಬೂರಿಯನ್ನು ಕೆಳಗಿರಿಸಿ ಎದ್ದು ಬಂದಳು.

ರವಿ ನಿಂತಿದ್ದ,

"ಬನ್ನಿ ಒಳಗೆ"

ರವಿ ಒಳಗೆ ಬಂದು ಸೋಫಾದ ಮೇಲೆ ಕುಳಿತು ಕೊಳ್ಳುತ್ತಾ,

"ರಾಯರ ನಿದ್ದೆಯಿನ್ನೂ ಮುಗಿದಿಲ್ವೇನ್ರೀ ಸುನಿತ? ಚೆನ್ನಾಗಿ ಮಲಗಿಬಿಟ್ಟಿದ್ದಾನೇಂತ ಕಾಣುತ್ತೆ"

ಅಂದು ಭಾನುವಾರವಾದುದರಿಂದ ಆನಂದ ಮನೆಯಲ್ಲೇ ಇರಬಹುದೆಂದು ಭಾವಿಸಿದ್ದ ರವಿ.

"ಅವರಿಲ್ಲ. ಏನೋ ಕೆಲಸವಂತೆ ಆಫೀಸಿಗೆ ಹೋಗಿದಾರೆ"

"ಓ ಹಾಗೋ! ಬೇಸರವಾಯ್ತು, ಮಳೇನೂ ಕಡಿಮೆಯಾಯ್ತು, ಅವನಿದ್ದಾನೇಂತ ಬಂದೆ" ಅನ್ನುತ್ತಿದ್ದಂತೆ ಅವನ ದೃಷ್ಟಿ ತಂಬೂರಿಯ ಮೇಲೆ ಬಿತ್ತು.

"ಹೊರಗಡೆಗೇ ಮೀಟುವ ಶಬ್ದ ಕೇಳಿಸ್ತು. ಹಾಡ್ತಾ ಇದ್ರೀಂತ ಕಾಣುತ್ತೆ. ನಿಮಗೆ ಸಂಗೀತ ಬರುತ್ತೇಂತ, ತಿಳಿದೇ ಇರಲಿಲ್ಲ. ಎಲ್ಲಿಯವರೆಗೆ ಪಾಠ ಆಗಿದೆ ಸುನಿತ?"

"ಏನೋ ಸ್ವಲ್ಪ ಆಗಿದೆ ಅಷ್ಟೆ."

"ನನಗೂ ಯಾವುದಾದ್ರೂ ಒಂದು ಇನ್‌ಸ್ಟ್ರುಮೆಂಟ್ ಕಲಿಯ್ಬೇಕೂಂತ ಆಶೆಯಿತ್ತು, ಆದ್ರೆ ಆಗಲಿಲ್ಲ."

"ಓ! ಹಾಗಾದ್ರೆ ಸಂಗೀತದ ಮೇಲೆ ನಿಮಗೆ ತುಂಬಾ ಇಷ್ಟ ಅಂತ ಕಾಣುತ್ತೆ, ಹಾಡಲೂ ಬರಬಹುದು". ಚಾಪೆಯ ಮೇಲೆ ಕುಳಿತುಕೊಳ್ಳುತ್ತಾ ಅಂದಳು ಸುನಿತ.

"ಯಾವಾಗ್ಲಾದರೂ ಸ್ವಲ್ಪ ಗುಣುಗುನಾಯಿಸ್ತೀನಿ ಅಷ್ಟೆ. ಶಾಸ್ತ್ರೀಯ ಗೀಸ್ತ್ರೀಯ ತಿಳಿಯದು"

"ಹಾಗಾದ್ರೆ ಯಾವುದಾದ್ರೂ ಒಂದು ಹಾಡಿ ನೋಡೋಣ"

"ಅಯ್ಯೋ ನನ್ನ ಗಾರ್ದಭ ಸ್ವರಾನ ಏನು ಕೇಳ್ತೀರಿ ಬಿಡಿ. ಹೆಂಗಸರಿಗಿರೋ ಹಾಗೆ ಕೋಗಿಲೆ ಕಂಠ ನಾದ್ರೂ ಇದ್ದಿದ್ರೆ" ನಕ್ಕ ರವಿ.

"ಎಲ್ಲಾ ಹೆಂಗಸರಿಗೂ ಕೋಗಿಲೆ ಕಂಠ ಇರುತ್ತೆ, ಮತ್ತು ಎಲ್ಲಾ ಗಂಡಸರಿಗೂ ಗಾರ್ದಭ ಸ್ವರ ಇರುತ್ತೇಂತ ತಿಳಿಯೋದು ತಪ್ಪು ರವಿ. ಹಾಡಿ ಪರ್ವಾಗಿಲ್ಲ. ತಂಬೂರಿ ಮೀಟಲೆ? ಇಲ್ಲ ನೀವೇ ಮೀಟಿಕೊಂಡು ಹಾಡ್ತೀರೋ?"

"ಸರಿ. ನನ್ನ ಕೊರಕೊರ ಗಂಟಲು ಕೇಳ್ಬೇಕೂಂತಿದ್ರೆ ಯಾಕಾಗಬಾರದು? ನೀವೇ ಮೀಟ್ತಿರಿ... ಅಷ್ಟು ಹೊತ್ತಿಗೆ ಯಾವುದನ್ನಾದ್ರೂ ನೆನಪುಮಾಡಿಕೊಳ್ತೀನಿ."

ರವಿಗೆ ಹಾಡಲು ಉತ್ಸಾಹ. ಅವನಿಗೆ ಸುಮಾರಾಗಿ ಸಂಗೀತ ಬರುತ್ತಿತ್ತು. ಒಂದು ದಿನಕ್ಕೂ ಯಾರೂ ಇಷ್ಟು ಒತ್ತಾಯ ಮಾಡಿ ಹಾಡು ಎಂದಿರಲಿಲ್ಲ. ಬೇರೆಯವರ ಸುದ್ದಿಯಾಕೆ! ವಿಮಲೆಗೇ ಇಷ್ಟವಿರಲಿಲ್ಲ. ಎಂದಾದರೂ ಬೇಸರವಾದಾಗ ಅವನು, ರೂಮಿನಲ್ಲಿ ಕುಳಿತು ಒಬ್ಬನೇ ಹಾಡಿಕೊಳ್ಳುತ್ತಿದ್ದರೆ,

"ಏನ್ರೀ ಇದು; ಹಿಸ್ಟೀರಿಯಾ ಪೇಷಂಟುಗಳು ಒದರಿದ ಹಾಗೆ ಒದರ್ಕೊಳ್ತಿದೀರಿ! ಆಸ್ಪತ್ರೇಲಿ ಪೇಷಂಟ್‌ನ ನೋಡಿ–ನೋಡಿ ನಿಮಗೂ ಒಂದು ತರಹ ಕಾಯಿಲೆ ಬಂದ ಹಾಗೆ ಕಾಣುತ್ತೆ"

ಎನ್ನುತ್ತಿದ್ದಳು ಅವಳು.

ಸರಿ ಹಾಗಂದಾಗ ಮುಂದೆ ಹೊರಡಲಿದ್ದ ರಾಗ ಗಂಟಲಲ್ಲೇ ಉಳಿಯುತ್ತಿತ್ತು. ಆದ್ದರಿಂದ ರವಿ ಪುನಃ ಅವಳಿದಿರಿನಲ್ಲಿ ಜೋರಾಗಿ ಹಾಡುವ ಮೂರ್ಖತನಕ್ಕೆ ಹೋಗದೆ, ಸ್ನಾನ ಮಾಡುವಾಗಲೊ, ಎಂದಾದರೂ ವಿಮಲೆ ಇಲ್ಲದ ಸಮಯದಲ್ಲೋ ಸಣ್ಣಗೆ ಹಾಡಿಕೊಳ್ಳುತ್ತಿದ್ದ.



ಈಗ ಸುನೀತ ಹಾಡಿರೆಂದು ಆಗ್ರಹ ಪಡಿಸುತ್ತಿದ್ದಾಳೆ, ಇನ್ನು ಹಾಡದೆ ಇದ್ದಾನೆಯೆ? ಆದರೂ ಕೇಳಿದ ತಕ್ಷಣ ಹಾಡಲು ಏನೋ ಸಂಕೋಚ.

ಕೊನೆಗೆ ಗಂಟಲನ್ನು ಸರಿಪಡಿಸಿಕೊಂಡು, 'ರಾಗ ಸುಧಾರಸ' ತ್ಯಾಗರಾಜರ ಕೀರ್ತನೆಯನ್ನು ಹಾಡಿ ಮುಗಿಸಿದ್ದ.

"ಓ! ರವಿ! ನೀವು ಇಷ್ಟು ಚೆನ್ನಾಗಿ ಹಾಡ್ತೀರೀಂತ ನನಗೆ ಗೊತ್ತೆ ಇರಿಲ್ಲ. ವಿಮಲ... ...ತ್ತಾ?"

ಹಾಡು ಮುಗಿಯುತ್ತಲೂ ಚಿಕ್ಕ ಹುಡುಗರಂತೆ ಚಪ್ಪಾಳೆ ತಟ್ಟುತ್ತಾ ಸಂತೋಷದಿಂದ ಹೇಳಿದಳು ಸುನಿತ.

"ವಿಮಲೆಯಿಂದಲೆ? ಅವಳಿಗೂ ಸಂಗೀತಕ್ಕೂ ಎಣ್ಣೆ ಸೀಗೆಕಾಯಿಯಷ್ಟೇ ಸಂಬಂಧ."

"ಇಲ್ಲ ರವಿ, ನೀವು ಬಹಳ ಚೆನ್ನಾಗಿ ಹಾಡ್ತೀರಿ

ವಿಮಲೆಗೆ ಖಂಡಿತಾ ಕಲಿಸ್ಕೊಡ್ಬೇಕು."

"ಸರಿ, ಸಂಗೀತ ಕಲಿ ಅಂತ ಅವಳಿಗೆ ಹೇಳೋದೂ ಒಂದೆ, ಕಿವುಡಿಯ ಮುಂದೆ ಕಿಂದರಿ ಬಾರ್ಸೋದೂ ಒಂದೆ." ನಕು ಹೇಳಿದ ರವಿ.

"ಅದ್ರೂ, ಅದರಲ್ಲಿ ಅಭಿರುಚಿ ಹುಟ್ಸೋ ಹಾಗೆ ಮಾಡೋದು ನಮ್ಮ ಕೈಯಲಿರುತ್ತೆ ರವಿ, ಪ್ರಯತ್ನಿಸಿ ನೋಡ್ರಿ ವಿಮಲ ಖಂಡಿತ ಕಲಿಯದೆ ಇರೋಲ್ಲ."

"ನೋಡೋಣಂತೆ. ಈಗ ನೀವೊಂದು ಹಾಡಿ."

"ರಾಗಸುಧೆಯ ಪಾನ ಮಾಡಿಯಾಯ್ತು. ಮತ್ತೆ ಇನ್ನೇನನ್ನೂ ಪಾನಮಾಡೋದಕ್ಕೆ ಇಷ್ಟವಾಗ್ತಿಲ್ಲ ರವಿ ಈಗ."

"ತೃಪ್ತಿಯಾಗಿ ಪಾನ ಮಾಡ್ಲಿಲ್ಲ ಹಾಡಿ ಸುನಿತ."

ಸಣ್ಣನೆ ನಕ್ಕು ಸುನಿತ ಶ್ರುತಿಯನ್ನು ಸ್ವಲ್ಪ ಇಳಿಸಿದಳು. ಯಾವುದನು ಹಾಡಲಿ ಎಂದು ಯೋಚಿಸಿದಳು, ತನಗೆ ಅತ್ಯಂತ ಪ್ರಿಯವಾದ ಹಾಡು ಆರಿಸಿ 'ಆಡಿಸಿದಳು ಯಶೋದೆ ಅದನ್ನೇ ಹಾಡಬೇಕೆನಿಸಿತು ಶ್ರುತಿಗೆ ದನಿ ಸೇರಿಸಿ ಹಾಡು ಮೊದಲು ಮಾಡಿದಳು.

ಹಾಡುತ್ತಿದ್ದಂತೆ. ಯಶೋದೆ ಜಗದೋದ್ಧಾರಕನಾದ ಕೃಷ್ಣನನು ಆಡಿಸುತ್ತಿರುವ ದೃಶ್ಯ ಅವಳ ಕಣ್ಣಿಗೆ ಕಟ್ಟಿದಂತಾಯಿತು.

ತುಂಬು ಗಲ್ಲದ! ಮುದ್ದು ಮೊಗದ ಬಾಲಕೃಷ್ಣ! ಅವಳ ಇದಿರಿನಲಿ ಬಂದು, ಚಿಗುರು ಹಲ್ಲನು ತೂಸುತ್ತಾ ನಗುತ್ತಿದ್ದ.

ಭಾವಾವೇಶದಿಂದ ಹಾಡಿದ್ದನ್ನೇ ಮೂರು ನಾಲು ಬಾರಿ ಹಾಡಿ, ಕೊನೆಗೆ ನಿಧಾನವಾಗಿ ಮುಗಿಸಿದಳು.

ಹಾಡು ಮುಗಿದಿದ್ದರೂ, ತಂತಿಗಳ ಮೇಲೆ, ಬೆರಳಾಡುತ್ತಲೇ ಇತ್ತು! ಕಣ್ಣು ಏನನ್ನೊ ದಿಟ್ಟಿಸುತ್ತಿತ್ತು, ಹೃದಯ ಏನನ್ನೋ ಅನುಭವಿಸುತ್ತಿತ್ತು!

ಪುಟ್ಟ ಕೃಷ್ಣ ಅವಳ ಮುಂದೆ ಆಟವಾಡುತ್ತಿದ್ದನೇನೋ!

"ಓಹ್! ಅದೆಷ್ಟು ಭಾವ ಪೂರಿತವಾಗಿ ಹಾಡಿದ್ರಿ ಸುನೀತ. ಖಂಡಿತ, ಇಲ್ಲಿ ಬಾಲಕೃಷ್ಣ ಆಡ್ತಿದ್ದ. ಯಶೋದೆ ಮುದ್ದಾಗಿ ಆಡಿಸ್ತಾ ಇದ್ದಾಳೆ ಅನ್ನೋದನ್ನೇ ಅನುಭವಿಸಿದೆ. ರಾಗಕೆ ಸರಿಯಾಗಿ ಸಾಹಿತ್ಯ, ಭಾವ, ಎರಡೂ ಸೇರಿದರೆ ಅದರ ಆನಂದವೇ ಬೇರೆ. ಇಷ್ಟು ಭಾವ ಪೂರಿತವಾಗಿ ಹಾಡಿದವರನು ನಾನು ಕಂಡಿದ್ದು ಇದೇ ಮೊದಲು ಎನಿಸುತ್ತಿದೆ."

ಹೀಗೆ ಹೇಳಿ ರವಿ ಮೆಚ್ಚಿಕೆಯಿಂದ ಅವಳ ಕಡೆ ನೋಡಿದ.

"ಏನಂದಿರಿ?" ಸುನೀತ ಈಗ ವಾಸ್ತವ ಪ್ರಪಂಚಕ್ಕೆ ಬಂದಳು. "ಹೇಗೆ ಹೇಗೋ ಏನೇನೋ ಹಾಡಿದೇಂತ ತೋರುತ್ತೆ"

ಅವಳ ಮುಖದ ಮೇಲೆ ಚಿಂತೆಯ ರೇಖೆಗಳು ಮೂಡಿದ್ದುವು, ಬಹುಶಃ ಆ ಸುಂದರ, ಸುಕುಮಾರ ಕೃಷ್ಣ ದೂರ ಸರಿದ ಎಂತಲೊ ಏನೊ!

ಕಂದನ ಚಿಂತೆ ಸುನಿತಳಲ್ಲಿ ಇಷ್ಟು ಆಳವಾಗಿ ಬೇರೂರಿದೆಯೆಂದು ರವಿ ಇದೇ ಮೊದಲು ತಿಳಿದಿದ್ದು.

"ನಾನಿನ್ನ ಬರ್ತೀನ್ರಿ, ಸುನೀತ"

"ಇರಿ... ಹಾಗೇ ಹೊರಡೋದೆ? ಸ್ವಲ ಗಂಟಲು ಒದ್ದೆಯಾದ್ರೂ ಆಗ ಬೇಡ್ವೆ?"

ಒಳಗೆ ಹೋಗಿ ಬೇಗನೆ ಒಂದು ಕಪ್ಪು ಕಾಫಿ ಮಾಡಿ ತಂದಳು,

"ನೀವು ತಗೊಳೋಲ್ವೆ?" ರವಿ ಬಟ್ಟಲನ್ನು ಕೈಗೆತ್ತಿಕೊಂಡು ಕೇಳಿದ.

"ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಅವರೂ ಬರ್ತಾರೆ. ಆಗ ಜೊತೆಗೆ ತಗೊಂಡ್ರೆ ಆಯ್ತು."

ಸುನೀತ ತಂಬೂರಿಗೆ ಗೌನು ತೊಡಿಸಿ ಅದರ ಸ್ಥಳದಲ್ಲಿರಿಸಿ ಬರುವ ಹೊತ್ತಿಗೆ, ರವಿ ಕಾಫಿ ಕುಡಿದು ಎದ್ದು ನಿಂತಿದ್ದ.

"ನಾನಿನ್ನ ಬರ್ತೀನಿ ಸುನೀತ!"

"ಆಗ್ಲಿ, ಆದ್ರೆ ನಾನು ಹೇಳಿದ್ದನ್ನು ಮರೆಯಬೇಡ್ರಿ ರವಿ?"

"ಯಾವುದು? ಓ ಸಂಗೀತ ಕಲಿಸೋ ವಿಷಯಾನಾ!" ಎಂದು ನಗುತ್ತಾ ಹೊರಬಿದ್ದ ಅವನು,

## ಮಗನ ಪ್ರಶ್ನೆ



ಕೇಳಿದೆನು ಅಪ್ಪನಿಗೆ ನಾನೊಂದು ಮಾತು
ಉತ್ತರವ ಕೊಡದೆ ನಿಂತನವ ಸೋತು
ಅಮ್ಮನಾ ಹೆಸರೇನು ಹೇಳಪ್ಪ ಎಂದೆ
ನಸು ನಗುತ ಕೆನ್ನೆಯನು ಹಿಂಡಿದನು ತಂದೆ

ಶಂ. ಗು. ಬಿರಾದಾರ

ರವಿ, ಆ ಕಡೆ ಹೋಗುತ್ತಲೂ, ತನ್ನ ಕೋಣೆಗೆ ಹೋಗಿ ಕುಳಿತಳು ಸುನೀತ; ಇದ್ದಕ್ಕಿದ್ದಂತೆ ಅವಳ ದೃಷ್ಟಿ, ಬಾಲಕೃಷ್ಣನ ಫೋಟೋದ ಕಡೆ ಹೋಯಿತು. ನಡುಮನೆಯಲ್ಲಿ ಹಾಕಿದ ಹಾಗೆ, ಕೋಣೆಯಲ್ಲೂ ಒಂದು ಚಿತ್ರಪಟವನ್ನು ಹಾಕಿದ್ದಳು. ಅವಳಿಗೆ ಬಹಳ ಇಷ್ಟವಾದ ಚಿತ್ರವದು. ಬೇಸರವಾದಾಗಲೆಲ್ಲಾ ಆ ನಗು ಮುಖದ ಮುದ್ದುಕೃಷ್ಣ ಅವಳ ಕಣ್ಣಿಗೆ ಬಿದ್ದು ಬೇಸರವನ್ನು ಹೋಗಲಾಡಿಸುತ್ತಿದ್ದ.

ಫೋಟೋ ನೋಡುತ್ತಿದ್ದಂತೆ, ಯಾವ ಯಾವ ವಿಚಾರಗಳೋ ಅವಳ ತಲೆಯಲ್ಲಿ ಸುಳಿಯತೊಡಗಿದವು.

ಜಗತ್ಪಾಲಕ! ಜಗದೋದ್ಧಾರಕ ಕಂದ ಕೃಷ್ಣನನು ಸಾಕಿ ಸಲಹಿದ ಯಶೋದೆ ಅದೆಷ್ಟು ಧನ್ಯಳು!

ಇಷ್ಟರಲ್ಲೇ ಹೊರಗಡೆಯಿಂದ ಬೂಡ್ಸಿನ ಶಬ್ದ ಕೇಳಿಬಂತು. ತಕ್ಷಣ ಕಣ್ಣೀರನ್ನೊರೆಸಿಕೊಂಡು. ಚದುರಿದ ಕೂದಲನ್ನು ಹಿಂದಕೆ ತೀಡಿ, ಯಾವುದೋ ಒಂದು ಪುಸ್ತಕವನ್ನು ಕೈಲಿ ಹಿಡಿದು ಕುಳಿತಳು.

"ಮುಂದಿನ ಬಾಗಿಲನ್ನು ಹಾಕೇ ಇರ್ಲಿಲ್ಲ. ಯಾಕೆ ಮರೆತು ಬಿಟ್ಟೆಯೇನು?" ಒಳಗೆ ಬರುತ್ತಲೂ ಆನಂದ್ ಕೇಳಿದ.

ರವಿ ಹೋದ ಮೇಲೆ ಸುನೀತ ಬಾಗಿಲ ಚಿಲಕ ಹಾಕುವುದನ್ನೇ ಮರೆತಿದ್ದಳು.

"ಏನೋ ಮರೆತ್ಬಿಟ್ಟೆ?" ಸುನಿತ ಉದಾಸೀನಳಾಗಿ ನುಡಿದಳು.

ಭಾನುವಾರಾನೂ ಮನೇಲಿರೊಲ್ಲಾಂತ ಬೇಸರಪಟ್ಕೊಂಡಿದಾಳೆ ಎಂದು ಕೊಂಡು.

"ನನಗೆ ಗೊತ್ತು, ಸುನಿ, ನಿನಗೆ ಬೇಸರವಾಗಿದೇಂತ. ಏನ್ಮಾಡೋದು ಎಷ್ಟು ದೊಡ್ಡ ಕೆಲಸವಾಗಲಿ, ನೌಕರಿ ನೌಕರಿಯೇ! ಕೈ ಕೊಟ್ಟು ಹಗ್ಗ ಕಟ್ಟಿಸಿಕೊಂಡ ಹಾಗೆ, ನಮ್ಮ ಡೈರೆಕ್ಟರ್ ಬಂದಿದ್ರಿಂದ ಹೊತ್ತಾಯ್ತು ನೋಡು."

"ನನಗೆ ಬೇಸರವಾಗಿದೇಂತ ನಿಮಗೆ ಹೇಗೆ ಗೊತ್ತಾಯ್ತು? ನಾನೇನು ಹೇಳಿದ್ನೆ ಹಾಗಂತಾ!"

ಕುಳಿತಲ್ಲಿಂದೆದ್ದು ಸುನಿತ ಅವನ ಕೋಟಿಗೆ ಕೈ ಹಾಕಿದಳು. ಎಂದಿನಂತೆ ನೇರದೃಷ್ಟಿಯಿರಲಿಲ್ಲ.

"ನೀನು ಬಾಯಿಬಿಟ್ಟು ಹೇಳ್ಬೇಕೆ ಸುನಿ? ಮುಖ ಮನಸ್ಸಿನ ಭಾವನೆಗಳ ಕನ್ನಡೀಂತ ಹೇಳೊಲ್ವೆ? ನಿನ್ನ ಮುಖ ನೋಡಿದ್ರೇನೆ ತಿಳಿಯುತ್ತೆ, ತುಂಬಾ ಬೇಜಾರುಪಟ್ಕೊಂಡಿದೀಯಾಂತ."

"ಇಷ್ಟು ಹೊತ್ತೂ ಆಫೀಸ್ನಲ್ಲಿ ಕೆಲ್ಸಮಾಡಿ ನಿಮ್ಮ ಮುಖ ಸಪ್ಪೆಯಾಗಿದೆ, ನನ್ನ ಮುಖನೂ ಹಾಗೇ ಕಾಣಿಸ್ತಿರ್ಬೇಕು ನಿಮಗೆ"

"ಹೋಗ್ಲಿ ಬಿಡು ಹಾಗಾದ್ರೆ, ನನ್ನ ರಾಣಿ ಹಸನ್ಮುಖಿಯಾಗಿದ್ರೆ ಸಾಕು" ಎನ್ನುತ್ತಾ ಸಿಗರೇಟು ಹೊತ್ತಿಸಿ ಕುಳಿತ ಆನಂದ.

"ಇದೇನಿದು ಬಂದ ಕೂಡ್ಲೆ ನಿಮ್ಮ ಇಂಜಿನ್ ಸ್ಟಾರ್ಟ್ ಮಾಡಿದ್ರಿ, ಕೈಕಾಲಾದ್ರೂ ತೊಳೆಯುದೆ?"

"ಅಲ್ಲಿ ಸೇದೋದಕ್ಕೇ ಆಗ್ಲಿಲ್ಲ. ತೃಪ್ತಿಯಾಗಿ ಒಂದನ್ನು ಎಳೆದು ಬಂದ್ಬಿಡ್ತೀನಿ, ಚಳಿಯಲ್ಲಿ ಬೇರೆ ಬಂದಿದೀನಿ, ಕಾಫಿ ಆಗಿದ್ರೆ ತಗೊಂಡು ಬಂದ್ಬಿಡು ಇಲ್ಲಿಗೆ."

ಸುನೀತ, ರವಿಗೆಂದು ಮಾಡಿದಾಗಲೇ ಹೆಚ್ಚಿಗೆ ಮಾಡಿ ಫ್ಲಾಸ್ಕನಲ್ಲಿ ಹಾಕಿಟ್ಟಿದ್ದಳು. ಎರಡು ಬಟ್ಟಲಲ್ಲಿ ಹಾಕಿಕೊಂಡು ಬಂದಳು.

ಕಾಫಿ ಕುಡಿದಾದ ಮೇಲೆ ಇನ್ನೊಂದು ಸಿಗರೇಟನು ಹೊತ್ತಿಸಿ ತನ್ನ ಆಫೀಸಿನ ಸಮಾಚಾರವನ್ನು ಹೇಳತೊಡಗಿದ ಆನಂದ.

ಸುನೀತೆಗೆ ಮಾತ್ರ ಆ ವಿಷಯದಲ್ಲಿ ಸ್ವಲ್ಪವೂ ಆಸಕ್ತಿಯಿರಲಿಲ್ಲ. ಹಾಂ... ಹೂಂ ಅನುತ್ತಾ ಅನ ಮನಸ್ಕತೆಯಿಂದ ಕೇಳುತ್ತಿದ್ದಳು.

ನಗುಮೊಗದ ಚೆಲುವ ಬಾಲಕೃಷ್ಣನು ಅವಳ ಮುಂದೆಯೇ ಸುಳಿದಾಡುತ್ತಿದ್ದನೇನೊ!

೪

ಒಂದುದಿನ ರವಿ, ವಿಮಲ, ಸುನೀತ ಹೊರಗೆ ತಿರುಗಾಡಿ ಬರಲೆಂದು ಸಿದ್ಧರಾದರು. ಗೇಟು ಬಿಟ್ಟು ಸ್ವಲ್ಪವೇ ದೂರ ಬಂದಿದ್ದರು. ವಿಮಲೆಗೆ ತಲೆಸುತ್ತಿದಂತಾಗಿ ಓಕರಿಕೆ ಬರುವಂತಾಯಿತ್ತು

"ಅಬ್ಬಾ ನನಿಂದ ಒಂದು ಹೆಜ್ಜೇನೂ ಮುಂದಿಡೋದಕ ಆಗ್ತಿಲ್ಲ. ತಲೆ ತುಂಬಾ ಸುತ್ತುತ್ತಿದೆ."ಎಂದು ತಲೆ ಹಿಡಿದುಕೊಂಡು ನಿಂತು ಬಿಟ್ಟಳು.

ಸರಿಯೆಂದು ಮೂವರೂ ಹಾಗೆಯೇ ಹಿಂತಿರುಗಿದರು.

ಕಾಂಪೋಂಡಿನೊಳಗೆ ಬರುತ್ತಿದ್ದಂತೆಯೇ ವಾಂತಿಯಾಗಲಂ ಮೊದಲಾಯಿತು ಅವಳಿಗೆ.

ಸುನೀತ,ಏನನ್ನೋ ಊಹಿಸಿಕೊಂಡು ಅವಳ ಮುಖ ನೋಡಿದಾಗ, ತುಂಬಾ ಸೊರಗಿ ಹೋದಂತೆ ಕಂಡಿತು. ಈಚಿಗೆ ಊಟಾನೆ ಸರಿಯಾಗಿ ಸೇರ್ತಿಲ್ಲ ಸುನಿತಕ್ಕ ಎಂದು, ಅವಳು ಒಂದೆರಡು ಸಾರಿ ಅಂದಿದ್ದು ನೆನಪಿಗೆ ಬಂದಿತು.

ರವಿ ಗಾಬರಿಗೊಂಡವನಂತಿದ್ದ. ಸುನೀತ ಹೇಳಿದಳು.

"ಇದು ಒಳ್ಳೇದು ಶುಭ ಸೂಚನೆ ರವಿ"

"ಏನೋ ಹೆಚು ಕಡಿಮೆಯಾಗಿ ವಾಂತಿಮಾಡ್ಕೊಂಡ್ರೆ, ಅದು ಶುಭ ಸೂಚನೆಯೆ? ನೀವೂ ಸರಿ ಸುನೀತ"ಎಂದ ರವಿ.

"ಇನ್ನು ಕೆಲವೇ ದಿನಗಳಲ್ಲಿ ಪುಟ್ಟ ಡಾಕ್ಟರ್ ಕಾಣಿಸಿಕೊಳ್ತಾನೆ. ಇದು ಶುಭಸೂಚನೆಯಲ್ಲದೆ ಮತ್ತೇನು ಹೇಳಿ?"

"ಹೆಂಗಸರಿಗೆಲ್ಲಾ ಇಂಥಾದ್ದೇ ಯೋಚನೆ, ಎಲ್ಲೋ ಸಿಕ್ಕಾಪಟ್ಟೆ ತಿಂದು ಬಿಟ್ಟಿದ್ದಾಳೆ. ಅದಕ್ಕೇ ಈ ರಗಳೆ. ಸ್ವಲ ಚೆಕ್ ಅಪ್ ಮಾಡಿ ಏನೂ ಅನ್ನೋದನ್ನ ತಿಳ್ಕೊಬೇಕು, ಇನ್‌ಡಯುಸೇಷನ್ ಅಲ್ಲದೆ ಮತ್ತೇನೂ ಇಲ್ಲಾ ಅನಿಸುತ್ತೆ. ಆದ್ರೂ ಒಂದ ಸರ್ತಿ ಸರಿಯಾಗಿ ನೋಡೋದು ಒಳ್ಳೆಯದೂ ಅನಿಸುತ್ತೆ. ಮಿಕ್ಸ್‌ಚರ್ ಕೊಡ್ಬೇಕು, ಪ್ರಿಕ್‌ಗಿಕ್ ಕೊಡಬೇಕಾಗಿ ಬಂದೀತು. ಅದಕ್ಕೂ ಲೇಟ್ ಮಾಡಕೂಡದು," ರವಿಯ ಈ ಆತುರವನ್ನು ಕಂಡು ಒಳಗೊಳಗೇ ನಗು ಸುನೀತೆಗೆ.

"ಒಳ್ಳೆಯ ಡಾಕ್ಟರು ನೀವು! ಕಾಯಿಲೆಯನ್ನು ಚೆನ್ನಾಗಿ ಗುರುತಿಸ್ತೀರಿ"

"ಡಾಕ್ಟರುಗಳ ಮೇಲೆ ಕೆಲವರಿಗೆ ನಂಬಿಕೆಯಿರೊಲ್ಲ ಸುನೀತ. ಅದಕ್ಕೆ ದಿನದಿನಕ್ಕೆ ಕಾಯಿಲೆಗಳು ವಾಸಿಯಾಗದೆ ಹೆಚ್ಚಾಗ್ತಿರೋದು"

"ಇನ್ನೂ ಅರ್ಥವಾಗಲಿಲ್ವೆ ರವಿ?" ಎಂದು ವಿಮಲೆಯ ಕಡೆ ತಿರುಗಿ,

"ನಿನಗೆ ಏನು ಕಾಯಿಲೇ ಅನ್ನೋದನ್ನು ಇನ್ನೂ ಹೇಳಲೇ ಇಲ್ಲವೆ ವಿಮಲ?"

ವಿಮಲ ಏನೂ ಹೇಳದೆ ಒಳಗೋಡಿದಳು. ಬಾಯಿ ಮುಕ್ಕಳಿಸಿ ಹೊರಗೆ ಬಂದಾಗ ಅವಳ ತುಟಿಯಂಚಿನಲ್ಲಿ ನಗೆ ಮಲ್ಲಿಗೆ ಅರಳಿತ್ತು.

ಅವಳ ನಗು ಮುಖ ಕಂಡು ರವಿಯ ಚಿಂತೆ, ದೂರವಾಗಿ ಮುಖ ಹರುಷದಿಂದ ಕೂಡಿತು.

"ಈಗ ಅರ್ಥವಾಗಿರಬೇಕಲ್ಲವೆ ರವಿ?"

"ಸುಮ್ನೆ ಇರಿ ಅಕ್ಕ" ನಾಚಿಕೆಗೊಂಡು ತಲೆ ಬಾಗಿಸಿದಳು ವಿಮಲ.

"ಕಳ್ಳಿ, ಎಷ್ಟು ತಿಂಗಳಾಯ್ತು, ನನಗಲ್ಲದಿದ್ದರೆ ರವಿಗಾದರೂ ತಿಳಿಸಬಾರದಾಗಿತ್ತೆ?"

"ಸರಿ ತಿಳ್ಸಿದ್ದರೆ ನನ್ನ ಗತಿ ಆಗಿರ್‍ತಿತ್ತು. ಈ ಟಾನಿಕ್ ತಗೋ. ಈ ವಿಟಮಿನ್ ಕಡಿಮೆ, ಅದು ಹೆಚ್ಚೂಂತ, ತಮಗೆ ಬರೋ ಶಾಂಪಲ್ಸನ್ನೆಲ್ಲಾ ನನ್ನಹೊಟ್ಟೆಗೆ ತುಂಬಿಸಿಕೋಳು ಹುಯ್ದು ಕೊಳ್ತಿದ್ದರು. ಇನ್ನೂ ಕೆಲವು ದಿವ್ಸ, ನೀವು ಸುಮ್ನೆ, ಇರಬಾರದಾಗಿತ್ತೆ ಅಕ್ಕ."

"ಅರೆ ವಿಮೂ!! ಗುಡ್ ಗುಡ್!! ಎಷ್ಟು ಸೀಕ್ರೆಟ್ ನಿನ್ನದು ಅಂ!!"

ಅವಳ ಭುಜವನ್ನು ಬಲವಾಗಿ ಹಿಡಿದು ಅಲು



ಗಾಬರಿಸಿದ ರವಿ. ಅಲ್ಲೀನಾದ್ರೂ ಸುನೀತ ಇಲ್ಲದೆ ಹೋಗಿದ್ರೆ, ಅವಳ ಗಲ್ಲದ ಮೇಲೆ ಪ್ರೇಮದ ಮುದ್ರೆ ಒತ್ತದೆ ಇರುತ್ತಿರಲಿಲ್ಲ.

"ಅಬ್ಬಾ! ನನ್ನ ಭುಜ ಹೋಯ್ತು!!" ತನ್ನ ಭುಜವನ್ನು ಸವರಿಕೊಳ್ಳುತ್ತಾ ರವಿಯ ಕಡೆ ಕಳ್ಳ ನೋಟ ಬೀರಿದಳು ವಿಮಲ.

ಇಬ್ಬರಿಗಿಂತಲೂ ಹೆಚ್ಚಿನ ಸಂತೋಷವಾಗಿದ್ದೆಂದರೆ ಸುನಿತೆಗೆ. ಆನಂದ ಬಂದ ಕೂಡಲೆ ಸುದ್ದಿ ಮುಟ್ಟಿಸಬೇಕೆಂದು ಆತುರಗೊಂಡಳು.

"ಬರ್ತೀನಿ ವಿಮಲ. ಯಾವುದಕ್ಕೂ ಆಯಾಸ ಮಾಡ್ಕೋಬೇಡ. ನಿನಗೆ ಏನು ಸಹಾಯ ಬೇಕಾದ್ರೂ ಮಾಡೋದಕ್ಕೆ ಈ ಅಕ್ಕ ಸಿದ್ಧಳು" ಎಂದು ಹೇಳಿ ಮನೆಯ ಕಡೆ ನಡೆದಳು.

ಸುನೀತ ಮನೆಗೆ ಬಂದಾಗ ಆನಂದನಿನ್ನೂ ಬಂದಿರಲಿಲ್ಲ. ಅವಳಿಗೆ ನಿರಾಶೆಯಾಯಿತು. ಗೋಡೆಯ ಮೇಲಿನ ಗಡಿಯಾರದ ಕಡೆ ನೋಡಿದಳು. ಆನಂದ ಬರಲು ಇನ್ನೂ ಒಂದು ಗಂಟೆಯಾದರೂ ಆಗಬೇಕಿತ್ತು. ತನ್ನ ಆತುರಕ್ಕೆ ಒಳಗೊಳಗೇ ನಾಚಿಕೊಂಡಳು. ಮಂಚದ ಮೇಲಿನ ದಿಂಬಿಗೊರಗಿ ಕಿಟಕಿಯ ಹೊರಗೆ ನೋಡತೊಡಗಿದಳು.

ವಿಮಲೆಗೆ ಇನ್ನು ಆರುತಿಂಗಳಿಗೆಲ್ಲಾ ಮಗು ಆಗುತ್ತೆ. ಹೆಣ್ಣಾಗುತ್ತೋ ಗಂಡೊ! ಒಟ್ನಲ್ಲಿ ಯಾವುದಾದ್ರೂ ಆಗಲಿ. ಒಂದು ಮಗೂಂತ ಆದ್ರೆ ಆಯ್ತು. ಹೆಣ್ಮಗು ಆದ್ರೆ ಬೆಂಗಳೂರ್ನಿಂದ ಒಳ್ಳೆಯ ಎರಡು ರೆಡಿಮೇಡ್ ಫ್ರಾಕ್ಸ್ ತರಿಸ್ಬೇಕು, ಎತ್ತಿ ಮುದ್ದಾಡುತ್ತಾ ನಾನೇ ಅದಕೆ ತೊಡಿಸಬೇಕು!

ಗಂಡಾದ್ರೋ! ಇನ್ನೂ ಸರಿಯೆ. ಒಂದು ಪ್ಯಾಂಟ್ ತರಿಸ್ಬೇಕು. ಸ್ವಲ್ಪ ಬೆಳೆದ್ಮೇಲೆ ಬೆಂಗಳೂರಿಂದ ಒಂದು ಬಣ್ಣದ ಮರದ ಕುದುರೆ ತರಿಸ್ಬೇಕು. ಇವರಿಗೆ ಹೇಳದ್ರೆ, ತರೋದು ಮರೆತ್ರೂ ಮರೆತರೆ! ನಾನು ಹೇಳಿದ್ದೆಲ್ಲಾ ಎಲ್ಲಿ ಜ್ಞಾಪಕ ಇರುತ್ತೆ ಇವರಿಗೆ!

ತೀರಾ ತರದಿದ್ರೆ ಇಲ್ಲಿಯೇ ಮಾಡಿಸಿದರೂ ಆಯ್ತು. ಹೇಗೂ ಇಲ್ಲಿ ಕಾರ್ಪೆಂಟರುಗಳು ಇದ್ದೇ ಇದ್ದಾರೆ! ಆಮೇಲೆ ಒಂದು ಪುಟ್ಟ ಸೈಕಲ್ಲು!

ನನಗಿಂತ್ಲೂ ಮುಂಚೆ ವಿಮಲ ರವಿಗೆ ಹೇಳಿ ಇವನ್ನೆಲ್ಲಾ ತರ್ಸಿದ್ರೋ! ಹೌದು ಪಾಪ! ಅವರಿಗೇನು ತಾನೆ ಕಡಿಮೆ? ನನ್ನ ಕಾಣಿಕೆಗಳನ್ನು ನಿರಾಕರಿಸಿದ್ರೂ ನಿರಾಕರ್ಸಿದ್ರೆ!

ವಿಮಲ ಇನ್ನೂ ಹುಡುಗಿ. ಮಕ್ಕಳ್ನ ಸಾಕೋದು ಕಷ್ಟಾನೆ. ಆಗ ನನ್ನ ಹತ್ರನೇ ಯಾಕಿಟ್ಕೋಬಾರದು ಮಗೂನ.. ಹೇಗಿದ್ರೂ ನಾವೆಲಾ ಒಂದೇ ಮನೆಯವರಿದ್ದ ಹಾಗಿದ್ದೇವಲ್ಲಾ. ಹೀಗಂದ್ರೆ ವಿಮಲ ಖಂಡಿತ ಆಗಲಿ ಸುನಿತಕ್ಕ ಅಂದೇ ಅಂತಾಳೆ!"

ಈ ಕಲ್ಪನೆಯ ಸರಪಳಿ ಇನ್ನೂ ಎಷ್ಟು ಬೆಳೆಯುತಿತ್ತೋ ಆನಂದ ಬರದಿದ್ದರೆ!

ಬೂಡ್ಸಿನ ಸಪ್ಪಳ ಕೇಳಿದ ಮೇಲೆ, ಚಟ್ ಅಂತ ಕುಳಿತಲ್ಲಿಂದೆದ್ದು ಓಡಿ ಬಂದಳು ನಡುಮನೆಗೆ.

ಅವಳ ಅವಸರದ ನಡಿಗೆಯನ್ನು ನೋಡಿಯೇ ಗುರುತಿಸಿದ ಆನಂದ. ಏನೋ ಸಂತೋಷದ ಸಮಾಚಾರವಿರಬೇಕೆಂದು. ಅವನು ಊಹಿಸಿದಂತೆಯೆ ಆಯಿತು.

"ನೋಡಿ ಇನ್ನ ಐದಾರು ತಿಂಗಳಲ್ಲಿ, ವಿಮಲೆಗೊಂದು ಪುಟ್ಟ ಪಾಪ ಆಗುತ್ತೆ, ಅಬ್ಬಾ! ಎಂಥಾ ಕೆಟ್ಟ ಹುಡುಗೀಂತೀನಿ! ಇದುವರೆಗೂ ಗುಟ್ಟೇ ಬಿಟ್ಟು ಕೊಟ್ಟಿರಲಿಲ್ಲ.!"

ಸಂಭ್ರಮದಿಂದ ಹೇಳಿದಳು

"ಇಷ್ಟೇನಾ!" ಎಂದವನೆ ಆನಂದ ಉಡುಪು ಕಳಚಲು ತೊಡಗಿದ. ಅವನ ಉದಾಸೀನತೆಯನ್ನು ಕಂಡು ಸುನೀತಗೆ ತುಂಬಾ ನಿರಾಸೆಯಾಯಿತು.

ಒಳಗೆ ಹೋಗಿ ತಿಂಡಿ ಕಾಫಿ ತಂದಿರಿಸಿದಳು. ತಿನ್ನುವುದು, ಕುಡಿಯುವುದು. ಮೌನವಾಗಿಯೇ ಸಾಗಿತು.

ಆನಂದನಿಗೆ ಆಫೀಸಿನ ಕಾಗದ ಪತ್ರಗಳನ್ನು ನೋಡುವುದಿತ್ತು. ಅವುಗಳನ್ನು ಮೇಜಿನ ಮೇಲೆ ಹರಡಿಕೊಂಡು ಕುಳಿತ.

ಸುನೀತ ಮನೆಯ ಹಿಂದುಗಡೆಯ ಅಂಗಳದಲ್ಲಿದ್ದ ವೃಂದಾವನದ ಬಳಿ ಬಂದು ಕುಳಿತಳು.

ಈ ಸಂತೋಷದ ಸಮಾಚಾರವನ್ನು ಕೇಳಿಯೂ ಸುಮ್ನೆ ಇದ್ದರಲ್ಲಾ. ಯಾಕಿರಬಹುದು? ಅರ್ಜೆಂಟಾಗಿ ಕಾಗದ ಪತ್ರಗಳನ್ನು ನೋಡುವುದಿತ್ತೇನೊ ಅದಕ್ಕೇ ಸುಮ್ನೆ ಇದ್ದಾರೆ.

ಮುಂದೇನೋ ಹೀಗೇ ಯೋಚಿಸುತ್ತಿದ್ದಂತೆ ಒಂದು ಸಂಶಯ ತಲೆದೋರಿತು.

ವಿಮಲೆಯ ಮಗು ತನ್ನ ಹತ್ತಿರವಿರಲು ಹೇಗೆ ಸಾಧ್ಯ? ಅವಳು ಹೆರಿಗೆಗೆ ತವರುಮನೆಗೆ ಹೋಗೇ ಹೋಗ್ತಾಳೆ. ಅಲ್ಲಿಂದ ಮತ್ತೆ ಬರೋದಕ್ಕೆ ಕೊನೇ ಪಕ್ಷ ಆರು ತಿಂಗಳಾದರೂ ಆದೀತು. ಆಮೇಲಾದ್ರೂ ಅವಳ ಅಪ್ಪ ಅಮ್ಮ ಕಳಿಸ್ತಾರೋ ಇಲ್ಲವೋ. ಹಳ್ಳಿಗಾಡು ಅಲ್ಲೆಲ್ಲಿ ಸರಿ ಹೋಗುತ್ತೇಂತ ತಮ್ಮ ಬಳಿಯೇ ಇಟ್ಕೊಂಡ್ರೋ? ಇಲ್ಲವೆ ರವಿಗೆ ವರ್ಗ ಮಾಡಿಸಿದರೂ

ಮಾಡಿಸಿದರೆ ಯಾವುದಾದರೂ ಒಂದು ದೊಡ್ಡ ಊರಿಗೆ. ಹೀಗನ್ನಿಸಿದಾಗ ನಿರಾಶೆಯ ಸುಳಿ ಸುತ್ತಿಕೊಂಡಿತು. ಅವಳ ಮುಖದ ಮೇಲೆ. ಸ್ವಲ್ಪ ಹೊತ್ತಿನ ಮೇಲೆ ಆ ನಿರಾಶೆ ಸುಳಿ ಕರಗಿ ಹೋಗಿ, ನಿರ್ಧಾರದ ರೇಖೆಯೊಂದು ಮಿನುಗಿತು.

ಹೇಗಾದ್ರೂ, ಆಗಲಿ ಮುಂದಿನದು. ವಿಮಲ ಇಲ್ಲಿ ಇರೋವರೆಗೂ ಅವಳ ಚೆನ್ನಾಗಿ ನೋಡ್ಕೋಬೇಕು. ಸುಖದಲ್ಲಿ ಬೆಳೆದ ಹುಡುಗಿ ಪಾಪ!

ಅಂದಿನಿಂದ ಅವಳಿಗೆ ಹೊಸ ಹೊಸ ಬಟ್ಟೆಗಳನು ಡಿಸಿ, ಸಂತೋಷಪಡುತ್ತಿದ್ದಳು ಸುನಿತ.

ಈಚೆಗೆ ಎಂಟು ಹತ್ತು ದಿನಗಳಿಂದ ಸುನಿತೆಗೆ ಮೈ ಸರಿಯಿದ್ದಂತಿರಲಿಲ್ಲ. ಚಳಿ, ಜ್ವರ, ತಲೆನೋವು ಯಾವುದೂ ಇಲ್ಲ. ಆದರೂ ಏನೋ ಒಂದು ತರಹ. ಊಟ ಸರಿಯಾಗಿ ಸೇರುತ್ತಲೇ ಇರಲಿಲ್ಲ. ಏನೆಂದು ಅರ್ಥವಾಗಲಿಲ್ಲ ಅವಳಿಗೆ.

ಒಂದೆರಡು ಬಾರಿ ಹೀಗೇಂತ ವಿಮಲೆಗೆ ಹೇಳಿದಾಗ "ಅವರಿಗೆ ತೋರಿಸೋಣಕ್ಕ, ಯಾವುದಕ್ಕೂ" ಅಂದಿದ್ದಳು. ಆದರೆ ಸುನೀತೆಯೇ ಏನು ತೋರಿಸೋದು ಬಿಡು ಇಷ್ಟಕ್ಕೆಲ್ಲಾ ತಾನಾಗಿ ಸರಿ ಹೋಗಬಹುದು ಎಂದಿದ್ದಳು.

ಒಂದು ದಿನ ವಿಮಲ ಮಧ್ಯಾಹ್ನ ಸುನಿತಳ ಮನೆಗೆ ಬಂದಿದ್ದಳು. ಸುನಿತ ಒಂದು ತಟ್ಟೆಯ ತುಂಬಾ ಹಣ್ಣುಗಳನ್ನಿರಿಸಿ ತಂದಳು.

ಸೇಬು, ಕಿತ್ತಳೆ, ಬಾಳೆ, ಮೋಸಂಬಿ!

ಘಮ ಘಮಿಸುವ ರಸ ತುಂಬಿದ ಹಣ್ಣು!

ಆನಂದ ಬೆಂಗಳೂರಿಗೆ ಹೋಗಿದ್ದ. ಅಲ್ಲಿಂದಲೇ ತಂದಿದ್ದ.

"ತಗೊ ವಿಮಲ"

"ನೀನೂ ತಗೋ ಸುನಿತಕ್ಕ. ಎಲ್ಲಾ ನನ್ನ ಮುಂದೆಯೇ ಇರಿಸಿದೆಯಲ್ಲ"

"ಈಗ ನೀನು ಎರಡು ಕಾಲಿನವಳು ವಿಮಲ. ಸ್ವಲ್ಪವೇ ಕೊಟ್ಟರೆ ಆ ಮೇಲೆ ನಿನ್ನ ಹೊಟ್ಟೆಯಲ್ಲಿರೋನು ನನ್ನ ಸಂಗಡ ಜಗಳ ಕಾಯ್ತಾನೆ."

ವಿಮಲ ನಗುತ್ತಾ ತಟ್ಟೆಗೆ ಕೈ ಹಾಕಿದಳು.

"ಒಂದು ಚೂರು ಸೇಬಾದರೂ ತಿನ್ನಕ್ಕ, ತುಂಬಾ ರುಚಿಯಾಗಿದೆ."

"ಬೇಡ ವಿಮಲ. ಯಾಕೋ ಸೇರೋದೇ ಇಲ್ಲ ಇದ್ಯಾವುದೂ. ಹುಳಿ ದ್ರಾಕ್ಷಿನಾದ್ರೂ ಆಗಿದ್ರೆ ತಿನ್ನಬಹುದಾಗಿತ್ತು."

"ಅದ್ಯಾಕೆ ಹುಳಿ ದ್ರಾಕ್ಷಿ ಮೇಲೆ ನಿನಗೆ ಅಷ್ಟು ಇಷ್ಟವಾಯ್ತಕ್ಕ ಇದ್ದಕ್ಕಿದ್ದ ಹಾಗೆ? ಹುಳೀಂದ್ರೆ ಆಗೋಲ್ಲ ಹಲ್ಲು ಚಳ್ ಅನ್ನುತ್ತೇಂತ ಹೇಳ್ತಿದ್ದೆಯಲ್ಲ"

"ಯಾಕೇಂತ ಗೊತ್ತಿಲ್ಲ. ಜಾಡಿಲಿರೋ ಉಪ್ಪಿನಕಾಯಿನೆಲ್ಲಾ ಮುಗಿಸಿ ಬಿಟ್ಟಿದೀನಿ ಅಗ್ಲೆ. ನಾಳೆ ನಿನ್ನ ಮನೆಗೆ ಉಪ್ಪಿನಕಾಯಿ ಲೂಟಿಗೆ ಬರ್ಬೇಕಾಗುತ್ತೇನೋ!"

ಸುನೀತ ಹೇಳಿದ್ದನ್ನು ಕೇಳಿದ ವಿಮಲ ಒಂದೆರಡು ಗಳಿಗೆ ಗಂಭೀರವಾಗಿ ಏನನ್ನೋ ಯೋಚಿಸುತ್ತಾ ಕುಳಿತವಳು ನಂತರ ಸುನಿತಳನ್ನು ಎಂದೂ ನೋಡದವಳಂತೆ ನೋಡುತ್ತಾ ಮೆಲ್ಲಗೆ ಕೇಳಿದಳು.

"ಅಂದ ಹಾಗೆ ಈಚೆಗೆ ನೀನು ಹೊರಗೆ ಕುಳಿತ ಹಾಗೇ ಇಲ್ಲ ಅಲ್ವೇನಕ್ಕಾ?"

"ಏನೋ ಸರಿಯಾಗಿ ಜ್ಞಾಪಕ ಇಲ್ಲ. ಯಾಕೆ?"

"ಓ ಅಕ್ಕಾ!" ಸುನಿತಳ ಕೈ ಹಿಡಿದು ಸಂತೋಷದಿಂದ ಕೂಗಿದಳು ವಿಮಲ.

ಅನೇಕ ವರ್ಷಗಳವರೆಗೆ ಕಷ್ಟ ಪಟ್ಟು ಕೊನೆಗೆ ಅಮೇರಿಕವನ್ನು ಕಂಡು ಹಿಡಿದ ಕೊಲಂಬಸನಿಗೂ ಅಷ್ಟು ಸಂತೋಷ ಆಗಿತ್ತೋ ಇಲ್ಲವೋ!

ವಿಮಲೆಗಾದ ಸಂತೋಷ ಯಾಕೆಂದು ತಿಳಿಯಲಾರದೆ, ಮೂಕವಿಸ್ಮಿತಳಾಗಿ ಕುಳಿತಿದ್ದಳು ಸುನಿತ.

"ನಿನ್ನ ವ್ರತ ಫಲಿಸಿತು ಸುನಿತಕ್ಕ! ಮನೋಭಿಲಾಷೆ ಈಡೇರಿತು" ಎಂದು ಹೇಳಿ ಮತ್ತೆ ಅವಳ ಕಿವಿ ಹತ್ತಿರಲ್ಲಿ ಬಾಗಿ ಉಸುರಿದಳು.

ಛೆ ಛೆ! ಎಲ್ಲಾದ್ರೂ ಉಂಟೆ? ವಿಮಲೆಯ ಮಾತನ್ನು ನಂಬಲಾಗಲಿಲ್ಲ ಸುನೀತೆಗೆ.

"ಆ ಸೌಭಾಗ್ಯದಾಶೆ ಸಂಪೂರ್ಣವಾಗಿ ಮನಸ್ಸಿನಿಂದ ಅಳಿಸಿ ಹೋಗಿರುವಾಗ ಮತ್ತೆ ಅದನ್ನು ಊಹಿಸುವುದಾದರೂ ಹೇಗೆ?"

## ಮಾರ್ಗದರ್ಶಕರು

ನಾ ಹೆಚ್ಚು ನೀ ಹೆಚ್ಚು ಎಂಬ ಕದನಕೂ ಕಿಚ್ಚು  
ಪೀಠಾಧಿಪತಿಗಳಲಿ ಈ ಬಗೆಯ ಹುಚ್ಚು  
ಮಾರ್ಗದರ್ಶಕರಿವರೆ ಕಚ್ಚಾಡುತಿರುವಾಗ  
ಬಿಡಿಸಬಲ್ಲರೆ ಶ್ರೀಸಾಮಾನ್ಯನ ರೋಗ

ಶಂ. ಗು. ಬಿರಾದಾರ

"ಯೋಚಿಸಿ ನೋಡಕ್ಕಾ ಎರಡು ತಿಂಗಳಾದ್ರೂ ಆಗಿರಬೇಕಲ್ಲವೆ?" ಸುನಿತಳ ಮನಸ್ಸು ಉತ್ಸಾಹದಿಂದ ಎರಡು ತಿಂಗಳು ಹಿಂದಕ್ಕೆ ಸರಿಯಿತು.

ಹೌದು. ಅವಳು ಹೊರಗೆ ಕುಳಿತು ಸುಮಾರು ಒಂದೂವರೆ ತಿಂಗಳ ಮೇಲಾಗಿತ್ತು.

"ನಿಜ ವಿಮಲಾ!" ಸಂತೋಷೋದ್ಗಾರ ಅವಳ ಕೊರಳಿಂದ ಹೊರಟಿತು. ಮುಂದೇನೂ ಮಾತನಾಡಲಾಗಲಿಲ್ಲ.

ಅರೆ ಬೆರೆತ ಲಜ್ಜೆ. ಸಂತೋಷ. ಸಂಕೋಚದಿಂದ ಅವಳ ಮುಖ ಅರಳಿತು, ಅತಿ ಹಿಗ್ಗಿನಿಂದ ಮೈ ಕಾವೇರಿತು. ಕಣ್ಣುಗಳು ಮಿನುಗಿದವು.

ಆ ಸಂತೋಷವನ್ನು ಭರಿಸಲಾರದೆ ಬಾಗುತ್ತಿರುವಳೇನೋ ಎನ್ನುವಂತೆ ಅವಳ ಒಡಲು ನೆಲದೆಡೆ ಬಾಗಿತು.

ವಿಮಲೆ ಅಂದ ಹಾಗೆ ಅವಳ ವ್ರತ ಫಲಿಸಿ ಫಲ ಕೊಡುವುದರಲ್ಲಿತ್ತು. ಮನೋಭಿಲಾಷೆ ಈಡೇರುವುದರಲ್ಲಿತ್ತು. ತಾಯಿಯ ಪಟ್ಟ ಸಿಕ್ಕುವುದು ಅತಿ ಹಿಗ್ಗಿನ ಮಾತಾಗಿತ್ತು.

"ದೇವರು ಕಣ್ಣು ಬಿಟ್ಟಿದಾನೆ ಸುನಿತಕ್ಕ! ಇನ್ನು ಅವರು ಬರೋ ಹೊತ್ತು ಈ ಸಂತೋಷ ಸಮಾಚಾರಾನ ಮೊದಲು ತಿಳಿಸ್ಬೇಕು. ಮೊದಲು ಹಾಗೆಯೇ ಹುಳಿ ದ್ರಾಕ್ಷಿ ಎಲ್ಲಿದ್ರೂ ತರಿಸಿಕೊಡ್ತೀನಿ. ಉಪ್ಪಿನಕಾಯಿ, ಹುಣಸೆಕಾಯಿ, ಮಾವಿನಕಾಯಿ, ಎಲ್ಲವೂ" ನಗುತ್ತಾ ಹೊರಟಳು ವಿಮಲ.

ವಿಮಲೆ ಹೋದ ಮೇಲೂ ಹಾಗೆಯೇ ಕುಳಿತಿದ್ದಳು ಸುನೀತ. ಮೈಯೆಲ್ಲಾ ನವಿರು! ಹಾಗೇ ಮೇಲೆದ್ದು ಈ ನವಿರಿನ ಹೊದಿಕೆ ಹೊದೆದು ಮಂಚದ ಮೇಲೆ ಸಂತೋಷದಿಂದ ಉರುಳಿಕೊಂಡಳು.

"ಪುಟ್ಟ ಪುಟ್ಟ ಹೆಜ್ಜೆ ಇಟ್ಟು ಬಣ್ಣದ ಅಂಗಿ ತೊಟ್ಟು, ಬರುತ್ತಾನೆ ಕೃಷ್ಣ ಬರುತಾನೆ, ಬಾಲಕೃಷ್ಣ ಬರುತಾನೆ" ರಾಗವಾಗಿ ಸಣ್ಣಗೆ ಗುಣು ಗುಣಿಸತೊಡಗಿದಳು.

ಸಣ್ಣನೆಯ ರಾಗದಲೆಗಳು ಒಳಗೆ ಬಂದ ಆನಂದನ ಕಿವಿಗಳನು ಮುತ್ತಿಟ್ಟವು. ರೂಮಿನೊಳಗೆ ಬರುತ್ತಿದ್ದಂತೆಯೇ ಅವನು

"ಓ ನನ ರಾಣಿ! ಇವತ್ತು ತುಂಬಾ ಸಂತೋಷವಾಗಿರೋ ಹಾಗಿದೆಯಲ್ಲಾ" ಎಂದು.

"ಯಾರು ಪುಟ್ಟ ಪುಟ್ಟ ಹೆಜ್ಜೆಗಳನಿಟ್ಟುಕೊಂಡು ಬರುತ್ತಿರೋರು? ಫೋಟೋದಲ್ಲಿನ ಕೃಷ್ಣನೆ?"

"ಹೂಂ... ಬರ್ತಾ ಇದಾನೆ. ಒಂದುದಿನ ಈ ಮಡಿಲು ತುಂಬ್ತಾನೆ"

ಸುನೀತಳ ಕಣ್ಣು ಜ್ಯೋತಿಯಂತೆ ಮಿನುಗಿದವು. ಉತ್ಸಾಹದ ಚಿಲುಮೆಯಾಗಿದ್ದಳವಳು.

ಅವಳ ವರ್ತನೆ ಕಂಡು, ಆನಂದನಿಗೆ ಆಶ್ಚರ್ಯವೋ ಆಶ್ಚರ್ಯ.

"ಏನು ಸಮಾಚಾರ ಸುನಿ? ಈಚೆಗೆ ಎಂದೂ ನೀನು ಇಷ್ಟು ಸಂತೋಷವಾಗಿರಲಿಲ್ಲ."

"ಏನಿರಬಹುದು ಹೇಳಿ ನೋಡೋಣ"

"ರುಚಿಯಾಗಿರೋ ತಿಂಡಿ ಮಾಡಿರಬಹುದು."

"ಉಹುಂ..."

"ನೀನೂ ವಿಮಲ ಎಲ್ಲಿಗಾದ್ರೂ ಪ್ರೋಗ್ರಾಂ ಹಾಕಿರ್ಬೇಕು."

"ಅದೂ ಅಲ್ಲ"

"ಮತ್ತೆ ?"

"ಸೋತ್ರಾ?"

"ಹೆಂಗಸರದು ತುಂಬಾ ಜಾಣ್ಮೆ ಕ್ಷಿತನ ಗಂಡಸರನ್ನು ಸೋಲಿಸೋಕೆ ಒಗಟಿನ ಮಾತು ಹೇಳು."

"ಸೋತೆ ಅಂದ್ರೇನೆ"

"ಅಬಬಾ! ಆಗ್ಲಿ ಸೋ...ತೆ."

"ಇಲ್ಲ. ಮನಃಪೂರ್ವಕವಾಗಿ ಸರಿಯಿಲ್ಲ."

"ನನ ಮನಸೊಳಗೆ ಟಾರ್ಚ್ ಇಟ್ಟೇನಾದ್ರೂ ನೋಡಿವೆಯಾ?"

"ನಂಗೆ ತಿಳಿಯುತ್ತೆ. ತುಟಿಯಿಂದ ಗಿಂಚಿನ ಮಾತೂಂತ"

"ಅಗ್ಲಿ ಸೋತ್ಸೆ ...ಸೋತ ಸೋತೆ."

"ಅಂದ್ರೆ ನಾನು ಪೂರ್ತಿ ಹೇಳೋಲ್ಲಪ್ಪಾ"

"ಮತ್ತಿನ್ನೇನು ನಿನ್ನ ಕಂಡೀಶನ್ನು?"

"ಮೊದಲ್ನೇ ಅಕ್ಷರ ಹೇಳ್ತೀನಿ...ಕೊನೇದು ನೀವೇ ಸೇರಿಸ್ಕೊಳ್ಳಿ ಪಾ... ಅಂತ"

"ಇದೊಳ್ಳೆ ಪಂಚಾಯ್ತಿಯಲ್ಲಾ ಪಾಯಸ ಮಾಡಿ ದೀಯಾ?"

"ಅಲ್ಲವೇ ಅಲ್ಲ"

"ಪಾರಿವಾಳ ಬಂದಿತ್ತಾ?"

"ನಿಮ್ಮ ಬುದ್ಧೀನೋ"

"ಓ ತಿಳೀಯ್ತು."

"ಏನು?"

"ಬಿಸ್ಲಲ್ಲಿ ಬಂದಿದೀನೀಂತ ಪಾನಕ ಮಾಡಿದೀಯ"

ಜೋರಾಗಿ ನಕ್ಕು ತಲೆಯಾಡಿಸಿದಳು ಸುನಿತ.

"ಅಬ್ಬಾ ಇಂಜಿನಿಯರ್ ಕೋರ್ಸ್‌ಗೂ ಇಷ್ಟು ಕಷ್ಟ ಪಟ್ಟಿರ್ಲಿಲ್ಲ ನಾನು, ಹೋಗಲಿ ಹೇಳದೆ ಇದ್ರೆ ಬಿಡು, ನನ ತಲೆಗಂತೂ ಹೊಳೆಯ್ತಿಲ್ಲ"

"ಕಿವಿಯಲ್ಲಿ ಹೇಳ್ತೀನಿ ಹಾಗಾದ್ರೆ."

"ಯಾಕೆ ಕೆಂಪಯ್ನೂ ಮನೇಲಿಲ್ಲ. ಓ ಗೋಡೆ ಗಳು ಕೇಳ್ತಾವೆ ಅಂತಾನೆ? ಆಗ್ಲಿ" ಕಿವಿ ಮುಂದೆ ಮಾಡಿದ.

ಸುನೀತ ಅವನ ಕಿವಿಯೆಡೆಗೆ ಬಾಗಿ, ಮೆಲ್ಲನೆ "ನಮ ಗೊಂದು ಪಾ...ಪ."

"ಸುನೀ!!" ಆನಂದ ಅವಳನ್ನು ಬಿಗಿಯಾಗಿ ಅಪ್ಪಿದ.

"ಬಿಡೀಂದ್ರೆ ಇದೇನಿದು?"

"ಇರು ಇದನ್ನೂ ವಸೂಲ್ಮಾಡ್ತೀನಿ," ಅವಳೆಡೆಗೆ ಬಾಗಿದಾಗ, ಅವಳ ತುಟಿಗಳು ಅವನ ಬೇಡಿಕೆಯನ್ನು, ಬೇಡ ಬೇಡ ವೆನ್ನುತ್ತಲೇ ಸ್ವೀಕರಿಸಿದವು.

"ನೀವು ತುಂಬಾ ಸ್ವಾರ್ಥಿಗಳಪ್ಪಾ!" ಪಿಸುಗುಟ್ಟಿ ದಳು. ಹೀಗೆ ಅನ್ನುವಾಗ ಅವಳ ಮುಖ ಕಮಲ ಅರ ಳಿತ್ತು, ಪುಟ್ಟ ಬಾಯಲ್ಲಿ ಮುತ್ತಿನ ಸಾಲು ಹೊಳೆ ದವು.

ಕಮಲದ ಮೇಲಿನ ದುಂಬಿಗಳಂತೆ, ಮುಂಗುರುಳು ಮುಖದ ಮೇಲೆ ಹರಿದಾಡಿತು.

ಆನಂದನ ಕಣ್ಣು ಕಮಲದ ಚೆಲುವನ್ನು ಹೀರಿ ದವು.

ಅಂದಿನಿಂದ ಆನಂದ,ಸುನೀತಳ ವಿಷಯದಲ್ಲಿ ಹೆಚ್ಚಿನ ಆಸಕ್ತಿ ವಹಿಸಿದ. ರವಿಯೂ ಅಷ್ಟೇ. ಎಷ್ಟೇ ಕೆಲಸವಿ ದ್ದರೂ ಇಬ್ಬರು, ಸಾಯಂಕಾಲ ಬಿಡುವು ಮಾಡಿಕೊಂಡು. ತಮ್ಮ ಮಡದಿಯರನ್ನು ಸುತ್ತಾಡಿಸಿಕೊಂಡು ಬರುತ್ತಿ ದ್ದರು. ವಾರಕ್ಕೋ ಹದಿನೈದು ದಿನಗಳಿಗೊಮ್ಮೆಯೋ. ಭದ್ರಾವತಿ, ಶಿವಮೊಗ್ಗಾಕ್ಕೆ ಕರೆದುಕೊಂಡು ಹೋಗಿ ನಾಟಕ, ಸಿನೆಮಾಗಳನ್ನು ತೋರಿಸಿಕೊಂಡು ಬರುತ್ತಿ ದ್ದರು.

ಈಗ ಸುನೀತಳ ತಂಬೂರಿ ಮೊದಲಿನ ಹಾಗೆ ಮೂಲೆ ಯಲ್ಲಿ ಕುಳಿತಿರುತ್ತಿಲ್ಲ. ಆನಂದ ಇದ್ದಾಗಲೂ ಹಾಡು ತ್ತಾಳೆ. ಮೊದಲಿನಂತೆ ಅವನು ಬೇಸರ ಪಡದೆ ಸಂತೋಷ ದಿಂದ ಕೇಳುತ್ತಾನೆ. ಒಟ್ಟಿನಲ್ಲಿ ಅವಳು ಸಂತೋಷ ವಾಗಿದ್ದರೆ ಸಾಕು ಎಂದುಕೊಳ್ಳುವನು.

ಆಗಾಗ್ಗೆ ರವಿಯೂ ಬಂದು ಹಾಡುತ್ತಾನೆ.ಸುನೀತ-ರವಿಯ ಕಚೇರಿಯ ಶ್ರಾವಕರು ಆನಂದ... ವಿಮಲ.

ದಿನಗಳುರುಳಿದಂತೆಲ್ಲಾ, .ಯಾವಾಗ ಕಂಡೇನು ಮುದ್ದು ಮೊಗದ ಕಂದನನ್ನುಎನ್ನುವ ಹಂಬಲ ಸುನೀತಗೆ. ಹೀಗೆ ಯೋಚಿಸಿದಂತೆಲ್ಲಾ, ಕಾಲ ಬಹಳ ನಿಧಾನವಾಗಿ ಸರಿಯುತ್ತಿರುವಂತೆ ತೋರುತ್ತಿದೆ ಅವಳಿಷ್ಟು

ಇದರ ಜೊತೆಗೆ ಒಮ್ಮೊಮ್ಮೆ ಭೀತಿಯೂ ಸುಳಿಯು ತ್ತಿದೆ. ಅವಳು ಕೇಳಿದ್ದಳು, ಬಹಳ ದಿವಸಗಳ ಮೇಲೆ ಮಕ್ಕಳಾದ್ರೆ ಕೆಲವರಿಗೆ, ಹೆರಿಗೆ ಕಷ್ಟವಾಗುತ್ತೆ.

ಇನ್ನು ಕೆಲವರಿಗೆ ಮಕ್ಕಳು ಹುಟ್ಟುತ್ತಲೇ ಸಾಯು ತ್ತವೆ. ಇಲ್ಲ ಹೊಟ್ಟೆಯೊಳಗೆ ಸರಿಯಾಗೇ ಬೆಳೆದಿ ರೋದಿಲ್ಲ. ಅಂತೂ ತೊಂದರೆಯಿಲ್ಲದೆ ಸರಿಯಾಗಿ ಆಗುವುದು ಅಪರೂಪ.

ತನಗೆ ಹೀಗೇನಾದರೂ ಆದರೋ! ಒಳಗೊಳಗೇ ಭೀತಿ.

ತಾನು ಸತ್ತರೂ ಚಿಂತೆಯಿಲ್ಲ. ಮಗು ಬದುಕ ಬೇಕು. ಚೆನ್ನಾಗಿರಬೇಕು. ಮತ್ತೆ ಇನ್ನೇನು ಯೋಚನೆ.

ತಾನು ಸತ್ತು ಮಗು ಉಳಿದರೆ ತಾನೆ ಏನು ಪ್ರಯೋಜನ? ಅದನು ಸಾಕಿ ಸಲಹೋರು ಯಾರು? ಎಂತಹ ಯೋಚನೆ ತನ್ನದು! ಈ ಯೋಚನೆಯ ಬಗೆ ಒಳಗೊಳಗೇ ನಗುವಳು.

ತಿಳಿಗೊಳದಲ್ಲಿ ಸಣ್ಣನೆ ಸುಳಿಯೊಂದು ಕಂಡೂ ಕಾಣದೆ ಇರುವಂತೆ, ಅವಳ ಸಂತೋಷದಲ್ಲಿ ಭೀತಿಯೂ ಆಗಾಗ್ಗೆ ಸುಳಿದಾಡುತ್ತಿತ್ತು.

ಇದರ ಜೊತೆಗೆ, ಇನ್ಮೇಲೆ ವಿಮಲ, ತವರು ಮನೆಗ ಹೊರಟು ಹೋಗುತ್ತಾಳಲ್ಲಾ! ಎನ್ನುವ ಬೇಸರವೂ ಸೇರಿಕೊಂಡಿತ್ತು.

ಒಂದುದಿನ ಸುನೀತ ವಿಮಲೆಯ ಮನೆಗೆ ಹೋಗಿ ದ್ದಾಗ, ಅವಳೆಂದಳು.

"ಅಣ್ಣ ಕರೆಯೋದಕ್ಕೆ ಬರ್ತಾರಂತೆ ಸುನೀತಕ್ಕಾ! ನಾನು ಹೋಗಲೆ?"

ವಿಮಲ ಹೋದರೆ ತಾನು ಒಂಟಿ! ಬೇಸರ! ಕ್ಷಣ ಕಾಲ ಬೆಚ್ಚಿ ನಂತರ, ಪಾಪ! ಅವಳಿಗೆ ತವರಿನ ಸುಖ ಇದೆ ಹೋಗಿ ಬರಲಿ ಎಂದು.

"ಹೋಗ್ಬಾ ವಿಮಲ. ಯಾವಾಗ ಬರ್ತಾರೆ ಅವರು ಕರೆಯೋದಕ್ಕೆ?"

"ಇಲ್ಲಕ್ಕ ಸುಮ್ನೆ ಬರ್ತಾರೆ, ಅದೂ ಯಾವಾಗ ಬರ್ತಾರೋ ತಿಳಿಯದು."

"ಹಾಗಾದ್ರೆ ನೀನು ಹೋಗಲ್ವೆ? ಯಾಕೆ?"

"ಈ ಸರ್ತಿ ಅತ್ತಿಗೆ ಹೆರಿಗೆಗೆ ಅಲ್ಲೇ ಇರ್ತಾಳಂತೆ. ಮೂರನೆ ಹೆರಿಗೆ, ತವರು ಮನೆಯಲ್ಲಿ ಆಗ ಬಾರ ದಂತಲ್ಲಾ! ಆದ್ರೂ ನನ್ನನ್ನೂ ಕರ್ಕೊಂಡು ಹೋಗ್ಬೇಕೂ ಅನ್ನೋ ಇಷ್ಟ. ಚೊಚ್ಚಲು ಬಾಣಂತನ, ಬಿಡೋ ಹಾಗಿ ಲ್ವಲ್ಲಾಂತ ಅಲ್ಲಿ ಅತ್ತಗೆ ಸುಮ್ನೆ ಫಜೀತಿ. ಇಲ್ಲಿ ನರ್ಸ್ ಆಯಾಗಳು ಎಲ್ಲಾ ಅನುಕೂಲವಿರುತ್ತೆ ಇಲ್ಲೇ ಆಗಲಿ ಎನ್ನುತ್ತಾರೆ. ಹಾಗಂತ ಕಾಗದಾನೂ ಬರೆದು ಹಾಕಿದಾರೆ. ನನಗೂ ಇಲ್ಲೇ ಇರೋದು ಮೇಲೂ ಅನಿಸುತ್ತೆ."

ವಿಮಲ ತಾನು ಇಲ್ಲೇ ಇರುತ್ತೇನೆಂದ ಮೇಲ ಸುನೀತಳ ಚಿಂತೆ ದೂರವಾಯಿತು.

ಐದು ತಿಂಗಳು ತುಂಬುವುದರೊಳಗಾಗಿ, ಅವಳ ತವರಿನವರು ಬಂದು ಹೂ ಮುಡಿಸುವ ಶಾಸ್ತ್ರವನು ಮಾಡಿ ಹೋದರು. ಆ ಸಮಯದಲ್ಲಿ ಸುನಿತಗೂ ಸೀರೆ ಕುಪ್ಪಸದ ಉಡುಗೊರೆಯನು ಕೊಡಲು ಮರೆಯಲಿಲ್ಲ ಅವರ್ಕ

ಒಂದು ಬೆಳಗಿನ ಝಾವ, ಆಕಾಶವೆಲ್ಲಾ ಸಪ್ತ ವರ್ಣಗಳಿಂದ ಸಿಂಗಾರವಾಗಿ ನೋಡಲು ಅತ್ಯಂತ ಮನೋಹರವಾಗಿತ್ತು. ಆ ಆಗಸದ ಅರಮನೆಯ. ಮುಂದೆ. ಸುಂದರವಾದ ಉದ್ಯಾವನ! ಚೆಲುವೆಯರಾದ ಅಪ್ಸರೆಯರು ಶ್ವೇತಾಂಬರಧಾರಿಣಿಯರಾಗಿ, ಮುದ್ದಾದ ಮಗುವನ್ನು ಆಡಿಸುತ್ತಿದ್ದಾರೆ

ಆ ದಿನ ಪಾರ್ಕ್‌ನಲ್ಲಿ ನೋಡಿದ್ದ ಮಗುವಿನಂತೆಯೇ ಇದೆ, ಇದೂ ಕೂಡ. ಒಬ್ಬರ ತೋಳಿನಿಂದ ಇನ್ನೊ ಬ್ಬರ ತೋಳಿಗೆ ಹೋಗಿ ಕುಳಿತು, ತನ್ನ ಪುಟ್ಟ ಕೈಗಳನ್ನು ತಟ್ಟಿ ನಗುತ್ತಿದೆ.

"ಅಗೋ ನಿನ್ನ ಅಮ್ಮ. ಹೋಗಿ ಬರ್ತೀಯಾ ಮರಿ ಅಲ್ಲಿಗೆ" ಸುನಿತೆಯ ಕಡೆ ಕೈ ಮಾಡಿ ಅಲ್ಲಿಂದಲೇ ತೋರಿಸುತ್ತಿದ್ದಾರೆ.

ತನ್ನ ಹೆಸರನ್ನು ಕೇಳಿ. ಸುನಿತ ಚಟ್ಟನೆದ್ದು. ಆಶೆ ತುಂಬಿದ ಕಣ್ಣುಗಳಿಂದ ಆಕಾಶದ ಕಡೆ ದಿಟ್ಟಿಸಿ ನೋಡು ತ್ತಾಳೆ. ಅವಳ ಕೈಗಳು ಮಗುವನ್ನಪ್ಪಲು ಮುಂದೆ ಸರಿಯುತ್ತವೆ.

ಆಗ, ಆ ಮಗು ಆಗಸದಿಂದಿಳಿದು ಬಂದು. ಇವಳ ಮನೆ ದಾರಿ ಹಿಡಿಯುತ್ತದೆ. ಸುನಿತ ಮೇಲೆದ್ದು ಕೈಗಳನ್ನು ಇನ್ನೂ ಮುಂದೆ ಚಾಚುತ್ತಾಳೆ. ಓಡಿ ಬಂದ ಆ ಮಗು. ಅವಳ ತೋಳುಗಳಲಿ ಸೇರಿಕೊಳ್ಳುತ್ತದೆ. ಸುನಿತಳ ಕಣ್ಣಿನಿಂದ ಆನಂದಾಶ್ರುಗಳು ಟಪಟಪನೆ ಉರುಳುತ್ತವೆ.

"ನನ ಬಾಳಿನ ಬೆಳಕೆ! ನನ್ನ ಆನಂದ! ಕಂದಾ ಬಂದೆಯಾ!" ಎನ್ನುತ್ತಾ ಮಗುವನು ಮುದ್ದಿಸಿ. ಹಾಲು ಸಕ್ಕರೆಯನ್ನು ಬೆಳ್ಳಿಯ ಬಟ್ಟಲಲ್ಲಿ ಹಾಕಿ ಕಲಸಿ ಕುಡಿ ಸಲು ಹೋಗುತ್ತಾಳೆ,

ಇದ್ದಕ್ಕಿದ್ದಂತೆಯೇ ಬಣ್ಣ ಬಣ್ಣದ ಆಗಸ ಮರೆ ಯಾಗಿ, ಕರಾಳ ಛಾಯೆ ಆವರಿಸುತ್ತದೆ. ಇದೇಕೆ ಕತ್ತಲೆ ಎಂದು ಸುನಿತ ಮೇಲೆ ನೋಡುತ್ತಾಳೆ

ಭಯಂಕರವಾದ ಆ ಕತ್ತಲೆಯನ್ನು ಸೀಳುತ್ತಾ ಭಯಾನಕ ಆಕೃತಿಯೊಂದು ಇವಳೆಡೆಗೇ ಬರುತ್ತದೆ.

ಕಡು ಕಪ್ಪು. ದೇಹ! ಕೆಂಡದುಂಡೆಗಳಂತಹ ಕಣ್ಣು! ಕೋರೆ ಹಲ್ಲು! ಕುರುಚಲು ಕೂದಲು!

ಕೆಟ್ಟ ಸ್ವರದಲ್ಲಿ ಕೂಗುತ್ತಾ ಬಂದು. ಸುನಿತೆಯನ್ನು ಬೆದರಿಸುತ್ತಾ "ಕೊಡು ಈ ಮಗೂನ" ಎನ್ನುತ್ತದೆ.

ಸುನೀತ ಹೆದರಿ. ಮಗುವನ್ನು ತನ್ನ ದೇಹದೊಳಕ್ಕೆ ಹುದುಗಿಸಿಕೊಂಡು ಬಿಡುತ್ತಾಳೆ ಎನ್ನುವಂತೆ ಬಿಗಿ ಯಾಗಿ ಅಪ್ಪಿಕೊಳ್ಳುತ್ತಾಳೆ.

"ಕೊಡ್ತೀಯೊ ಇಲ್ಲವೊ?" ಕರಾಳ ಹಸ್ತ, ಅತಿ ನಿರ್ದಯೆಯಿಂದ ಆ ಪುಟ್ಟ ಕಂದನನ್ನು ಸೆಳೆದೊ ಯ್ಯುತ್ತದೆ.

"ನನ್ನ ಕಂದಾ! ಬಾಳಿನ ಬೆಳಕೆ! ಕರುಳಿನ ಕುಡಿ! ಎಲ್ಲಿ? ಹಾಯ್ ಎಲ್ಲಿ?"

ಚಟ್ಟನೆ ಚೀರಿ ಎದ್ದು ಕುಳಿತುಕೊಳ್ಳುತ್ತಾಳೆ.

"ಏನಾಯ್ತು ಸುನಿ!" ಎಚ್ಚತ್ತು ಕೇಳಿದ ಆನಂದ.

ಸುನೀತ ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಅವಳ ಕೈಗಳಿನ್ನೂ ಮುಂದೆ ಚಾಚಿಕೊಂಡೇ ಇದ್ದವು.

"ಮಗು ಹೋಯ್ತು! ನೋಡಿ ಅಲ್ಲಿ!" ದುಃಖ ದಿಂದ ಕೂಗಿದಳು.

"ಯಾವ ಮಗು? ಏನಾಯ್ತು? ಕನಸು ಬಿದ್ದಿತ್ತೆ?"

ಕಣ್ಣೀರು ಧಾರೆಯಾಗಿ ಹರಿಯುತ್ತಿತ್ತು, ಬೆವರು ಸುರಿಯುತ್ತಿತ್ತು. ಗಡಗಡನೆ ನಡುಗುತ್ತಿದ್ದಳು ಸುನಿತ.

ಕನಸಿಗೆ ಇಷ್ಟು ಹೆದರಿಕೊಳ್ಳೋದೆ? ಕೆಟ್ಟ ಕನಸೆ?"

ನಿಜವಾಗೂ ನಡೆದಿದ್ದಲ್ಲ. ಕನಸು ಎಂದು ತಿಳಿದು ಬಂದಾಗ ಅವಳಿಗೆ ಸ್ವಲ್ಪ ಧೈರ್ಯವಾಯಿತು.

"ಅಬ್ಬಾ! ಎಷ್ಟು ಭಯಂಕರವಾಗಿತ್ತೂಂತ ಆ ಕನಸೂ" ಎಂದಳು.

ಹೀಗೆ ಹೇಳಬೇಕಾದರೆ ಅವಳ ದನಿ ನಡುಗುತ್ತಿತ್ತು.

"ಮಲಕ್ಕೋ ಇನೂ ಮೂರೂವರೆ." ಆನಂದ ಟೈಂ ನೋಡಿ ಹೇಳಿ, ಮಲಗಿಬಿಟ್ಟ.



ಸುನೀತೆಗೆ ಮತ್ತೆ ನಿದ್ರೆಯೆಲ್ಲಿಯದು? ಕನಸಿನಲ್ಲಾದ ಹೆದರಿಕೆಯಿನ್ನೂ ತೊಲಗಿರಲಿಲ್ಲ. ಬೆಳಗಿನ ಝಾವದ ಕನಸು ಬೇರೆ. ಯಾವ ಅನಿಷ್ಟಕ್ಕೆ ಸೂಚನೆಯೋ. ಮತ್ತೊಮ್ಮೆ ಬೆವರಿದಳು.

ಮರು ದಿನ ಬೆಳಗ್ಗೆ ಎಚ್ಚರವಾದಾಗ ಅವಳಿಗೆ ಮಂಚವನ್ನು ಬಿಟ್ಟು ಇಳಿಯಲೇ ಆಗಲಿಲ್ಲ. ಜ್ವರ ಕಾಯುತ್ತಿತ್ತು.

ಹೆದರಿ ಬಿಟ್ಟಿದ್ದಾಳೆ ಅದಕ್ಕೇ ಜ್ವರ ಬಂದಿರಬೇಕೆಂದು ಕೊಂಡು, ಆನಂದ ರವಿಯನ್ನು ಕರೆದುಕೊಂಡುಬಂದ.

ರವಿ ಅವಳನ್ನು ಪರೀಕ್ಷಿಸುತ್ತಿದ್ದಂತೆಯೇ ಬಡಬಡಿಸುತ್ತಿದ್ದಳು.

"ನನ್ನ ಮಗೂನ ಉಳಿಸ್ರಿ, ಎಲ್ಲಿಗೂ. ಕರ್‍ಕೊಂಡು ಹೋಗ್ಬೇಡಿ, ಅದಿಲ್ಲದೆ ನಾನಿರಲಾರೆ" ಮತ್ತೆ ರವಿ ಬಂದಿರುವುದನ್ನು ಗಮನಿಸಿ,

"ರವಿ ನನ್ನ ಮಗೂನಾ ಕಾಪಾಡೋದಿಲ್ವಾ?"

ಅವಳು ಅತಿ ದೈನ್ಯದಿಂದ ಯಾಚಿಸುತ್ತಿರುವುದನ್ನು ಕಂಡು ರವಿಗೆ ಕಣ್ಣಲ್ಲಿ ನೀರು ಬರುವಂತಾಯಿತು, ಹಾಗೇ ಅದನ್ನು ತಡೆದು,

"ಹೆದರ್‍ಬೇಡಿ ಸುನೀತ. ಏನೇನನ್ನೋ ಮನಸ್ಸಿಗೆ ಹಚ್ಕೊಂಡು ಬೇಜಾರು ಮಾಡ್ಕೊಳ್ತಿದೀರಿ. ಟೈಂ ಬಂದಾಗ ಯಾವ ತೊಂದರೆ ಇಲ್ಲದೆ ಮಗೂನ ಪಡೆಯ್ತೀರಿ. ನಿಶ್ಚಿಂತೆಯಿಂದಿರಿ" ಅಭಯವಿತ್ತ ರವಿ.

"ಖಂಡಿತ ಉಳಿಸ್ತೀರಾ? ನನ್ನ ಪಾಲಿನ ದೇವರು ನೀವು!"

"ಖಂಡಿತ ಉಳಿಸ್ತೀನಿ. ನನ್ನ ಮಾತನ್ನು ನಂಬಿ."

ರವಿಯ ಆಶ್ವಾಸನೆಯಿಂದ ಸ್ವಲ್ಪ ಧೈರ್ಯ ಬಂದಿತು ಅವಳಿಗೆ.

ವಿಮಲ ಒಂದೆರಡು ಬಾರಿ ಬಂದು, ಸುನೀತಗೆ ಧೈರ್ಯ ಹೇಳಿ ಹೋದಳು. ಸುನೀತಗೆ ಬಂದ ಜ್ವರ, ಮೂರು ನಾಲ್ಕು ದಿನಗಳೆನ್ನುವ ವೇಳೆಗೆ ಇಳಿದು ಹೋಯಿತು. ಮೊದಲಿನಂತಾದಳು.

ರವಿ ಈಗ ಆಸ್ಪತ್ರೆ ಡ್ಯೂಟಿ ಮುಗಿದ ಕೂಡಲೇ ಹೆಚ್ಚು ಹೊತ್ತು ನಿಲ್ಲದೆ ಮನೆಗೆ ಬಂದು ಬಿಡುತ್ತಿದ್ದ. ಮಗು ದೃಢವಾಗಿ ಬೆಳೆಯಲೆಂದು ವಿಮಲೆಗೆ ಹಣ್ಣು ಹಂಪಲು ಟಾನಿಕ್ ಇವನ್ನು ತಂದುಕೊಟ್ಟು ಬಲವಂತ ಪಡಿಸುತ್ತಿದ್ದ. ಸುನಿತಗೂ ತೆಗೆದುಕೊಳ್ಳಲು ಹೇಳುತ್ತಿದ್ದ.

ಸುನೀತೆಯೇನೋ ತೆಗೆದು ಕೊಳ್ಳುತ್ತಿದ್ದಳು. ಆದರೆ ವಿಮಲೆಗೆ ಸೇರುತ್ತಿರಲಿಲ್ಲ. ರವಿಯ ಬಲವಂತಕ್ಕಾಗಿ ಅವಳು ಒಮ್ಮೊಮ್ಮೆ ತೆಗೆದುಕೊಳ್ಳುತ್ತಿದ್ದಳು.

ಹಾಗೆ ಅವನು ಬಲವಂತ ಪಡಿಸಿದಾಗಲೆಲ್ಲಾ ಹೇಳುತ್ತಿದ್ದ.

"ಹೊಟ್ಟೇಲಿ ಮಗು, ಶಿಕ್ಕಾಪಟ್ಟೆ ಬೆಳೆದ್ರೆ, ತೊಂದ್ರೆ ಆಗುತ್ತಂತಲ್ಲಾ!" ರಾಗವೆಳೆಯುತ್ತಿದ್ದಳು ವಿಮಲ.

"ಅದೆಲ್ಲಾ ಸುಳ್ಳು. ಪುಷ್ಟಿಕರವಾದ ಆಹಾರ ತೆಗೆದುಕೊಳ್ಳದೆ, ಅರೆ ಹೊಟ್ಟೆಗೆ ಉಂಡು ನಿಶ್ಶಕ್ತ ಮಕ್ಕಳನ್ನು ಹೆತ್ತರೆ ಪ್ರಯೋಜನವೇನು ಹೇಳು?" ಎನ್ನುತ್ತಿದ್ದ ರವಿ.

–೫–

ಒಂದುದಿನ ಆನಂದ, ಆಫೀಸಿನಿಂದ ಬಂದಾಗ ಎಂದಿನಂತೆ ಉಲ್ಲಾಸದಿಂದಿರಲಿಲ್ಲ. ಏನು ಚಿಂತೆಯೋ? ಯಾಕೆ ಹೀಗಿದ್ದಾರೋ ಎನ್ನುವುದು ತಿಳಿಯಲಿಲ್ಲ ಸುನೀತಗೆ.

ಎಂದಿನಂತೆ ಅವನ ಕೋಟಿಗೆ ಕೈ ಹಾಕಿ, ಮೃದುವಾಗಿ "ಯಾಕೆ? ಒಂದು ಥರಾ ಇದೀರಲ್ಲಾ" ಕೇಳಿದಳು.

ಹೇಳಲೋ ಬೇಡವೋ, ಒಂದು ಕ್ಷಣ ಯೋಚಿಸುವಂತಾಯಿತು ಆನಂದನಿಗೆ. ನಂತರ ಹೇಳಿದ.

"ಇವತ್ತು ಒಂದು ಸಮಾಚಾರ ತಿಳಿಯ್ತು ಸುನಿ. ಅದನ್ನ ಕೇಳಿದ್ರೆ ನಿನ್ನ ಮನಸ್ಸಿಗೆ ಸಂತೋಷವಾಗುವ ಬದಲು, ಬೇಸರವೇ ಆಗ ಬಹುದು ಅಂದ್ಕೊಂಡಿದೀನಿ. ಅದ್ರಿಂದ ನೀನು ಕೇಳೋದೂಬೇಡ ನಾನು ಹೇಳೋದೂ ಬೇಡಾನ್ನಿಸುತ್ತೆ."

"ನಿಮಗೆ ಒಳ್ಳೆಯದೇನಾದ್ರೂ ಆಗೋದಿದ್ರೆ, ನನಗೂ ಸಂತೋಷ ಬೇಸರ ಯಾಕಾದೀತು?"

"ಅದೆ. ಹಿಂದೆ ನಾನೆ ಅಂದ್ಕೊಂತಿದ್ನಲ್ಲಾ, ಫಾರಿನ್ ಸ್ಕಾಲರ್‌ಶಿಪ್‌ಗೆ ಹಾಕ್ಕೊಂಡಿದ್ನಲ್ಲಾ..."

"ಹೂಂ... ಹೂಂ... ಬಂದಿದೆಯೇನು ಈಗ?"

"ಹೂಂ. ಹೋಗಬೇಕಾಗಿ ಬರುತ್ತೆ. ಆದ್ರೆ ಸ್ಕಾಲರ್‌ಶಿಪ್‌ನಿಂದ ಅಲ್ಲ, ಡಿಪಾರ್ಟ್‌ಮೆಂಟ್‌ನಿಂದ ಕಳಿಸ್ತಾರೆ."

"ಹೌದಾ? ಎಷ್ಟು ತಿಂಗಳು?"

"ತಿಂಗಳಲ್ಲ.. ವರ್ಷಗಳು... ಎರಡು ಮೂರು ವರ್ಷಗಳಾಗ ಬಹುದು."

"ಅಷ್ಟು ದಿವಸಾ!" ಸುನೀತಳ ಉತ್ಸಾಹ ಜರ್ರನೆ ಇಳಿದು ಹೋಯಿತು. ಎಲ್ಲೋ ಮೂರು ನಾಲ್ಕು ತಿಂಗಳುಗಳಿರಬಹುದೆಂದುಕೊಂಡಿದ್ದಳು, ಅವಳು ಯೋಚನೆಗೊಳಗಾದಳು.

ಅವಳ ಮನಸ್ಸಿನ ಭಾವವನ್ನರಿತ ಆನಂದ, ಹೇಳಿದ.

"ನಾನು ಹೋಗೊಲ್ಲ ಸುನಿ. ರಿಜೆಕ್ಟ್ ಮಾಡಿಬಿಡ್ತೀನಿ."

"ಹೋಗೊಲ್ವೆ?" ಉದ್ಗರಿಸಿದಳು ಸುನೀತ. ಹಿಂದೆ, ಅವನು ಪರದೇಶಕ್ಕೆ ಹೋಗಿ ಹೆಚ್ಚಿನ ಶಿಕ್ಷಣ ಪಡೆದು ಬರಲೆಂದು ಎಷ್ಟೆಲ್ಲಾ ಆಸೆಯಿತ್ತು ಅವಳಿಗೆ. ಅವಳೇ ಬಲವಂತ ಮಾಡಿ, ಸ್ಕಾಲರ್‌ಷಿಪ್‌ಗೆ ಹಾಕಿಕೊಳ್ಳುವಂತೆ ಒತ್ತಾಯಮಾಡಿದ್ದಳು. ಆದರೆ ಆನಂದನಿಗೆ ಅವಕಾಶ ಸಿಕ್ಕದೆ ಹೋಗಿತ್ತು. ಈಗ ಸಿಕ್ಕಿರುವುದು ಆಗ ಸಿಕ್ಕಿದ್ದರೆ! ಎನ್ನಿಸಿತು. ಮರುಕ್ಷಣ ತನ್ನದು ಹೇಗೋ ಆಗುತ್ತದೆ. ಅವರು ಹೋಗಿ ಬರಲಿ. ಅವರು ಉತ್ತಮ ಸ್ಥಾನಕ್ಕೆ ಬಂದರೆ ತನಗೂ ಸಂತೋಷವೆ ಅಲ್ಲವೆ ಎಂದುಕೊಂಡು,

"ಬೇಡಿ ರಿಜೆಕ್ಟ್ ಮಾಡ್ಬೇಡಿ. ಹೋಗ್ಬನ್ನಿ."

"ಇಲ್ಲ ಸುನಿ. ನಿನ್ನನ್ನು ಈ ಸ್ಥಿತಿಯಲ್ಲಿ ಬಿಟ್ಟು ಹೋಗೋದಾದ್ರೂ ಹೇಗೆ? ಮನೆಯಲ್ಲಿ ಬೇರೆ ಯಾರಾದ್ರೂ ಇದ್ದಿದ್ರೆ ಯೋಚೆ ಮಾಡಬೇಕಾಗಿರಲಿಲ್ಲ"

"ಅದಕ್ಕೆ ಯೋಚ್ನೆ ಯಾಕೆ? ವಿಮಲ ಸದ್ಯಕ್ಕೆ ತವರು ಮನೆಗೆ ಹೋಗಲ್ವಂತೆ. ಇಲ್ಲೇ ಇರ್ತಾಳೆ. ವಿಮಲ, ರವಿ ಇದ್ಮೇಲೆ ನನಗೆ ಹೆದ್ರಿಕೆ ಇನ್ನೇನು?"

ಅವಳು ಧೈರ್ಯದಿಂದಿರುವುದನ್ನು ನೋಡಿ, ಆನಂದನ ಯೋಚನೆ ಸ್ವಲ್ಪ ಮಟ್ಟಿಗೆ ಕಡಿಮೆಯಾಯಿತು.

ಸಂಜೆ ರವಿಯ ಹತ್ತಿರ ಹೋಗಿ, ತನ್ನನ್ನು ವಿಲಾಯಿತಿಗೆ ಕಳುಹಿಸಲಿರುವ ವಿಷಯವನ್ನು ತಿಳಿಸುತ್ತಾ ಹೇಳಿದ.

"ಏನ್ಮಾಡೋದು ರವಿ ಬಿಸಿ ತುಪ್ಪ ನುಂಗೋದಕ್ಕೆ ಆಗೊಲ್ಲ, ಉಗುಳೋದಕ್ಕೂ ಆಗೊಲ್ಲ ಅನ್ನೋ ಹಾಗಾಗಿದೆ ಏನ್ಮಾಡಲಿ?"

"ವೈ ಡು ಯು ವರಿ ಆನಂದ್? ಸುನೀತಾನ ನಾವು ನೋಡ್ಕೊಂಡಿರಲಾರೆವೆ? ಅವರ ವಿಷಯವಾಗಿ ಸ್ವಲ್ಪವೂ ಯೋಚ್ನೆ ಬೇಡ. ಬಂದಿರೋ ಛಾನ್ಸ್‌ನ ಬಿಡೋದು ಯಾವ ಬುದ್ಧಿವಂತಿಕೆ ಹೇಳು? ನಿನಗೆ ಸಿಕ್ಕ ಹಾಗೇ ನನಗೇನಾದ್ರೂ ಅವಕಾಶ ಸಿಕ್ಕಿದ್ದರೆ, ತಕ್ಷಣ ಅಲ್ಲಿಗೆ ಹಾರಿಕೊಂಡೇ ಹೋಗಿಬಿಡ್ತಿದ್ದೆ"

"ನಿಜ ರವಿ. ಅಲ್ಲಿ ಅನುಭವ ಪಡೆದು ಬಂದ್ರೆ, ಅಧಿಕಾರ ಪುರಸ್ಕಾರ, ಸಂಪತ್ತು, ಗೌರವ, ಎಲ್ಲವೂ ಸಿಕ್ಕುತ್ತೆ. ಈ ಅವಕಾಶವನ್ನು ಕಾಲಿನಿಂದ ಒದೆಯೋದು ದಡ್ಡತನವೇ ಅನಿಸುತ್ತೆ. "ಸ್ವಲ್ಪ ದಿನಗಳ ಮೇಲೆ, ಸುನಿತಳನ್ನೂ ಅಲ್ಲಿಗೇ ಕರೆಸ್ಕೊಂಡ್ರೂ ಆಯ್ತು ಎಂದು ನಿರ್ಧರಿಸಿದ ರವಿ.

ಆದರೂ ಏನೋ ಅನುಮಾನಿಸುತ್ತಾ,

"ರವಿ... ಈ ಟೈಂನಲಿ ಅವಳ ವಿಷಯವಾಗಿ ತುಂಬಾ ಎಚ್ಚರಿಕೆಯಿಂದಿರ್ಬೇಕು. ತನ್ನ ಸಂತಾನವನು ಕಾಣುವ ಹಂಬಲ ಬೆಟ್ಟದಷ್ಟಿದೆ ಅವಳಿಗೆ ಅನ್ನೋದು ನಿನಗೆ ತಿಳಿದೇ ಇದೆ. ಏನಾದ್ರೂ ಸ್ವಲ್ಪ ಹೆಚ್ಚು ಕಡಿಮೆಯಾದ್ರೆ, ಅವಳು ಉಳಿಯೋದೆ ಇಲ್ಲಾನ್ನಿಸುತ್ತೆ. ಬಹಳ ದಿನಗಳ ಮೇಲೆ ಅವಳಿಗೆ ದೊರಕುವ ಫಲವನ್ನು ಕಾಪಾಡೋದು ನಿನ್ನ ಭಾರ ರವಿ. ನಿನಗಿಂತಲೂ ಆತ್ಮೀಯರು ನನಗೆ ಯಾರೂ ಇಲ್ಲ."

ರವಿಯ ಕೈಗಳನ್ನು ತನ್ನೆರಡೂ ಕೈಗಳಲ್ಲಿ ಹಿಡಿದು ಹೇಳಿದ. ಆನಂದ,

"ಆ ಯೋಚ್ನೆ ಬಿಟ್ಟು ಬಿಡು ಆನಂದ್. ನೀನು ಹಿಂತಿರುಗೋ ವೇಳೆಗೆ, ನಿನ್ನ ಮಗನೋ... ಮಗಳೊ ಮುದ್ದು ಮುದ್ದಾಗಿ ಮಾತಾಡಿ, ನಿನ್ನ ಮನಸ್ಸಂತೋಷಪಡಿಸುತ್ತೆ. ಸಂಪೂರ್ಣ ಜವಾಬ್ದಾರಿ ನನ್ನ ಮೇಲಿರಲಿ."

ಗೆಳೆಯನ ಭರವಸೆಯ ನುಡಿಗಳನ್ನು ಕೇಳಿ ನಿಶ್ಚಿಂತನಾದ ಆನಂದ. ಅವನು ಹೊರಡುವ ನಿಶ್ಚಯವನ್ನು ಮಾಡಿದ.

ಆನಂದ ಹೊರಡಲಿರುವ ಹಿಂದಿನ ದಿನ ರಾತ್ರೆಯಂತೂ, ಸುನೀತಗೆ ನಿದ್ರೆಯೇ ಇಲ್ಲ. ಮಾತಾಡುವುದರಲ್ಲೇ ರಾತ್ರೆ ಕಳೆಯಿತು.

## ಕಾಡಿಗಟ್ಟಿದ ಕಾರಣ



ಸೀತೆಯನು ಕಾಡಿನಲಿ ಬಿಟ್ಟನೇತಕೆ
ರಾಮಂ?
ಎಂಬ ಪ್ರಶ್ನೆಗೆ ತಲೆಯ ತುರಿಸಿದನು
ಶಾಮಂ
ಅಂಜದಿರು ಎಂದೆನಲು ಹೇಳಿದನು
ಎಂದು
"ಕುಟುಂಬ ಯೋಜನೆಯನ್ನನು-
ಸರಿಸಲೆಂದು!

**ಶಂ. ಗು. ಬಿರಾದಾರ**

ಮರುದಿನ ಅವನು ಹೊರಟು ನಿಂತಾಗ, ಗಂಟಲು ಕಟ್ಟಿ ಮಾತೇ ಹೊರಡದಾಯಿತು ಅವಳಿಗೆ. ಈಗ ವಳು ಬೆಂಗಳೂರಿನವರೆಗೋ. ಬೊಂಬಾಯಿಯವರೆಗೋ ಹೋಗಿ. ಪತಿಯನ್ನು ಬಿಟ್ಟು ಬರುವಂತಿರಲಿಲ್ಲ. ವಿಮಲ ಸುನಿತರನ್ನು ಬಿಟ್ಟು ರವಿಯೂ ಹೋಗುವಂತಿರಲಿಲ್ಲ. ಎಲ್ಲರೂ ಇಲ್ಲಿಂದಲೇ ಸುಖ ಪ್ರಯಾಣವನ್ನು ಕೋರಿ ಬೀಳ್ಕೊಟ್ಟರು.

೨

ಜರ್ಮನಿಯನ್ನು ತಲುಪಿದ ಎರಡುಮೂರು ದಿನಗಳಲ್ಲಿಯೇ ಆನಂದ ಪತ್ರ ಬರೆದು ಹಾಕಿದ,

ತಾನು ಸುಖವಾಗಿ ತಲುಪಿದೆನೆಂದಾಗಿಯೂ. ಆರೋಗ್ಯವನ್ನು ಸರಿಯಾಗಿ ನೋಡಿಕೋ ಎಂದು ಬರೆದಿದ್ದ. ಪತ್ರವನ್ನೋದಿದ ಸುನಿತ

ಸದ್ಯ. ಅವರು ಸುಖವಾಗಿ ಸೇರಿದರಲ್ಲ. ಅದೇ ರೀತಿ ಸುಖವಾಗಿ ಹಿಂತಿರುಗಿದರೆ ಸಾಕೆಂದು, ಮನಸ್ಸಿನಲ್ಲೇ ದೇವರನ್ನು ಬೇಡಿಕೊಂಡಳು.

ರವಿಗೂ ಒಂದು ಪತ್ರ ಬಂದಿತು.

ಈಗ ನೀನಿರುವ ಮನೆ ಬಹಳ ಚಿಕ್ಕದು. ಸಾಧ್ಯವಾದರೆ ನೀನೂ ವಿಮಲ ಸುನಿತ ಒಟ್ಟಿಗೆ ಇರಿ. ಅಲ್ಲಿ ಎಲ್ಲದಕ್ಕೂ ಅನುಕೂಲವಿದೆ. ಮನೆಯೂ ಸಾಕಷ್ಟು ವಿಶಾಲವಾಗಿದೆ ಎಂದು ತಿಳಿಸಿದ್ದನು.

ಆನಂದನ ಸ್ಥಳಕ್ಕೆ ಬಂದವರು. ಸಂಸಾರವನ್ನು ಕರೆದುಕೊಂಡು ಬಂದಿರಲಿಲ್ಲ. ಅವರು ಆಫೀಸಿಗೆ ಸೇರಿದ ಒಂದು ಕೊಠಡಿಯಲ್ಲಿರಲು ನಿರ್ಧರಿಸಿದ್ದರು. ಆದುದರಿಂದ ಸುನೀತಗೆ ಮನೆಯನ್ನು ಖಾಲಿ ಮಾಡುವ ಪ್ರಮೇಯವೇ ಇರಲಿಲ್ಲ. ನಾವಿಲ್ಲಿ ಹೇಗೋ ಅನುಕೂಲ ಮಾಡಿಕೊಳ್ಳುತ್ತೇನೆ. ಮನೆಯ ಯೋಚನೆಯನ್ನು ಬಿಟ್ಟು, ಅಭ್ಯಾಸದ ಕಡೆ ಹೆಚ್ಚಿನ ಗಮನ ಕೊಡು ಎಂಬುದಾಗಿ, ರವಿ ಉತ್ತರ ಬರೆದು ಹಾಕಿದ.

ಸುನೀತ ವಿಮಲ ಹಗಲೆಲ್ಲಾ ಒಟ್ಟಿಗೆ ಕಾಲ ಕಳೆಯುತ್ತಿದ್ದರು. ರಾತ್ರೆಯಲ್ಲಿ, ಆಸ್ಪತ್ರೆಯ ಆಯ ಒಬ್ಬಾಕೆ ಸುನಿತಳ ಜೊತೆಗಿರುತ್ತಿದ್ದಳು.

ಎರಡು ತಿಂಗಳು ನಿರಾಂತಂಕವಾಗಿ ಉರುಳಿದವು. ವಿಮಲೆಗಾಗಲೆ ಒಂಭತ್ತು ತಿಂಗಳು ತುಂಬುತ್ತಾ ಬಂದಿತ್ತು. ಚೊಚ್ಚಲು ಹೆರಿಗೆ ಸ್ವಲ್ಪ ತಡವೇ ಎನಿಸಿತು ರವಿಗೆ.

ಹತ್ತನೆಯ ತಿಂಗಳಲ್ಲಿ ಬೀಳುತ್ತಿದ್ದ ಹಾಗೆ ಒಂದು ದಿನ ನೋವು ಕಾಣಿಸಿಕೊಂಡಿತು ವಿಮಲೆಗೆ. ಆಂಬ್ಯುಲೆನ್ಸ್‌ನಲ್ಲಿ ಆಸ್ಪತ್ರೆಗೆ ಕರೆದೊಯ್ಯಲಾಯಿತು. ಮನೆಯಲ್ಲಿ ಅನುಕೂಲವಿದ್ದರೂ ಆಸ್ಪತ್ರೆಯೇ ಮೇಲೆನ್ನಿಸಿತ್ತು ರವಿಗೆ.

ನರ್ಸ್ ವಿಮಲೆಯನ್ನು ಪರೀಕ್ಷಿಸಿದಾಗ, ಹೆರಿಗೆ ನಾರ್ಮಲ್ಲಾಗಿ ಆಗಲಾರದೆಂದೆನ್ನಿಸಿತು. ತನ್ನ ಅನುಮಾನವನ್ನು ರವಿಯ ಮುಂದಿಟ್ಟಾಗ ರವಿ ಧಾವಿಸಿ 'ಲೇಬರ್' ರೂಮಿಗೆ ಬಂದು, ನೋವಿನಲ್ಲಿ, ಮುಳುಗಿದ ವಿಮಲೆಯನ್ನು ಪರೀಕ್ಷಿಸಿದ ಮೇಲೆ. ನರ್ಸ್ ಹೇಳಿದ ಮಾತು ನಿಜವೆನ್ನಿಸಿತು.

ತ್ವರಿತ ಗತಿಯಿಂದ ಆಪರೇಷನ್‌ಗೆ ಸಿದ್ಧತೆಯಾಯಿತು. ರವಿ... ಮೈ ತುಂಬಾ ಕಣ್ಣು ಮಾಡಿಕೊಂಡು. ಬಹಳ ಎಚ್ಚರಿಕೆಯಿಂದ ಶಸ್ತ್ರಗಳನ್ನು ಪ್ರಯೋಗಿಸತೊಡಗಿದ. ತನ್ನ ಕೈ ಚಳಕದಿಂದ ಪ್ರೇಮದ ಬಳ್ಳಿಯಲ್ಲರಳಿದ ಪುಷ್ಪವನ್ನು ರಕ್ಷಿಸಿಕೊಂಡ. ಆದರೆ ಪುಷ್ಪವನ್ನಿತ್ತ ಬಳ್ಳಿ 'ಇಲ್ಲ'ವಾಯಿತು.

ಪರಾಗ ಸೂಸುವ ಪುಷ್ಪವನ್ನಿತ್ತ ಸಸಿ ಕಮರಿ ಹೋಗಿತ್ತು.

ಅಯ್ಯೋ! ನಾನು ವೈದ್ಯನಾಗಿ ನನ್ನವಳನ್ನು ಉಳಿಸಿಕೊಳಲಾರದೆ ಹೋದೆನೆಂದು, ರವಿಯ ಹೃದಯ ರೋದಿಸಿತು.

ಒಮ್ಮೆ ಶಿವಮೊಗ್ಗಾಕೊ, ಭದ್ರಾವತಿಗೋ ಕರೆದುಕೊಂಡು ಹೋಗಿ ಲೇಡೀ ಡಾಕ್ಟರರಿಗೆ ತೋರಿಸಿಕೊಂಡು ಬಂದಿದ್ದರೆ ಚೆನ್ನಾಗಿರುತ್ತಿತ್ತೇನೊ ಎನ್ನಿಸಿತು. ಆದರೆ! ವಿಧಿಯ ಕೈವಾಡ. ತನ್ನ ಬುದ್ಧಿಗೂ ಮಂಕು ಬಡಿದಿತ್ತು, ಎಂದುಕೊಂಡು ವ್ಯಥೆಪಟ್ಟ.

ವಿಮಲೆ ಅವನಿಂದ. ಎಂದೆಂದಿಗೂ ದೂರವಾಗಿ ಹೋಗಿದ್ದಳು, ಪ್ರಶಾಂತ ವಾತಾವರಣದಲ್ಲಿ ಇದ

ಕ್ಕಿದ ಹಾಗೆ ಬರಸಿಡಿಲೆರಗುವಂತೆ, ಕ್ಷಣಮಾತ್ರದಲ್ಲಿ ಈ ದುರ್ಘಟನೆ ನಡೆದು ಹೋಗಿತ್ತು.

ಈ ಆಕಸ್ಮಿಕ ಅವನನ್ನು ಮೂಕವಿಸ್ಮಿತನನ್ನಾಗಿ ಮಾಡಿತ್ತು. ಮುಂದೇನೆಂದು ತಿಳಿಯದೆ ಶಿಲೆಯಂತೆ ನಿಂತಿದ್ದ.

ನರ್ಸ್ ಜೋಲು ಮೋರೆ ಹಾಕಿಕೊಂಡು ಒಂದು ಕಡೆ ನಿಂತಿದ್ದಳು.

"ಡಾಕ್ಟರ್... ಡಾಕ್ಟರ್." ಇದ್ದಕ್ಕಿದ್ದಂತೆ ಬಾಗಿಲನು ಯಾರೋ ತಟ್ಟಿದರು. ದನಿಯಲ್ಲಿ ಗಾಬರಿ ತುಂಬಿತ್ತು.

ರವಿ ತಕ್ಷಣ ದುಃಖದಾಳದಿಂದ ಎಚ್ಚೆತ್ತು ಮೆಲ್ಲಗೆ ಬಾಗಿಲು ತೆಗೆದುಕೊಂಡು ಹೊರಗೆ ಬಂದ. ಸುನಿತಳ ಜೊತೆಯಲಿ ಮಲಗುತ್ತಿದ್ದ ಆಯಾ ಪೆನಮ್ಮ ನಿಂತಿದ್ದಳು. ಅವಳ ಮುಖದಲ್ಲಿ ಗಾಬರಿ ತುಂಬಿತ್ತು.

"ಡಾಕ್ಟರೇ ಸರ್ರನೆ ಬರ್ರಿ. ಸುನಿತಮ್ಮಾವ್ರಿಗೆ ನೋವು ಶುರುವಾಗೆತೆ... ಇನ್ನೂ ದಿನ ತುಂಬಿರ್ಲಿಲ್ಲ. ಏನೋ... ಎತ್ತೋಂತ... ಓಡಿ ಬಂದೆ" ಎಂದಳು ಪೆನ್ನಮ್ಮ ಆತುರಾತುರದಿಂದ.

"ನೀನು ಹೋಗು. ಈಗ್ಲೆ ಬಂದೆ." ಎಂದು ರವಿ ಆಕೆಯನ್ನು ಕಳುಹಿಸಿ, ಲೇಬರ್ ರೂಮಿಗೆ ಮತ್ತೆ ಬಂದ.

ತನ್ನನ್ನು ನಗಿಸಿ, ನಲಿಸಿ, ಸಂತೋಷಪಡಿಸುತ್ತಿದ್ದ ಜೀವ ಪ್ರಶಾಂತವಾಗಿ ಮಲಗಿತ್ತು. ರವಿಯ ಕಣ್ಣಲ್ಲಿ ನೀರು ತುಂಬಿ ಬಂತು. ಅದನು ಬೆರಳಿಂದ ತೊಡೆದು, ಉಕ್ಕಿ ಬರುತ್ತಿದ್ದ ದುಃಖವನ್ನು ಹತ್ತಿಕ್ಕಿ,

"ಇಲ್ಲಿ ಯಾರನ್ನೂ ಬಿಟ್ಕೋಳೇಡ್ರಿ ಸಿಸ್ಟರ್ ಈಗ ಬಂದೆ." ಎಂದವನೆ, ಆಂಬ್ಯುಲೆನ್ ತೆಗೆಸಿಕೊಂಡು ಸುನೀತಳ ಮನೆಗೆ ಬಂದ.

ಪ್ರಸವ ವೇದನೆಯಿಂದ, ಸುನೀತಳ ಮುಖದಲ್ಲಿ ಬೆವರಿನ ಹನಿಗಳು ಸಾಲುಗಟ್ಟಿದವು. ಮೈಯೆಲ್ಲ ಕಾವೇರಿ, ಮುಖ ಕಪ್ಪಿಟ್ಟಿತ್ತು. ಇದಕ್ಕಿಂತಲೂ ಹೆಚ್ಚಾಗಿ ಗಾಬರಿಯಿಂದ ಕೂಡಿತ್ತು.

"ರವಿ... ಇನ್ನೂ ಏಳು ತಿಂಗಳು... ಏನಾಗುತ್ತೋ... ನನ ಮಗೂನ್ನ ಉಳಿಸ್ತೀರಿ ಅಲ್ವೆ?"

ಸಂಕೋಚಬಿಟ್ಟು ದಯನೀಯವಾಗಿ ಕೇಳಿದಳು ಸುನೀತ.

"ಹೆದರ್ಬೇಡಿ ಸುನೀತ... ಎಲ್ಲಾ ಸರಿಹೋಗುತ್ತೆ." ಎಂದು ರವಿ ಅವಳನು ಮೆಲ್ಲಗೆ ಎಬ್ಬಿಸಲು ಪೆನ್ನಮ್ಮನಿಗೆ ತಿಳಿಸಿದ. ಪೆನ್ನಮ್ಮ ಮೆಲ್ಲನೆ ಎಬ್ಬಿಸಿಕೊಂಡು ಬಂದು, ಸುನಿತಳನ್ನು ಆಂಬ್ಯುಲೆನ್ಸ್‌ನಲ್ಲಿ ಕುಳ್ಳಿರಿಸಿದಳು.

ಎರಡೇ ನಿಮಿಷಗಳಲ್ಲಿ ಆಸ್ಪತ್ರೆಯನ್ನು ತಲುಪಿದರು. ಸುನೀತಳನ್ನು ಲೇಬರ್ ವಾರ್ಡ್‌ಗೆ ಸ್ವಲ್ಪ ದೂರದಲ್ಲಿದ್ದ ಇನ್ನೊಂದು ರೂಮಿನಲ್ಲಿ ಮಲಗಿಸಲಾಯಿತು.

ರವಿ ಆಯಾಗೆ ಮನೆಗೆ ಹೋಗಲು ತಿಳಿಸಿ, ನರ್ಸ್‌ಳನ್ನು ಕರೆದ. ಆಯಾ ಹೋಗದೆ ಅಲ್ಲಿಯೇ ನಿಂತಿರುವುದನ್ನು ನೋಡಿ ಮತ್ತೆ

"ನಿದ್ದೆ ಕೆಟ್ಟಿರ್ಬೇಕು, ನೀನು ಹೋಗಿ ಮಲಕ್ಕೋ ಪೆನ್ನಮ್ಮ"

"ಪರವಾಯಿಲ್ಲ ಬಿಡಿ ಸ್ವಾಮೇರ್. ನರ್ಸಮ್ಮಾವರೊಬ್ರೆ ಹೆಂಗೆಮಾಡ್ತಾರೆ." ತಲೆ ಕೆರೆಯುತ್ತಾ ಅಂದಳು ಪೆನ್ನಮ್ಮ.

"ನೀನು ಹೋಗು. ಈಗ ಇನ್ನೊಬ್ಬ ಆಯಾ ಬರ್ತಾಳೆ, ಬೆಳಿಗ್ಗೆ ಬರುವೆಯಂತೆ."



ಡಾಕ್ಟರೇ ಬಲವಂತಮಾಡಿ ನಿಲಿಸ್ಕೊಳ್ಬೇಕಾಗಿತ್ತು. ಇಂಥಾದ್ರಲ್ಲಿ ಅವರೇ ಹೇಳಿದ್ಮೇಲೆ! ಕಣ್ಣಳೆಯತೊಡಗಿತ್ತು ಪೆನ್ನಮ್ಮನಿಗೆ. ನಮ್ಮವ ದೇವ್ರಂತಾ ಮನುಸರು, ಎಂದುಕೊಳ್ಳುತ್ತಾ ಹೊರಟಳು.

ಅಲ್ಲಿ ಯಾರನಿರಿಸಿಕೊಳ್ಳಲೂ ಇಷ್ಟವಾಗಲಿಲ್ಲ ರವಿಗೆ. ಉಳಿದ ಆಯಾಗಳನೂ ಕಳುಹಿಸಿ ಬಿಟ್ಟ. ಮತ್ತೆ ಅವನು ಸುನೀತಳಿದ್ದಲ್ಲಿಗೆ ಬಂದ. ಸುನೀತ ನೋವಿನಿಂದ ಒದ್ದಾಡುತ್ತಿದ್ದಳು.

ಪುನಃ ಅವನು ಲೇಬರ್ ವಾರ್ಡಿಗೆ ಬಂದು. ಸುನೀತಳ ಡೆಲಿವರಿಗಾಗಿ ಸಿದ್ಧತೆಗಳನ್ನು ಮಾಡಿಕೊಳ್ಳಲು ನರ್ಸ್‌ಗೆ ತಿಳಿಸಿದ. ಆಕೆ ಎಲ್ಲಾ ತಯಾರಿಯನು ಮಾಡಿಕೊಂಡು. ಹೊರಡುವಾಗ,

"ನೋಡಿ ನರ್ಸ್ ಮಗು ಉಳಿಯುತ್ತದೋ, ಹೊಟ್ಟೆಯೊಳಗೆ ಹೋಗಿರುತ್ತೋ ನಂಬಿಕೆಯಿಲ್ಲ. ಏನಾದರಾಗಲಿ, ಮೊದಲು ಆಕೆಗೆ ತಿಳಿಸದೆ. ಡೆಲಿವರಿಯಾದ ಕೂಡಲೆ ನನಗೆ ತಿಳಿಸಿ. ಮತ್ತೇನಾದ್ರೂ ಹೆಚ್ಚು ಕಡಿಮೆಯಾದರೆ ಕರೆಯಿರಿ, ಬೇಗೆ ಹೋಗಿ" ಎಂದು ಆಕೆಯನು ಕಳುಹಿಸಿ, ಬಾಗಿಲನು ಮುಂದೆ ಮಾಡಿದ.

ಇಷ್ಟೆಲ್ಲಾ ಮಾಡುವ ವೇಳೆಗೆ ಅವನ ಮೈಯೆಲ್ಲಾ ಬೆವರಿನಿಂದ ಮುದೆ ಮುದೆಯಾಗಿ, ತಲೆ ಸುತ್ತಿಕೊಂಡು ಬರುವಂತಾಗಿತ್ತು. ಎಲ್ಲಾ ಕೆಲವು ಗಳಿಗೆಗಳಲಿಯೇ ನಡೆದು ಹೋಗಿತ್ತು.

ರವಿ ಸುನೀತಳನು ಕರೆದುಕೊಂಡು ಬರುವ ಹೊತ್ತಿಗೆ ನರ್ಸ್ ಮಗುವನು ತೊಳೆದು, ಒರೆಸಿ. ಬೆಚ್ಚಗೆ ತೊಟ್ಟಿಲಲ್ಲಿ ಮಲಗಿಸಿದ್ದಳು. ಆ ಮಗು. ತಾನು ಜಗತ್ತಿಗೆ ಬರುತ್ತಿದ್ದಂತೆಯೇ ಮಾತೃವಿಹೀನಳಾಗಿರುವೆನೆಂದರಿಯದೆ ಶಾಂತವಾಗಿ ನಿದ್ರಿಸುತ್ತಿತ್ತು.

"ಡಾಕ್ಟರ್!" ನರ್ಸ್ ಮೆಲ್ಲನೆ ಹೊರಗಿನಿಂದ ಕೂಗಿದಳು.

ರವಿ ಎದ್ದು ಬಾಗಿಲು ತೆಗೆದ. ಆಕೆ ಒಳಗೆ ಬಂದಳು. ಕೈಯಲಿ ಬಟ್ಟೆಯೊಳಗೆ ಮುಚ್ಚಿದ ಮಗುವಿತ್ತು. ಅವನು ಬಾಗಿಲು ಹಾಕಿ, ಪ್ರಶ್ನಾರ್ಥಕವಾಗಿ ನರ್ಸ್ ಕಡೆ ನೋಡಿದ.

ನರ್ಸ್ ಬಟ್ಟೆಯಲ್ಲಿ ಸುತ್ತಿದ್ದ, ಕಪ್ಪಗೆ ಕಮರಿ ಹೋಗಿದ್ದ ಮಾಂಸದ ಮುದ್ದೆಯನ್ನು ಮುಂದೆ ಮಾಡಿದಳು.

"ನಾನು ಅಂದುಕೊಂಡ ಹಾಗೇ ಆಯಿತು. ಸುನೀತ ಹೇಗಿದ್ದಾರೆ?" ನಿಡುಸುಯ್ದು ಕೇಳಿದ ರವಿ.

"ಚೆನ್ನಾಗಿದಾರೆ ಸಾರ್. ಮಗು ಎಲ್ಲಿ? ತೋರ್ಸಿ. ಎಂಥಾ ಮಗು? ಅಂತ ಕೇಳಿದ್ರು. ನಾನು ಆಕೆಯ ಮಾತನು ಕೇಳಿಸಿಕೊಳ್ಳದವಳ ಹಾಗೆ ಈಗ ಬಂದು ಬಿಟ್ನಮ್ಮ ಇದನ್ನು ತೊಳೆಯಬೇಕು ಅಂತ ಹೇಳಿ ಬಂದು ಬಿಟ್ಟೆ. ಈಗ ಆಕೆಗೆ ಏನು ಹೇಳಲಿ ಡಾಕ್ಟರ್?"

ರವಿ ಒಂದು ಗಳಿಗೆ ಯೋಚಿಸುತ್ತಿದ್ದು ನಂತರ ಹೇಳಿದ.

"ನರ್ಸ್, ಆಕೆಗೆ ಮಕ್ಕಳೆಂದರೆ ಪ್ರಾಣ. ತನ್ನ ಮಗುವನ್ನು ಕಾಣುವ ಹಂಬಲವನ್ನಂತೂ ಹೇಳತೀರದು. ಒಂದು ವೇಳೆ ಆಕೆಗೆ ನಿಜ ಸ್ಥಿತಿ ತಿಳಿದರೆ ಪ್ರಾಣ ಬಿಟ್ಟಾಳು. ಇಲ್ಲವೆ ಹುಚ್ಚಿಯಾದಾಳು. ನಾನು ಆಕೆಯ ಮಗುವನ್ನು ಉಳಿಸೇ ಉಳಿಸುತ್ತೇನೆಂದು ತುಂಬಾ ಭರವಸೆಯನ್ನಿಟ್ಟುಕೊಂಡಿದ್ದಾಳೆ. ಆದರೆ ವಿಧಿಯ ಆಟದ ಮುಂದೆ ಯಾರದೂ ನಡೆಯುವುದಿಲ್ಲವೆಂದು ಬಹುಶಃ ಮಗುವನ್ನು ಕಾಣುವ ಹಂಬಲದಲ್ಲಿರುವ ಆಕೆ ಅದನ್ನು ತಿಳಿಯದೆ, ಈ ಡಾಕ್ಟರನ್ನೇ ನಂಬಿ ಕುಳಿತಿದ್ದಾಳೆ. ಹಾಗೇನಾದರೂ ಉಳಿಸುವ ಶಕ್ತಿಯಿದ್ದಿದ್ದರೆ ಇವಳನು ಕಳೆದುಕೊಳ್ಳುತ್ತಿದ್ದನೆ?" ಹಾಗನ್ನುತ್ತಿದ್ದಂತೆ ಮಡಿದ ಮಡದಿಯ ಕಡೆ ನೋಡಿ, ಗದ್ಗದಿತನಾದ ರವಿ.

**"ಹೌದು ಡಾಕ್ಟರ್: ಇದೇನೀ ವೈಚಿತ್ರ್ಯ. ಅಲ್ಲಿ ಮಗುವನ್ನು ಕಳೆದುಕೊಂಡ ತಾಯಿ!! ಇಲ್ಲಿ ತಾಯಿಯನ್ನು ಕಳೆದುಕೊಂಡ ಮಗು!"**

ನರ್ಸ್‌ಳ ಕಂಠವೂ ದುಃಖದಿಂದ ಗದ್ಗದಿತವಾಯಿತು.

ರವಿ ಇದ್ದಕ್ಕಿದ್ದಂತೆ ಆಕೆಯ ಎರಡು ಕೈಗಳನ್ನೂ ತನ್ನ ಕೈಗಳಲ್ಲಿ ಹಿಡಿದು

"ಪ್ಲೀಸ್ ಸಿಸ್ಟರ್. ಈ ಸೀಕ್ರೇಟ್‌ನ ಯಾರಿಗೂ ಬಿಟ್ಟು ಕೊಡಬೇಡಿ. ಪ್ರಾಮಿಸ್ ಮಾಡಿ ಹಾಗಂತ.

ಅಳಿದಿರುವ ಜೀವ ಮತ್ತೆ ಹಿಂತಿರುಗಲಾರದು. ಉಳಿದಿರುವ ಜೀವಗಳಾದರೂ ಸುಖದಿಂದಿರಲಿ. ತಾಯಿಗೆ ಮಗು! ಮಗುವಿಗೆ ತಾಯಿ! ಸರಿಯಲ್ಲವೆ?" ಕನಸಿನಲ್ಲಿರುವವನಂತೆ ಬಡ ಬಡಿಸಿದ ರವಿ.

"ಡಾಕ್ಟರ್ ಇದೇನಿದು? ಈ ಮಗೂನ ನೋಡ್ಕೊಂಡಾದ್ರೂ ನೀವು ಸಮಾಧಾನ ಪಟ್ಕೊಳ್ಳಬಹುದಿತ್ತು. ಇದನ್ನು...ಇಷ್ಟು ದೊಡ್ಡ ತ್ಯಾಗವೆ?"

ರವಿ ಏನನ್ನೂ ಹೇಳಲಿಲ್ಲ. ಶೂನ್ಯ ದೃಷ್ಟಿಯನ್ನು ಎತ್ತಲೋ ಹರಿಸಿದ್ದ.

"ಸರಿ ಡಾಕ್ಟರ್. ಈ ವಿಷಯಾನ ಯಾರಿಗೂ ತಿಳಿಸೋದಿಲ್ಲ. ನನ್ನ ಮೇಲೆ ನಂಬಿಕೆಯಿರಲಿ"

ಹೀಗೆ ಹೇಳಿ ಬಟ್ಟೆಯಲ್ಲಿ ಸುತ್ತಿ ತಂದಿದ್ದುದನ್ನು ಅಲ್ಲಿರಿಸಿ, ತೊಟ್ಟಿಲಲ್ಲಿ ಮಲಗಿದ್ದ ಮುದ್ದಾದ ಮಗುವನ್ನು ಎತ್ತಿಕೊಂಡಳು.

ನಿದ್ದೆಗೆ ತೊಂದರೆಯಾಯಿತು ಎಂತಲೋ, ಅಥವ ಬೆಚ್ಚನ್ನ ಆಸರೆ ತಪ್ಪಿ ಹೋಯಿತೆಂತಲೋ. ಮಗು ಅಳುವುದಕ್ಕೆ ಮೊದಲು ಮಾಡಿತು. ನರ್ಸ್ ಬೇಗ ಬೇಗನೆ ಹೆಜ್ಜೆ ಹಾಕಿಕೊಂಡು ಸುನೀತಳಿದ್ದ ಕೊಠಡಿಗೆ ಬಂದಳು.

ಮಗುವಿನ ಅಳು ಸುನೀತಳ ಕೊಠಡಿಯಲ್ಲೆಲ್ಲಾ ತುಂಬಿ ಹೋಯಿತು ಕಂದನ ಪ್ರಥಮ ಕ್ರಂದನವನ್ನು ಕೇಳಿ, ಸುನೀತಳ ಹೃದಯದಲ್ಲಿ ಆನಂದದ ತೆರೆಗಳೆದ್ದವು. ಕಣ್ಣು ಪಕ್ಕಕ್ಕೆ ಹೊರಳಿತು.

ತನ್ನ ಮುದ್ದು ಮಗುವಿನ ಮೊದಲನೆಯ ದರ್ಶನ!

ಕಣ್ಣಿಂದ ಆನಂದಬಾಷ್ಪಗಳು ಒಂದೊಂದಾಗಿ ಇಳಿಯತೊಡಗಿದವು.

ಅವಳು ಕಟ್ಟಿದ್ದ ಹೊಂಗನಸು ಇಂದು ನನಸಾಗಿತ್ತು!

ಅಂತರಾಳದ ಆಶೆ ಫಲಿಸಿತ್ತು.

ಹಿಂಜಿದ ಅರಳೆಯಂತೆ ಮೃದುವಾದ ಆ ಪುಟ್ಟ ದೇಹವನ್ನು ಸವರಿದಾಗ ಅವಳಿಗಾದ ಆನಂದ ಅಷ್ಟಿಷ್ಟಲ್ಲ.

ಬಂಜೆಯೆಂಬ ಕಳಂಕ ಹರಿಯಿತು. ಇಂದು ತಾನೊಬ್ಬ ಮಗುವಿನ ತಾಯಿ ಎಂದುಕೊಂಡಾಗ ಅವಳ ಎದೆಯುಬ್ಬಿ, ತುಟಿಗಳಲ್ಲಿ ಮಂದಸ್ಮಿತ ಮೂಡಿತು.

ಸುನೀತಳಿಗೆ ಈಗ ವಿಮಲೆಯ ಯೋಚನೆ ಬಂತು. ಸರಿ, ರವಿ ಯಾಕೆ ಬರಲಿಲ್ಲಾನ್ನೋದು ಈಗ ಹೊಳೆಯ್ತು. ಪಾಪ, ವಿಮಲ ತುಂಬಿದ ಬಸುರಿ, ಈ ಹೊತ್ತಿನಲ್ಲಿ ಮನೆಯಲ್ಲಿ ಅವಳೊಬ್ಬಳನ್ನೇ ಬಿಟ್ಟು ರವಿ ಇಲ್ಲಿ ಹೇಗಿದ್ದಾನು? ಬೆಳಗಾದ್ಮೇಲೆ ಬಂದೇ ಬರ್‍ತಾರಲ್ಲಾ! ಎಂದುಕೊಳ್ಳುತ್ತಿದ್ದಂತೆ ಹಾಗೇ ಕಣ್ಣು ಮುಚ್ಚಿಕೊಂಡು ಬಂದು ನಿದ್ದೆಯಾವರಿಸಿತು.

ರವಿ ಆಗಲೆ ಮಡದಿಯ ಕಳೇಬರವನ್ನು ಮನೆಗೊಯ್ಯುವ ಏರ್ಪಾಟು ಮಾಡಿದ್ದ. ಈಗಾಗಲೇ ಆಯಾಗಳಿಗೆ ನರ್ಸ್‌ಗಳಿಗೆ ವಿಮಲೆ ತೀರಿ ಹೋದ ವಿಷಯ ತಿಳಿದು ಹೋಗಿತ್ತು. ಈ ಚಿಕ ವಯಸ್ಸಿನಲ್ಲೇ ತಮ್ಮ ಡಾಕ್ಟರ್‌ಗೆ ಪತ್ನೀವಿಯೋಗ ಉಂಟಾಯಿತೆಂದು ಅವರೆಲ್ಲಾ ದುಃಖಿತರಾಗಿದ್ದರು. ಮುಂದೇನು ಕೆಲಸಮಾಡಬೇಕೆಂಬ ವಿಷಯ ತಿಳಿಯದೆ ಮಂಕಾಗಿ ಕುಳಿತಿದ್ದರು.

ಹೆಚ್ಚು ಸದ್ದು ಗದ್ದಲ ಮಾಡದೆ ವಿಮಲೆಯ ಕಳೇಬರವನ್ನು ಮನೆಗೆ ಸಾಗಿಸಿಯಾಯಿತು. ಅದೇ ಬೆಳಗಿನ ಝಾವ ರವಿ ವಿಮಲೆಯ ತವರಿಗೆ ಟ್ರಂಕ್ ಕಾಲ್ ಮಾಡಿದ.

ಸುಮಾರು ಒಂಬತ್ತು ಗಂಟೆಗೆಲ್ಲಾ ವಿಮಲೆಯ ತಾಯಿ ಅಣ್ಣ ಮತ್ತು ಒಬ್ಬ ತಮ್ಮ ಬಂದಿಳಿದರು. ಮೊಮ್ಮಗನನ್ನೋ ಮೊಮ್ಮಗಳನ್ನೋ ನೋಡಿ ನಲಿಯಬೇಕಾಗಿದ್ದ ವಿಮಲೆಯ ತಾಯಿಗೆ ಮಗಳ ಹೆಣ ನೋಡುವ ದೌರ್ಭಾಗ್ಯ ಒದಗಿತ್ತು. ಹೆತ್ತ ಕರುಳಿ ಅದೆಷ್ಟು ಚುರುಗುಟ್ಟಿತೋ ಯಾರು ಎಷ್ಟು ಸಮಾಧಾನ ಮಾಡಿದರೂ ಆಕೆಯ ದುಃಖ ನಿಲ್ಲದು. ಆಕೆಗೆ ಪತಿಯ ಮರಣದ ನಂತರ ಇದು ಎರಡನೆಯ ಆಘಾತವಾಗಿತ್ತು.

ಕರ್ಮವನ್ನು ಮುಗಿಸಿಕೊಂಡು ಬಂದವರು ಭಾರವಾದ ಹೃದಯಗಳನ್ನು ಹೊತ್ತು ಮರಳಿದರು.

ಮರುದಿನ ರವಿ ಆಸ್ಪತ್ರೆಗೆ ಹೋಗಿ ಸುನೀತಳನ್ನು ನೋಡಿದಾಗ ಅವಳೇ ಮೊದಲು ಮಾತನಾಡಿಸುತ್ತಾ,

"ಯಾವಾಗ ಬರ್‍ತೀರೋಂತ ನಿಮಗಾಗೇ ಕಾದಿದ್ದೆ ರವಿ. ಯಾಕೋ ಒಂದು ಥರಾ ಇದೀರಲ್ಲ, ರಾತ್ರೆ ನಿದ್ದೆ ಮಾಡಿದ ಹಾಗೇ ಇಲ್ಲಾಂತ ಕಾಣುತ್ತೆ."

ರವಿಯ ಇಳಿದು ಹೋಗಿದ್ದ ಮುಖ, ಗುಳಿಬಿದ್ದಿದ್ದ ಕಣ್ಣುಗಳನ್ನು ನೋಡಿ ಹಾಗಂದಳು.

ರವಿ ಅದಕ್ಕೆ ಏನೂ ಹೇಳಲಿಲ್ಲ.

"ಮಗು ಆರೋಗ್ಯವಾಗಿದೆಯೆ ಸುನಿತ? ನೀವು?" ಎಂದು ವಿಚಾರಿಸಿದ.

"ಎಲ್ಲಾ ನಿಮ್ಮ ದಯದಿಂದ ಆರೋಗ್ಯ ರವಿ. ಅಲ್ಲಾ ಏಳು ತಿಂಗ್ಳಲ್ಲಿ ಹುಟ್ಟಿದ ಮಕ್ಕಳು ತುಂಬಾ ಸೊಣಕಲಾಗಿರ್‍ತವೇಂತ ಹೇಳ್ತಾರೆ. ಇವಳ ನೋಡಿದ್ರೆ ಹಾಗನಿಸ್ತದೆಯೆ ? ನೋಡಿ ವಿಮಲನಿಗೇ ಮುಂಚೆ ಆಗ್ಬೇಕಾಗಿತ್ತು, ಈ ಗಯ್ಯಾಳಿಗೆ ಪ್ರಪಂಚಕ್ಕೆ ಬೇಗ್ನೆ ಬರ್ಬೇಕೂಂತ ಆಶೆಯಾಯ್ತೇನೊ" ಎಂದು ಸುನಿತ ಮಗಳ ಕಡೆ ಹೆಮ್ಮೆಯಿಂದ ನೋಡಿದಳು.

"ಎಲ್ಲಾ ದೇವರ ಇಷ್ಟ ಸುನೀತ. ನಾವು ಅಂದ್ಕೊಂಡ ಹಾಗೆ ಎಲ್ಲಾ ಎಲ್ಲಿ ನಡೆಯುತ್ತೆ?" ಮಗುವಿನ ಕಡೆ ನೋಡುತ್ತಾ ಅಂದ ರವಿ.

ಮಗು, ತನ್ನ ಪುಟ್ಟ ಕಣ್ಣುಗಳನ್ನು ಬಿಡಲೋ ಬೇಡವೊ ಎನು ವಂತೆ ತೆರೆಯುತ್ತಾ, ಅಂಗೈ ಮುಷ್ಟಿಗಳನ್ನು ಕಿವಿಗಳ ಹತ್ತಿರವಿಟ್ಟುಕೊಂಡು, ತಾಯಿಯ ಪಕ್ಕದಲ್ಲಿ ಮುದ್ದಾಗಿ ಮಲಗಿತ್ತು.

ವಿಮಲೆಯ ಪಕ್ಕದಲ್ಲಿ ಹೀಗೆ ಮಲಗಿದ್ದಿದ್ದರೆ! ಎತ್ತಿಕೊಂಡು ಪ್ರೀತಿಯಿಂದ ಮುದ್ದಾಡಬಹುದಾಗಿತ್ತು. ಹೀಗೆಂದುಕೊಳ್ಳುತ್ತಿದ್ದಂತೆ ರವಿಯ ಕಣ್ಣು ಹನಿಗೂಡಿತು. ಸುನೀತ ಎಲ್ಲಿ ಗುರುತಿಸುವಳೋ ಎಂದುಕೊಂಡು ಪಕ್ಕಕ್ಕೆ ತಿರುಗಿ,

"ಬರ್‍ತೀನಿ ಸುನೀತ, ಅರ್ಜೆಂಟ್ ಕೇಸು ಬಂದಿದೆ, ಬೇಗೆ ಮಾತಾಡಿಸ್ಕೊಂಡು ಹೋಗೋಣಾಂತ ಬಂದೆ" ಎಂದು ಅಲ್ಲಿಂದ ಹೊರಬಿದ್ದ.

ನಾಲು ದಿನಗಳಾದರೂ ವಿಮಲ ತನ್ನನ್ನು ನೋಡಲು ಬರಲಿಲ್ಲ. ಈ ಅಕ್ಕನನ್ನು ಒಂದು ಗಳಿಗೇನೂ ಬಿಟ್ಟಿರ್‍ತಿರಲಿಲ್ಲವಲ್ಲ! ಪಾಪ ಹುಷಾರಿದೆಯೋ ಇಲ್ಲವೊ! ಬೆಳೆದ ಹೊಟ್ಟೇನ ಹೊತ್ಕೊಂಡು ಹೇಗೆ ಹೋಗೋದೂಂತ ನಾಚಿಕೇನೊ ಏನೊ...ಚೊಚ್ಚಲು ಹೆರಿಗೆ. ಆಸ್ಪತ್ರೇಂದ್ರೆ ಹೆದ್ರಿಕೆ ಇದ್ರೂ ಇರಬಹುದು. ತಾನಾದರೂ ಕಡಿಮೆ ಹೆದರಿದಳೆ? ಏನೊ ಎಂತೋಂತೆ ಜೀವ ಟುಕ ಟುಕಾಂತಿತ್ತು. ಏನೋ ದೇವರ ದಯೆಯಿತ್ತು. ಸುಖವಾಗಿ ಮೈ ಕಳಚಿತು. ವಿಮಲನಿಗೂ ಹೀಗೇ ಸುಖವಾಗಿ ಆದ್ರೆ ಎಷ್ಟು ಚೆನ್ನ!

ಇಬ್ಬರ ಮಕ್ಕಳದೂ ಫೋಟೋ ತೆಗೆಸಿ, ಜರ್ಮನಿಗೆ ಅವರಿಗೆ ಕಳಿಸ್ಬೇಕು, ತುಂಬಿಕೊಂಡು ಮುದ್ದು ಮುದ್ದಾಗಿರೋ ಮಕ್ಕಳ್ನ ನೋಡಿ ಅವರು ಎಷ್ಟು ಸಂತೋಷಪಟ್ಟಾರು ? !

ನಾಳೆ ರವಿ ಬಂದ್ರೆ ಅವರಿಗೆ ಪತ್ರ ಬರೆದಿರೋ ಇಲ್ಲವೊ ಕೇಳ್ಬೇಕು, ಮುಕ್ಕಾಲು ಪಾಲು ಬರೆದೇ

ಇರ್ತ್ತಾರೆ. ಒಂದ್ಸೇಳಿ ಕೆಲಸದ ಮೇಲೆ ಬಿದ್ದು ಮರೆತಿದ್ರೂ ಮರೆತಿದ್ರೆ!

ಸುನೀತಳ ವಿಚಾರ ಸರಣಿ ಹೀಗೇ ನಡೆಯುತ್ತಿದ್ದಾಗ ಮಗು ಕಿರ ಕಿರ ಎಂದಿತು. ಪಕ್ಕಕ್ಕೆ ಹೊರಳಿದಾಗ ಮಗು ಕೈಕಾಲು ಅಲುಗಾಡಿಸುತ್ತಾ ಅಳಲು ಮೊದಲು ಮಾಡಿತು. ದಾದಿಯನ್ನು ಕೂಗಿದಳು.

ಗ್ಲೂಕೋಸ್ ಬೆರೆಸಿದ ನೀರನ್ನು ತಂದ ದಾದಿ ಮಗುವಿಗೆ ಕುಡಿಸುತ್ತಾ,

"ನಾಳೆಯಿಂದ ಇದಕ್ಕೆ ನಿಮ್ಮ ಹಾಲು, ನಿಮಗೆ ಹಾಲು ಬೀಳುತ್ತೆ" ಎಂದಾಗ ಸುನೀತಳ ಮುಖದಲ್ಲಿ ತೃಪ್ತಿಯ ರೇಖೆ ಸುಳಿಯಿತು.

ಸುನೀತ ಒಂಬತ್ತು ದಿನಗಳ ವರೆಗೆ ಆಸ್ಪತ್ರೆಯಲ್ಲಿ ಇದ್ದಳು. ಕೊನೆಯ ದಿನವಂತೂ ಯಾವಾಗ ಮನೆಗೆ ಹೋದೇನೊ, ಯಾವಾಗ ವಿಮಲಳನ್ನು ನೋಡಿಯೇನೋ ಎನ್ನುವ ಆತುರ. ತಾನು ಮನೆಗೆ ಬಂದಿರುವೆನೆಂಬುದನ್ನು ಕೇಳಿದ ಕೂಡಲೆ ಓಡಿ ಬರ್ತ್ತಾಳೆ ಎನ್ನುವ ನಂಬಿಕೆ.

ಅವಳನ್ನು ಮನೆಗೆ ಕರೆದೊಯ್ಯಲು ರವಿ ಕಂಟ್ರಾಕ್ಟರರೊಬ್ಬರ ಕಾರನ್ನು ಕೇಳಿ ತಂದಿದ್ದ.

ಮನೆಯ ಮುಂದೆ ಕಾರು ನಿಂತಾಗ ಅವಳು ನಿರೀಕ್ಷಿಸಿದ್ದಂತೆ ವಿಮಲೆ ಅಲ್ಲಿರಲಿಲ್ಲ. ಅದಕ್ಕೆ ಬದಲಾಗಿ ಪೆನ್ನಮ್ಮ ಕಾರಿನ ಬಳಿಗೆ ಬಂದು ಸುನಿತಳನ್ನಿಳಿಸಿಕೊಂಡಳು. ಮಗುವಿಗೆ ಹಾಸಿಗೆ, ತೊಟ್ಟಿಲು ಎಲ್ಲವೂ ಸಿದ್ಧವಾಗಿತ್ತು.

ಯಾವುದಕ್ಕೂ ತೊಂದರೆಯಾಗದಂತೆ ರವಿ ಪೆನಮ್ಮನಿಗೆ ಹೇಳಿ ಎಲ್ಲವನ್ನೂ ಸಿದ್ಧಪಡಿಸಿಟ್ಟಿದ್ದ.

ವಿಮಲ ಯಾಕೆ ಬಂದಿರಲಿಕ್ಕಿಲ್ಲ ಎನ್ನುವ ಪ್ರಶ್ನೆ ಸುನೀತಳನ್ನು ಕಾಡತೊಡಗಿತು. ತವರು ಮನೆಗೇನಾದರೂ ಹೋದಳೊ ಏನೊ, ಹಾಗೇನಾದರೂ ಇದ್ದಿದ್ದರೆ ರವಿ ಹೇಳಬೇಕಾಗಿತ್ತಲ್ಲಾ?

ಆಯಾ, ಮಗುವಿಗೆ ಸ್ನಾನ ಮಾಡಿಸಿ ಬಟ್ಟೆಗಳನ್ನು ತೊಡಿಸಿದಳು. ಮೃದುವಾದ ಹಾಸಿಗೆ, ಶುಭ್ರವಾದ ಮಗ್ಗಲುಹಾಸಿಗೆ, ಸೊಳ್ಳೆಯ ಪರದೆ. ಮಗು ಬೆಚ್ಚಗೆ ಮಲಗಿತು.

ಹೊಸದಾಗಿ ತಂದಿರಿಸಿದ್ದ ಅಂಗಿಗಳು, ಉಲನ್ನಿನ ಸ್ವೆಟರು, ಟೋಪಿ ಮುಂತಾದ ಮಗುವಿನ ಉಡುಪುಗಳನ್ನು ಪೆನ್ನಮ್ಮ ನೀಟಾಗಿ ಬೀರುವಿನಲ್ಲಿ ಜೋಡಿಸಿಟ್ಟಳು.

ಸ್ನೇಹಿತರ ಮಗುವನ್ನು ಇಷ್ಟು ಎಚ್ಚರದಿಂದ ನೋಡಿಕೊಳ್ಳಬೇಕಾದರೆ ಇನ್ನು ತನಗೆ ಮಗುವಾದರೆ ರವಿ ಇನ್ನೆಷ್ಟು ಚೆನ್ನಾಗಿ ನೋಡಿಕೊಳ್ಳುತ್ತಾರೋ ಎನ್ನಿಸಿತು ಸುನೀತಗೆ.

ಅವಳದೂ ಸ್ನಾನವಾಗಿ ಊಟವಾಯಿತು.

"ಏನು ಪೆನ್ನಮ್ಮ ನೀನು ಮನೆಗೆ ಹೋಗಲ್ಲವೆ? ಬೆಳಗಿನಿಂದ ಇಲ್ಲೇ ಇದ್ದೀಯಲ್ಲ?" ಸುನೀತ ಕೇಳಿದಳು.

"ನಾನು ಇಲ್ಲೇ ಇರ್ಬೇಕಂತ್ರಮ್ಮಾ ಡಾಕ್ಟರ ಸಾಯೇಬ್ರು ಹೇಳವ್ರೆ."

"ವಿಮಲ ಚೆನ್ನಾಗಿದಾಳಾ ಪೆನ್ನಮ್ಮ? ಯಾಕೋ ಈ ಕಡೆ ಬರ್ಲೇ ಇಲ್ಲ"

ಇದ್ದಕ್ಕಿದ್ದಂತೆ ಸುನೀತಾಳ ಬಾಯಿಂದ ಬಂದ ಈ ಪ್ರಶ್ನೆಗೆ ಏನು ಉತ್ತರ ಹೇಳಬೇಕೊ ತಿಳಿಯದಾಯಿತು ಪೆನ್ನಮ್ಮನಿಗೆ.

ಒಂದೆರಡು ಕ್ಷಣ ಸುಮ್ಮನಿದ್ದು ನಂತರ ನಿಧಾನವಾಗಿ "ಅವರಿನ್ನೆಲ್ಲಿ ಇದಾರ್ರಮ್ಮಾ..." ಎಂದಳು.

"ಯಾಕೆ? ತವರೂರಿಗೆ ಹೋದಳೇನು?"

"ಇಲ್ರಮ್ಮ, ಈ ಜಗತ್ತಿನಿಂದಲೇ ಹೊಂಟೋದ್ರು



ದೀಪಾವಳಿಗಾಗಿ ತಯಾರಿಸಲಾದ ಲಾಡು ಕೋಡಬಳೆ ಉಂಡೆ ಮುಂತಾದ ಸ್ಪೇಶಲ್ ತಿಂಡಿಗಳನ್ನು "ಇಲ್ಲಿ ಒಡೆದು ಕೊಡಲಾಗುತ್ತದೆ"

"ಅಯ್ಯೋ! ಇದೇನು ಪೆನ್ನಮ್ಮ ನೀನು ಹೇಳ್ತಿರೋದು!" ಒಮ್ಮೆ ಗಾಬರಿಯಿಂದ ಚೀರಿ, ನಂತರ ಕೇಳಿದಳು ಸುನಿತ.

ಅವಳ ಗಾಬರಿ ವ್ಯಥೆಯನ್ನು ನೋಡಿ, ಯಾಕಾದರೂ ಹೇಳಿದೆನೊ ಎನ್ನಿಸಿತು ಪೆನಮ್ಮನಿಗೆ.

"ಏನಾಗಿತ್ತು ಪೆನ್ನಮ್ಮ? ಯಾವಾಗ?" ಹೀಗೆ ಕೇಳುವಾಗ ಸುನೀತಳ ದನಿ ಅಪಾರ ಯಾತನೆಯಿಂದ ನಡುಗುತ್ತಿತ್ತು.

"ನೋಡ್ರಮ್ಮ, ಅವತ್ತು ನಿಮಗೆ ನೋವು ಶುರುವಾಗಿತ್ತಲ್ಲ, ಅದಕ್ಕೆ ಸ್ವಲ್ಪ ಹೊತ್ತಿನ ಮುಂಚೆ ಆಸ್ಪತ್ರೆಯಾಗೆ ಎಲ್ಲಾ ಮುಗಿದು ಹೋಗಿತ್ತಂತೆ. ನನಗೆ ಹಿರುಗಿನ ದಿನಾಗೆ ಗೊತ್ತಾಗಿದ್ದು. ಹೆರಿಗೆ ಟೈಂ ಬಂದಾಗ ಡಾಕ್ಟರು ಆಸ್ಪತ್ರೇಗೆ ಕರ್ಕೊಂಡು ಹೋದ್ರಂತೆ. ಆಪರೇಷನ್ ಮಾಡಿ ಮಗಾನ ತೆಗೆಯ್ಬೇಕಾಯ್ತಂತೆ. ಅದನ ಮಾಡೋವಾಗ ಆಯಮ್ಮಾವ್ರ ಜೀವ ಹೊಂಟೇ ಓಯ್ತಂತೆ. ಮಗಾನೂ ಹೊಟ್ಟೇ ಒಳ್ಗೆ ಸತ್ತೋಗಿತ್ತಂತೆ. ಹೆದರಿಕೊಂಡೀರೀಂತ ನಿಮ್ಮ ಕಿವ್ಯಾಗೆ ಹಾಕ್ಲಿಲ್ಲ, ನಡಾ ರಾತ್ರೆ ಆಗಿದ್ರಿಂದ ಯಾರಿಗೂ ಸುಳಿವೇ ಸಿಕ್ಕಿರಲಿಲ್ಲ. ಬೆಳಕರಿದ್ಮೇಲೆ ನಮಗೆಲ್ಲಾ ಗೊತ್ತಾಗಿದ್ದು."

ಪೆನ್ನಮ್ಮ ಹೇಳುತ್ತಿದ್ದುದನ್ನು ಕೇಳುತ್ತಿದ್ದ ಸುನೀತಳ ಕಣ್ಣಿಂದ ನೀರು ಧಾರೆ ಧಾರೆಯಾಗಿ ಸುರಿಯತೊಡಗಿತ್ತು. ಇದುವರೆಗೂ ತಾನು ಕೇಳುತ್ತಿದ್ದುದು ಕನಸೆಂಬ ಭಾವನೆಯೇ ಇತ್ತು ಅವಳಿಗೆ. ಈಗ ಇದು ಕನಸಲ್ಲವೆಂದು ತಿಳಿದು ಬಂದ ಮೇಲೆ ಅವಳ ಮನಸ್ಸಿಗೆ ಅಪಾರ ಯಾತನೆಯಾಯಿತು.

ಸಾಯಂಕಾಲ ರವಿ ಮಗು ಬಾಣಂತಿಯನ್ನು ನೋಡಿಕೊಂಡು ಹೋಗಲು ಬಂದ. ನೇರವಾಗಿ ಸುನೀತಳ ಕೊಠಡಿಗೆ ಹೋಗಲು ಏನೋ ಸಂಕೋಚ. ಅವನಿಗೆ. ಹಾಲ್‌ನಲ್ಲಿದ್ದ ಕುರ್ಚಿಯ ಮೇಲೆ ಕುಳಿತು ಸಿಗರೇಟು ಹೊತ್ತಿಸಿದ.

ರವಿ ಬಂದಿರುವುದನ್ನು ನೋಡಿ, ಒಳಗೆ ಬಂದು ಪೆನ್ನಮ್ಮ,

"ಡಾಕ್ಟರ ಸಾಯೇಬ್ರು ಬಂದವರಮ್ಮಾ" ಎಂದು ತಿಳಿಸಿದಳು.

ಹೊರಗಡೆಯಿದ್ದಾರೇನು? ಇರು ಮಾತಾಡಿಸ್ತೀನಿ" ಸುನೀತ ಹೊರಗೆ ಹೋಗಲು ಎದ್ದಾಗ,

"ನೀವು ಈಗ್ಲೆ ಹಿಂಗೆಲ್ಲಾ ಹೊರಗಡೆ ಹೋಗ ಬಾರದ್ರಮ್ಮಾ. ತಡಿಯಿರ್ರಿ, ಇಲ್ಲಿಗೆ ಅವರ್ನೇ ಕರೀತೀನಿ" ಎಂದು ಪೆನ್ನಮ್ಮ ಹೊರಗೆ ಬಂದಳು.

ಪೆನ್ನಮ್ಮ ಕರೆಯುವುದಕ್ಕೆ ಮುಂಚೆ ರವಿಯೇ ಕೇಳಿದ.

"ಮಗು ಎದ್ದಿದ್ರೆ ಎತ್ಕೊಂಡು ಬರ್ತೀಯ ಪೆನ್ನಮ್ಮ"

"ನೀವೇ ಒಳಗೆ ಬರಬೇಕಂತ ಸುನಿತಮ್ಮಾವ್ರು ಹೇಳಿದ್ರು"

ರವಿ ಕುಳಿತಲ್ಲಿಂದ ಎದ್ದು, ಒಳಗೆ ಹೋದ. ಅವನನ್ನು ನೋಡುತ್ತಲೂ ಸುನೀತ.

"ವಿ...ಮ...ಲ...ನ...ವಿಷ...ಯಾನ ನೀವು..." ಏನೋ ಕೇಳಲು ಹೋದ ಸುನಿತಳ ಗಂಟಲು ಬಿಗಿದು ಬಂದು, ಮುಂದೆ ಮಾತೇ ಹೊರಡದಾಯಿತು.

ದುಃಖದಿಂದ ಮಲಿನವಾದ ಅವಳ ಮುಖ, ಊದಿದ ಕಣ್ಣುಗಳನ್ನು ನೋಡಿ ವಿಮಲೆಯ ವಿಷಯ ಈಕೆಗೆ ತಿಳಿದು ಹೋಗಿದೆಯೆಂದುಕೊಂಡ ರವಿ. ಅವನು ಏನೂ ಮಾತನಾಡಲಾರದೆ ಸುಮ್ಮನೆ ಕುಳಿತ.

"ವಿಮಲ ಎಲ್ಲಿ ರವಿ? ಡಾಕ್ಟರಾಗಿಯೂ ನೀವು ಅವಳನ್ನ ಉಳಿಸಿಕೊಳಲಾರದೆ ಹೋದಿರಾ?"

"ನನ್ನ ಕೈಲೇನಿತ್ತು ಸುನೀತ! ನನಗಿಂತ ದೊಡ್ಡ ಡಾಕ್ಟರೊಬ್ಬನಿದ್ದಾನಲ್ಲ ಮೇಲೆ, ಉಳಿಸುತ್ತೇನೆ ಬಿಡು

ಪನೂ ಏನಿಲ್ಲಾ ಅವನ ಇಚ್ಛೆ. ಅವನಿಗೆ ವಿಮಲ ಇಲ್ಲಿ ಇರೋದು ಇಷ್ಟವಿರಲಿಲ್ಲಾಂತ ಕಾಣುತ್ತೆ, ಕೊಂಡೊಯ್ದ. ಅದಕ್ಕೆ ದುಃಖಪಡೋದು ಯಾಕೆ?"

ರವಿಯ ದನಿ ಭಾರವಾಗಿತ್ತು.

ಅವನು ಒಂದು ತರಹ ವೇದಾಂತ ಹೇಳಿದರೂ ವಿಮಲೆಯ ಅಗಲುವಿಕೆ ಅವನಿಗೆ ಅದೆಷ್ಟು ದುಃಖ ವನ್ನುಂಟು ಮಾಡಿದೆಯೆಂದು ಅವನ ಮುಖಭಾವ, ಕುಗ್ಗಿದ ದನಿಯೇ ಸಾರುತ್ತಿತ್ತು.

ಅದೆಷ್ಟು ನಿರ್ದಯಿ ಆ ದೇವ್ರು ಅಂತೀನಿ, ಮಗು ವಾದ್ರೂ ಇದ್ದಿದ್ರೆ, ಅದನ್ನು ನೋಡಿಕೊಂಡಾದ್ರೂ ನಿಮ್ಮ ದುಃಖಾನ ಮರೆಯ್ಬಿದ್ರಿ. ಇದರ ಜೊತೆಗೆ ಅದೂ ಬೆಳೆಯ್ತಿತ್ತು."

ತನ್ನ ಮಗುವಿನ ಕಡೆ ನೋಡಿ ಅಂದಳು ಸುನೀತ.

ರವಿ ಸುಮ್ಮನಿದ್ದ. ತೊಟ್ಟಲಲ್ಲಿ ಮಲಗಿದ್ದ ಮಗುವಿನ ಕಡೆ ಮಮತೆಯಿಂದ ನೋಡುತ್ತಾ ತನ್ನಲ್ಲೇ ಅಂದು ಕೊಂಡ. ದೇವರು ಅಷ್ಟು ನಿರ್ದಯನಲ್ಲ. ಈ ಮಗೂನ ಉಳಿಸಿ ನಿಮ್ಮ ಮೇಲೆ ಅಪಾರ ಕರುಣೆ ತೋರಿಸಿದ್ದಾನೆ. ಜೊತೆಗೆ ನನ್ನ ಮೇಲೆಯೂ ಸ್ವಲ್ಪ.'

ಇದುವರೆಗೂ ಮಲಗಿದ್ದ ಮಗುವಿಗೆ ಎಚ್ಚರವಾಯಿತು. ಕೈ ಕಾಲು ಅಲುಗಾಡಿಸುತ್ತಾ ಕಿರುಗುಟ್ಟಿತು. ಸುನೀತ ಎತ್ತಿಕೊಂಡು ಅದನ್ನು ತೊಡೆಯ ಮೇಲೆ ಹಾಕಿಕೊಂಡಳು. ತಿಳಿ ನೀಲಿಯ ಉಣ್ಣೆಯ ಅಂಗಿ, ಅದೇ ಬಣ್ಣದ ಟೋಪಿ, ಆ ಗುಲಾಬಿ ಬಣ್ಣಕ್ಕೆ ಬಹಳ ಚೆನ್ನಾಗಿ ಒಪ್ಪಿತ್ತು. ಹತ್ತು ದಿನಗಳಿಗೇ ಚೆನ್ನಾಗಿ ತುಂಬಿ ಕೊಂಡು ಮಗು ಮುದ್ದಾಗಿ ಕಾಣುತ್ತಿತ್ತು.

ರವಿ ಒಮ್ಮೆ ಆ ಮಗುವಿನ ಕಡೆ ಪ್ರೀತಿಯಿಂದ ನೋಡಿ. "ಬರ್ತೀನಿ ಸುನೀತ" ಎಂದು ಹೇಳಿ ನಿಧಾನ ವಾಗಿ ಕೊಠಡಿಯಿಂದ ಹೊರಬಿದ್ದ.

ಈಗ ಎಲ್ಲಿಗೆ ಹೋಗಬೇಕು? ಮನೆಗೆ ಹೋಗಲು ಮನಸ್ಸೇ ಇಲ್ಲ. ಆಕರ್ಷಣೆಯಾದರೂ ಅಲ್ಲಿ ಏನಿದೆ?

ಅಲ್ಲೇ ವರಾಂಡದಲ್ಲಿದ್ದ ಕುರ್ಚಿಯಲ್ಲಿ ಕುಳಿತು ಹೂವಿನ ಗಿಡಗಳ ಕಡೆ ಕಣ್ಣು ಹಾಯಿಸಿದ.

ಒಳಗಡೆ ಮಗು ಸ್ವಲ್ಪ ರಂಪ ಮಾಡುತ್ತಿತ್ತು. ಎದ್ದು ಹೋಗಿ ವಿಚಾರಿಸಲು ಏನೋ ಸಂಕೋಚ. ಸಿಗರೇಟೊಂದನ್ನು ಹಚ್ಚಿ, ನೋಡುತ್ತಾ ಕುಳಿತ. ಸಿಗರೇಟು ಅವನಿಗೀಗ ಅತ್ಯಂತ ಆತ್ಮೀಯ ಬಂಧುವಾಗಿತ್ತು. ಅದನ್ನು ಎಳೆಯುತ್ತಾ ಕುಳಿತರೆ ಅದೆಷ್ಟೋ ಸಮಾಧಾನ.

ಸ್ವಲ್ಪ ಹೊತ್ತಿನಲ್ಲೇ ಪೆನ್ನಮ್ಮ ಏನೋ ಕೆಲಸದ ಮೇಲೆ ಅಲ್ಲಿಗೆ ಬಂದಾಗ ಕೇಳಿದ.

"ಯಾಕೋ ಮಗು ತುಂಬಾ ರಂಪ ಮಾಡ್ತಿರೋ ಹಾಗಿದೆಯಲ್ಲಾ. ಎತ್ಕೊಂಡ್ಬಾ ನೋಡೋಣ."

"ಹೌದು ಸ್ವಾಮಿ ಯಾಕೊ ಆಪಾಟಿ ರಂಪ ಮಾಡ್ತೈತೆ. ತಡಿಯ್ರಿ, ಎತ್ಕೊಂಡು ಬರ್ತೀನಿ."

ಅವಳು ಒಳಗೆ ಹೋದಾಗ, ಸುನೀತ ಮಗುವನ್ನು ಸಮಾಧಾನಪಡಿಸುತ್ತಿದ್ದಳು.

"ಸುಮ್ನೆ ಆಗ್ಲಿಲ್ಲೇನ್ರಮ್ಮಾ, ಕೊಡ್ರಿ, ಡಾಕ್ಟರ ಸಾಯೇಬ್ರು ಹೊರಗೆ ಕುಳಿತವ್ರೆ, ನೋಡ್ತಾರಂತೆ."

ರವಿ ಇನ್ನೂ ಕುಳಿತಿದ್ದಾನೆಂದು ಕೇಳಿದಾಗ ಅಚ್ಚರಿಯೇ ಆಯಿತು ಸುನೀತೆಗೆ, ಪಾಪ! ಮನೇಲಿ ಯಾರಿದ್ದಾರೆ? ಬೇಸರವಾಗಿರ್ಬೇಕು. ಅದಕ್ಕೇ ಇಲ್ಲಿ ಕುತ್ಕೊಂಡಿದ್ದಾರೇನೊ ಎನ್ನಿಸಿತು. ಮರುಕ್ಷಣ,

"ಹಾಯಾಗಿ ಕೂತ್ಕೊಂಡಿದಾರೆ. ಸ್ವಲ್ಪ ಹೊತ್ತು ಕುಳಿತಿರಿ ಬಿಡು ಪೆನಮ್ಮ. ಅವರಿಗೇಕೆ ಕಷ್ಟ!"

ಎದ್ದು ಒಳಗೆ ಬರುತ್ತಿದ್ದ ರವಿಗೆ ಅವಳ ಮಾತು ಕೇಳಿಸಿತು.

"ಕೊಡಿ ಸುನೀತ. ನೋಡ್ತೀನಿ. ಡಾಕ್ಟರ ಕೆಲಸ ಇದೇ ಅಲ್ವೇನು? ಅವರಿಗೆ ಕಷ್ಟ ಎಲ್ಲಿ ಬಂತು!" ನಗುತ್ತಾ ಹೇಳಿದ ರವಿ.

ಪೆನಮ್ಮ ಮಗುವನ್ನೆತ್ತಿಕೊಂಡು ಬಂದಳು. ಅದರ ಹೊಟ್ಟೆಯನು ಮುಟ್ಟಿ ನೋಡಿ.

"ಮೋಷನ್ ಆಯ್ತೆ? ಬೆಳಗ್ಗಿಂದ ಎಷ್ಟು ಸರ್ತಿ ಆಯ್ತು?"

ಸುನೀತ ಬಾಗಿಲ ಬಳಿ ನಿಂತು.

"ನಿನ್ನೆಯಿಂದ ಆಗಿಲ್ಲ...ಅದಕ್ಕೇ ಏನೋ" ಎಂದಳು.

"ಸರಿ ಮೋಷನ್ ಆಗಿಲ್ಲ...ಹಾಲು ಜಾಸ್ತಿ ಕೊಟ್ಟಿಲ್ಲಾ ಕೊಡ್ತೀರಿ ಅನಿಸುತ್ತೆ."

"ಹಗಲೆಲ್ಲಾ ಕೊಡಬಾರದು ಅಂದ್ಕೊಳ್ತೀನಿ, ಆದ್ರೆ ತುಂಬಾ ಅತ್ರೆ ಇನ್ನೇನು ಮಾಡಿ. ಹೇಳಿ?"

"ಮನೆಗೆ ಹೋಗಿ ಹೊಟ್ಟೆಗೆ ಹಾಕೋದಕ್ಕೆ ಕಳಿಸ್ಕೊಡ್ತೀನಿ ಹಾಕಿ. ಗುಣವಾಗುತ್ತೆ. ಆದ್ರೆ ಟೈಮಾಗೆ ಸರಿಯಾಗಿ ಫೀಡ್ ಮಾಡೋದು ಸರಿ. ಈಗಲಿಂದ್ಲೇ ಹೆಲ್ತ್ ಹ್ಯಾಬಿಟ್ಸ್‌ನ ಡೆವಲಪ್ ಮಾಡೋದು ಒಳ್ಳೆಯದು."

ವಿಮಲೆಗೇನಾದರೂ ಹೀಗಾಗಿದ್ದರೆ ಇನ್ನೂ ಏನೇನು ಹೇಳುತ್ತಿದ್ದನೊ. ಇಷ್ಟು ಹೇಳಿ ಅಲ್ಲಿಂದ ಹೊರಟ.

ರವಿ ಕಳುಹಿಸಿದ ಔಷಧಿಯನ್ನು ಕುಡಿಸಿದ ಮೇಲೆ



ಮಗು ಅಳುವುದನ್ನು ಕಡಿಮೆ ಮಾಡಿತು. ಸ್ವಲ್ಪ ಹೊತ್ತಿನ ಮೇಲೆ ಹಾಯಾಗಿ ನಿದ್ದೆ ಹೋಯಿತು.

ಮರುದಿನ ಬೆಳಗ್ಗೆ ಆಸ್ಪತ್ರೆಗೆ ಹೋಗುವ ಮುಂಚೆ ರವಿ ಮಗುವನ್ನು ನೋಡಲು ಬಂದ.

"ಈಗ ಹೇಗಿದೆ ಸುನೀತ? ರಾತ್ರಿ ಮಗು ಚೆನ್ನಾಗಿ ನಿದ್ದೆ ಮಾಡಿತೆ?"

"ಚೆನ್ನಾಗೇ ಮಲಗಿತು. ಕೂತ್ಕೊಳ್ಳಿ. ಸ್ವಲ್ಪ ಕಾಫಿ ತಗೊಂಡು ಹೋಗುವಿರಂತೆ."

"ಈಗ ಅದೇನು ಬೇಡ ಸುನಿತ" ಎಂದು ಹೇಳಿ ಹಾಗೇ ನಿಂತ ರವಿ.

ಸುನೀತಳೂ ಹಾಗೇ ನಿಂತು ಅವನ ಮಂಕಾದ ಮುಖ ವನ್ನೇ ನೋಡತೊಡಗಿದಳು.

ಮುಖವೆಲ್ಲಾ ಕಂದಿ ಹೋಗಿತ್ತು. ಕಳಾಹೀನವಾದ ಕಣ್ಣು, ಅವನು ರಾತ್ರಿ ಸರಿಯಾಗಿ ನಿದ್ದೆ ಮಾಡಿಲ್ಲವೆಂದು ಸಾರುತ್ತಿದ್ದವು. ಉಡುಪು ಅಸ್ತವ್ಯಸ್ತ. ದನಿಯಲ್ಲೂ ಅಷ್ಟೆ. ಹಿಂದಿನ ಉತ್ಸಾಹ, ಚೈತನ್ಯ ಒಂದೂ ಇಲ್ಲ. ಅವೆಲ್ಲಾ ವಿಮಲೆಯ ಹಿಂದೆಯೇ ಹೋದವೇನೊ ಎನ್ನಿಸಿತು ಸುನೀತಳಿಗೆ. ಸ್ವಲ್ಪ ಹೊತ್ತು ನಿಂತಿದ್ದು ರವಿ ಹೊರಟು ಹೋದ.

ಏನನ್ನೋ ಯೋಚಿಸುತ್ತ ನಿಂತಿದ್ದ ಸುನೀತಳಿಗೆ ರವಿ ಹೋದುದೇ ತಿಳಿಯಲಿಲ್ಲ. ಮಗು ಕಿರ ಕಿರ ಎಂದಾಗ ಒಳಗೆ ಹೋದಳು.

ಪಾಪ ರವಿ ಹೇಗಾಗಿದ್ದಾರೆ! ಅವರ ಯೋಗ ಕ್ಷೇಮ ವನ್ನು ವಿಚಾರಿಸ್ಬೇಕಾಗಿತ್ತು. ಬರುವಾಗ ಏನಾದರೂ ತಿಂದು ಬಂದಿದ್ದರೊ ಇಲ್ಲವೋ. ಅಡಿಗೆ ಮಾಡಿ ಸುತ್ತಾರೊ, ಅದೂ ತಿಳಿಯದು. ಅಡಿಗೆಯವನು ಮಾಡಿ ಹಾಕಿದರೂ ಬಲವಂತ ಮಾಡಿ ಇವರಿಗೆ ತಿನ್ನು ವುದಕ್ಕೆ ಹೇಳುವವರು ಯಾರು?

ಸ್ನೇಹಿತರೆ! ಬಂಧುಗಳೆ! ಹಿತೈಷಿಗಳೆ!

ಆ ದಿನ ಮಧ್ಯಾಹ್ನವೆಲ್ಲಾ ಇದೇ ಯೋಚನೆ ಅವಳಿಗೆ. ರವಿಯ ನೋವನ್ನು ಹೇಗಾದರೂ ಮಾಡಿ ಕಡಿಮೆ ಮಾಡ ಬೇಕು. ಆತನಿಗೆ ಏನೂ ತೊಂದರೆ ಯಾಗದ ಹಾಗೆ ನೋಡಿಕೊಳ್ತಿರಬೇಕು. ಆನಂದ ದೂರ ವಿರೋ ಈ ಸಮಯದಲ್ಲಿ ಇವರು ಇಲ್ಲದೆ ಹೋಗಿದ್ದರೆ ಏನಾಗುತ್ತಿತ್ತೋ? ಸಾಯಂಕಾಲ ಇಲ್ಲಿಗೇನಾದ್ರೂ ಮತ್ತೆ ಬಂದರೆ ಮರೆಯದೆ ಅವರ ಯೋಗಕ್ಷೇಮ ವಿಚಾರಿಸ್ಕೊಳ್ಬೇಕು.

ಅವಳು ನಿರೀಕ್ಷಿಸಿದ್ದಂತ ರವಿ ಸಾಯಂಕಾಲ ಬರ ಲಿಲ್ಲ. ಪದೇ ಪದೇ ಹೋಗಲು ಅವನಿಗೇಕೋ ಅಂಜಿಕೆ ಯಾಗಿತ್ತು. ಆಸ್ಪತ್ರೆಯಿಂದ ನೇರವಾಗಿ ಮನೆಗೆ ಹೋಗಿ ಸಿಗರೇಟು ಹಚ್ಚಿ ಕುಳಿತುಬಿಟ್ಟಿದ್ದ.

ಸ್ವಲ್ಪ ಹೊತ್ತಿನಲ್ಲೇ ಪೊನ್ನಮ್ಮ ಬಂದು

"ಸುನೀತಮ್ಮಾವ್ರು ನಿಮ್ಮನ್ನ ಕರ್ಕೊಂಡು ಬಾ ಅಂತ ಹೇಳಿದ್ರು. ಬರಬೇಕಂತೆ" ಎಂದು ಕರೆದಳು.

ಮಗುವಿಗೆ ಮತ್ತೇನಾದರೂ ಹೆಚ್ಚು ಕಡಿಮೆ ಯಾಗಿದೆಯೋ ಎಂದು ರವಿಗೆ ಗಾಬರಿಯೇ ಆಯಿತು ಒಂದೇ ಉಸಿರಿನಲ್ಲಿ ಕೇಳಿದ.

"ಯಾಕಂತೆ? ಮಗು ಹುಷಾರಾಗಿದೆ ತಾನೆ?"

"ಯಾಕೊ ಗೊತ್ತಿಲ್ಲ. ಮಗಾ ಏನೋ ಚಂದಾಗೈತೆ

ಮಗು ಚೆನ್ನಾಗಿದೆಯೆನ್ನುವುದನ್ನು ಕೇಳಿ ಸ್ವಲ್ಪ ಸಮಾಧಾನವಾಯಿತು ಅವನಿಗೆ. ಮತ್ತೆ ಏಕೆ ಕರೆದಳೊ ಎನ್ನುವ ಪ್ರಶ್ನೆ ಜೊತೆಯಲ್ಲಿಯೇ ಹುಟ್ಟಿತ್ತು.

"ಬರ್ತಾರಂತೆ ಅಂತ ಹೇಳು"

"ಹೇಳ್ತೀನಿ"

ಪೊನ್ನಮ್ಮ ಹೊರಟು ಹೋದ ಸ್ವಲ್ಪ ಹೊತ್ತಿನ ಮೇಲೆ, ರವಿ ಹೊರಟು ನಿಂತ. ಹೊರಗಡೆ ವಿಪರೀತ ಥಂಡಿ ಗಾಳಿಯಿತ್ತು. ಓವರ್‌ಕೋಟನ್ನು ಹಾಕಿಕೊಂಡು ತಲೆಗೆ ಮಫ್ಲರ್ ಸುತ್ತಿಕೊಂಡು ಹೊರಟ.

ಅವನು ಬಂದಾಗ ಹೊರಗಡೆ ಯಾರೂ ಇರಲಿಲ್ಲ. ನೇರವಾಗಿ ಹಾಲ್‌ನಲ್ಲಿದ್ದ ಸೋಫಾದಲ್ಲಿ ಕುಳಿತ.

ಮಗು ಆಗ ತಾನೆ ನಿದ್ದೆ ಹೋಗಿತ್ತು. ಪೊನ್ನಮ್ಮ ಹೊರಗೆ ಬಂದು ನೋಡಿ ರವಿ ಬಂದಿರುವುದನು ಸುನಿ ತಳಿಗೆ ತಿಳಿಸಿದಳು.

ಸುನೀತ ಹೊರಗೆ ಬಂದಾಗ ರವಿ ಬಾಯಲ್ಲಿ ಸಿಗ ರೇಟು ಹಚ್ಚಿ ಕುಳಿತಿದ್ದ.

"ಬಹಳ ಹೊತ್ತಾಯ್ತೆ ಬಂದು?" ಸುನೀತಳ ದನಿ ಉಚ್ಚರಿಸಿತು.

"ಓಹ್ ನೀವೇಕೆ ಎದ್ದು ಬಂದಿರಿ ಸುನೀತ? ಕಿಟಕಿ ಸುಲ್ಲಾ ತೆರೆದಿದೆ. ವಿಪರೀತ ಥಂಡಿ ಗಾಳಿ." ರವಿ ಸಿಗರೇಟನ್ನು ಆಷ್‌ಟ್ರೇನಲ್ಲಿ ಹಾಕಿ ಹೇಳಿದ.

"ಅಂಥ ಥಂಡಿ ಗಾಳಿಯೇನಿಲ್ಲ ಬಿಡಿ." ಆರಾಮ ಕುರ್ಚಿಯ ಮೇಲೆ ಕುಳಿತಳು

ಸ್ವಲ್ಪ ಹೊತ್ತು ಇಬ್ಬರೂ ಮಾತನಾಡಲಿಲ್ಲ.

ಒಂದೆರಡು ಕ್ಷಣಗಳ ನಂತರ ಸುನಿತಳೇ ಕೇಳಿದಳು.

"ಮನೆಯಿಂದ ಯಾರನ್ನಾದ್ರೂ ಕರೆಸೋ ಯೋಚ್ನೆ ಮಾಡಿದೀರಾ ?"

"ಅಂಥಾ ಯೋಚ್ನೇನೆ ಮಾಡಿಲ್ಲ ಸುನೀತ. ನಾನು ಕರೆಸಿದ್ರೂ ಇಲ್ಲಿಗೆ ಬರೋದಕ್ಕೆ ಯಾರು ಒಪ್ತಾರೆ ಹೇಳಿ ?"

"ನಿಮ್ಮ ಊಟ ಉಪಚಾರಕ್ಕೆ ತೊಂದರೆ ಆಗೊಲ್ವೆ? ಈಗಾಗ್ಲೆ ಇಷ್ಟೆಲ್ಲಾ ಇಳಿದು ಹೋಗಿದೀರಿ."

ರವಿ ಒಮ್ಮೆ ಸಣ್ಣಗೆ ನಕ್ಕು ದೀರ್ಘವಾದ ಆಲೋಚನೆಯಲ್ಲಿ ಮುಳುಗಿದ.

"ನಾಳೆಯಿಂದ ಊಟ, ಸ್ನಾನಕ್ಕೆ ಇಲ್ಲಿಗೇ ಬಂದು ಬಿಡಿ."

"ಆಂ!" ಎಂದು ಮತ್ತೆ ಅದೇ ರೀತಿ ಯೋಚನೆಯಲ್ಲೇ ತಲ್ಲೀನನಾದ ರವಿ.

ಅವನು ಎಲ್ಲಿದ್ದರೂ ಸದಾ ಮಗುವಿನದೇ ಧ್ಯಾನ. ಅದನ್ನು ಮುದ್ದಾಗಿ ಬೆಳೆಸ್ಬೇಕು, ಆರೋಗ್ಯದಿಂದಿಟ್ಟಿರ್ಬೇಕು, ಆದರೆ ಈ ಆಶೆ ಈಡೇರುವುದು ಹೇಗೆ? ಎಂದುಕೊಳ್ಳುತ್ತಿದ್ದ. ಪದೇ ಪದೇ ಇಲ್ಲಿಗೆ ಬಂದರೆ ಸುನೀತ ಏನಂದುಕೊಳ್ಳಲಿಕ್ಕಿಲ್ಲ? ಎನ್ನುವ ಅಂಜಿಕೆಯೂ ಕಾಡುತ್ತಿತ್ತು.

ಆದರೆ ಈಗ ಅವಳು ತಾನಾಗಿಯೇ ದಾರಿ ತೋರಿಸಿದ್ದಾಳೆ. ಇಲ್ಲಿದ್ದರೆ ಮಗು ಸದಾ ಕಣ್ಣಿನ ಮುಂದೆಯೇ ಇರುತ್ತೆ. ಆಗಲಿ ಎಂದು ಒಪ್ಪಿಗೆಯನ್ನು ಸೂಚಿಸಬೇಕೆಂದು ತುದಿನಾಲಿಗೆಗೆ ಬಂದಿತ್ತು. ಆದರೆ ಹಾಗೆ ಹೇಳಲಿಲ್ಲ. ತನ್ನಿಂದ ಸುನೀತಳಿಗೆ ತೊಂದರೆಯಾಗಬಹುದೇನೋ ಎನ್ನಿಸಿತು, ಹೇಳಿದ.

"ಅಡಿಗೆಗೆ ಯಾರನ್ನಾದ್ರೂ ಗೊತ್ತು ಮಾಡ್ಕೊಳ್ಬೇಕೂಂತ ಇದೀನಿ ಸುನೀತ. ಸುಮ್ನೆ ನಿಮಗೆ ತೊಂದ್ರೆ ಯಾಕೆ ಹೇಳಿ? ಪೆನ್ನಮ್ಮ ಇನ್ನು ಎಷ್ಟು ದಿನ ಇದ್ದಾಳು. ಆಕೆ ಆಸ್ಪತ್ರೆ ಡ್ಯೂಟಿಗೆ ಹೋಗಬೇಕಲ್ಲಾ ! ಕೆಂಪಯ್ಯನೂ ಇಲ್ಲ. ಹೊರಗಿನ ಕೆಲಸಕ್ಕೇನೂ ಯಾರನ್ನಾದ್ರೂ ನೋಡ್ಕೋಬಹುದು, ಆದ್ರೆ ಮಗೂನ ನೋಡ್ಕೊಂಡು ಅಡಿಗೆ ಮಾಡೋದಕ್ಕೆ ನಿಮಗೆ ಕಷ್ಟವೇ ಆಗಬಹುದು."

"ಇಬ್ಬರ ಅಡಿಗೆ ಮಾಡೋದು ಮಹಾ ಕಷ್ಟವೇ ರವಿ? ಅಷ್ಟು ಮಾಡದೆ ಹೋದ್ರೆ ಹೆಣ್ಣಾಗಿ ಹುಟ್ಟಿಯಾದ್ರೂ ಏನು ಪ್ರಯೋಜನ ? ಹೇಳಿ ?" ಅವಳಿಗೆ ನಗು ಬಂದಿತು. ನಂತರ ಗಂಭೀರಳಾಗಿ ಮುಂದುವರಿಸಿದಳು.

"ಇಲ್ಲ ರವಿ, ನೀವು ನನ್ನ ಮಾತಿಗೆ ಒಪ್ಪಿಕೊಳ್ಳಲೇಬೇಕು. ನೀವು ಹೊತ್ತಿಗೆ ಗೊತ್ತಿಗೆ ಊಟ ಮಾಡದೆ ಹೀಗಿದ್ರೆ ಹೇಗೆ? ಅಲ್ಲಿ ನನ್ನ ತಂಗಿ ವಿಮಲ ಎಷ್ಟು ನೊಂದುಕೊಳ್ಳಬಹುದು, ಅವಳ ಆತ್ಮಾನ ನೋಯಿಸ್ತೀರಾ ? ಒಂದ್ವೇಳೆ ಅವಳ ಕೊನೇ ಗಳಿಗೇಲಿ ಏನಾದ್ರೂ ನಾನು ಹತ್ತಿರ ಇದ್ದಿದ್ರೆ ನಿಮ್ಮ ಜವಾಬ್ದಾರೀನ ನನಗೇ ಒಪ್ಪಿಸಿ ಹೋಗುತ್ತಿದ್ದಳೇನೊ ! ಓ ! ನಿಮ್ಮನ್ನ ಅದೆಷ್ಟು ಚೆನ್ನಾಗಿ ನೋಡ್ಕೊಳ್ತಿದ್ದಳು"

ವಿಮಲೆಯನ್ನು ನೆನೆಸಿಕೊಂಡು ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ರವಿಯ ಹೃದಯದ ನೋವೂ ಕಣ್ಣೀರಿನ ರೂಪದಲ್ಲಿ ಹೊರಬಂದಿತು. ಬಿಸಿಯ ಹನಿಗಳು ಅವನ ಉಣ್ಣೆಯ ಕೋಟಿನ ಮೇಲುರುಳಿ, ಲೈಟಿನ ಬೆಳಕಿನಲ್ಲಿ ಮುತ್ತುಗಳಂತೆ ಹೊಳೆದವು. ದುಃಖದಿಂದ ಭಾರವಾದ ಹೃದಯಗಳನ್ನು ಹಗುರ ಮಾಡಿಕೊಳ್ಳಲು ಇಬ್ಬರೂ ಅದೆಷ್ಟೋ ಹೊತ್ತು ಹಾಗೇ ಕುಳಿತಿದ್ದರು.

"ಅಮ್ಮಾ, ಮಗಾ ಅಳ್ತಿದೆ" ಮಗುವನ್ನು ಎತ್ತಿಕೊಂಡು ಬಂದು ಪೆನ್ನಮ್ಮ ಮುಂದೆ ನಿಂತಾಗಲೇ ಸುನಿತೆಗೆ ಎಚ್ಚರ.

ಕಣ್ಣೊರಸಿಕೊಂಡು ಮಗುವನ್ನೆತ್ತಿಕೊಂಡಳು.

ರವಿ ಕರವಸ್ತ್ರದಿಂದ ಕಣ್ಣೀರನ್ನೊರೆಸಿಕೊಂಡು ತಲೆಯೆತ್ತಿದ.

ತಂದೆಯ ದುಃಖ ಭಾರವನ್ನಿಳಿಸಲೋ ಎನ್ನುವಂತೆ, ಇದುವರೆಗೂ ಅಳುತ್ತಿದ್ದ ಮಗು ಈಗ ನಗುತ್ತಿತ್ತು. ಅದರ ಗುಲಾಬಿ ಗಲ್ಲದ ಮೇಲಿನ ಮಂದಸ್ಮಿತ, ಸುಳಿದು ಆ ಕ್ಷಣಕ್ಕೆ ರವಿಯ ದುಃಖವನ್ನು ಮರೆಸಿತು. ಅವನು ನಗುತ್ತಾ ಸುನೀತಳ ತೊಡೆಯ ಮೇಲಿದ್ದ ಮಗುವನ್ನು ಕೇಳಿ ಮೆಲ್ಲಗೆ ಎತ್ತಿಕೊಂಡ.

"ಇರಿ ನಿಮ್ಮ ಬಟ್ಟೆಗೆ ಸ್ನಾನ ಮಾಡಿಸೀತು." ಎಂದು ಸಣ್ಣಗೆ ನಕ್ಕು ಸುನೀತ ಎದ್ದು ಹೋಗಿ ರಬ್ಬರ್ ಶೀಟನ್ನು ತಂದುಕೊಟ್ಟಳು.

"ಪರವಾಯಿಲ್ಲ ಬಿಡಿ. ಅದಕ್ಕೆಲ್ಲಾ ಗೊತ್ತು ಇವರು ಅಮ್ಮ ಅಲ್ಲ ಡಾಕ್ಟರು. ಗಲೀಜು ಮಾಡ ಬಾರದೂಂತ" ಎಂದು ರವಿ ತಾನೂ ನಕ್ಕ. ಹಾಗೇ ಮಗುವಿನ ಕಡೆ ನೋಡಿದ.

ಮಗುವನ್ನು ತನ್ನ ಗುಲಾಬಿ ಗಲ್ಲವನ್ನು ಅರಳಿಸಿ ನಕ್ಕಿತು.

"ನೋಡಿದ್ರಾ, ತುಂಟಿ, ನಿಮ್ಮ ಹತ್ರ ಎಷ್ಟು ಚೆನ್ನಾಗಿ ನಗ್ತಾ ಆಡ್ತಿದಾಳೆ, ದೊಡ್ಡವಳಾದ್ಮೇಲೆ ನಿಮ್ಮ ಕೈಗಳಲ್ಲಿ ಸೂಜೀ ಟ್ಯೂಬುಗಳನ್ನೇನಾದ್ರೂ ನೋಡಿದ್ರೆ, ನಿಮ್ಮ ಹತ್ತಿರವೂ ಸುಳಿಯಲಿಕ್ಕಿಲ್ಲ."

ನನ್ನ ಮಗು ಹಾಗೆ ಮಾತ್ರ ಹೆದರಿಕೊಳ್ಳೋದು ಬೇಡ. ಮನಸ್ಸಿನಲ್ಲೇ ಅಂದುಕೊಂಡ ರವಿ.

"ಬಾರೇ ಕಳ್ಳಿ...ಬೆಚ್ಚಗಿರೋ ಆಸನ ಸಿಕ್ಕಿ ಬಿಡ್ತೂಂತ ಹಾಯಾಗಿದ್ಬಿಟ್ಟೆ." ಎಂದು ಸುನೀತ ಕೈಗಳನ್ನು ಚಾಚಿ

"ಇಲ್ಲಿ ಕೊಡಿ ರವಿ" ಎಂದಳು.

ಅವಳು ಮಗುವನ್ನೆತ್ತಿಕೊಂಡು ತೊಡೆಯ ಮೇಲೆ ಹಾಕಿಕೊಳ್ಳುತ್ತಲೂ ಅದು ಮತ್ತೆ ಅಳಲು ಮೊದಲು ಮಾಡಿತು.

"ನೋಡಿದ್ರಾ! ನನ್ನ ಹತ್ರ ಇದ್ದಿದ್ರೆ ಸುಮ್ನಿರೋದು"

"ಸರಿ, ಈಗಿನಿಂದಲೆ ಇವಳ್ನ ಹಚ್ಚಿಸ್ಕೊಂಡಿಡಿ! ದೊಡ್ಡವಳಾದ ಮೇಲೆ ನೀವು ಎಲ್ಲಿಗೆ ಹೋದ್ರೂ ಹಿಂದೇನೆ ಓಡೋಡಿ ಬರ್ತಾಳೆ.

"ಹಾಗೇ ಆದ್ರೆ ಎಷ್ಟು ಚೆನ್ನಾಗಿರುತ್ತೋ ತನ್ನಲ್ಲೇ ಉದ್ಗರಿಸಿದ ರವಿ.

ಅವನು ಮನೆಗೆ ಹೊರಡುವ ಮುಂಚೆ ಸುನೀತ ಇನ್ನೊಮ್ಮೆ ಎಚ್ಚರಿಸುತ್ತಾ ನುಡಿದಳು.

"ನೋಡಿ ನಾಳೆಯಿಂದ ತಿಂಡಿ ಊಟ ಇಲ್ಲೇ ಆಗ್ಬೇಕು. ನೀವೇನಾದ್ರೂ ಇದಕ್ಕೆ ಒಪ್ಪಿಕೊಳ್ಳದೆ ಹೋದ್ರೆ, ನಾನೂ ಇನ್ಮೇಲೆ ನಿಮ್ಮಿಂದೇನೂ ಸಹಾಯ ತಗೊಳ್ಳಲ್ಲ. ಹೀಗಂತ ಅವರಿಗೆ ಲೆಟರ್ ಬರೆದು ಹಾಕಿ ಬಿಡ್ತೀನಿ. ಅವರು ಆದಷ್ಟು ಬೇಗ ಬಂದು ಬಿಡಲಿ"

ರವಿ ಈಗ ನಿಜಕ್ಕೂ ಹೆದರಿದ. ಸುನೀತ ಹೀಗೆ ಬರೆದು ಬಿಟ್ರೆ ಆನಂದ ನಿಜವಾಗ಼್ಲೂ ಗಾಬರಿ ಪಟ್ಕೊಂಡು ಬಿಡ್ತಾನೆ, ಇನ್ನೂ ಟ್ರೈನಿಂಗ್ ಪೀರಿಯಡ್ ಅರ್ಧವೂ ಮುಗಿದಿಲ್ಲ. ಈಗ್ಲೆ ಬಂದು ಬಿಟ್ರೆ ಅವನು ಅಲ್ಲಿಗೆ ಹೋಗಿದ್ದಕ್ಕೂ ಏನು ಪ್ರಯೋಜನ? ಎಂದುಕೊಂಡ.

"ಹಾಗೆ ಮಾತ್ರ ಬರೆಯ ಬೇಡಿ, ಸುನೀತ ಆನಂದನಿಗೆ ನಿಮಗೇನಾದರೂ ಸ್ವಲ್ಪ ಕಷ್ಟಾಂತ ತಿಳಿದು ಬಂದರೂ ಅವನು ಅಲ್ಲಿ ಒಂದು ಗಳಿಗೆಯೂ ನಿಲ್ಲಲಿಕ್ಕಿಲ್ಲ"

"ಹಾಗಾದ್ರೆ ನನ್ನ ಮಾತಿಗೆ ಒಪ್ಪಿಕೊಳ್ತೀರಿ ತಾನೆ?."

"ಒಳ್ಳೇ ಕಂಡೀಷನ್ ಆಯ್ತಲ್ಲ ನಿಮ್ಮದು?"

ಮೃದುವಾಗಿ ನಕ್ಕ ರವಿ. ನಂತರ "ಹಾಗೇ ಆಗಲಿ ಬಿಡಿ ಒಪ್ಪಿದೆ" ಎಂದ.

ರವಿ ಹೀಗೆ ಹೇಳಿದ ಮೇಲೆ ಸುನಿತಳ ಮನಸ್ಸಿನ ಭಾರ ಎಷ್ಟೋ ಇಳಿದಂತಾಯಿತು. ವಿಮಲಳ ಆತ್ಮಕ್ಕೆ ಈಗ ಖಂಡಿತ ಸಂತೋಷವಾಗುತ್ತೆ ಎನ್ನಿಸಿತು.

ರವಿ, ತಾನೂ ನೀವೂ ಹೆಚ್ಚು ಕಡಿಮೆ ಒಂದ್ರೆ

ವಯಸ್ಸಿನವರು. ಆದ್ರೂ ನೀವು ನನಗೆ ಅಣ್ಣ ಇದ್ದ ಹಾಗೆ. ನಾನು ಅಣ್ಣ ತಮ್ಮಂದಿರ್ನ ಪಡ್ಕೊಂಡು ಬಂದಿಲ್ಲಾಂತ ಎಷ್ಟೋ ಸರ್ತಿ ದುಃಖಿಸ್ತಿದ್ದೆ. ಇನ್ಮೇಲೆ ಆ ದುಃಖ ಮಾಯವಾಯ್ತು. ಈ ಸೋದರಿಗೆ ನೀವಲ್ಲದೆ ಇನ್ನು ಯಾರು ದಿಕ್ಕು ಹೇಳಿ?"

ಸುನೀತಳಿಗೆ ಉಕ್ಕಿ ಬರುವ ಕಣ್ಣೀರನ್ನು ತಡೆಯಲಾಗಲಿಲ್ಲ.

"ಕಣ್ಣೀರು ಯಾಕೆ ಸುನೀತ! ನಿಮಗೆ ಅಣ್ಣ ಆಗೋದಕ್ಕೆ ಸಂತೋಷವಾಗಿ ಒಪ್ಪಿಕೊಳ್ತೀನಿ."

ಅಂದಿನಿಂದ ರವಿಯ ಊಟ ತಿಂಡಿ ಸ್ನಾನ ಅಲ್ಲೇ ಆಗುತ್ತಿತ್ತು. ಮೇಲಿನ ಕೆಲಸಕ್ಕಾಗಿ ಒಬ್ಬ ಹೆಂಗಸನ್ನು ಗೊತ್ತು ಮಾಡಿಯಾಯಿತು. ರಾತ್ರಿ ಸುನೀತ ಮನೆಯಲ್ಲಿ ಒಬ್ಬಳೇ ಇರುತ್ತಿದ್ದುದರಿಂದ ಕೆಲಸದಾಕೆ ಅಲ್ಲಿಯೇ ಮಲಗುತ್ತಿದ್ದಳು.

ವಿಮಲೆ ಹೋದ ದುಃಖವಿನ್ನೂ ಸಂಪೂರ್ಣ ಅಳಿದಿರಲಿಲ್ಲ. ಇದರಿಂದ ಮಗುವಿಗೆ ನಾಮಕರಣ ಮಾಡಬೇಕೆಂಬ ಯೋಚನೆಯೇ ಇರಲಿಲ್ಲ. ಯೋಚನೆ ಬಂದಿದ್ದಿತು ಒಂದೆರಡು ಬಾರಿ. ವಿಮಲೆ ಇದ್ದಿದ್ದರೆ ಆ ಸಂತೋಷ..ಸಂಭ್ರಮದ ಮಾತೇ ಬೇರೆಯಾಗಿರುತ್ತಿತ್ತು.

ಒಂದು ದಿನ ನಿರ್ಮಲಾ ನಿಮ್ಮಿ ಎಂದು ಮಗುವಿನ ಕಿವಿಯಲ್ಲೂದಿ ಸಂತಸ ಪಟ್ಟಳು. ನಿರ್ಮಲಾ ಎಂದು ಕೊನೆಯ ಅಕ್ಷರವನು ಹೇಳುವಾಗ ವಿಮಲೆಯ ಹೆಸರನ್ನು ಹಿಡಿದು ಕೂಗಿದಂತೆಯೇ ಆಗುತ್ತಿತ್ತು. ಗತಿಸಿದ ಗೆಳತಿಯ ನೆನಪು ಹಸಿರಾಗಿರಲೆಂದು ಆ ಹೆಸರನ್ನು ಚುನಾಯಿಸಿದ್ದಳು ಸುನಿತ.

ಮಗುವಿಗೆ ಹೊಸ ಬಟ್ಟೆಗಳನ್ನು ಹಾಕಿ, ಶುಭ್ರವಾದ ಹಾಸಿಗೆಯ ಮೇಲೆ ಹಾಲ್‌ನಲ್ಲಿ ಮಲಗಿಸಿದ್ದಳು.

ರವಿ ಮಧ್ಯಾಹ್ನ ಊಟಕ್ಕೆ ಬಂದಾಗ ಹಾಸಿಗೆಯ ಮೇಲೆ ಮಗು ಕೈ ಕಾಲಾಡಿಸಿಕೊಂಡು ಆಟವಾಡುತ್ತಿತ್ತು.

"ಯಾಕೆ ಸುನೀತ, ಇವತ್ತು ಬೇಬಿ ಇನ್ನೂ ಮಲಗಿಲ್ಲ?" ಎಂದ.

ಅಡಿಗೆ ಮನೆಯಲ್ಲಿದ್ದ ಸುನಿತ ಹೊರಗೆ ಬಂದು,

"ಇವತ್ತಿನಿಂದ ಇವಳು ನಿರ್ಮಲಾ. ಸುಂದರವಾಗಿದೆಯೇ ಹೆಸರು? ನೋಡಿ ತನಗೆ, ಹೆಸರು ಬಂದಿತು ಎಂತಲೋ ಏನೋ ಎಷ್ಟು ಹೆಮ್ಮೆಯಿಂದ ನಮ್ಮ ಕಡೆ ನೋಡ್ತಿದಾಳೆ."

"ನಿ...ರ್ಮ...ಲಾ... ವಿಮಲ ಅಂದ ಹಾಗೆ ಇರುತ್ತೆ" ಎಂದು ಮನಸ್ಸಿನಲ್ಲಂದುಕೊಂಡ

"ಓ ಅದಕ್ಕೇನೋ ಹೊಸಾ ಫ್ರಾಕು... ತುಂಬಾ ಚೆನ್ನಾಗಿದೆ ಸುನಿತ. ಹೆಸರು ಆ...ದ...ರೆ..." ಎಂದು ಅಷ್ಟಕ್ಕೇ ಮಾತು ನಿಲ್ಲಿಸಿದ.

## – ೨ –

ಎಂಟು ತಿಂಗಳಾಗುವ ಹೊತ್ತಿಗೆ ನಿರ್ಮಲ ತುಂಬಾ ತುಂಟಿಯಾದಳು. ತೆವಳಿಕೊಂಡು ಮನೆಯಲ್ಲೆಲ್ಲಾ ಸುತ್ತಾಡಿಕೊಂಡು ಕೆಳಗಿರುವ ಸಾಮಾನುಗಳನ್ನು ಎಳೆದಾಡುವುದೆಂದರೆ ಎಲ್ಲಿಲ್ಲದ ಇಷ್ಟ ಅವಳಿಗೆ. ರವಿಗೂ ಅಷ್ಟೆ, ಅವಳೊಂದಿಗೆ ಆಟವಾಡುವುದೆಂದರೆ ಬಹಳ ಇಷ್ಟ.

ಒಂದೊಂದು ದಿನ ಆಟವಾಡಿಸುತ್ತಾ ರವಿ ಆಸ್ಪತ್ರೆಗೆ ಹೋಗುವುದನ್ನೇ ಮರೆತು ಬಿಡುತ್ತಿದ್ದ.

"ಇವಳ ಜೊತೆ ಸೇರ್ಕೊಂಡು ನೀವೂ ಮಗೂನೆ ಆಗಿ ಬಿಟ್ರಿ ರವಿ, ಆಸ್ಪತ್ರೆಗೆ ಹೊತ್ತಾಗಲ್ಲವೆ? ಏಳಿ" ಎಂದ ಮೇಲೆಯೇ ರವಿಗೆ ಲೇಟಾಗಿದ್ದುದು ನೆನಪಿಗೆ ಬರುತ್ತಿದ್ದುದು. ಸಂಗಾತಿ ಆಟದ ನಡುವೆ ಎದ್ದು ಹೋದರೆ ಸುಮ್ಮನಿರುವಳೆ ನಿರ್ಮಲ! ಹೋ ಎಂದು ಕಿರಿಚುವಳು.

"ಲೇ ತುಂಟಿ! ನಿನ್ನ ಹತ್ರ ಆಡೋದಕ್ಕೆ ಅವರೂ ಮಗೂನೇನೆ?" ಎನ್ನುತ್ತಾ ಸುನೀತ, ಎತ್ತಿಕೊಂಡರೆ, ಅಮ್ಮನ ಕಿವಿ, ಕೂದಲನ್ನೆಳೆಯುತ್ತಾ ಅಳುವ ಕಾರ್ಯಕ್ರಮವನ್ನು ಮುಂದುವರಿಸುವಳು ಮುದ್ದು ಕುಮಾರಿ.

ರವಿ ಷೇವ್ ತೆಗೆದುಕೊಳ್ಳಲು ಕುಳಿತರೆ, ಕನ್ನಡಿ ಎಳೆಯುವುದು, ರೇಜರ್‌ಗೆ ಕೈ ಹಾಕುವುದು, ಬಟ್ಟೆ ಹಾಕಿಕೊಳ್ಳುವಾಗ ಪ್ಯಾಂಟನ್ನು ಹಿಡಿದೆಳೆಯುವುದು, ಪರಟೆಗೆ ಕೈ ಹಾಕಿ ಕಿತ್ತುಕೊಳ್ಳುವುದು, ಮಾಡಿ ತನ್ನ ಸಿಟ್ಟನ್ನು ತೋರಿಸಿಕೊಳ್ಳುವಳು ನಿರ್ಮಲ. ಅವಳ ಅಳು...ನಗು...ಹಠ...ತುಂಟಾಟ ಎಲ್ಲವೂ ಇಷ್ಟ ರವಿ ಸುನಿತರಿಗೆ.

ರವಿ ಒಂದು ಸಾರಿ ಯಾವುದೋ ಕೆಲಸದ ಮೇಲೆ ಬೆಂಗಳೂರಿಗೆ ಹೋಗಿದ್ದ. ಅವನು ಅಲ್ಲಿಂದ ಹಿಂತಿರುಗಿ ಮನೆಯೊಳಗೆ ಅಡಿಯಿಟ್ಟಾಗ ನಿರ್ಮಲ ವರಾಂಡದಲ್ಲಿ ಆಟವಾಡುತ್ತಾ ಕುಳಿತಿದ್ದಳು. ...ಅವನನ್ನು ನೋಡುತ್ತಲೂ ಕೈ ತಟ್ಟಿ ತನ್ನ ಪುಟ್ಟ ಬಾಯನ್ನು ಅರಳಿಸಿ, ಮುಂದಕ್ಕೆ ಸರಿದು ತನ್ನ ಸಂತೋಷವನ್ನು ವ್ಯಕ್ತಪಡಿಸಿದಳು.

"ಓ ಮರಿ...ಚೆನ್ನಾಗಿದ್ದೀಯಾ..." ಚಾಚಿ ಎತ್ತಿ

ಕೊಂಡು ಮುದ್ದಾಡತೊಡಗಿದ ರವಿ. ಅವನ ದನಿ ಕೇಳಿ ಹೊರಗೆ ಬಂದಳು ಸುನಿತ.

ರವಿ ನಿರ್ಮಲಳನ್ನೆತ್ತಿಕೊಂಡು ಲಲ್ಲೆಗರೆಯುತ್ತಿದ್ದ. ಅವನ ಸುತ್ತ ದೊಡ್ಡ ದೊಡ್ಡ ಪ್ಯಾಕಂಗಳು! ಆಶ್ಚರ್ಯ ವಾಯಿತು.

"ನೋಡಿ ಸುನೀತ. ನಿರ್ಮಲಾಗೆ ಏನೇನು ಬಂದಿದೇಂತ, ಎನ್ನುತ್ತಾ ರವಿ ಮುಂದೆ ಬಂದು "ಇಳಿ ಮರಿ ನಿನಗೆ ತಮಾಷೆ ತೋರಿಸ್ತೀನಿ" ಎಂದು ನಿರ್ಮಲಳ ತಲೆಯನ್ನು ನೇವರಿಸಿ, ಕೆಳಗಿಳಿಸಿ ತಾನು ತಂದಿದ್ದ ಸಾಮಾನುಗಳನ್ನು ಒಂದೊಂದಾಗಿ ಬಿಡಿಸಿ ತೋರಿಸತೊಡಗಿದ.

ದೊಡ್ಡದಾಗಿ ಕಟ್ಟಿರಿಸಿದ ಸಾಮಾನನ್ನು ಬಿಚ್ಚಿದಾಗ ಸುನಿತ ಅದನ್ನು ಕಣ್ಣರಳಿಸಿ,

"ಪೆರಾಂಬ್ಯುಲೇಟರ್!" ಅಚ್ಚರಿಗೊಂಡಳು.

ಉಳಿದವುಗಳನ್ನು ಬಿಚ್ಚಿದ. ರಂಗು ರಂಗಿನ ಬೊಂಬೆಗಳು ವಿಮಾನ, ಕಾರು, ರೈಲು, ತಬಲ ಬಡಿಯುತ್ತಾ ತಲೆ ಹಾಕುವ ಬೊಂಬೆ! ನರ್ತಿಸುವ ನರ್ತಕಿ. ಸೈಕಲ್ ಸವಾರ. ಬೆಕ್ಕು, ನಾಯಿ, ಆನೆ, ಕುದುರೆ, ಕೀ ಕೊಟ್ಟರೆ ಸಾಕು ತಮ್ಮ ಕೆಲಸವನ್ನು ಮಾಡಿ ತೋರಿಸುವವು.

ನರ್ತಕಿಗೆ ಕೀ ಕೊಟ್ಟಾಗ ನರ್ತಿಸುತ್ತಾ ಮುಂದೆ ಬಂದಳು ನಿರ್ಮಲೆಯನ್ನಾಗಲೆ ಬಣ್ಣ ಬಣ್ಣದ ಬೊಂಬೆಗಳ ಲೋಕ ಮೋಹಿಸಿತ್ತು. ಅವಳು ತಾನೂ ಕುಣಿಯುತ್ತಾ ಪುಟ್ಟ ಪುಟ್ಟ ಹೆಜ್ಜೆಗಳನ್ನು ಹಾಕಿಕೊಂಡು ಮುಂದೆ ಸರಿದಳು.

ನರ್ತಿಸುತ್ತಾ ಬರುತ್ತಿರುವ ಬೊಂಬೆ, ಅದಕ್ಕಿದಿರಾಗಿ ಕುಣಿಯುತ್ತಾ ನಡೆದಿದ್ದ ನಿರ್ಮಲ. ಇದನ್ನು ನೋಡಿ ಇದ್ದಕ್ಕಿದ್ದಂತೆ ಸುನೀತಳ ಕೊರಳಿಂದ ಸಣ್ಣದಾಗಿ ಹೊರಟಿತು.

ಪುಟ್ಟ ಪುಟ್ಟ ಹೆಜ್ಜೆ ಇಟ್ಟು,
ಬಣ್ಣದ ಅಂಗಿ ತೊಟ್ಟು ತಂಗಿ ಬರ್‍ತ್ಾಳೆ"

ತಾಯಿ ಮಗಳು ಬೊಂಬೆಗಳ ಲೋಕದಲ್ಲಿ, ಸಂತೋಷದಿಂದ, ಮೈಮರೆಯುತ್ತಿರುವುದನ್ನು ನೋಡಿದಾಗ ಥಟ್ಟನೆ ರವಿಯ ಕಣ್ಣಿಂದ ಎರಡು ತೊಟ್ಟು ನೀರು ಉರುಳಿತು. ಬಹುಶಃ ವಿಮಲೆಯ ನೆನಪು ಬಂದಿರಬೇಕು. ಇಲ್ಲವೆ ತಾಯಿ ಮಗಳ ಸಂತೋಷವನು ನೋಡಿ ಆನಂದ ಭಾಷ್ಪಗಳುದುರಿರಬೇಕು.

ಸುನೀತ ಕಣ್ಣೀರನ್ನು ಎಲ್ಲಿ ಕಂಡು ಬಿಡುವಳೋ ಎನ್ನುವ ಭಯ ರವಿಗೆ. ಅವನು ಒಂದು ಪಕ್ಕಕ್ಕೆ ತಿರುಗಿ ಕಣ್ಣೊರಸಿಕೊಂಡ.

ಸಣ್ಣಗೆ ಸಂತೋಷದಿಂದ ಹಾಡಿಕೊಳ್ಳುತ್ತಿದ್ದ ಸುನೀತ ಇದ್ದಕ್ಕಿದ್ದಂತೆ ನಿಲ್ಲಿಸಿ ಬಿಟ್ಟಳು. ತಾನೇಕೆ ಸಂತೋಷದಿಂದ ಹುಚ್ಚಳಾದೆನೊ! ಇದಕ್ಕೆಲ್ಲಾ ರವಿ ಎಷ್ಟೊಂದು ತೆತ್ತಿರಬೇಕು ! ಒಂದು ವೇಳೆ ಆನಂದನಾಗಿದ್ದರೂ ಇಷ್ಟೆಲ್ಲಾ ತರುತ್ತಿರಲಿಲ್ಲವೆನ್ನಿಸಿತು.

"ಇಷ್ಟೆಲ್ಲಾ ದುಡ್ಡು ಯಾಕೆ ತೆತ್ತಿರಿ ರವಿ. ನಾಲ್ಕು ದಿನ ಅಷ್ಟೆ, ಆಮೇಲೆ ಇವಳ ಕೈಲಿ ಒಂದೂ ಉಳಿಯೋಲ್ಲ" ಎಂದಳು.

"ಹೋದ್ರೆ ಹೋಗಲಿ ಬಿಡಿ. ಅವಳಿಗೆ ಹೇಗೆ ಸಂತೋಷವೊ ಹಾಗೆ ಆಡಲಿ. ಅವಳು ಆಡಿದ ಹಾಗೆ ನೀವೂ ನಾನೂ ಈಗ ಆಡೋದಕ್ಕೆ ಆಗುತ್ತೆ ?"

ಹೀಗಂದು ರವಿಯು ಉಳಿದ ಗೊಂಬೆಗಳಿಗೂ ಕೀ ತಿರುವಿ, ಓಡಿಸಿ, ಸುತ್ತಿಸಿ, ಹಾರಿಸಿ, ನಿರ್ಮಲಳನ್ನು ತೃಪ್ತಿಪಡಿಸಿದ.

"ಮರೆತೇ ಹೋಯ್ತು ನೋಡಿ, ಈಗಿನ್ನಾ ಊರ್‍ನಿಂದ ಬಂದಿದೀರಿ, ಏನು ಮರೆವೊ ಕೈ ಕಾಲು ತೊಳ್ಕೊಳ್ಳೀಂತ ಕೂಡ ನಿಮಗೆ ಹೇಳಲಿಲ್ಲ. ಏಳಿ, ಮೊದಲು ಊಟ ಮಾಡಿ" ಎನ್ನುತ್ತಾ ಸುನಿತ ನಿರ್ಮಲೆಯನ್ನು ಎತ್ತಿಕೊಂಡು ಹೋಗುವುದರಲ್ಲಿದ್ದಳು.

ಆಟವಾಡಲು ಆಕರ್ಷಕವಾದ ಇಷ್ಟೊಂದು ಬೊಂಬೆಗಳು ಸಿಕ್ಕಿರೋವಾಗ ಅವುಗಳನ್ನು ಬಿಟ್ಟು ಹೋಗಲು ಒಪ್ಪಿಯಾಳೆ ನಿರ್ಮಲ! ಸರಿ, ಮುಷ್ಕರ ಹೂಡಿದಳು.

"ಬಿಟ್ಟು ಬಿಡಿ. ಆಡಿಕೊಳ್ಳಲಿ!"

"ಸರಿ, ಒಂದೇ ದಿನಕ್ಕೆ ಮುರಿದು ಹಾಕಿ ಬಿಡ್ತಾಳೆ ರವಿ. ಎಲ್ಲವನ್ನೂ ಎತ್ತಿಟ್ಟು, ಯಾವುದಾದರೂ ಒಂದನ್ನ ಕೊಟ್ಟರೆ ಸಾಕು. ಆಡ್ಕೊಳ್ತಿರ್‍ತಾಳೆ"

ಸುನಿತಳ ಮಾತು ಕೇಳಿ ರವಿಗೆ ನಗು ಬಂದಿತು.

"ಅವುಗಳನ್ನ ಆಡಿ...ಎತ್ತಿ ಬಿಸಾಡಿ ಮುರಿಯೋದ್ರಿಂದ ಮಕ್ಕಳ ಮನಸ್ಸಿಗೆ ಅದೆಷ್ಟು ಆನಂದ ಆಗುತ್ತೆ ಅನ್ನೋದು ನಿಮಗೆ ತಿಳಿಯದೆ ಸುನಿತ?"

"ಅದೆಲ್ಲಾ ಸರಿ...ಆದರೆ..." ಏನೋ ಅನುಮಾನಿಸಿದಳು ಸುನಿತ.

"ಇದಕ್ಕೆಲ್ಲಾ ನಾನು ಹಣ ಖರ್ಚು ಮಾಡಿದೇಂತಾನ"

ನಕ್ಕ ರವಿ. ನಿರ್ಮಲ ತನ್ನ ಮಗಳಲ್ಲವೆ? ತಾನು ತಂದುಕೊಡದೆ ಹೋದ್ರೆ ಮತ್ಯಾರು ತಂದುಕೊಡಬೇಕು ಅವಳಿಗೆ. ಎಂದುಕೊಂಡ ತನ್ನಲ್ಲೇ.

ನಿರ್ಮಲೆಯನ್ನು ನಿತ್ಯವೂ ಕೆಲಸದವಳು ಸ್ವಲ್ಪ ದೂರದವರೆಗೆ ಪ್ರಾಂನಲ್ಲಿ ಕುಳ್ಳಿರಿಸಿಕೊಂಡು ಸುತ್ತಾಡಿಸುತ್ತಿದ್ದಳು. ಒಂದೊಂದು ದಿನ ಸುನಿತಳೇ ತಳ್ಳಿಕೊಂಡು ಹೋಗುವಳು.

ಕೆಲಸದವಳಿಗೂ ಬಿಡುವಿಲ್ಲದೆ, ಸುನಿತೇಗೂ ಚೆನ್ನಾಗಿಲ್ಲದಿದ್ದ ದಿನ ರವಿಯೇ ಹೋಗುತ್ತಿದ್ದ. ಬಯಲಿನಲ್ಲಿ ಒಂದು ಕಡೆ ಪ್ರಾಮ್ ನಿಲ್ಲಿಸಿ, ನಿರ್ಮಲೆಯನ್ನು ಮನದಣಿಯೆ ಮುದ್ದಾಡಿ ತೃಪ್ತಿಪಟ್ಟುಕೊಳ್ಳುತ್ತಿದ್ದ. ಆಗ ಅವನ ಬಳಿಯಿದ್ದ ಬಿಸ್ಕತ್ತು ಚಾಕಲೇಟ್‌ಗಳನ್ನು ಸೂರೆ ಮಾಡುವುದೆಂದರೆ ಬಹಳ ಇಷ್ಟ ನಿರ್ಮಲೆಗೆ.

ಅವಳು ತನ್ನ ಪುಟ್ಟ ಬಾಯಲ್ಲಿ ಚಾಕಲೇಟನ್ನಿಟ್ಟುಕೊಂಡು ಮೆಲ್ಲುವಾಗ ಥಟ್ಟನೆ ವಿಮಲೆಯ ನೆನಪಾಗುವುದು. ರವಿಗೆ.

ಚಾಕಲೇಟ್ ಎಂದರೆ ಎಷ್ಟು ಇಷ್ಟಪಡುತ್ತಿದ್ದಳು ವಿಮಲ. ತಾನು ಎಷ್ಟೋ ಸಾರಿ ಹೊಟ್ಟೆಬಾಕಿ, ಎಲ್ಲಿ ಹೋದ್ರೂ ಇವಳಿಗೆ ತಿಂಡಿ ಬೇಕೂಂತ ತಾನು ಹಾಸ್ಯ ಮಾಡುತ್ತಿರಲಿಲ್ಲವೆ? ತಾನು ಸಿಗರೇಟು ಸೇದುತ್ತಿದ್ದುದನ್ನು ನೋಡಿ ಸ್ಟೀಂ ಇಂಜಿನ್ ಅಂತ ಹಾಸ್ಯ ಮಾಡಿ ನಗುತ್ತಿದ್ದ ಆ ಮೋಹಕ ಮುಖವಿನ್ನೆಲ್ಲಿ ?

ಇನ್ನು ಆ ಸುದಿನಗಳ ಸುಂದರ ಗಳಿಗೆಗಳು. ಗತ ಕಾಲದ ಗರ್ಭದಲ್ಲಡಗಿ ಹೋದಂತಾದವು. ಮತ್ತೆ ಅವು ಮರಳಿ ಬರಲು ಸಾಧ್ಯವೆ?

ಕಳೆದು ಹೋದ ಆ ಸುಂದರ ಸ್ವಪ್ನವನ್ನು ನೆನೆದು ಸವಿಯುತ್ತಾ, ಅದೆಷ್ಟೋ ಹೊತ್ತು ಭಾವ ಪರವಶನಾಗಿ ಕುಳಿತು ಬಿಡುತ್ತಿದ್ದ ರವಿ.

ನಿರ್ಮಲ ಅದೆಷ್ಟು ಹೊತ್ತು ಒಬ್ಬಳೆ ಆಟವಾಡಿಯಾಳು? ರವಿಯ ತೊಡೆಯನ್ನೇರಿ ರಿಸ್ಟ್‌ವಾಚ್‌ಗೂ, ಜೇಬಿಗೋ ಕೈ ಹಾಕುವಳು.

"ಓ ಮರಿ...ನಿನ್ನ ಮರೆತು ಕುಳಿತು ಬಿಟ್ಟೆ. ಬಾ" ಎಂದು ನಿರ್ಮಲೆಯನ್ನು ಪ್ರಾಮ್‌ನಲ್ಲಿ ಕುಳ್ಳಿರಿಸಿಕೊಂಡು ಮನೆಗೆ ಕರೆ ತರುವನು.

ನಿರ್ಮಲೆಯನ್ನು ತನ್ನ ಸ್ವಂತ ಮಗಳೊ ಎನ್ನುವ ರೀತಿಯಲ್ಲಿ ರವಿ ಪ್ರೀತಿಸುತ್ತಿದ್ದುದನ್ನು ಕಂಡು ಸುನೀತ,

ನಿರ್ಮಲ ಅದೆಷ್ಟು ಪುಣ್ಯ ಮಾಡಿರುವಳೊ ! ತಂದೆಯ ವಾತ್ಸಲ್ಯದ ಕೊರತೆಯನ್ನೇ ಕಂಡರಿಯಳು. ಎಂದುಕೊಳ್ಳುತ್ತಿದ್ದಳು.

ಜರ್ಮನಿಗೆ ಹೋದ ಹೊಸದರಲ್ಲಿ ಆನಂದ ಸುನೀತಳ ಪತ್ರಗಳಿಗೆಲ್ಲಾ ಒಡನೆಯೇ ಉತ್ತರ ಬರೆಯುತ್ತಿದ್ದ. ಈಚೀಚೆಗಂತೂ ಇಲ್ಲಿನ ಕೋರ್ಸ್ ತುಂಬಾ ಕಷ್ಟ ಪತ್ರಗಳನ್ನು ಬರೆಯಲೂ ಸಮಯವಿಲ್ಲವೆಂದು. ಅತ ರೂಪವಾಗಿ ಬರೆಯಲು ಮೊದಲು ಮಾಡಿದ್ದ.

ಅವರ ಓದಿಗೆ ತೊಂದರೆಯೇಕೆಂದು ಸುನಿತಳೂ ಹೆಚ್ಚಾಗಿ ಪತ್ರ ಬರೆಯುವುದನ್ನು ನಿಲ್ಲಿಸಿ ಬಿಟ್ಟಳು,

ಆದರೂ ಅವಳು ಸದಾ ತನ್ನ ಪತಿಯ ಬಗೆಯೇ ಯೋಚಿಸುತ್ತಿದ್ದಳು. ಆನಂದ ಈ ಸಮಯದಲ್ಲೇ ಹೋಗಬೇಕಿತ್ತೆ ? ನಿರ್ಮಲಳ ಆಟ ಪಾಟಗಳನ್ನು ನೋಡಿ, ಇಬ್ಬರೂ ಒಟ್ಟಿಗೆ ಸಂತೋಷಪಡಲಾಗಲಿಲ್ಲವಲ್ಲಾ ಎನ್ನಿಸುವುದು. ನಂತರ ಇವಳ ಮುದ್ದು ಮಾತುಗಳನ್ನು ಕೇಳಿ ಅದೆಷ್ಟು ಹಿಗ್ಗುವರೂ ಅವರು ಅಲ್ಲಿಂದ ಬಂದ ಮೇಲೆ, ಎಂದು ಸಮಾಧಾನಪಟ್ಟುಕೊಳ್ಳುವಳು.

ನಿರ್ಮಲೆಗೆ ಎಂದಾದರೊಂದು ದಿನ ಮೈಯಲ್ಲಿ ಹುಷಾರಿಲ್ಲದೆ ಸ್ವಲ್ಪ ಹೆಚ್ಚು ಕಡಿಮೆಯಾದರೆ ಸಾಕು, ರವಿ ತುಂಬಾ ಆತಂಕಗೊಳ್ಳುವನು. ಅವಳಿಗೆ ಸಂಪೂರ್ಣವಾಗಿ ಗುಣವಾಗುವವರೆಗೆ ಅವನ ಮನಸ್ಸಿಗೆ ಸ್ವಲ್ಪವೂ ನೆಮ್ಮದಿಯಿರುತ್ತಿರಲಿಲ್ಲ.

ಪಾಪ ಇವರು ಅವಳಿಗಾಗಿ ಎಷ್ಟು ಒದ್ದಾಡಿಕೊಳ್ತಾರೆ ಎನ್ನಿಸುವುದು.

ಒಂದು ದಿನ ಸುನೀತ ನಿರ್ಮಲೆಯನ್ನು ಎತ್ತಿಕೊಂಡಾಗ ಅವಳ ಮೈ ಬಿಸಿಯಾಗಿದ್ದಂತಿತ್ತು. ರವಿಗ ಹೇಳಿದರೆ ಅದನ್ನೇ ಅಗಾಧ ಮಾಡುತ್ತಾರೆ. ದಿನವೆಲ್ಲಾ ಆಸ್ಪತ್ರೆಯಲ್ಲಿ ದುಡಿದು ಬಂದಿರ್ತಾರೆ ಪಾಪ. ಅವರಿಗೆ ತೊಂದರೆಯೇಕೆ ಕೊಡಬೇಕೆಂದು ಯೋಚಿಸಿ, ಸುನಿತ ಹೇಳಲೇ ಇಲ್ಲ.

ಮೂರು ದಿನಗಳು ಸುಮಾರಾಗಿದ್ದ ಜ್ವರ ನಾಲ್ಕನೆಯ ದಿನ ಇದ್ದಕ್ಕಿದ್ದಂತೆ ಹೆಚ್ಚಾಗಿ ಹೋಯಿತು. ಸುನಿತಗೀಗ ವಿಪರೀತ ಗಾಬರಿಯಾಯಿತು. ರವಿ ಮನೆಗೆ ಬಂದಾಗ ಕೇಳಬೇಕೆಂದುಕೊಂಡಳು.

ಊಟವಾದ ನಂತರ ರವಿ ಕೇಳಿದ.

"ನಿರ್ಮಲ ಕಾಣಿಸ್ತಿಲ್ಲವಲ್ಲ ಸುನೀತ. ಮಲಗಿದಾಳೇನು? "

"ಯಾಕೋ ಮೈ ಬಿಸಿಯಾದ ಹಾಗಿದೆ, ಮಲಗಿದಾಳೆ."

ತಾಯಿಯ ಮಾತಿನ್ನೂ ಮುಗಿದಿರಲಿಲ್ಲ, ನಿರ್ಮಲ ಪುಟ್ಟ ಪುಟ್ಟ ಹೆಜ್ಜೆಗಳನ್ನು ಹಾಕಿಕೊಂಡು ಹೊರಗೆ ಬಂದಳು. ಜ್ವರ ಹೆಚ್ಚಾಗಿದ್ದುದರಿಂದ ಮುಖ ಕೆಂಪಾಗಿತ್ತು.

ಅವಳನ್ನು ನೋಡುತ್ತಿದ್ದಂತೆಯೆ ರವಿ ತುಂಬಾ ಜ್ವರ ಬಂದಿದೆಯೆಂದು ತಿಳಿದುಕೊಂಡ. ಎರಡು ದಿನಗಳಿಂದ ಅವಳನ್ನು ನೋಡಲೇ ಆಗಿರಲಿಲ್ಲ. ಆಸ್ಪತ್ರೆಗೆ ಸೀರಿಯಸ್ ಕೇಸೊಂದು ಬಂದಿದ್ದುದರಿಂದ ಊಟ ಮಾಡಿದ ಕೂಡಲೆ ಹೊರಟು ಹೋಗಿ ಬಿಡುತ್ತಿದ್ದ. ರಾತ್ರಿ ಬಂದಾಗ ಅವಳು ಮಲಗಿರುತ್ತಿದ್ದಳು. ಈ ದಿನ ಅವಳಿಗೆ ತುಂಬಾ ಜ್ವರ ಬಂದಿದೆಯೆಂದು ತಿಳಿದಾಗ, ತಾನು ಸರಿಯಾಗಿ ಅವಳನ್ನು ವಿಚಾರಿಸದೆ ತಪ್ಪು ಮಾಡಿದೆನೆನ್ನಿಸಿತು ಅವನಿಗೆ.

"ಬಾ ಮರಿ ಇಲ್ಲಿ" ಎಂದು ನಿರ್ಮಲೆಯನ್ನು ಎತ್ತಿಕೊಳ್ಳಲು ಹೋದ. ಅವಳನ್ನು ಮುಟ್ಟಿದಾಗ ಬಿಸಿಯಾದ ಮಾಂಸದ ಮುದ್ದೆಯನ್ನು ಮುಟ್ಟಿದಂತಾಯಿತು. ತಕ್ಷಣ ಥರ್ಮಾಮೀಟರ್ ತೆಗೆದು ಟೆಂಪರೇಚರ್ ನೋಡಿದ.

"ಎಷ್ಟು ಡಿಗ್ರಿಗಳಿವೆ?" ಕಾತುರದಿಂದ ಸುನಿತ ಕೇಳಿದರೂ, ಅದನ್ನು ಕೇಳಿಸಿಕೊಳ್ಳದೆ ಆತುರದಿಂದ,

"ಮೈ ತುಂಬಾ ಬಟ್ಟೆ ಹಾಕಿ, ಬೆಚ್ಚಗೆ ಹೊದ್ದಿಸಿ, ಮಲಗಿಸಿ, ಮಾತ್ರೆ ಕಳಿಸಿ ಕೊಡ್ತೀನಿ" ಎಂದವನೆ ನಡೆದೇ ಬಿಟ್ಟ.

ತುಂಬಾ ಜ್ವರ ಇದೆಯೊ ಏನೊ! ಅದಕ್ಕೇ ಅಷ್ಟು ಗಾಬರಿಯಿಂದ ಹೋದರು. ಎಂದು ಸುನಿತ ಅಂದುಕೊಂಡರೂ, ಊಟ ಮಾಡಿದ ಕೂಡಲೆ ಹೊರಟು ಬಿಟ್ರಲ್ಲಾ, ಒಂದು ನಿಮಿಷವಾದ್ರೂ ಕೂತ್ಕೊಳ್ಳಿಲ್ಲ, ಪಾಪ! ತುಂಬಾ ಕೆಲಸವೇನೊ ಎಂದುಕೊಂಡಳು.

ಕೆಲವು ನಿಮಿಷಗಳಲ್ಲಿ ತಾನೇ ಬಂದ ರವಿ. ಔಷಧಿಯನ್ನು ಸುನೀತಳ ಕೈಗೆ ಕೊಟ್ಟು, ಮಧ್ಯಾಹ್ನ ಮೂರು ಗಂಟೆಗೆ ಒಂದು ಸಾರಿ ಕುಡಿಸಿ ಎಂದು ಹೇಳಿ, ಹೋದವನು ರಾತ್ರೆ ಬಹಳ ಬೇಗನೆ ಮನೆಗೆ ಬಂದ. ನಿರ್ಮಲ ಹಾಯಾಗಿ ನಿದ್ದೆ ಮಾಡುತ್ತಿದ್ದುದನ್ನು ಕಂಡು ಸ್ವಲ್ಪ ಸಮಾಧಾನವಾಯಿತು ಅವನಿಗೆ.

ಊಟದ ಸಮಯವಿನ್ನೂ ದೂರವಿತ್ತು. ನಿರ್ಮಲೆಯೇನಾದರೂ ಎದ್ದು ಆಡುವಂತಿದ್ದರೆ ಹೇಗೊ ಕಾಲ ಕಳೆಯುತ್ತಿತ್ತು, ಈಗ ಇಲ್ಲಿ ಸುಮ್ಮನೆ ಕುಳಿತೇನು ಮಾಡುವುದು ಎನ್ನಿಸಿದರೂ ಮತ್ತೆ ಹೊರಗೆ ಹೋಗಲು ಮನಸ್ಸು ಬರಲಿಲ್ಲ. ಯಾವುದೋ ಒಂದು ಮ್ಯಾಗಜೈನನ್ನು ಹಿಡಿದು ಸಿಗರೇಟು ಸೇದುತ್ತಾ ಕುಳಿತು ಬಿಟ್ಟ.

ಅವನು ಒಂದಾದ ಮೇಲೊಂದರಂತೆ ಸಿಗರೇಟು ಸೇದುತ್ತಿದ್ದುದನ್ನು ಒಳಗಿನಿಂದಲೇ ಗಮನಿಸಿದ್ದಳು ಸುನಿತಾ. ಅವಳಿಗಿನ್ನು ತಡೆಯಲಾಗಲಿಲ್ಲ. ಹೊರಗೆ ಬಂದು, ನೋಡಿದಾಗ ಆಷ್‌ಟ್ರೇ ಸುತ್ತ ಸಿಗರೇಟಿನ ತುಣುಕುಗಳು ರಾಶಿ ಬಿದ್ದಿತ್ತು. ಸುನಿತ ಬಂದಿದ್ದುದು ರವಿಗೆ ತಿಳಿಯಲಿಲ್ಲ. ಪುಸ್ತಕದಲ್ಲಿ ಮುಖ ಹುದುಗಿಸಿ ಸಿಗರೇಟಿನ ಕೊನೆಯ ಭಾಗವನ್ನು ಜೋರಾಗಿ ಎಳೆಯುತ್ತಿದ್ದ.

"ರವಿ...?" ಕೂಗಿದಳು.

ರವಿ ಬೆಚ್ಚಿ ತಿರುಗಿ ನೋಡಿದ. ಸುಟ್ಟು ಕೊನೆಯವರೆಗೂ ಬಂದಿದ್ದ ತುಣುಕು ಅವನ ಬೆರಳುಗಳಿಗೆ ಚುರುಕು ಮುಟ್ಟಿಸಿತು. ತಕ್ಷಣ ಅದನ್ನು ಕೆಳಗೆಸೆದು ಬಾಯಲ್ಲಿ ಬಂಧಿಸಿಟ್ಟಿದ್ದ ಹೊಗೆಯನ್ನು ಹೊರಗೆ ಬಿಟ್ಟ. ಅದು ಸುರುಳಿ ಸುರಳಿಯಾಗಿ ಸುತ್ತಿಕೊಂಡು ಬಂದು ಇದಿರಿನಲ್ಲಿದ್ದ ಸುನೀತಳ ಮುಖವನ್ನಾವರಿಸಿತು.

"ಏನು ರವಿ ಇದು?" ಮುಂದುಗಡೆ ಆವರಿಸಿದ ಹೊಗೆಯ ಮೋಡವನ್ನು ಓಡಿಸಲು ಯತ್ನಿಸುತ್ತಾ ಕೇಳಿದಳು ಸುನಿತ.

"ಓಹ್! ಸಾರಿ ಸುನೀತ." ತೊದಲಿದ ರವಿ.

ಅವನ ದೃಷ್ಟಿ ಕೆಳಕ್ಕೆ ಹರಿಯಿತು. ಕೆಳಗೆ ಬಿದ್ದಿದ್ದ ಬೂದಿಯ ರಾಶಿ ಮತ್ತು ಬಿಳಿಯ ತುಣುಕುಗಳನ್ನು ಕಂಡು ಅವನಿಗೇ ನಾಚಿಕೆಯೆನ್ನಿಸಿತು. ಸುನಿತ ಏನಂದುಕೊಂಡಳೊ?! ಕ್ಷಮೆ ಯಾಚನೆ ಮಾಡುವವನಂತೆ ಅವಳ ಕಡೆ ನೋಡಿದ.

"ರವಿ ನೀವು ವೈದ್ಯರಲ್ಲವೆ?"

"ಅಲ್ಲವೆಂದು ಯಾರು ಹೇಳ್ತಾರೆ ಸುನಿತ?"

ಹೆಚ್ಚು ಧೂಮಪಾನ ಮಾಡೋದು ಕೆಟ್ಟದ್ದೂಂತ ಡಾಕ್ಟರುಗಳು ಹೇಳ್ತಾರಲ್ಲವೆ?"

ಸುನೀತ ಯಾಕೆ ಹಾಗೆ ಕೇಳಿದಳೆಂದು ಈಗ ಅರ್ಥವಾಯಿತು ಅವನಿಗೆ.

ನೊಂದ ಬಾಳಿನ ಈ ಬೆಂದ ಮನಸ್ಸನ್ನು ಹಗುರ ಮಾಡುವ ಈ ದಿವ್ಯ ಶಕ್ತಿಯನ್ನು ಹೇಗೆ ಕಡಿಮೆ ಮಾಡಲಿ? ಎನ್ನಿಸಿತು ಅವನಿಗೆ. ಅದನ್ನು ಸುನಿತಳ ಮುಂದೆ ಹೇಗೆ ಹೇಳುವುದು?" ಸಣ್ಣಗೆ ನಕ್ಕು ರವಿ ಮತ್ತೆ ಹೇಳಿದ.

"ಹೇಳುವುದೇನೊ ಹಾಗೆ. ವೈದ್ಯರು ಹೇಳಿದ ಹಾಗೇ ಮಾಡಬೇಕೂಂತ ಏನಿಲ್ಲವಲ್ಲ, ಸ್ಮೋಕ್ ಮಾಡೋದ್ರಿಂದ ಕೆಲವರಿಗೆ ಕೆಡಕಾದ್ರೆ ಕೆಲವರಿಗೆ ರಿಲೀಫ್ ಸಿಕ್ಕುತ್ತೆ ಅನ್ನೋದು ನಿಮಗೆ ತಿಳಿದಿರಲಾರದು ಸುನಿತ. ಈಚೀಗಂತೂ ಇದು ನನ್ನ ಇಂಟಿಮೇಟ್ ಫ್ರೆಂಡ್ ಆಗಿಬಿಟ್ಟಿದೆ, ಬಿಡೋದಕ್ಕೆ ಕಷ್ಟ ಅನಿಸುತ್ತೆ"

ರವಿ ಹೇಳಿದುದನ್ನು ಕೇಳಿದ ಮೇಲೆ ಅವನಿಗೆಷ್ಟು ಒಳ ನೋವಿದೆಯೆಂದು ತಿಳಿದು, ಸುನೀತಳ ಕಣ್ಣು ಮಂಜಾಯಿತು.

"ನಿಮಗೆ ನೋವಿದೆಯೆಂದು ನನಗೆ ತಿಳಿಯದೇನಿಲ್ಲ ರವಿ. ಆದರೆ ನೋವನ್ನು ಮರೆಯಲು ಇಂತಹ ದುಶ್ಚಟಗಳನ್ನು ಬೆಳೆಸಿಕೊಂಡಿರೇಕೆ? ತಾತ್ಕಾಲಿಕ ಪರಿಹಾರ ಸಿಕ್ಕರೂ ಅದ್ರಿಂದ ನಿಮ್ಮ ಆರೋಗ್ಯದ ಮೇಲೆ ಕೆಟ್ಟ ಪರಿಣಾಮವಾಗದೆ ಇರೋದಿಲ್ಲ ...ಅಲ್ವೆ?"

"ಆಗ್ಲಿ ಸುನೀತ. ಪ್ರಯತ್ನಿಸ್ತೀನಿ." ಇಷ್ಟು ಹೇಳಿ ಸುಮ್ಮನಾದ ರವಿ.

ರಾತ್ರೆ ಊಟವಾದ ಮೇಲೆ ಬಹಳ ಹೊತ್ತು ಕುಳಿತಿದ್ದ. ನಿರ್ಮಲ ಎದ್ದ ಮೇಲೆ ಅವಳಿಗೆ ಮಾತ್ರೆ ಕೊಟ್ಟು ಬೆಚ್ಚಗೆ ಹೊದಿಸಿ ಮಲಗಿಸಲು ಹೇಳಿ ಹೊರಟ.

ಮನೆಗೆ ಹೋಗಿ ಮಲಗಿದರೆ ನಿದ್ದೆಯೇ ಬಾರದು. ಪುಸ್ತಕ ಒಂದನ್ನು ಹಿಡಿದು ಕುಳಿತು, ಸಿಗರೇಟ್ ಪ್ಯಾಕಿಗೆ ಕೈ ಹಾಕಿದ. ತಕ್ಷಣ ಸುನೀತ ಹೇಳಿದ್ದದು ನೆನಪಿಗೆ ಬಂದು ಕೈ ಹಾಗೇ ಹಿಂದೆ ಸರಿಯಿತು.

ಇದರ ಬದಲು ಒಳ್ಳೆಯ ಪುಸ್ತಕಗಳನ್ನು ಓದುವ ಅಭ್ಯಾಸವನ್ನಾದರೂ ಮಾಡಿಕೊಳ್ಳಬೇಕು ಎಂದುಕೊಂಡ.

ಸ್ವಲ್ಪ ಹೊತ್ತಿನ ವರೆಗೆ ಹಿಡಿದ ಪುಸ್ತಕವನ್ನು ಓದುತ್ತಿದ್ದು ಮಲಗಲು ಎದ್ದ. ನಿದ್ದೆಯೇ ಬಾರದು. ಎಂಥದೋ ಬೇಸರ! ಸಿಗರೇಟು ಪ್ಯಾಕು ಎದುರಿನಲ್ಲೇ ಇತ್ತು. ಒಂದೆರಡನ್ನು ತುಟಿಯಲ್ಲಿ ಕಚ್ಚಿ ಬೂದಿ ಮಾಡಿದ ಮೇಲೆ ಮನಸ್ಸು ಎಷ್ಟೋ ಹಗುರವಾದಂತಾಯಿತು. ಸ್ವಲ್ಪ ಹೊತ್ತಿನಲ್ಲೇ ನಿದ್ದೆಯೂ ಬಂತು.

ಮಧ್ಯ ರಾತ್ರಿಯ ವೇಳೆಗೆ ಎಚ್ಚರವಾಯಿತು. ನಿರ್ಮಲೆ ನೆನಪಿಗೆ ಬಂದಳು. ಮಧ್ಯೆ ಅವಳು ಎದ್ದಿರಬೇಕು. ಸುನೀತ ಎಚ್ಚರವಿಲ್ಲದೆ ಮಲಗಿದ್ದರೆ! ಬಹಳ ಆತ್ರಲೋ ಏನೋ! ಸುನಿತ ಒಂದು ವೇಳೆ ಮಾತ್ರೆ ಕೊಡುವದನ್ನು-ಮರೆತಿದ್ದರೆ, ಟೆಂಪರೇಚರ್ ಇಳಿಯದೆ ಹೋಗಿದ್ರೆ, ಎಂದು ಏನೇನೋ ಯೋಚನೆ. ಹೋಗಿ ನೋಡಿಕೊಂಡೇ ಬರಬೇಕೆಂದುಕೊಂಡು ಥಟ್ಟನೆ ಹಾಸಿಗೆ ಬಿಟ್ಟೆದ್ದ.

ಹೊರಗಡೆ ದಟ್ಟವಾದ ಕತ್ತಲು ಕವಿದಿತ್ತು. ಕೊರೆಯುವ ಗಾಳಿ ಸುಯ್ ಸುಯ್ ಎಂದು ಸುಳಿಯುತ್ತಿತ್ತು.

ಟಕ್ ಟಕ್...ಬಾಗಿಲು ತಟ್ಟಿದ ಶಬ್ದ ಕೇಳಿ ಎಚ್ಚರವಾಯಿತು ಸುನಿತಗೆ. ಕಣ್ಮುಚ್ಚಿಕೊಂಡು ಆಲಿಸಿದಳು. ಮತ್ತೆ ಅದೇ ಶಬ್ದ.

ಈ ಹೊತ್ತಿನಲ್ಲಿ ಯಾರಿರಬೇಕು! ತಿಮ್ಮಯ್ಯನೇನಾದರೂ ತಟ್ಟುತ್ತಾನೆಂದುಕೊಂಡರೆ ಅವನು ಈ ದಿನ ಮಲಗಲು ಬರುವುದಿಲ್ಲವೆಂದು ತಿಳಿಸಿ ಹೋಗಿದ್ದ. ಇನ್ನು ಹೆಣ್ಣಾಳು! ಅಡಿಗೆಮನೆಯಲ್ಲಿ ಒಂದು ಕಡೆ ಮಲಗಿದ್ದಳು. ಒಂದು ಸಾರಿ ಅವಳಿಗೆ ಕಣ್ಣು ಹತ್ತಿತೆಂದರೆ ಬೆಳಗಾದ ಮೇಲೆಯೇ ಆಕೆಗೆ ಎಚ್ಚರವಾಗುತ್ತಿದ್ದುದು. ಏನಾದರಾಗಲಿ ಅವಳನ್ನು ಎಬ್ಬಿಸಿಕೊಂಡು ಹೋಗಿ ಬಾಗಿಲು ತೆಗೆಯಬೇಕೆಂದು ಹಾಲ್‌ನ ದೀಪದ ಗುಂಡಿಯನ್ನೊತ್ತಿದಳು. ಗಡಿಯಾರದ ಕಡೆ ನೋಡಿದಾಗ ಗಂಟೆ ಹನ್ನೆರಡಾಗಿತ್ತು.

ಮತ್ತೆ ಬಾಗಿಲು ತಟ್ಟಿದ ಸದ್ದು. ಸುಶೀಲ ಮಾತಾಡಿಸಿದರೂ ಎಚ್ಚರವಾಗಲಿಲ್ಲ ಅವಳಿಗೆ. ಸುನೀತ ಬೆವರಿ ಹೋದಳು. ಇನ್ನೊಮ್ಮೆ ಬಾಗಿಲು ತಟ್ಟುವ ಸದ್ದಿನೊಂದಿಗೇ ರವಿಯ ದನಿ! ತಿಮ್ಮಯ್ಯನ ಹೆಸರನ್ನು ಹಿಡಿದು ಮೆಲ್ಲಗೆ ಕೂಗುತ್ತಿದ್ದ. ರವಿಯ ದನಿಯನು ಕೇಳಿ ಸ್ವಲ್ಪ ಧೈರ್ಯ ಬಂದಿತು ಸುನೀತಗೆ ಎದ್ದು ಬಂದು ಬಾಗಿಲು ತೆಗೆದಳು.

"ರವಿಯನ್ನು ಕಾಣುತ್ತಲೂ "ಇಷ್ಟು ಹೊತ್ತಿನಲ್ಲೇಕೆ ರವಿ?"

"ಮಲಗಿದ್ರಾ ಸುನೀತ?" ರವಿಯ ಮಾತು ವಿಚಿತ್ರವಾಗಿತ್ತು.

ಈ ಸರಿ ರಾತ್ರೆಯಲ್ಲಿ ಮಲಗದೆ ಇನ್ನೇನು ಜಾಗರಣೆ ಮಾಡಬೇಕಿತ್ತೆ? ಎಂದುಕೊಂಡಳು ಸುನೀತ. ಅವನ ಗಾಬರಿತುಂಬಿದ ಮುಖ, ನಿದ್ದೆಯಿಲ್ಲದೆ ಕೆಂಪಾದ ಕಣ್ಣು, ಕೆದರಿದ ತಲೆ, ಮೇಲಾಗಿ ಮಧ್ಯ ರಾತ್ರಿಯಲ್ಲಿ ಬಂದು ಈ ರೀತಿ ವರ್ತಿಸುತ್ತಿರುವುದು ಇದೆಲ್ಲಾ ಒಂದು ರೀತಿಯ ಭಯವನ್ನು ಹುಟ್ಟಿಸುವಂತಿತ್ತು.

ಸುನೀತ ಅವನ ಕಡೆ ಆಶ್ಚರ್ಯದಿಂದ ನೋಡುತ್ತಾ ನಿಂತಳು.

"ನನಗಂತೂ ನಿದ್ದೆಯೇ ಇಲ್ಲ ನೋಡಿ . ನಿರ್ಮಲೆಯದೇ ಯೋಚನೆ! ಜ್ವರ ಇಳಿದಿದೆಯೋ ಇಲ್ಲವೋ, ಮಾತ್ರೆಗಳನ್ನು ಕೊಟ್ಟರೋ ಇಲ್ಲವೋಂತ ಅನ್ನಿಸ್ತು, ಬಂದು ಬಿಟ್ಟೆ!" ಎಂದು ಒಳಗಡೆ ಅಡಿಯಿರಿಸಿದ.

ಬಾಗಿಲನ್ನು ಹಾಕಿ ನಿಧಾನವಾಗಿ ಅವನ ಹಿಂದೆ ನಡೆದಳು ಸುನೀತ. ಅವಳ ಬಾಯಿಂದ ಮಾತೇ ಹೊರಡಲಿಲ್ಲ. ಒಳಗೆ ಹೋದವಳೆ ಕುರ್ಚಿಗೊರಗಿ ಬಿಟ್ಟಳು.

"ಮಗು ನಿದ್ದೆ ಮಾಡ್ತಿರೋ ಹಾಗಿದೆ. ನಿದ್ದೆ ಕೆಡಿಸಿ ಸುಮ್ನೆ ನಿಮಗೆ ತೊಂದರೆ ಕೊಟ್ಟ ಹಾಗಾಯಿತು." ಎನ್ನುತ್ತಾ ರವಿ ನಿರ್ಮಲ ಮಲಗಿದ್ದ ಕೊಠಡಿಯೊಳಗೆ ಹೋಗಿ, ಹೊದಿಕೆಯನ್ನು ಸರಿಸಿ, ಮೃದುವಾಗಿ ಅವಳ ಹಣೆಯನ್ನು ಸವರಿದ.

ಜ್ವರ ಸಂಪೂರ್ಣ ಇಳಿದು ಹೋಗಿತ್ತು. ಅವನ ಚಿಂತೆಯೂ ಹರಿಯಿತು. ಒಂದೆರಡು ಗಳಿಗೆ ಆ ಮಮತೆಯ ಬಂಧನದಲ್ಲಿ ಮುಳುಗಿ ಮೈಮರೆತ. ನಂತರ ಹೊರಗೆ ಬಂದು,

"ನಾನೀಗ ಮನೆಗೆ ಹೋಗಿ ಕಣ್ಣು ತುಂಬಾ ನಿದ್ದೆ

ಮಾಡ್ತೀನಿ. ನಿರ್ಮಲಾಗೆ ಜ್ವರ ಇಳಿದಿದೆ" ಎನ್ನುತ್ತಿದ್ದಂತೆ.

ರವಿಯ ಮುಖದ ಮೇಲೆ ಸಂತೋಷದ ರೇಖೆಗಳು ಮೂಡಿ ಬಂದವು.

ಅವನು ಬಂದಾಗ ಏನನ್ನೊ ಊಹಿಸಿದ್ದಳು ಸುನೀತ ಈಗ ಆ ವಿಚಾರವೆಲ್ಲಾ ಥಟ್ಟನೆ ದೂರವಾಯಿತು. ಅವಳ ಕಣ್ಣು ಹನಿದುಂಬಿ ಮಂಜಾಯಿತು.

ಅವಳು ಮಾತಾಡಬೇಕೆಂದು ತುಟಿ ಅಲುಗಿಸಿದಾಗ ಕಣ್ಣಿಂದ ಎರಡು ಹನಿ ಜಾರಿತು.

"ನಿರ್ಮಲಾಗೆ ಸಂಪೂರ್ಣ ಗುಣವಾಗಿದೆ. ಯಾಕೆ ದುಃಖಿಸ್ತಿದೀರಿ. ಸುನಿತ. ನೀವು ಹೀಗೆ ಗಾಬರಿಪಟ್ಕೊಂಡು ದುಃಖಿಸ್ತಾ ಎಲ್ಲಿ ಎದ್ದು ಕುಳಿತ್ಕೊಂಡು ಬಿಡ್ತೀರೋಂತ ಈಗ ಬಂದಿದ್ದು. ನನಗೂ ಹೀಗೇ ಆಗುತ್ತೆ ನಿರ್ಮಲಾಗೆ ಹುಷಾರಿಲ್ಲಾಂತ ತಿಳಿದು ಬಂದಾಗ."

ಕೊನೆಯ ಮಾತನ್ನು ಹೇಳುವಾಗ ಅವನ ದನಿ ನಡುಗುತ್ತಿತ್ತು.

"ನಾನೇನೂ ದುಃಖಿಸಿಲ್ಲ ರವಿ. ಇಷ್ಟು ಹೊತ್ನಲ್ಲಿ ಯಾಕಿಷ್ಟು ತೊಂದ್ರೆ ತಗೊಂಡ್ರಿ. ದಿನವಿಡೀ ದುಡಿದು ಬಂದಿರ್ತೀರಿ. ರಾತ್ರಿ ನಿದ್ದೆನೂ ಇಲ್ಲದಿದ್ರೆ ಆರೋಗ್ಯದ ಮೇಲೆ ಏನು ಪರಿಣಾಮವಾಗಲಿಕ್ಕಿಲ್ಲ? ಇಷ್ಟೆಲ್ಲಾ ಯಾಕೆ ಹಚ್ಕೊಬೇಕು ಹೇಳಿ?"

ಈಗ ಏನು ಹೇಳಬೇಕೊ ತಿಳಿಯದಾಯಿತು ರವಿಗೆ. ದೇವರು ತನ್ನನ್ನು ಇಕ್ಕಟ್ಟಿನಲ್ಲಿ ಸಿಕ್ಕಿಸಿದನೆಂದು ಒದ್ದಾಡಿದ. ಒಂದು ಕ್ಷಣ ಸುಮ್ಮನೆ ನಿಂತಿದ್ದು,

"ಬಾಗಿಲು ಹಾಕಿಕೊಳ್ಳಿ. ನಾನಿನ್ನು ಬರ್ತೀನಿ" ಎಂದವನೆ ಹೊರಟು ಬಿಟ್ಟ.

ಅವನು ಹೋದ ಮೇಲೆ ಒಳಗೆ ಬಂದು ಯೋಚಿಸುತ್ತಾ ಕುಳಿತಳು ಸುನಿತ.

ಒಂದು ದಿನ ರವಿ ಊಟ ಮಾಡಿ ಕುಳಿತಿದ್ದಾಗ ಸುನೀತ ಅವನೊಂದಿಗೆ ಮಾತಾಡುತ್ತಾ ಮಧ್ಯೆ ಮದುವೆಯ ಪ್ರಸ್ತಾಪವನ್ನೆತ್ತಿದಳು.

"ಇನ್ನೂ ಎಷ್ಟು ದಿನಾಂತ ರವಿ ಹೀಗಿರೋದು?

"ಯಾಕೆ? ಹೇಗಿದ್ದೇನೆ? ಏನಾದ್ರೂ ಬದಲಾವಣೆಯಾಗಬೇಕೇನು?"

"ಹೌದು. ಮುಂದಿನ ದಾರೀನ ಯೋಚಿಸ್ಬೇಡ್ವೆ? ಎಷ್ಟು ದಿನ ಋಣವಿತ್ತೋ ಅಷ್ಟು ದಿನ ಇದ್ದಳು ವಿಮಲ...ಅದನ್ನೇ ಹಚ್ಕೊಂಡಿದ್ರೆ ಹೇಗೆ ರವಿ? ದಿನಗಳು ಕಳೆಯಲೀಂತ ಸುಮ್ಮಿದ್ದೆ. ವರ್ಷದ ಮೇಲಾಯಿತು. ಎಲ್ಲಾದ್ರೂ ಒಂದ್ಕಡೆ ನೋಡಿ ಒಪ್ಕೊಳ್ಳಿ. ಇನ್ನೊಬ್ಬ ತಂಗಿ ಬೇಗ್ನೆ ಬರಲಿ."

ಹೊರಗಡೆ ಆಟವಾಡುತ್ತಿದ್ದ ನಿರ್ಮಲ, ಗೊಂಬೆಯನ್ನೆತ್ತಿಕೊಂಡು ತಾ...ತಾ...ತಾ...ತಾ ಅನ್ನುತ್ತಾ ಬಂದಳು

ವರ್ಷದ ಮೇಲಾಯ್ತು ನಿರ್ಮಲೆಗೆ...ವಿಮಲ ಇದೇ ದಿನಗಳಲ್ಲಲ್ವೆ ಹೋಗಿದ್ದು? ಎಂದುಕೊಂಡಾಗ ರವಿಯ ಮುಖ ಮಂಕಾಯಿತು.

"ಬೇಡ. ವಿಮಲ ನನ್ನ ಮನಸ್ನಲ್ಲಿ ನೆಲೆಸ್ಬಿಟ್ಟಿದಾಳೆ. ಬೇರೆಯವರಿಗೆ ಅಲ್ಲಿ ಸ್ಥಳವೇ ಇಲ್ಲ" ಎಂದ.

"ಅದ್ರಲ್ಲೇ ಸ್ವಲ್ಪ ಜಾಗ ಕೊಡಿ. ಕೊನೇವರೆಗೂ ಹೀಗೇ ಬಾಳೋದು ಕಷ್ಟ. ನೀವು ಹೀಗೆ ಕೊರಗುತಿದ್ರೆ ವಿಮಲಳ ಆತ್ಮಕ್ಕೆ ಖಂಡಿತ ತುಂಬಾ ನೋವಾಗುತ್ತೆ. ನೀವು ನಗುನಗ್ತಾ ಸಂತೋಷವಾಗಿದ್ರೆ ಅವಳ ಆತ್ಮಾನೂ ಸಂತೋಷಗೊಂಡೀತು."

ರವಿ ಯೋಚನೆಗೊಳಗಾದ.

"ಯೋಚಿಸಿ ನೋಡ್ತೀನಿ ಸುನೀತ.' ಎಂದವನೇ ನಿಧಾನವಾಗಿ ಹೆಜ್ಜೆಗಳನ್ನು ಹಾಕಿಕೊಂಡು ಅಲ್ಲಿಂದ ಹೊರಟ. ಮನೆಗೆ ಬಂದ ಮೇಲೆ ಆ ಬಗ್ಗೆ ಏನೂ ಯೋಚಿಸಲಿಲ್ಲ.

ಮರುದಿನ ಊಟಕ್ಕೆಂದು ಹೊರಡುವಾಗ ಯೋಚಿಸಿ ಹೇಳ್ತೀನಿ ಅಂದಿದ್ದ. ಈಗ ಸುನೀತ ಕೇಳಿದರೆ ಏನು ಹೇಳಬೇಕು.? ಸರಿ, ಈಗ ಅಲ್ಲಿಗೆ ಹೋಗುವುದೇ ಬೇಡ. ಒಂದು ತೀರ್ಮಾನಕ್ಕೆ ಬಂದ ಮೇಲೆಯೆ ಹೋದರಾಯಿತು ಎನ್ನಿಸಿತು. ಹಾಗೆಯೇ ಆರಾಮ ಕುರ್ಚಿಗೊರಗಿದ.

ಅವನ ಮನಸ್ಸು ಹಿಂದಿನ ದಿನಗಳ ಕಡೆ ಸರಿಯಿತು.

ವಿಮಲೆ...ಎಂತಹ ಸುಂದರ ಹೆಣ್ಣು. ಒಲವನ್ನೆಲ್ಲಾ ತುಂಬಿ ತನ್ನ ಬಾಳನ್ನು ಚೆಲುವು ಮಾಡಿ ಹೊರಟು ಹೋದಳು. ಮತ್ತೆ ಈ ಬಾಳು ಆಗಿನಂತೆ ಸಿಹಿಯಾಗಬೇಕಾದರೆ ಸುನೀತ ಹೇಳಿದ ಹಾಗೇನೆ ಮಾಡ್ಬೇಕು. ಈ ಜೀವನದಲ್ಲಿ ಸಿಹಿ ತುಂಬೋದಕ್ಕೆ ಸ್ಫೂರ್ತಿ ಕೊಡೋದಕ್ಕೆ ಸಹಚರಣಿಯೊಬ್ಬಳು ಬೇಕೆ ಬೇಕೆನ್ನಿಸಿತು.

ಆದರೆ ಕೆಲವು ಕ್ಷಣಗಳ ನಂತರ ಈ ವಿಚಾರ ಬದಲಾಯಿತು. ನಿರ್ಮಲೇನ ಈಗಿನ ಹಾಗೇನೇ ಪ್ರೀತಿಸೋದಕ್ಕೆ ಆಗುತ್ಯೇ? ಅವಳ ಹತ್ತಿರ ಹೆಚ್ಚು ಹೊತ್ತು ಕಳೆಯೋದಕ್ಕೆ ಆಗುತ್ಯೇ?

ಆನಂದ ಬರೋದಕ್ಕೆ ಇನ್ನೂ ಎರಡು ವರ್ಷವಾದ್ರೂ ಆಗುತ್ತೆ. ಅದುವರೆಗೆ ಈ ಮಗುವಿನ ಆಶೆ ಆಕಾಂಕ್ಷೆಗಳನ್ನ ನೆರವೇರಿಸೋರು ಯಾರು? ಮನೆಗೆ ಬಂದಾಕೆ ತಾನು ನಿರ್ಮಲೆಯನ್ನು ಪ್ರೀತಿಸೋದನ್ನ ಸಹಿಸಿಯಾಳೆ? ಅವನು ತನ್ನ ಮತ್ತು ಸುನಿತಳ ವಿಷಯದಲ್ಲಿ ಅಪಾರ್ಥವನ್ನೇನಾದ್ರೂ ಕಲ್ಪಿಸಿಕೊಂಡ್ರೆ! ಈ ಬಾಳು ಇನ್ನೂ ಕಹಿಯಾಗಲಿಕ್ಕಿಲ್ಲವೆ? ಇದಕ್ಕಿಂತ ವಿಮಲೆಯ ನೆನಪನ್ನು ಹಸಿರಾಗಿರಿಸಿಕೊಂಡು ಮುಂದಿನ ಬಾಳನ್ನು ಸುಖವಾಗಿ ಕಳೆಯೋದೆ ಮೇಲಲ್ಲವೆ? ಎನ್ನಿಸಿತು.

ಮರುದಿನವೇ ತನ್ನ ನಿರ್ಧಾರವನ್ನು ಸುನಿತೆಗೆ ತಿಳಿಸಿಯೂ ಬಿಟ್ಟ. ಅವನ ನಿರ್ಧಾರವನ್ನು ಕೇಳಿದ ಮೇಲೆ ವಿಮಲೆಯ ಸಿಹಿ ನೆನಪು ಇವರ ಮನಸ್ಸಿನಲ್ಲಿ ಅದೆಷ್ಟು ಆಳವಾಗಿ ಬೇರೂರಿರಬೇಕು. ವಿಮಲೆ ಪುಣ್ಯ ಮಾಡಿಲ್ಲ. ಹೋಗಿ ಬಿಟ್ಟಳು ಎನ್ನಿಸಿತು ಸುನಿತಗೆ.

"ನನ್ನ ನಿರ್ಧಾರ ಕೇಳಿ ನಿಮಗೆ ದುಃಖವಾಗಿರಬೇಕಲ್ಲವೆ ಸುನೀತ. ನಿಮ್ಮ ಮಾತೇನೋ ನೆರವೇರಿಸ್ಲಿಲ್ಲ. ನನ್ನದೊಂದು ಮಾತನ್ನು ಮಾತ್ರ ನಡೆಸ್ಕೊಡ್ರಿ ಅಂತ ಕೇಳ್ಕೊಳ್ತೀನಿ."

"ಅದೇನು ಬೇಡಿಕೆ ರವಿ?"

"ನನ್ನ ಆಶೆ...ಆಕಾಂಕ್ಷೆ, ಸುಖ, ಸಂತೋಷ ಎಲ್ಲವೂ ನಿರ್ಮಲಾನೇ ಆಗಿದಾಳೆ ಸುನೀತ. ಅವಳನ್ನು ನನ್ನಿಂದ ದೂರವಿಡಬೇಡಿ. ಅಷ್ಟನ್ನ ನಡೆಸಿ ಕೊಡ್ತೀರಾ?"

"ನನ್ನನ್ನು ಅಷ್ಟು ನಿರ್ದಯಿಯೆಂದು ತಿಳಿದುಕೊಂಡ್ರಾ ರವಿ."

"ನಿಮಗೆ ತುಂಬಾ ಕೃತಜ್ಞ."

ಅವನ ಕಡೆ ಕೃತಜ್ಞತೆಯಿಂದ ನೋಡಿದಳು ಸುನಿತ.

ದಿನಗಳುರುಳಿದಂತೆಲ್ಲಾ ನಿರ್ಮಲ ಮುದ್ದು ಮುದ್ದಾಗಿ ಮಾತಾಡ ತೊಡಗಿದಳು. ಅವಳ ತಿಳಿ ನಗು, ತುಂಟತನ, ಮುದ್ದು ಮಾತುಗಳನ್ನು ಕೇಳುವಾಗ ಪಟದಲ್ಲಿರುವ ಬಾಲಕೃಷ್ಣ ನಿರ್ಮಲೆಯರ ರೂಪು ತಳೆದು ಎದ್ದು ಬಂದಿದ್ದಾನೊ ಎನ್ನುವಂತಿತ್ತು.

ಸುನೀತಳ ಬಾಳಿನ ಬೆಳಕು ಆ ಮಗಳು!

ಅವಳ ಮನದಲ್ಲಿ ಸಂತಸವನ್ನು ಹರಿಸುವ ಜೀವನದಿ!

ರವಿಗೂ ಅಷ್ಟೆ. ಒಂದು ರೀತಿಯ ನೂತನ ಚೇತನ ಅವಳು.

ಈಗ ನಿರ್ಮಲೆಗೊಬ್ಬ ಸಂಗಾತಿ ಸಿಕ್ಕಿದ್ದಾಳೆ. ಹತ್ತಿರವಿರುವ ಕ್ವಾರ್ಟರ್ಸ್‌ಗೆ ಹೊಸ ಓವರ್‌ಸಿಯರ್ ಒಬ್ಬರು ಬಂದಿದ್ದಾರೆ. ಅವರ ಮಗಳು ಪದ್ಮಳೇ ಆ ಸಂಗಾತಿ.

ಒಂದು ದಿನ ನಿರ್ಮಲ ಪದ್ಮ ಇಬ್ಬರೂ ಆಟವಾಡುತ್ತಿದ್ದರು. ಪದ್ಮಳ ತಂದೆ ಹೊರಗಿನಿಂದ ಬಂದರು. ಅವರನ್ನು ನೋಡುತ್ತಲೂ "ನಮ್ಮ ಡ್ಯಾಡಿ ಬಂದ್ರು ಆಟ ಸಾಕು ನಿರ್ಮಲ" ಎಂದವಳೆ ಒಳಗೋಡಿದಳುಪದ್ಮ.

"ಡ್ಯಾ...ಡಿ" ಇದು ಹೊಸ ಪದವಾಗಿತ್ತು ನಿರ್ಮಲೆಗೆ. ತನಗೂ ಇದ್ದಾರಲ್ಲಾ! ಆದರೆ ತಾನೇಕೆ ಹಾಗೆ ಕರೆಯೋದಿಲ್ಲ. ಅಮ್ಮನೂ ಹಾಗಂತ ಹೇಳಿ ಕೊಡೊಲ್ಲ! ಅಮ್ಮ ಅವರ ರವಿ ಅಂತ, ಇಲ್ಲ ಡಾಕ್ಟರ್ ಅಂತಾ ಕರೀತಾಳೆ ತಾನೂ ಇನ್ಮೇಲೆ ಡ್ಯಾಡೀಂತ ಕರೀಬೇಕು ಅನ್ನಿಸಿತು. ಸಂತೋಷದಿಂದ ಮನೆಗೆ ಬಂದಳು. ತಾಯಿಯ ಕೊರಳಿಗೆ ಜೋತು ಬಿದ್ದು,

"ಅಮ್ಮಾ ಡ್ಯಾಡಿ ಆಗ್ಲೇ ಬಂದು ಹೋದ್ಲೇನಮ್ಮಾ?" ಮುದ್ದಾಗಿ ಕೇಳಿದಳು.

"ಯಾರೇ ಮಗು ಡ್ಯಾಡಿ?"

"ಅವ್ಲೇನಮ್ಮ ಡ್ಯಾಡಿ ನಮ್ಮ ಮನೇಲಿಲ್ಲವಾ?"

"ಓ! ಅವರೇ! ಅವರು ಡಾಕ್ಟರು ಮರಿ. ನಿಮ್ಮ ತಂದೆ" ಸುನೀತಳ ವಾಕ್ಯವಿನ್ನೂ ಪೂರ್ತಿ ಆಗಿರಲಿಲ್ಲ. ಹೊರಗಿನಿಂದ ರವಿ ಕೂಗುತ್ತಾ ಬಂದ

"ಮರೀ ಏನ್ಮಾಡ್ತಿದೀಯ, ಬಾ ನಿಂಗೊಂದು ತಮಾಷೆ"

"ಓ ಡ್ಯಾಡಿ! ಏನು ತಮಾಷೇ?" ಓಡಿ ಬಂದಳು ನಿರ್ಮಲ.

ಡ್ಯಾಡಿ! ಹೌದು ಸರಿಯಾಗಿಯೇ ಕೂಗಿದಾಳೆ.ರವಿಯ ಸಂತೋಷಕ್ಕಂತೂ ಪಾರವಿಲ್ಲದಾಯಿತು. ಅವನ ಹೃದಯದಲ್ಲಿ ಆನಂದದ ತೆರೆಗಳೆದ್ದವು.

ಅಯ್ಯೋ ರವಿ ಏನಂದ್ಕೊಂಡ್ರೋ ಈ ಹುಡುಗೀಗೆ ಏನೂ ತಿಳಿಯೊಲ್ಲ. ಕೈ ಕೈ ಹಿಚುಕಿಕೊಳ್ಳುವಂತಾಗಿತ್ತು ಸುನೀತಗೆ.

ಹೊರಗೆ ಬಂದು ಮಗಳನ್ನು ಗದರಿಸುವಂತೆ

"ಹೇಳೋದನ್ನ ಪೂರ್ತಿಯಾಗಿ ಕೇಳು ಮರಿ... ಇವರು ನಿಂಗೆ ಮಾವ ಆಗ್ಬೇಕು. ಎಲ್ಲಿ ಮಾವಾನ್ನು."

"ನೋಲಿ ಡ್ಯಾಡಿ. ಅಮ್ಮ ಹೇಗಂತಾಳೆ. ನೀವು ನಂಗೆ ಡ್ಯಾಡಿ ಅಲ್ಲವಾ?"

ತನ್ನ ಮುಗ್ಧ ನೇತ್ರಗಳನ್ನು ರವಿಯ ಕಡೆ ಹೊರಳಿಸಿ ಕೇಳಿದಳು ನಿರ್ಮಲ.

ಅಲ್ಲವೆಂದವರಾರು? ತಾನವಳ ತಂದೆಯಲ್ಲವೆ? ಅಂದುಕೊಂಡ ರವಿ.

"ನೋಡ್ಮರಿ...ಅಮ್ಮ ಹೇಗೆ ಹೇಳ್ತಾರೊ ಹಾಗೆ ಅನ್ಬೇಕು ತಿಳಿಯ್ತ?"

ರವಿಯ ಮಾತೆಲ್ಲ ಅವಳ ಕಿವಿಗೆ ಬಿದ್ದೀತು. "ಎಲ್ಲಿ? ಏನು ತಂದೆ? ತಮಾಷಿ ಅಂದೆಯಲ್ಲಾ ಊ...ಊಂ ತೋರ್ಸ್ಸಿ ಡ್ಯಾಡಿ"

ಅವಳ ತುಂಟಾಟ ಪ್ರಾರಂಭವಾಯಿತು.

"ಹಾಗೆಲ್ಲಾ ಗಲಾಟೆ ಮಾಡ್ಬಾರದು ಮರಿ. ತಗೊ" ಎಂದು ಕರವಸ್ತ್ರದಲ್ಲಿ ಕಟ್ಟಿದ್ದ ಎರಡು ಸೇಬುಗಳನು ತೆಗೆದು "ನೀನೊಂದು ತಿನ್ನು. ಅಮ್ಮನಿಗೊಂದು" ಎಂದ.

"ನಿಂಗೆ ಡ್ಯಾಡಿ ಮತ್ತೆ? ನಂದ್ರಲ್ಲೇ ನಿಂಗೂ ಅರ್ಧ ಕೊಡ್ತೀನಿ ಹಾಗಾದ್ರೆ. ಕೊಡ್ಲಾ?"

"ಛೆ ಅಂಥಾ ಮಾತಾಡಿದೆ ಮರಿ" ಅಕ್ಕರೆಯಿಂದ ಅವಳ ಗುಲಾಬಿ ಗಲ್ಲವನ್ನು ಸವರಿದ.

ಪದ ಡ್ಯಾಡಿ ಅಂದಿದ್ದಕ್ಕೆ ಅವರೇನೂ ಬೇಸರ ಪಟ್ಕೊಳ್ಳಿಲ್ಲ. ಪುಣ್ಯ ಎನಿಸಿತು ಸುನಿತೆಗೆ.



"ಹಣ್ಣನ್ನು ಸಣ್ಣಗೆ ಹೋಳುಗಳಾಗಿ ಮಾಡಿ ಹೆಚ್ಚಿ ಕೊಟ್ಟ ರವಿ. ತನ್ನ ಪುಟ್ಟದಾದ ಬಾಯನ್ನರಳಿಸಿ ಅದರೊಳಗೆ ಒಂದೊಂದೇ ಹೋಳನ್ನು ಸೇರಿಸತೊಡಗಿದಳು ನಿರ್ಮಲ. ರವಿ ಒಂದು ದೊಡ್ಡ ಹೋಳನ್ನು ಅವಳ ಕೈಲಿರಿಸಿದಾಗ,

"ಎಲ್ಲಿ ಬಾಯಿತೆಗಿ ಇಡ್ತೀನಿ" ಎಂದಳು.

"ನೀನು ತಿನ್ನು ಮರಿ. ನಂಗೆ ಬೇಡ"

"ಹಂಗಾದ್ರೆ ನಂಗೂ ಬೇಡ."

"ಹೋಗ್ಲಿ ಇಡು ಮರಿ..." ರವಿ ಆಂ ಎಂದು ಬಾಯಿ ತೆಗೆದ. ನಿರ್ಮಲ ಅವನ ಬಾಯಲ್ಲಿ ಹೋಳನ್ನಿಟ್ಟು ಗೆದ್ದವಳಂತೆ ಸಂತೋಷದಿಂದ ಚಪ್ಪಾಳೆ ತಟ್ಟಿದಳು. ರವಿ ಹಿಗ್ಗಿನಿಂದ ಬಾಯಾಡಿಸಿದ. ಹಣ್ಣಿನ ರುಚಿಗಿಂತ ಮಗಳ ಪ್ರೀತಿಯ ರುಚಿಯೇ ಹೆಚ್ಚಾಗಿತ್ತು ಅವನಿಗೆ.

"ಆಮೇಲೆ ಅಮ್ಮನಿಗೂ ಹೀಗೇ ತಿನ್ನಿಸ್ಬೇಕು."

ರವಿ ಹೀಗಂದಾಗ ಅಮ್ಮನ ಬಳಿಗೆ ಹೋಗಲು ಯಾಕೋ ಹೆದರಿಕೆಯಾಯಿತು ಅವಳಿಗೆ. "ಊಂ... ಹುಂ" ಎಂದಳು.

"ಯಾಕೆ ಊ...ಹುಂ ಅಂತೀಯ ಮರಿ?"

ನಿರ್ಮಲ ಎಳೆಯ ಲತೆಯಂತಿರುವ ತನ್ನ ತೋಳುಗಳನ್ನು ಅವನ ಕೊರಳ ಸುತ್ತ ಸುತ್ತಿ ಪುಟ್ಟ ಬಾಯನ್ನು ಕಿವಿಯ ಹತ್ತಿರ ತಂದು,

"ನೀವು ಡ್ಯಾಡಿ ಅಲ್ಲಾ ಅಂತೆ. ಅಮ್ಮ ಅಂತಾಲೆ ಅದಕ್ಕೆ ಹೆದ್ರಿಕೆ ನಂಗೆ." ಅವಳು ಹೇಳಿದ ಗುಟ್ಟು ಒಳಗಿದ್ದ ಸುನಿ ಕಳಕಿಯವರೆಗೂ ಹೋಗಿ ರಟ್ಟಾಗಿತ್ತು.

ಅವಳ ಜೋರಿನ ಪಿಸು ಮಾತನ್ನು ಕೇಳಿ ತನ್ನಲ್ಲೇ ನಕ್ಕಳು ಸುನಿತ.

ರವಿಯ ಮುಖ ಇದ್ದಕ್ಕಿದ್ದಂತೆ ಮ್ಲಾನವಾಯಿತು. ನಿಧಾನವಾಗಿ,

"ಹೂಂ ಮರಿ...ನಿಮ್ಮ ಡ್ಯಾಡಿಯ ಸ್ನೇಹಿತ..." ಅವನ ಮಾತಿನ್ನೂ ಪೂರ್ತಿಯಾಗಿರಲಿಲ್ಲ. ನಿರ್ಮಲ ಅವನ ತೊಡೆಯ ಮೇಲಿನಿಂದ ಛಂಗನೆ ಕೆಳಗೆ ಚಿಮ್ಮಿ

"ಇಲ್ಲ...ಇಲ್ಲ" ಎಂದು ಕೂಗುತ್ತಾ ಒಳಗೋಡಿದಳು.

ರವಿ ಒಮ್ಮೆ ಸಣ್ಣಗೆ ನಕ್ಕು ಅವಳು ಹೋದ ಕಡೆಯೇ ನೋಡುತ್ತಾ ಕುಳಿತ.

ರವಿ ಹೋದ ಮೇಲೆ ಸುನೀತ ಮಗಳನ್ನು ಕರೆದು ತಲೆ ನೇವರಿಸುತ್ತಾ,

"ಅವರ್ನ ಮಾಮಾ ಅನ್ಬೇಕೂಂತ ಎಷ್ಟು ಸಾರಿ ಹೇಳ್ಬೇಕು ಮರಿ! ನೋಡು, ನಿಮ್ಮ ಡ್ಯಾಡಿ ದೂರ ದೇಶಕ್ಕೆ ಓದೋದಕ್ಕೆ ಹೋಗಿದಾರೆ. ಇನ್ನ ಒಂದೆರಡು ವರ್ಷಗಳಲ್ಲಿ ಬರ್ತ್ತಾರೆ. ಅದುವರೆಗೂ ಇಲ್ಲೇ ಇದ್ದು ನಮ್ಮ ನಿರ್ಮಲೇನ ನೋಡ್ಕೊಂಡಿರೂಂತ ರವಿಮಾಮನಿಗೆ ಹೇಳಿ ಹೋಗಿದಾರೆ. ಅವರು ಬರಲಿ. ಆಗ ಅವರ್ನ ಡ್ಯಾಡೀಂತ ಕರೆಯುವಂತೆ. ಇವರ್ನ ಮಾಮಾಂತಾನೆ ಕರಿ. ಆಂ... ಜಾಣ ಮರಿ ಹೇಳಿದ್ಮಾತು ಕೇಳ್ಬೇಕಮ್ಮಾ" ಎಂದಳು.

ನಿರ್ಮಲ ಯೋಚನೆಗೊಳಗಾದಳು. ಯಾಕೊ ರವೀನ ಮಾಮನಂತ ಒಪ್ಪಿಕೊಳ್ಳೋಕೆ ಆಗ್ತಿಲ್ಲ ಅವಳಿಗೆ. ತಾನು ಹುಟ್ಟಿದಾಗಿನಿಂದ, ದೂರ ದೂರ ಹೋಗಿದಾರೆ ನಿಮ್ಮ ಡ್ಯಾಡಿ ಅಂತಾರಲ್ಲ ಅಮ್ಮ ಅವರ್ನ ನೋಡೇ ಇಲ್ಲ. ಎಲ್ಲಿದ್ದಾರೋ ಯಾವತ್ತು ಬರ್ತ್ತಾರೋ ?

ಕಾಣದ ವ್ಯಕ್ತಿಯನ್ನು ತಂದೆಯೆಂದು ಭಾವಿಸುವುದಕ್ಕಿಂತ ಹತ್ತಿರವಿರೋ ವ್ಯಕ್ತಿಯನ್ನೇ ಹಾಗೆಂದು ತಿಳಿಯುವುದೇ ಸರಿ ಎನ್ನಿಸಿರಬೇಕು ನಿರ್ಮಲೆಗೆ. ಇದೂ ಅಲ್ಲದೆ ಮಾಮ ಡ್ಯಾಡಿ ಎಲ್ಲಾ ಒಂದೆ ಅವಳಿಗೆ.

ತಾಯಿ ಹೇಳುತ್ತಿದ್ದುದನ್ನು ಸುಮ್ಮನೆ ಕುಳಿತು ಕೇಳುತ್ತಿದ್ದು ನಂತರ ಎದ್ದು ಬಂದಳು.

ಮಧ್ಯಾಹ್ನ ಸುನೀತಗೆ ಹಾಗೇ ಕಣ್ಣು ಹತ್ತಿದಾಗ ತನ್ನ ಗೆಳತಿಯನ್ನು ಹುಡುಕಿಕೊಂಡು ಮನೆಯಿಂದ ಮೆಲ್ಲನೆ ಹೊರಟಳು.

ಪದ್ಮ ಕಾಂಪೋಂಡಿನಲ್ಲಿ ಸೀಬೆ ಗಿಡದ ಕೆಳಗೆ ಕುಳಿತು ಆಟದ ಸಾಮಾನನ್ನು ಮುಂದಿರಿಸಿಕೊಂಡು ಕೋಡುಬಳೆಯನ್ನು ತಿನ್ನುವುದರಲ್ಲಿ ಮಗ್ನಳಾಗಿದ್ದಳು.

"ಏನ್ಮಾಡ್ತಿದೀಯ ಪದ್ಮಾ" ನಿರ್ಮಲ ಮಾತನಾಡಿಸುತ್ತಾ ಬಂದಳು.

ನಿರ್ಮಲೆಯನ್ನು ಕಾಣುತ್ತಲೇ ತುಂಬಾ ಸಂತಸಗೊಂಡಳು ಪದ್ಮ.

"ಬಾರೆ ನೆರಳು ತುಂಬಾ ಚೆನ್ನಾಗಿದೆ ಆಟ ಆಡೋಣ"

"ಇವತ್ತು ಬರೊಲ್ಲ" ನಿರ್ಮಲಳ ಮುಖ ಗಂಭೀರವಾಗಿತ್ತು.



ಹಾಗಾದ್ರೆ ಇವಳಮ್ಮ ಯಾಕೆ ಹಾಗೆ ಹೇಳ್ತಿರ್ಬೇಕು ಮತ್ತೆ ಯೋಚನೆಗೊಳಗಾದಳು ಪದ್ಮ. ಏನು ಹೊಳೆಯಿತೊ, ಒಂದು ಕ್ಷಣದ ನಂತರ ತನ್ನ ಕಣ್ಣುಗಳನ್ನರಳಿಸಿ ಕೇಳಿದಳು.

"ಈಗ ನಿಮ್ಮನೇಲಿದಾರಲ್ಲಾ ಅವರ ಹತ್ರ ನಿಮ್ಮಾಯಿ ನಗ್ತಾ ನಗ್ತಾ ಮಾತಾಡ್ತಾರಾ? ಅವರು ಯಾವಾದ್ಲೂ ಮನೇಲೇ ಇರ್ತಾರಾ?"

ಓ ನಾನು ಕೋಡ್ಬಳೆ ಅವಳಿಗೆ ಕೊಡಲಿಲ್ಲಾಂತ ಕೋಪಾನೇನೋ ಎಂದುಕೊಂಡು ಪದ್ಮ ಕೈಲಿದ್ದ ತುಣುಕನ್ನು ತೋರಿಸಿ ಪಶ್ಚಾತ್ತಾಪ ಪಡುವ ದನಿಯಲ್ಲಿ,

"ನೋಡೆ ಇದು ಎಂಜಲಾಗಿದೆ. ಎಂಜಲ್ನ ತಿನ್ಬಾರ್ದಂತೆ. ನಮ್ಮ ಮೇಡಂ ಹೇಳ್ತಾರೆ. ಇಲ್ದಿದ್ರೆ ಕೊಡ್ತಿದ್ದೆ. ಬೇಕಾದ್ರೆ ಕಾಗೆ ಎಂಜಲು ಮಾಡಿಕೊಡ್ಲಾ?" ಎಂದು ತನ ಫ್ರಾಕಿನ ಅಂಚನ್ನು ಕೋಡುಬಳೆಗೆ ಮುಚ್ಚಿ, ಕಡಿಯಲೆಂದು ಬಾಯಿ ಹತ್ತಿರ ಒಯ್ದಳು.

ಬೇಡವೆನ್ನುವಂತೆ ತಲೆಯಾಡಿಸಿದಳು ನಿರ್ಮಲ.

"ಬಾ ಅದೇನು ಹೇಳು" ಪದ್ಮ ಅವಳನ್ನು ನೆರಳಿಗೆ ಕರೆದುಕೊಂಡು ಹೋಗಿ ಗೊಂಬೆಗಳನ್ನು ಹೊರ ತೆಗೆದಳು. ನಿರ್ಮಲೆಗೆ ಅವುಗಳ ಕಡೆ ಮನಸ್ಸೇ ಇಲ್ಲ ಹೇಳಿದಳು.

"ನಮ್ಮನೇಲಿದಾಲಲ್ಲ ಅವಳ್ನ ಡ್ಯಾಡಿ ಅನ್ನಬಾರ್ದಂತೆ. ಮಾಮಾ ಅನ್ಬೇಕಂತೆ ನೋಡೆ."

"ಯಾರಂದ್ರು ಹಾಗಂತ? ಯಾಕೆ ಕರಿಬಾರ್ದಂತೆ ಹಾಗೆ?"

"ಅವ್ಳು ನಮ್ಮ ಡ್ಯಾಡಿ ಅಲ್ಲಂತೆ. ನಮ್ಮ ಡ್ಯಾಡಿ ದೂರ ದೇಶಕ್ಕೆ ಓದೋಕೆ ಹೋಗಿದಾಲಂತೆ. ನಮ್ಮನೇಲಿದ್ಮೇಲೆ ಅವಲು ನಮ್ಮ ಡ್ಯಾಡೀನೆ ಅಲ್ಲವಾ ಪದ್ಮಾ?"

ಪದ್ಮ ಏನನ್ನೋ ಯೋಚಿಸುವವಳಂತೆ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಳು. ತಾವು ಮೈಸೂರಿನಿಂದ ಬರೋದಕ್ಕೆ ಒಂದು ತಿಂಗಳ ಮುಂಚೆ ಪಕ್ಕದ ಮನೆ ಗಿರಿಜಳ ತಂದೆ ಸತ್ತು ಹೋಗಿದ್ದರು. ಸತ್ತವರು ಮತ್ತೆ ಬರುವಂತಿಲ್ಲ. ಐದು ವರ್ಷಗಳ ಮೇಲಾಗಿದೆ. ಅವಳಿಗೆ ಇದೆಲ್ಲಾ ತಿಳಿದಿರುತ್ತದೆಯೆ? ಆದರೆ ಗಿರಿಜೆಯಿನ್ನೂ ಚಿಕ್ಕವಳು. ಅವಳಿಗೆ ತಿಳಿಯದು. ತಂದೆಯನ್ನು ನೆನೆಸಿಕೊಂಡು ಅತ್ತಾಗ, ಅವಳ ಅಜ್ಜಿ ಸಮಾಧಾನಪಡಿಸುತ್ತಾ

"ನಿಮ್ಮಪ್ಪ ದೂರ ದೇಶಕ್ಕೆ ಹೋಗಿದಾನೆ ಕಣೆ. ಬರ್ತಾನೆ. ಕಣ್ಣೀರ್ಗರೆಯುತ್ತಲೇ ಹೇಳಿದ್ದರು.

"ಹಂಗಾದ್ರೆ ಗೊಂಬೆ ತರ್ತಾರಾ ಎಂದು ಉತ್ಸಾಹದಿಂದಲೇ ಕೇಳಿದ್ದಳು ಗಿರಿಜೆ.

"ಹೂಂ ತರ್ತಾರೆ. ಎಂದು ಅಜ್ಜಿ ಹೇಳಿದಾಗ ಅವಳ ಚಿಂತೆ ಹರಿದಿತ್ತು. ಪದ್ಮಳ ಬಳಿಗೆ ಕುಣಿಯುತ್ತಾ ಅಂದು ಅಪ್ಪ ತನಗೆ ಗೊಂಬೆ ತರುವ ಸಮಾಚಾರವನ್ನು ತಿಳಿಸಿದ್ದಳು.

ನಿರ್ಮಲೆ ಅಮ್ಮಾನೂ ಅವಳ್ನ ಸುಮ್ನಿರಿಸೋದಕ್ಕೆ ಹಾಗೆ ಹೇಳಿದ್ರೇನೋ ಪಾಪ ಚಿಕ್ಕವಳು ಇವಳಿಗೆ ಹೇಗೆ ತಿಳಿಯ್ಬೇಕು ಅಂದುಕೊಂಡಳು. ಮತ್ತೇನೊ ನೆನಪಿಗೆ ಬಂದಿತು. ತಕ್ಷಣ ಕೇಳಿದಳು.

"ನಿಮ್ಮಮ್ಮ ಬಳೆ ಕುಂಕ್ಮ ಎಲ್ಲಾ ಇಟ್ಕೊಳ್ತಾರಾ"

ಪದ್ಮ ನಿರ್ಮಲಳ ಮನೆಗೆ ಎಲ್ಲೋ ಒಂದೆರಡು ಬಾರಿ ಹೋಗಿದ್ದಳಷ್ಟೆ. ಸುನಿತಳನ್ನು ಸರಿಯಾಗಿ ನೋಡಿರಲಿಲ್ಲ. ಬೇಸರವಾದಾಗ ನಿರ್ಮಲಳೇ ಇಲ್ಲಿಗೆ ಬರುತ್ತಿದ್ದಳು.

"ಇಟ್ಕೊಂತಾಳೆ. ಮಿಂಚೋ ಬಳೆ. ಎಷ್ಟು ಚೆನ್ನಾಗಿವೇಂತ ಕುಂಕ್ಮಾನೂ ಇಟ್ಕೊಂತಾಳೆ ದುಂಡ್ಗೆ, ಅಗಲಕ್ಕೆ"

"ಇಲ್ಲಮ್ಮ, ಅವರು ಊಟಕ್ಕೆ ತಿಂಡಿಗೆ ಮಾತ್ರ ಬರ್ತಾರೆ. ರಾತ್ರೆ ಬೇರೆ ಕಡೆ ಹೋಗ್ತಾರೆ. ಅಮ್ಮ ಅವ್ರತ್ರ ಹೆಚ್ಚಿಗೆ ಮಾತೇ ಆಡೋಲ್ಲ. ಯಾವಾಗ್ಲಾದರೂ ಚೂರು ಚೂರು ಮಾತಾಡ್ತಾರೆ."

ನಿರ್ಮಲ ಹೇಳಿದ್ದನ್ನು ಕೇಳಿ ನಿಗೂಢ ರಹಸ್ಯವನ್ನು ಭೇದಿಸಿದಷ್ಟು ಸಂತೋಷವಾಯಿತು ಪದ್ಮಳಿಗೆ.

"ಹೂಂ ನೋಡು. ಈಗ ಗೊತ್ತಾಯ್ತು. ಯಾಕೆ, ಹಾಗಂತಾರೆ ಅಂತ." ಎಂದು ಸಂಭ್ರಮಗೊಂಡು ದೊಡ್ಡ ಹೆಂಗಸಿನಂತೆ ಫ್ರಾಕಿನ ನಿರಿಗೆಗಳನ್ನು ಸರಿಪಡಿಸಿಕೊಂಡು, ಗೆಳತಿಗೆ ರಹಸ್ಯ ತಿಳಿಸುವ ಸಿದ್ಧತೆಯನ್ನು ನಡೆಸಿದಳು.

ಪದ್ಮ ಏನು ಹೇಳುವಳೊ ಎಂದು ಕಣ್ಣು, ಕಿವಿಯರಳಿಸಿ ಕುಳಿತಳು ನಿರ್ಮಲ.

"ನಿಮ್ಮ ಡ್ಯಾಡಿ, ನಿಮ್ಮಮ್ಮ ಜಗಳ ಆಡಿರ್ಬೇಕು ಕಣೆ. ಜಗಳ ಆಡಿದ್ಮೇಲೆ ಮೊದಲಿನ ಹಾಗೆ ಮಾತಾಡೊಲ್ಲ. ಅದಕ್ಕೇ ನಿಮ್ಮಾಯಿ ಹಾಗಂದಿದಾರೆ. ಅಷ್ಟಕ್ಕೇ ಪೆಚ್ಚು ಮೋರೆ ಹಾಕ್ಕೊಂಡಿದೀಯಲ್ಲೆ ಪೆದ್ದಿ?" ಜೋರಾಗಿ ನಕ್ಕಳು ಪದ್ಮ.

ಅವಳಿಗೆ ಇಂಥಾ ವಿಷಯಗಳಲ್ಲಿ ಅನುಭವ ಹೆಚ್ಚು. ಪದ್ಮಳ ಅಪ್ಪ ಅಮ್ಮ ಮಕ್ಕಳ ಇದಿರಿನಲ್ಲೇ ಕುರುಕ್ಷೇತ್ರ ಪ್ರಾರಂಭಿಸಿ ಬಿಡುತ್ತಿದ್ದರು. ಹಾಗೆ ಕುರುಕ್ಷೇತ್ರವಾದ ಒಂದು ವಾರದವರೆಗೊ ತಿಂಗಳ ವರೆಗೊ ಇಬ್ಬರೂ ಉತ್ತರ ದಕ್ಷಿಣ ಧ್ರುವಗಳಂತಿರುತ್ತಿದ್ದರು. ಮನೆಯ ವ್ಯವಹಾರ ನಡೆಸುವುದಕ್ಕಾಗಿ ಮಕ್ಕಳನ್ನು ಮಧ್ಯೆ ಮಾಡಿಕೊಂಡು ಅಡ್ಡಾದಿಡ್ಡಿ ಮಾತಾಡುತ್ತಿದ್ದರು.

ನಿರ್ಮಲಳ ಮನೆಯಲ್ಲೂ ಹೀಗೆ ಇರಬೇಕೆಂದು ಪದ್ಮಳ ಊಹೆ.

ಪದ್ಮ ಹಾಗೆ ಹೇಳಿದ ಮೇಲೆ ನಿರ್ಮಲಳ ಮುಂದು ದಿದ ಮನಸ್ಸು ನೀರು ಚಿಮುಕಿಸಿದ ಹೂವಿನಂತಾ ಯಿತು. ಅವಳು ಸಡಗರದಿಂದ ಆಟಕ್ಕೆ ಸೇರಿದಳು. ಒಂದೆರಡು ಗಳಿಗೆಗಳಲ್ಲಿಯೇ ಪದ್ಮಳ ತಾಯಿಯ ಕೂಗು ಕೇಳಿಸಿತು.

"ಲೇ ಪದ್ದೀ! ಯಾವಾಗ್ಲೂ ಸಣ್ಣ ಹುಡುಗೀರ ಜತೇಲಿ ಆಡ್ತಿರ್ತೀಯಲ್ಲೆ ಎದ್ದು ಬಾ."

ಗುಡುಗಿನಂತೆ ಬಂದ ಆಕೆಯ ದನಿಯನ್ನು ಕೇಳಿ ನಿರ್ಮಲ ಬೆಚ್ಚಿ ಬಿದ್ದಳು.

"ಬಂದೇಮ್ಮಾ" ಆ ಗುಡುಗಿನ ದನಿಯನ್ನು ಎದುರಿ ಸುವಂತಿತ್ತು. ಪದ್ಮಳ ಕೀಚಲು ಕಂಠ. ಅವಳು ಎದ್ದ ವಳೆ ಒಂದೇ ಉಸುರಿಗೆ ಮನೆಯನ್ನು ಸೇರಿಕೊಂಡಳು. ನಿರ್ಮಲೆಯೂ ತನ್ನ ಮನೆಯನ್ನು ಸೇರಿಕೊಂಡಳು.

ಮನೆಗೆ ಬರುತ್ತಿದ್ದಂತೆಯೇ ಅವಳು

"ಅಮ್ಮ, ನೀನೂ ಡ್ಯಾಡಿ ಜಗಳ ಆಡಿದೀಲಂತಲ್ಲೇ ಮ್ಮ, ಪದ್ಮ ಹೇಳಿದಳು. ನಿಜವೇನಮ್ಮಾ.?"

ಕೆಲಸದ ಸೀತ ಅಲ್ಲೇ ಏನನ್ನೋ ಮಾಡುತ್ತಿದ್ದವಳು ಥಟ್ಟನೆ ನಕ್ಕಳು.

ಮಗಳ ಮಾತಿಗೆ ಏನು ಹೇಳಬೇಕೊ ತಿಳಿಯದಾ ಯಿತು ಸುನೀತೆಗೆ.

ಸೀತ ಹಾಗೆ ನಕ್ಕಿದ್ದು ತುಂಬಾ ಕೆಡುಕೆನ್ನಿಸಿತು ಅವ ಳಿಗೆ. ಇವಳು ಡ್ಯಾಡಿ ಡ್ಯಾಡಿ ಅಂದ್ಕೊಂಡು ಅವ್ರು ಇವ್ರು ತಪ್ಪಾಗಿ ತಿಳ್ಕೊಳ್ಳೋ ಹಾಗೆ ಮಾಡ್ತಾಳಲ್ಲ! ಇವಳ ಬಾಯಿ ಹೇಗೆ ಮುಚ್ಚಿಸ್ಬೇಕೊ ತಿಳಿಯದು. ಬೇಸ ರವೇ ಆಯಿತು ಮುದ್ದು ಕುವರಿಯ ಮೇಲೆ. ಆದರೆ ಕೇಳಿಸಿಕೊಳ್ಳದವಳಂತೆ ಸುಮ್ಮನೆ ತನ್ನ ಕೆಲಸದಲ್ಲಿ ತೊಡ ಗಿದ್ದಳು.

ನಿರ್ಮಲ ಅಷ್ಟಕ್ಕೇ ಹೇಗೆ ಬಿಟ್ಟಾಳು? ತಾಯಿಯ ಸೆರಗನ್ನು ಹಿಡಿದೆಳೆಯುತ್ತಾ "ಹೇಳಮ್ಮಾ ಯಾಕೆ ಜಗಳ ಆಡಿದ್ರಿ. ಡ್ಯಾಡಿ ಬರ್ಲಿ ಕೇಳ್ತೀನಿ."

"ನಿಮ್ಮ...!" ಹುಚ್ಚಳಂತೆ ಕೂಗಿದಳು ಸುನಿತ. ತಾಯಿ ಹಾಗೆ ಕೂಗಿದಾಗನಿರ್ಮಲ ಬೆಚ್ಚಿದಳು. ತಾಯಿ ಯ ಕೂಗಿನೊಂದಿಗೇ ಆಕೆಯ ಹಸ್ತ ಮಗಳ ಗಲ್ಲದ ಮೇಲೆ ಹಾಯಿತು. ಹಾಲುಗಲ್ಲ ಕೆಂಪಾಯಿತು. ತಾಯಿ ಯ ಕಣ್ಣಿನಿಂದ ನೀರು ಹರಿಯಿತು. ಸ್ವಲ್ಪ ಕಾಲ ಮೌನ ಮುಸುಕಿತು.

"ಇನ್ಮೇಲೆ ಹಂಗೆ ಕೇಳೊಲ್ಲಮ್ಮ" ಎಂದು ಬಿಕ್ಕಿ ಬಿಕ್ಕಿ ಅಳಲು ಮೊದಲು ಮಾಡಿದಳು ನಿರ್ಮಲ. ಶಿಲೆಯಂತೆ ಕುಳಿತಿದ್ದಳು ಸುನಿತ.

ಅಷ್ಟು ಹಿರಿಯ ಹಂಬಲ ಹೊತ್ತು ಹೆತ್ತೆ ಯಾಕೆ? ನೀನು ಮುದ್ದಿಸಿ ರಮಿಸದಿದ್ದರೆ ಯಾರು ಮುದ್ದಿಸ್ಬೇಕು? ಮಗಳ ಕಂಬನಿ ನೋಡಿ ಸುನಿತಳ ಹೃದಯ ಮಿಡಿದು ನುಡಿಯಿತು. ಅವಳು ನಿರ್ಮಲೆಯನ್ನು ಸಂತೈಸಲೆಂದು ಮೇಲೇಳುವ ಹೊತ್ತಿಗೆ ನಿರ್ಮಲ ಅಲ್ಲಿರಲಿಲ್ಲ. ಮೂಲೆ ಯಲ್ಲಿ ಕುಳಿತು ಬಿಕ್ಕುತ್ತಿದ್ದಳು.

ರಾತ್ರಿ ಹೊರಗಡೆ ಮಲಗಲು ಬರುತ್ತಿದ್ದ ತಿಮ್ಮ ಯ್ಯ ಈ ದಿನ ಸ್ವಲ್ಪ ಹೊತ್ತು ಮುಂಚೆಯೇ ಬಂದಿದ್ದ.

"ಯಾಕ್ರವ್ವ ಅಳ್ತೀರಾ?" ಎಂದು ನಿರ್ಮಲೆಯನ್ನು ಕೇಳಿ ಸಂತೈಸುತ್ತಿದ್ದ. ಅವನಿದ್ದುದನ್ನು ನೋಡಿ ಸುನೀತ ಹಾಗೇ ಹಿಂತಿರುಗಿದಳು.

ರವಿ ಇಲ್ಲಿಗೆ ಹೆಚ್ಚಿಗೆ ಬರುತ್ತಿದ್ದುದು ತಿಮ್ಮಯ್ಯ ನಿಗೂ ಅನುಮಾನ ಹುಟ್ಟಿಸಿತ್ತು. ಒಂದು ದಿನ ಅವನು ಸುನೀತಳನ್ನು.

"ಸಾಯೇಬ್ರು ಮತ್ತೆ ಮದ್ವೆ ಆಗದೆ ಹಿಂಗೆ ಓಡಾ ಡ್ಕಂಡಿರೋದು ಚೆಂದಾಕಿರಲ್ರವ್ವ. ನೀವಾದ್ರೂ ಹೇಳ ಬಾರದಾ?" ಎಂದಿದ್ದ. ಅವನ ಮಾತು ಸಹಜವಾಗಿದ್ದಂ ತಿರಲಿಲ್ಲ. ಈ ವ್ಯಂಗ್ಯ ಬಾಣ ಎಷ್ಟೋ ನೋವನ್ನು ಹೆಚ್ಚಿಸಿತ್ತು ಸುನೀತಗೆ. ಇಂದು ಸೀತಳ ನಗುವೂ ಆ ನೋವನ್ನು ಉಲ್ಬಣಿಸಿತ್ತು.

ಅಂದಿನಿಂದ ನಿರ್ಮಲ ಏನೊ ಒಂದು ರೀತಿಯಾಗಿ ಬದಲಾಯಿಸಿ ಬಿಟ್ಟಳು. ಅವಳ ಎಳೆಯ ತುಟಿಗಳ ಮೇಲೆ ಚೆಲ್ಲಾಡುತ್ತಿದ್ದ ನಗು ಮಾಯವಾಗಿ ಹೋಯಿತು. ಬಿಸಿಲಿನ ಝಳಕ್ಕೆ ಸಿಲುಕಿದ ಹೂವಿನಂತೆ ಆಯಿತು ಮುಖ. ಆಟ...ಊಟ...ಒಂದೂ ಬೇಡವಾಯಿತು.

ತಾನು ಹಾಕಿದ ಬೆದರಿಕೆ ಈ ಪರಿಣಾಮವನ್ನು ತರಬಹುದೆಂದು ಊಹಿಸಿಯೇ ಇರಲಿಲ್ಲ ಸುನೀತ. ಈಗ ಅವಳ ಹೃದಯ ಒಂದೇ ಸಮನಾಗಿ ಹೊಯ್ದಾಡಲು ಮೊದಲು ಮಾಡಿತು.

"ಹಾಲು ಕುಡಿ ಮಗು."

"ಬೇಡ."

"ಬಿಸ್ಕತ್ ಬೇಕಾ?"

"ಊಹೂಂ..."

"ಚಾಕ್ಲೇಟು?"

"ಒಲ್ಲೆ"

ನಿರ್ಮಲ ಹೀಗೇಕೆ ಬದಲಾಯಿಸಿದಳೆಂದು ತಿಳಿ ಯದೆ ಹೋಯಿತು ರವಿಗೆ. ಆಸ್ಪತ್ರೆಯಲ್ಲಿ ಒಂದೆರಡು ಸೀರಿಯಸ್ ಕೇಸುಗಳಿದ್ದುದರಿಂದ ಅವನ ಗಮನ ಈ ಕಡೆ ಹೆಚ್ಚಾಗಿ ಹರಿಯಲಿಲ್ಲ.

ಒಂದೆರಡು ದಿನಗಳ ನಂತರ ಜ್ವರ ಬಂದೇ ಬಿಟ್ಟಿ ತು ನಿರ್ಮಲೆಗೆ. ಸುನಿತಗಂತೂ ಹೃದಯವೇ ಬಾಯಿಗೆ ಬಂದಂತಾಯಿತು. ತಾನೆಂಥಾ ತಪ್ಪು ಮಾಡಿದೆ. ಅವಳ ತಿಳಿ ಮನಸ್ಸನ್ನು ಸುಮ್ಮನೇ ಗೊಂದಲಕ್ಕೀಡು ಮಾಡಿದೆ. ಸಣ್ಣ ಜನರ ಮಾತಿಗೆ ಹೆದರಿ ಹೆತ್ತ ಕಂದ ನನ್ನು ಸಂಕಟಕ್ಕೀಡು ಮಾಡಿದೆನಲ್ಲಾ! ಕೆಲವು ಮಕ್ಕಳು ಕೆಲವರಿಗೆ ಹಚ್ಚಿಕೊಂಡು ಅಪ್ಪ, ಅಣ್ಣ ಕಾಕಾ ಅನ್ನೋ ಲ್ಲವೆ? ಹಾಗೇ ಇವಳೂಂತ ಯಾಕೆ ತಿಳಿದುಕೊಳ್ಳದೆ ಹೋದೆ. ಭಗವಂತಾ ನನ್ನ ತಪ್ಪನ್ನು ಮನ್ನಿಸಿ ಕಂದ ನನ್ನುಳಿಸಿಕೊಡು, ಎಂದು ಭಗವಂತನನ್ನು ಮನಸ್ಸಿ ನಲ್ಲೇ ಪ್ರಾರ್ಥಿಸಿದಳು.

ನಿರ್ಮಲೆಯನ್ನು ಪರೀಕ್ಷಿಸಿದ ರವಿಗೂ ಗಾಬರಿ ಯಾಯಿತು. ಅವಳ ಪುಟ್ಟ ಮನಸ್ಸಿಗೇನೋ ನೋವಾಗಿದೆ ಯೆಂದು ತಿಳಿಯಿತು. ಎರಡು ದಿನಗಳ ಹಿಂದಿನ ಅವಳ ಚಲನವಲನಗಳನ್ನು ಮನಸ್ಸಿಗೆ ತಂದುಕೊಂಡ ಮೇಲೆ ಅವನ ಸಂದೇಹ ದೃಢವಾಯಿತು. ಸುನೀತಳನ್ನು ಒಂದೆ ರಡು ಸಾರಿ ಕೇಳಿದ ಮೇಲೆಯೂ ಅವನ ಪ್ರಶ್ನೆಗೆ ಸರಿ ಯಾದ ಉತ್ತರ ದೊರೆಯದಾಯಿತು.

ಸುನೀತಳಾದರೂ ಹೇಗೆ ಹೇಳುವಳು. ಏನೋ ಸಂಕೋಚ! ರವಿ ಏನಂದುಕೊಳ್ಳುವರೊ ಈ ಹೆದರಿಕೆ ಬೇರೆ.

ಆನಂದ ಹತ್ತಿರವಾದರೂ ಇದ್ದಾರೆಯೆ ಕರೆಸಬೇ ಕೆಂದರೆ! ಇದಂತೂ ಅಸಾಧ್ಯವಾದ ಮಾತು.

ಅವಳು ಕೊರಗಿ ನಶಿಸಿದರೆ ತನ್ನ ಬಾಳು ಹಾಳ ಲ್ಲವೆ? ಮತ್ತೆ ಮರುಭೂಮಿಯ ದರ್ಶನ! ನೀರಸ ಜೀವನ!

ನೆನೆಸಿಕೊಂಡು ಮಳೆಯಲ್ಲಿ ತೊಯ್ದ ಪಾರಿವಾಳ ದಂತೆ ನಡುಗಿದಳು ಸುನಿತ. ಮಗುವಿನ ಮನಸ್ಸಿಗೆ ನೋವಾಗದಂತೆ ನೋಡಿಕೊಳ್ಳಬೇಕು ಅವಳ ಸಂತೋಷವೆ ತನ್ನ ಸಂತೋಷ. ಇದರಿಂದ ನಾಲ್ಕು ಜನ ತಪ್ಪಾಗಿ ಭಾವಿ ಸಿದರೆ ಭಾವಿಸಲಿ. ಎಂದು ಮನಸ್ಸನ್ನು ಗಟ್ಟಿ ಮಾಡಿ ಕೊಂಡಳು.

ಮಗಳಿಗೆ ಮೈ ತುಂಬಾ ರಗ್ಗು ಹೊದಿಸಿ ಅವಳ ಪಕ್ಕದಲ್ಲಿಯೇ ಕುಳಿತಳು ಸುನಿತ. ನಿರ್ಮಲೆಗೆ ಜೊಂಪು

ಹರಿದು ಎಚ್ಚರವಾಯಿತು. ರಗ್ಗನ್ನು ಸರಿಸಿ ಕಣ್ಣು ತೆರೆದಳು. ಪಕ್ಕದಲ್ಲಿ ತಾಯಿ ಕುಳಿತಿದ್ದಳು.

ಮಗಳು ಬೆಳಗಿನಿಂದ ಮುಚ್ಚಿದ ಕಣ್ಣನ್ನು ತೆರೆದಿರಲಿಲ್ಲ. ಈಗ ಅವಳು ಕಣ್ಣು ಬಿಟ್ಟಿದ್ದನ್ನು ನೋಡಿ ಹೋದ ಜೀವ ಬಂದಂತಾಯಿತು ಸುನೀತಗೆ.ಅವಳು ಮಗಳ ಗಲ್ಲವನ್ನು ನೇವರಿಸುತ್ತಾ,

"ನಿಮ್ಮ ಡ್ಯಾಡಿ ಬಂದಿದಾರೆ ನೋಡು ಮರಿ" ಎಂದಳು.

ಇದು ನಿಜವೆ? ತಾಯಿ ಎಲ್ಲೋ ಮರೆತು ಅಂದಿರಬೇಕು. ತಾನು ಹಾಗೆ ಕೂಗಿದರೆ ಮತ್ತೆಸಿಟ್ಟಾದರ್ರೊ ಹೊಡೆದರೋ? ಭಯ ಆವರಿಸಿತು.

"ಇಲ್ಲಮ್ಮಾ, ಹಾಗನ್ನಲ್ಲ! " ದನಿ ವ್ಯಥೆ ನಿರಾಶೆಯಿಂದ ಕೂಡಿತ್ತು. ತೆರೆದ ಕಣ್ಣುಗಳನ್ನು ಹಾಗೇ ಮುಚ್ಚಿದಳು ಮತ್ತೆ. ತುದಿಗಣ್ಣಿನಿಂದ ಒಳಗಿನ ನೋವು ಕಣ್ಣೀರಾಗಿ ಕಾಣಸಿಕೊಂಡಿತು. ಮೆಲ್ಲಗೆ ಬಿಕ್ಕಲು ಮೊದಲು ಮಾಡಿದಳು ನಿರ್ಮಲ.

ಎಳೆಯ ಜೀವ, ತನ್ನ ಆಶಾಗೋಪುರ! ಜೀವದ ಜೀವ! ನೋವುಣ್ಣುತ್ತಿರುವುದನ್ನು ನೋಡಲಾರದಾದಳು. ಸಂತಾಪ ಪಶ್ಚಾತ್ತಾಪದಿಂದ ಮಗಳ ಕಣ್ಣೀರನ್ನು ತನ್ನ ಸೆರಗಿನ ತುದಿಯಿಂದ ಬಿಸಿ ಹನಿಗಳನ್ನೊರೆಸುತ್ತಾ ಗದ್ಗದಿತಳಾಗಿ.

"ನೀನು ಹಾಗೇ ಅನ್ನು ಮಗು. ನಾನು ಏನೂ ಅನ್ನೊಲ್ಲ. ನೀನು ಹಾಗಂದ್ರೆ ನಂಗೆ ಬಹಳ ಸಂತೋಷ"

ತಾಯಿ ಮಾತನ್ನು ಕೇಳುತ್ತಿದ್ದಂತೆ ನಿರ್ಮಲೆಯ ದುಗುಡ ದೂರವಾಗಿ ಮಂದಹಾಸ ಮೂಡಿತು. ಸೊರಗಿದ ಕಣ್ಣು ಅಗಲವಾಗಿ ತೆರೆದುಕೊಂಡವು. ಬಾಗಿಲಲ್ಲಿ ನಿಂತಿದ್ದ ರವಿಯ ಕಡೆ ದೃಷ್ಟಿ ಹರಿಸಿದಾಗ,

"ಡ್ಯಾಡಿ!" ಮೃದುವಾಗಿ ಕೂಗಿದಳು.

ಮಗಳು ಗೆಲುವಾಗಿ, ಬಾಯಿ ತುಂಬಾ ಡ್ಯಾಡಿ ಎಂದು ಕೂಗಿದಾಗ ಸ್ವಲ್ಪ ಧೈರ್ಯ ಬಂದಿತು ರವಿಗೆ. ಓಡಿ ಹೋಗಿ ನಿರ್ಮಲೆಯ ಬಳಿ ಕುಳಿತ.

ತನಗಾದ ಆನಂದದ ಮಧ್ಯೆ ಸಣ್ಣದಾಗಿ ನಿರ್ಮಲೆ ಬಿಕ್ಕ ತೊಡಗಿದಳು. ರವಿಯ ಕಣ್ಣೂ ಹನಿಯುವುದರಲ್ಲಿತ್ತು. ಅದನ್ನು ತಡೆದುಕೊಂಡು ಮಾತನಾಡುವಾಗ ದನಿ ಮಾತ್ರ ನಡುಗದೆ ಇರಲಿಲ್ಲ.

"ಹೇಗಿದೆ ಮರಿ ಈಗ? ನನ್ನ ಹತ್ರ ಕೂತ್ಕೊಳ್ತೀಯಾ?" ರವಿ ಅವಳನ್ನು ಮೆಲ್ಲಗೆ ಎಬ್ಬಿಸಿ ತನ್ನ ಎದೆಗೊರಗಿಸಿಕೊಂಡ.

ನಿರ್ಮಲ ಕತ್ತನ್ನು ಹೊರಳಿಸಿ ಅತ್ತ ಇತ್ತ ನೋಡಿದಳು. ಒಂದು ಕಡೆ ಅಪ್ಪ...ಒಂದು ಕಡೆ ಅಮ್ಮ. ಸಂತೋಷದಿಂದ ಇಬ್ಬರ ಕಡೆಗೂ ನೋಡುತ್ತಿದ್ದಂತೆ ಪದ್ಮ ಹೇಳಿದ ಮಾತು ನೆನಪಿಗೆ ಬಂದಿತು. ಇಷ್ಟು ದಿನ ಜಗಳ ಆಡಿದ್ರು ಅಪ್ಪ ಅಮ್ಮ...ಇನ್ಮೇಲೆ ಒಂದಾದರು ಎಂದುಕೊಂಡಾಗ ಸಂತೋಷವೆನ್ನಿಸಿತು ಅವಳಿಗೆ. ಒಮ್ಮೆ ಕ್ಷೀಣ ನಗೆ ನಕ್ಕು,

"ಇನ್ಮೇಲೆ ಜಗಳ ಆಡ್ಬೇಡಿ ನೀವಿಬ್ರು, ನಂಗೆ ಹೆದ್ರಿಕೆ ಆಗುತ್ತೆ ಹೀಗೇ ಇದ್ರೆ ಚೆನ್ನ" ನಿರ್ಮಲ ಈಚೆಗೆ ರಕಾರವನ್ನು ಸರಿಯಾಗಿಯೇ ಉಚ್ಚರಿಸುತ್ತಿದ್ದಳು.

ಅವಳ ಮಾತು ಕೇಳಿ ರವಿ ಸುನೀತ ಪರಸ್ಪರ ಮುಖ ನೋಡಿಕೊಂಡರು. ಹಾಗೇ ಆಗಲಿ ಎನ್ನುವಂತೆ ಸುನೀತ ತಲೆಯಾಡಿಸಿ ದೃಷ್ಟಿಯನ್ನು ಕೆಳಗಿಳಿಸಿದಳು. ಅವಳಿಗೆ ಏನೊ ಒಂದು ರೀತಿ ನಾಚಿಕೆಯೆನ್ನಿಸಿತು.

"ಆಗಲಿ ಮರಿ, ನೀನು ಹೇಳಿದ ಹಾಗೇ ಇನ್ಮೇಲೆ ನಾವಿಬ್ರೂ ಜಗಳ ಆಡೊಲ್ಲ" " ಹೀಗನ್ನುವಾಗ ರವಿಗೂ ಸಂಕೋಚವೆನ್ನಿಸಿತು. ಸುಮ್ಮನಿದ್ದು ಬಿಟ್ಟರೆ ಮತ್ತೆ ಮಗುವಿನ ಸ್ಥಿತಿಯಲ್ಲಿ ಹೆಚ್ಚು ಕಡಿಮೆಯಾದರೆ ಗತಿಯೇನು ಎನ್ನಿಸಿ ಸಂಕೋಚವನ್ನು ಹತ್ತಿಕ್ಕಿದ್ದ.

ಈಗ ನಿರ್ಮಲೆಯ ಚಿಂತೆ ಸಂಪೂರ್ಣವಾಗಿ ದೂರವಾಯಿತು. ಒಂದೆರಡು ದಿನಗಳಲ್ಲಿಯೇ ಮತ್ತೆ ಮೊದಲಿನಂತಾದಳು. ಅವಳ ನಾಲಿಗೆಯ ಓಟ ಮಾತ್ರ ಹಿಂದೆಂದೂ ಇರದಷ್ಟು ಹೆಚ್ಚಾಯಿತು. ಮಾತಿಗೆ ಮೊದಲುಮಾಡಿದಳೆಂದರೆ ಅದಕ್ಕೆ ಕೊನೆ ಮೊದಲೇ ಇರುತ್ತಿರಲಿಲ್ಲ.

ಒಂದು ದಿನ ಅವಳು.

"ಅಮ್ಮ, ಡ್ಯಾಡಿ ಇವತ್ತು ಎಷ್ಟು ಹೊತ್ತಿಗೆ ಬರ್ತಾರೆ" ಎಂದು ಕೇಳಿದಳು.

"ಆಸ್ಪತ್ರೆ ಕೆಲ್ಸ ಮುಗಿದ ಮೇಲೆ ಮರಿ' ಎಂದಳು ಸುನೀತ.

"ಇವತ್ತು ಏನು ತಿಂಡೀನಮ್ಮ? ಡ್ಯಾಡಿಗೆ ಏನು ಇಷ್ಟಾನೊ ಅದನ್ನ ಮಾಡ್ತೀಯಾ?"

"ಹೂಂ..."

"ಡ್ಯಾಡಿ ಬಂದ ಮೇಲೆ ನೀನು, ನಾನು, ಡ್ಯಾಡಿ ಎಲ್ಲರೂ ಒಟ್ಟಿಗೇ ತಿನ್ನೋಣ"

"ಆಗ್ಲಿ ನಿಮ್ಮಿ." ಒಮ್ಮೊಮ್ಮೆ ನಿರ್ಮಲೆಯನ್ನು ಮುದ್ದಾಗಿ ನಿಮ್ಮಿ ಎನ್ನುತ್ತಿದ್ದಳು ಸುನೀತ.

ಸ್ವಲ್ಪ ಹೊತ್ತು ಏನನ್ನೋ ಯೋಚಿಸುತ್ತಿದ್ದು ನಂತರ ಕೇಳಿದಳು ನಿರ್ಮಲ.

"ಯಾಕಮ್ಮ ನೀನು ಡ್ಯಾಡಿ ಹತ್ರ ಸರಿಯಾಗೀ ಮಾತಾಡೊಲ್ಲ?"

"..........."

"ಅಮ್ಮ ಪದ್ಮನ ಡ್ಯಾಡಿ ಅವಳಿಗೆ ಹೊಸಾ ಲಂಗ ಹೊಲ್ಸಿದಾರೆ, ನಂಗೂ ಹೊಲಿಸ್ತೀಯೇನಮ್ಮಾ ಡ್ಯಾಡಿಗೆ ಹೇಳಿ?"

"ಹೇಳ್ತೀನಿ ಮರಿ."

"ನಿರ್ಮಲ ಸಂತೋಷದಿಂದ ಜಿಗಿದಾಡಿ ಮತ್ತೆ ಕೇಳಿದಳು.

"ಅಮ್ಮ ಇವತ್ತು ಡ್ಯಾಡೀ ಜೊತೇಲಿ ವಾಕಿಂಗ್‌ಗೆ ನೀನೂ ಬರಬೇಕು."

ಪದ್ಮಳ ತಂದೆ ತಾಯಿ ವಾಕಿಂಗ್ ಹೋಗಿ ಬಂದದ್ದನ್ನು ಅವಳು ಎಷ್ಟೋ ಸಾರಿ ನೋಡಿದ್ದಳು. ತಾವೂ ಹಾಗೆಯೇ ಹೋಗಬೇಕೆಂಬ ಆಶೆ ನಿರ್ಮಲೆಗೆ.

"ನನಗಿವತ್ತು ತಲೆನೋವು ಮರಿ. ನೀನೂ ಡ್ಯಾಡಿ ಹೋಗಿ ಬರ್ರಿ" ಎಂದಳು ಸುನೀತ.

"ಯಾವಾಗ್ನಿಂದಮ್ಮ ತಲ್ನೋವು? ಡ್ಯಾಡಿಗೆ ಹೇಳಿದ್ರೆ ಔಷಧಿ ತಂದ್ಕೊಡ್ತಾರೆ. ಬಂದ ಕೂಡಲೆ ಹೇಳಲಾ?"

ತಾನು ಹೀಗೇಕಾದರೂ ಹೇಳಿದೆನೊ ಎನ್ನಿಸಿತು ಸುನೀತಗೆ.

"ಅಷ್ಟೇನೂ ಇಲ್ಲ ಬಿಡು ಮರಿ. ಹಾಗೇ ಹೋಗುತ್ತೆ."

"ಹಾಗಾದರೆ ವಾಕಿಂಗ್ ಬರ್ತೀಯಾ?"

ಸುನೀತಗೆ ಉಸಿರು ಕಟ್ಟಿದಂತಾಗಿ ಏನು ಹೇಳಬೇಕೊ ತಿಳಿಯದಾಯಿತು. ಒಂದು ಕ್ಷಣ ಬಿಟ್ಟು ಹೇಳಿದಳು.

"ವಾಸಿಯಾದ್ರೆ ಹೋಗೋಣಂತೆ ಮರಿ. ಈಗ ಆಡ್ಕೋ ಹೋಗು. ಬೇಗ್ನೆ ನಾನು ತಿಂಡಿ ಮಾಡ್ತೀನಿ ನಿನಗೆ."

ಮುಂದೆ ಹೆಚ್ಚಿಗೆ ಮಾತಲ್ಲಿ ಬೆಳೆಸಿ ಬಿಡುತ್ತಾಳೊ ಮಗಳು ಎನ್ನಿಸಿ ಸುನೀತ ಅವಳನ್ನು ಹೊರಗೆ ಕಳುಹಿಸಿದಳು.

"ಅಮ್ಮ ತಿಂಡಿ ಮಾಡ್ತಾಳೆ. ಡ್ಯಾಡಿ ಬಂದ್ಮೇಲೆ ಒಟ್ಟಿಗೆ ಕುತ್ಕೊಂಡು ತಿನ್ನಬೇಕು. ತಲ್ನೋವು ವಾಸಿಯಾದ್ರೆ ವಾಕಿಂಗೆ ಬರ್ತೀನಿ ಅಂದಿದಾಳೆ, ಡ್ಯಾಡಿಗೆ ಹೇಳಿ ಬೇಗೆ ವಾಸಿ ಮಾಡಿಸ್ಬೇಕು. ಎಂದೆಲ್ಲಾ ಲೆಕ್ಕ ಹಾಕಿಕೊಳ್ಳುತ್ತಾ ಹೊರಗೆ ಬಂದು ಕುಳಿತಳು ನಿರ್ಮಲ. ಆಸ್ಪತ್ರೆಯಿಂದ ಡ್ಯಾಡಿ ಯಾವಾಗ ಬರ್ತಾರೊ? ಅವಳ ಕಣ್ಣುಗಳು ರವಿಗಾಗಿ ಕಾಯುತ್ತಿದ್ದವು.

ಸ್ವಲ್ಪ ಹೊತ್ತಿನಲ್ಲಿಯೇ ಆಸ್ಪತ್ರೆಯಿಂದ ರವಿ ಬಂದ.

"ಅಮ್ಮಂಗೆ ತುಂಬಾ ತಲ್ನೋವಂತೆ ಡ್ಯಾಡಿ. ಬೇಗ್ನೆ ವಾಸಿ ಮಾಡ್ತೀರಾ?"

ಸುನೀತ ಬೆಳಗ್ಗೆ ಚೆನ್ನಾಗಿದ್ದರಲ್ಲಾ ಎಂದುಕೊಳ್ಳುತ್ತಾ ರವಿ ನೇರವಾಗಿ ಸ್ವಲ್ಪ ಗಾಬರಿಯಿಂದ ಸುನೀತ ಇದ್ದಲ್ಲಿಗೆ ಬಂದ.

ಅವನು ಗಾಬರಿಯಿಂದ ಬಂದ ರೀತಿಯನ್ನು ನೋಡಿದ ಸುನೀತ

"ಆಗಲೆ ವರದಿ ಒಪ್ಪಿಸಿದಳಾ?" ಕೇಳಿದಳು.

ಸುನಿತ ಸುಮ್ಮನೆ ಹಾಗಂದಿರುವಳೆಂದು ರವಿಗೀಗ ಅರ್ಥವಾಯಿತು. ಅವನು ನಗುತ್ತಾ ಹಿಂದಿರುಗಿದ.

"ನೋಡಿದ್ರಾ ಡ್ಯಾಡಿ, ಔಷಧಿ ಕೊಟ್ರಾ?"

"ಆಸ್ಪತ್ರೇಲಿದೆ ಮರಿ. ಬರ್ತಾ ತಗೊಂಡು ಬರ್ತೀನಿ"

"ಈಗ್ಲೆ ತರ್ರಿ ಡ್ಯಾಡಿ. ...ಅಮ್ಮನಿಗೆ ನೋವು ಹೆಚ್ಚಾದ್ರೆ?"

"ನೋಡು ಮರಿ ಈಗಿನ್ನಾ ಬಂದಿದೀನಿ. ತುಂಬಾ ಹಸಿವು ಬೇರೆ ಆಗಿ ಬಿಟ್ಟಿದೆ. ಬಾ ಮರಿ ಅಮ್ಮ ತಿಂಡಿ ಮಾಡಿರ್ಬೇಕು."

ತಂದೆ ಮಗಳು ಊಟದ ಮೇಜಿನ ಬಳಿ ಬಂದರು.

ಹಬೆಯಾಡುತ್ತಿರುವ ಬಿಸಿ ಬಿಸಿ ಇಡ್ಲಿಯನ್ನು ಎರಡು ಪ್ಲೇಟುಗಳಲ್ಲಿ ತಂದಿರಿಸಿದಳು ಸುನೀತ.

"ನೀನೂ ಬಾಮ್ಮಾ." ರವಿಯ ಜೊತೆಯಲ್ಲಿ ಕುಳಿತುಕೊಳ್ಳುತ್ತಾ ಹೇಳಿದಳು ನಿರ್ಮಲ.

"ನೀವು ತಿನ್ರಿ...ಡಿಕಾಕ್ಷನ್ ಸೋಸಿ. ನಾನೂ ಬಂದ್ಬಿಟ್ಟೆ". ಎಂದು ಸುನೀತ ಸೋಸಿದ ಡಿಕಾಕ್ಷನ್ ಒಂದು ಕೆಟಲ್‌ನಲ್ಲಿ ಹಾಕಿ. ಹಾಲು. ಡಿಕಾಕ್ಷನ್‌ನ್ನನ್ನು ಮೇಜಿನ ಮೇಲೆ ತಂದಿರಿಸಿ, ತಾನೂ ತಿನ್ನಲು ಕುಳಿತಳು. ಇದುವರೆಗೂ ತಿನ್ನದೆ ಕುಳಿತಿದ್ದ ನಿರ್ಮಲೆಗೆ ತಾಯಿ ಬಂದಿದ್ದನ್ನು ನೋಡಿ ಸಂತೋಷವಾಯಿತು. ತಿನ್ನಲು ಪ್ರಾರಂಭಿಸಿದಳು.

"ಡ್ಯಾಡಿ, ರವಿ ಇಡ್ಲಿ ಅಂದ್ರೆ, ನಿಮಗೆ ತುಂಬಾ ಇಷ್ಟ ಅಲ್ವೆ ?"

ರವಿಯ ಕಡೆ ತಿರುಗಿ ಕೇಳಿದಳು

"ಹೂಂ ಮರಿ. ನಿನಗೆ ಹೇಗೆ ಗೊತ್ತಾಯ್ತು?"

"ಅವತ್ತು ಅಮ್ಮ ಹೇಳಿದ್ರು" ತಾಯಿಯ ಕಡೆ ನೋಡಿದಳು. ಸುನೀತ ಏನೂ ಹೇಳದೆ ಒಮ್ಮೆ ನಕ್ಕಳು ಅಷ್ಟೆ.

"ನಿಮಗೆ ಇಷ್ಟಾಂತ ನಾನೇ ಹೇಳಿ ಮಾಡಿಸಿದೆ ಡ್ಯಾಡಿ."

ಹೆಮ್ಮೆಯಿಂದ ಇಬ್ಬರ ಕಡೆಗೂ ನೋಡಿದಳು .

"ಹೌದಾ? ಹಾಗಾದ್ರೆ, ನೀನು ತುಂಬಾ ಜಾಣೆ, ನಿರ್ಮಲ."

ತಾಯಿಯೂ ಈ ದಿನ ತಮ್ಮ ಜೊತೆಯಲ್ಲಿ ತಿನ್ನಲು ಕುಳಿತುಕೊಂಡಿದ್ದಕ್ಕಾಗಿ ತುಂಬಾ ಸಂತೋಷವಾಗಿತ್ತು ನಿರ್ಮಲೆಗೆ

ಎಂದಿಗಿಂತ ಒಂದು ಇಡ್ಲಿಯನ್ನು ಹೆಚ್ಚಾಗಿಯೇ ಹಾಕಿಸಿಕೊಂಡು ತಿಂದಳು.

ತಿಂಡಿ ತಿಂದಾದ ಮೇಲೆ ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ಪಡೆದ ರವಿ. ಆಮೇಲೆ ನಿರ್ಮಲೆಯನ್ನು ಕೂಗಿ,

"ತಿರುಗಾಡಿಕೊಂಡು ಬರೋಣ ಬರ್‍ತೀಯ ಮರಿ?" ಕೇಳಿದ.

"ಹೂಂ ಡ್ಯಾಡಿ. ಅಮ್ಮನಿಗೆ ತಲೆನೋವು ಬಿಟ್ಟಿದ್ದರೆ ಬರುತ್ತಿದ್ದಳು. ನೀವು ಔಷಧೀನೇ ಹಾಕ್ಲಿಲ್ಲ."

"ಇನ್ನೊಂದಿನ ಹೋದ್ರೆ ಆಯ್ತು. ಬಾ ಮರಿ" ಎಂದು ನಿರ್ಮಲೆಯನ್ನು ಕರೆದುಕೊಂಡು ತಿರುಗಾಡಲು ಹೊರಟ ರವಿ.

ನಿರ್ಮಲ ಉತ್ಸಾಹದಿಂದ ಹೆಜ್ಜೆ ಹಾಕುತ್ತಿದ್ದಳು. ಅವಳಿಗೆ ದೂರ ಹೋಗಿ ಬಯಲಿನಲ್ಲಿ ತಿರುಗಾಡಿಕೊಂಡು ಬರುವುದೆಂದರೆ ತುಂಬಾ ಇಷ್ಟ. ಮೇಲೆ ನೀಲಾಗಸದಲ್ಲಿ ಹಾರುವ ಪಕ್ಷಿಗಳನ್ನು ನೋಡಿದಾಗ ಅವಳ ಮನಸ್ಸೂ ಆನಂದದಿಂದ ಹಾರಾಡುವುದು. ಯಾವುದಾದರೂ ಪಕ್ಷಿ ಕೂಗಿದರೆ ಅದರಂತೆ ಅವಳೂ ಕೂಗುವಳು. ಅದು ಕೆಳಗೆ ಬಂದು ಹುಳುಗಳನ್ನು ಹುಡುಕುತ್ತಾ ಕುಪ್ಪಳಿಸಿದರೆ ತಾನೂ ಅದರಂತೆಯೇ ಕುಪ್ಪಳಿಸುವಳು. ಅದು ಫರ್ ಎಂದು ಮೇಲೆ ಹಾರಿ ಹೋದಾಗ, ಕೈ ತಟ್ಟಿ ಕುಣಿಯುವಳು.

ಅವಳ ಆಟವೆಂದರೆ ಕಣ್ಣಿಗೆ ಒಂದು ಹಬ್ಬ ರವಿಗೆ.

ಇಬ್ಬರೂ ಬಂದು ಕಾಲುವೆಯ ಹಾಸುಗಲ್ಲೊಂದರ ಮೇಲೆ ಕುಳಿತರು. ಅಲ್ಲೊಂದು ಗಿಡದ ಮೇಲೆ ಚಿಟ್ಟೆಯೊಂದು ಕುಳಿತಿತ್ತು. ನಿರ್ಮಲ ಅದರ ಕಡೆ ನೋಡಿದಳು. ಚಿಟ್ಟೆಯ ಬಣ್ಣ ಅವಳನ್ನು ಆಕರ್ಷಿಸಿತು.

"ಓ ಎಷ್ಟು ಚೆನ್ನಾಗಿದೆ ಡ್ಯಾಡಿ? ಬಣ್ಣದ ಚಿಟ್ಟೆ"

ಗಿಡದ ಕಡೆಗೋಡಿದಳು ನಿರ್ಮಲ. ಅದನ್ನು ಹಿಡಿಯುವ ಆಶೆ, ಆದರೆ ಅದು ಕೈಗೆ ಸಿಗದು. ಅವಳು ಬಿಡಳು. ಮೆಲ್ಲಗೆ ಕೈ ಹಾಕುವಳು. ಇನ್ನೇನು ಸಿಕ್ಕಿಯೇ ಬಿಟ್ಟಿತು ಅನ್ನುವಾಗ ಅದು ಹಾರಿ ಹೋಗಿ ಇನ್ನೊಂದು ಗಿಡದ ಮೇಲೆ ಕುಳಿತುಕೊಂಡಿತು.

ನಿರ್ಮಲೆಯೂ ಓಡಿದಳು. ಅವಳು ಚಿಟ್ಟೆಯಂತೆಯೇ ಬಣ್ಣ ಬಣ್ಣದ ಫ್ರಾಕ್ ಹಾಕಿಕೊಂಡಿದ್ದಳು. ರವಿಯ ಕಣ್ಣಿಗೆ ಅವಳೂ ಒಂದು ಚಿಟ್ಟೆಯೇ! ಕೆಳಗೊಂದು ಚಿಟ್ಟೆ, ಮೇಲೊಂದು ಚಿಟ್ಟೆ ಹಾರಾಡುತ್ತಿರುವಂತೆ ತೋರಿತು. ಈ ಹಾರಾಟದ ನೋಟ ಅತಿ ರಮಣೀಯವಾಗಿತ್ತು ಅವನಿಗೆ.

ಚಿಟ್ಟೆಗೆ ಹಾರಿ ಹಾರಿ ಸಾಕಾಯಿತೇನೊ! ಹೂವೊಂದರ ಮೇಲೆ ಹೋಗಿ ಕುಳಿತಿತು. ಆಗ ಅದನ್ನು ನೆಲದ ಮೇಲಿನ ಚಿಟ್ಟೆ ಹಿಡಿದೇ ಬಿಟ್ಟಿತು.

ಅದರ ಮೃದುವಾದ ರೆಕ್ಕೆಯನ್ನು ಹಿಡಿದು ಬಂದ ನಿರ್ಮಲೆಯ ಮುಖ, ಗಿಡದಲ್ಲಿಯ ಹೂವಿನಂತೆಯೇ ಅರಳಿತ್ತು.

"ಹಿಡಿದೇ ಬಿಟ್ಟೆ ಡ್ಯಾಡಿ. ಎಷ್ಟು ಚೆನ್ನಾಗಿದೆ ನೋಡಿ."

ಹೌದು. ನಿರ್ಮಲೆಯ ಕಣ್ಣಿಗೆ ಚಿಟ್ಟೆ ಅಂದವಾಗಿ ಕಾಣಿಸ್ತಿದೆ. ತನ್ನ ಕಣ್ಣಿಗೂ ಅಷ್ಟೇ ಚೆಂದ ನಿರ್ಮಲ ಎನಿಸಿತು ರವಿಗೆ. ಅವನು ಮಗಳ ಕಡೆ ಪ್ರೀತಿಯಿಂದ ನೋಡುತ್ತಾ ಕುಳಿತ.

ಬಂಧನದಲ್ಲಿ ಸಿಲುಕಿಕೊಂಡ ಚಿಟ್ಟೆ ತನ್ನ ಉಳಿದೆರಡು ರೆಕ್ಕೆಗಳನ್ನು ಪಟ ಪಟನೆ ಬಡಿಯುತ್ತಾ ಒದ್ದಾಡಲು ಮೊದಲು ಮಾಡಿತು. ಇದನ್ನು ಕಂಡ ನಿರ್ಮಲೆಗೆ ಸ್ವಲ್ಪ ಕರುಣೆ ಬಂದಿತೇನೋ! ಹಿಡಿತವನ್ನು ಸಡಿಲಿಸಿದಳು. ಚಿಟ್ಟೆ ದೂರಕ್ಕೆ ಹಾರಿ ಹೋಯಿತು.

"ಬಿಟ್ಟು ಬಿಟ್ಟೆಯಾ ಮರಿ?"

"ಪಾಪ ನೋವಾಯ್ತೇನೊ. ಬಿಟ್ಟು ಬಿಟ್ಟೆ ಡ್ಯಾಡಿ."

ತನ್ನ ಮಗಳು ಸೌಂದರ್ಯಪ್ರಿಯಳಷ್ಟೇ ಅಲ್ಲ. ಅವಳಲ್ಲಿ ಕರುಣೆಯೂ ತುಂಬಿದೆ ಎಂದುಕೊಂಡ ರವಿ.

ಇಷ್ಟು ಹೊತ್ತೂ ಚಿಟ್ಟೆಯೊಂದಿಗೆ ಆಟವಾಡಿ ದ್ದಾಯಿತು. ಈಗ ತಂದೆಯ ಜೊತೆ ಮಾತನಾಡಬೇಕಲ್ಲಾ! ಒಂದೆರಡು ಕ್ಷಣಗಳು ಕಾಲುವೆಯ ನೀರಿನಲ್ಲಿ ಮುಳುಗಿ ಏಳುತ್ತಿರುವ ಮೀನುಗಳನ್ನೇ ನೋಡುತ್ತಿದ್ದಳು. ನಂತರ ಕೇಳಿದಳು.

"ಇಲ್ನೋಡಿ ಡ್ಯಾಡಿ, ಈ ಮೀನುಗಳು ಎಷ್ಟು ಚೆನ್ನಾಗಿ ಈಜುತ್ತಿವೆಯಲ್ಲಾ!? ನಿಮಗೂ ಬರುತ್ತಾ ಈಜೋದಕ್ಕೆ?"

"ಬರುತ್ತೆ ಮರಿ. ನಿನಗೂ ಕಲಿಸಿಕೊಡಲಾ? ಚಿಕ್ಕೋರಿರೋವಾಗ ಕಲಿಯೋದು ಒಳ್ಳೆಯದು."

"ಹೂಂ ಡ್ಯಾಡಿ. ಕಲೀತೀನಿ. ಅಲ್ಲ ಅಮ್ಮನಿಗೂ ಬರುತ್ತೇನು ಡ್ಯಾಡಿ ಈಜೋಕೆ?"

ಏನು ಹೇಳಬೇಕೊ ತಿಳಿಯದಾಯಿತು ರವಿಗೆ. ಸುಮ್ಮನೆ,

"ಇಲ್ಲ ಮರಿ" ಎಂದ.

"ಅಮ್ಮ ಚಿಕ್ಕೋಳಿರೋವಾಗ ನೀನು ಯಾಕೆ ಕಲಿಸ್ಲಿಲ್ಲ ಡ್ಯಾಡಿ?"

"ಚಿಕ್ಕೋಳಿರೋವಾಗ ಅವರ ಅಮ್ಮ ಅಪ್ಪನ ಹತ್ರ ಇದ್ದಳು. ದೊಡ್ಡವಳಾದ್ಮೇಲೆ ತಾನೆ ನನ್ನ ಹತ್ರ ಬಂದಿದ್ದು? ಹೇಗೆ ಕಲಿಸೋಕೆ ಆಗ್ತಿತ್ತು?" ನಕ್ಕು ಹೇಳಿದ ರವಿ.

ಈಗ ಯೋಚನೆಗೊಳಗಾದಳು ನಿರ್ಮಲ.

ಚಿಕ್ಕವಳಿರೋವಾಗ ಅಮ್ಮ, ಅವರ ಅಮ್ಮ ಅಪ್ಪನ ಹತ್ರ ಇದ್ದಳು. ದೊಡ್ಡವಳಾದ್ಮೇಲೆ ಡ್ಯಾಡಿ ಹತ್ರ ಬಂದಳು. ನಾನೀಗ ಡ್ಯಾಡಿ ಅಮ್ಮನ ಹತ್ರ ಇದೀನಿ. ದೊಡ್ಡವಳಾದ್ಮೇಲೆ ಎಲ್ಲಿಗೆ ಹೋಗ ಬೇಕೊ ತಿಳಿಯದಾಯಿತು ಅವಳಿಗೆ.

"ದೊಡ್ಡವಳಾದ್ಮೇಲೆ ನಾನೂ ಬೇರೆ ಕಡೆ ಹೋಗ್ಬೇಕಾ ಡ್ಯಾಡಿ?"

"ಹೂ ಮರಿ!"

"ನಂಗಿಷ್ಟ ಇಲ್ಲ ಡ್ಯಾಡಿ. ಕಳಿಸ್ಬೇಡಿ. ನಿಮ್ಮ ಹತ್ರಾನೆ ಇರ್ತೀನಿ."

ನಿರ್ಮಲ ಹೀಗಂದಾಗ ನನಗೂ ಇಷ್ಟವಿಲ್ಲ ಡ್ಯಾಡಿ ನಿಮ್ಮನ್ನ ಬಿಟ್ಟು ಹೋಗೋದಕ್ಕೆ, ಕೂಗಿ ಹೇಳಿತು ರವಿಯ ಹೃದಯ.

ಹಿಂದಿರುಗುವಾಗ ದಾರಿಯುದ್ದಕ್ಕೂ ಒಂದೇ ಯೋಚನೆ ನಿರ್ಮಲೆಗೆ. ತಾನು ದೊಡ್ಡವಳಾದ ಮೇಲೆ ಡ್ಯಾಡೀನ ಹೇಗೆ ಬಿಟ್ಟಿರೋದೂಂತ.

ರಾತ್ರಿ ಊಟವಾದ ಮೇಲೆ ರವಿ ಮಲಗಲು ತನ್ನ ಮನೆಗೆ ಹೊರಟಾಗ ನಿರ್ಮಲ "ನಿತ್ಯ ಅಲ್ಲಿಗೆ ಯಾಕೆ ಹೋಗ್ತೀರಿ, ಇಲ್ಲೇ ಮಲಗಿ ಡ್ಯಾಡಿ" ಎಂದಳು.

ರವಿ ಒಂದೆರಡು ಕ್ಷಣ ಯೋಚಿಸುತ್ತಿದ್ದ ನಂತರ ಹೇಳಿದ.

"ಔಷಧಿಗಳೆಲ್ಲಾ ಅಲ್ಲೇ ಇವೆ. ಮಧ್ಯ ರಾತ್ರೀಲಿ ಯಾರಾದ್ರೂ ಪೇಷಂಟ್ಸ್ ಬರ್ತಾರೆ. ಇಲ್ಲಿದ್ರೆ ಹೇಗೆ ನಿರ್ಮಲಾ ?"

"ಅಮ್ಮನಿಗೆ ತಲೆನೋವಲ್ಲಾ ಡ್ಯಾಡಿ. ಅವರ್‍ನ ನೋಡ್ಕೋಬೇಕಲ್ಲಾ? ತಿಮ್ಮಯ್ಯನಿಗೆ ಹೇಳಿದ್ರೆ ಇಲ್ಲೇ ತಂದಿಡ್ತಾನೆ ಬಾಟ್ಲಿಗಳ್ನ."

"ಅವನು ಒಡೆದು ಹಾಕ್ತಾನೆ ನಿರ್ಮಲ. ತರೋಕ್ಕೆ, ಅವನಿಗೆಲ್ಲಿ ಬರುತ್ತೆ ಹೇಳು?"

ಹೌದೆನ್ನಿಸಿತು ನಿರ್ಮಲೆಗೆ. ಒಂದು ದಿನ ಗಾಜಿನ ಕಪ್ಪು ಪ್ಲೇಟುಗಳನ್ನು ತೊಳೆಯಲು ತೆಗೆದುಕೊಂಡು ಹೋಗಿ ಒಡೆದು ಹಾಕಿದ್ದ. ಎಣ್ಣೆ ಶೀಶೆಯನ್ನೂ ಹಾಗೆಯೇ ಒಡೆದಿಟ್ಟಿದ್ದ. ಅವನಿಗೆ ಹಿಡಿಯೋಕೆ ಬರೋದಿಲ್ಲ.

ಅವನು ತರೋದೆ ಬೇಡ. ನಾನು ತಂದ್ರೋ? ಎಂದು ಕೊಂಡಳು.

"ಅವ್ನು ಬೇಡ, ನಾನೇ ತಗೊಂಡು ಬರ್ರೀನಿ ಡ್ಯಾಡಿ ಬಾಟಲಿಗಳ್ನ"

"ಎತ್ತೋಕೆ ಆಗಲ್ಲ ಮರಿ ಅವುಗಳನ್ನ, ನೀನಿನೂ ಚಿಕ್ಕವಳಲ್ಲವೆ?"

ದೊಡ್ಡವಳಾದ ಮೇಲೆ ತಂದ್ರೋ? ಓ ದೊಡ್ಡವಳಾದ್ರೆ ಅಮ್ಮನ್ನೂ, ಡ್ಯಾಡೀನೂ ಬಿಟ್ಟು ಹೋಗ್ಬೇಕಾಗುತ್ತೇ ಹೀಗೇ ಇರೋದೆ ಒಳ್ಳೆಯದು ಎಂದು ಶೀಶೆಗಳನ್ನು ಇಲ್ಲಿಗೆ ಸಾಗಿಸಿ ಕೊಂಡಿರುವ ವಿಚಾರವನ್ನಲ್ಲಿಗೆ ಬಿಟ್ಟಳು. ಇವತ್ತೊಂದು ದಿವ ಇಲ್ಲಿ ಮಲಗಲಿ.

"ಅಮ್ಮನಿಗೆ ಔಷಧಿ" ಜ್ಞಾಪಿಸಿದಳು.

"ತರ್ರೀನಿ" ಎಂದು ಹೇಳಿ ರವಿ ಹೊರಟು ಹೋದ.

ಮರುದಿನ ಬೆಳಗ್ಗೆ ಬಂದಾಗ ಅವನ ಕೈಲಿ ಒಂದು ಚಿಕ್ಕ ಪೊಟ್ಟಣವಿತ್ತು. ಅದನ್ನು ನಿರ್ಮಲೆಗೆ ಕೊಟ್ಟು

"ತಗೋ, ಅಮ್ಮನಿಗೆ ಕೊಡು. ಇದ್ರಲ್ಲಿ ಔಷಧಿ ಇದೆ" ಎಂದ.

"ಕೊಡಿ" ಎಂದು ಅದನ್ನ ತೆಗೆದುಕೊಂಡು ನಿರ್ಮಲ ಒಂದೇ ಉಸುರಿಗೆ ಒಳಗೋಡಿ ತಾಯಿಗೆ ಕೊಟ್ಟು ಬಂದಳು.

ಅದು ಖಾಲಿ ಪೊಟ್ಟಣವೆಂದು ತಿಳಿದಿದ್ದರೆ ಡಾಕ್ಟರೊಂದಿಗೆ ಯುದ್ಧಕ್ಕೇ ನಿಲ್ಲುತ್ತಿದ್ದಳೇನೋ ಅವಳು.

ಹಾಲ್‌ನಲ್ಲಿ ಒಂದು ಮಂಚ ಹಾಕಿತ್ತು. ಮಧ್ಯಾಹ್ನ ಊಟವಾದ ಮೇಲೆ ಒಂದೊಂದು ದಿನ ರವಿ ಅದರ ಮೇಲೆ ಹಾಗೇ ವಿಶ್ರಮಿಸಿಕೊಳ್ಳುತ್ತಿದ್ದ.

ಅದರ ಮೇಲೆ ಹಾಸಿಗೆಯನ್ನುರುಳಿಸಿಕೊಂಡು ಹಾಗೇ ಅಡ್ಡಾದ,

ಹಾಕಿ ತನ ಕೊಠಡಿಯಲ್ಲಿ ಮಲಗಿದಳು.

ಸತ್ಯ ನಿರ್ಮಲ ಅದೂ ಇದೂ ಮಾತಾಡುತ್ತಾ ಮಗ್ಗುಲಲ್ಲಿರುತ್ತಿದ್ದಳು. ಈ ದಿನ ಅವಳಿಲ್ಲದೆ ಸುನೀತಗೆ ಬೇಸರವೊ ಬೇಸರ. ಹಾಗೇ ಜೊಂಪು ಹತ್ತಿದ್ದರೂ ಮಧ್ಯರಾತ್ರಿಯ ವೇಳೆಗೆ ಎಚ್ಚರವಾಯಿತು. ಹಾಲ್‌ನ ದೀಪ ಇನ್ನೂ ಹಾಗೇ ಉರಿಯುತ್ತಿತ್ತು. ರವಿ ನಿದ್ದೆ ಹೋಗಿದ್ದ. ನಿರ್ಮಲ ಅಂಗಾತನಾಗಿ ಮಲಗಿದ್ದಳು. ಮುಖದ ಮೇಲೆ ತುಂಟತನ ತುಳುಕುತ್ತಿತ್ತು. ಇಬ್ಬರೂ ಹೊದಿಕೆಯಿಲ್ಲದೆ ಮಲಗಿದ್ದಾರೆ. ಒಳಗೆ ಹೋಗಿ ರಗ್ಗನ್ನು ತಂದು ಮೆಲ್ಲಗೆ ಹೊದಿಸಬೇಕೆನ್ನುವಾಗ ರವಿಗೆ ಎಚ್ಚರವಾಗಿ ಬಿಟ್ಟಿತು. ನೋಡುತ್ತಾನೆ ಎದುರಿನಲ್ಲಿ ಸುನೀತ ನಿಂತಿದ್ದಾಳೆ. ದೀಪ ಹಾಗೇ ಉರಿಯುತ್ತಿದೆ. ಯಾವುದೋ ಕನಸಿನ ಲೋಕದಲ್ಲಿರುವಂತೆ ಭಾಸವಾಯಿತು ರವಿಗೆ.

"ಹೊದೆಯದೆ ಇಬ್ಬರೂ ಹಾಗೇ ಮಲಗಿ ಬಿಟ್ಟಿದ್ದೀರಲ್ಲಾ" ಎಂದಳು ಸುನೀತ.



ನಾಳೆಯಿಂದ ಬೇಕಾದ್ರೆ ಅಲ್ಲೇ ಮಲಗಲಿ. ಪಾಪ ! ಕಾಯಿಲೆಯವರಿಗೆ ಸಹಾಯ ಮಾಡಬೇಕಲ್ಲಾ ! ಎಂದು ತರ್ಕಿಸಿದಳು.

"ಇವತ್ತೊಂದು ದಿನ ಇಲ್ಲೇ ಮಲಗ್ರಿ ಡ್ಯಾಡಿ. ಅಮ್ಮನಿಗೆ ತಲೆನೋವು ವಾಸಿಯಾದ್ಮೇಲೆ ಬೇಕಾದ್ರೆ ಅಲ್ಲಿಗೇ ಹೋಗ್ರಿ."

ಸದ್ಯ ಇಷ್ಟಕ್ಕಾದರೂ ಬಂದಳಲ್ಲ ಎಂದು ಒಂದು ರೀತಿಯ ಸಮಾಧಾನಕ್ಕೆ ಬಂದ ರವಿ.

"ಆಗ್ಲಿ. ಹಾಗಾದ್ರೆ ಅಲ್ಲಿ ಯಾರಿಗಾದ್ರೂ ಮಲಗೋಕೆ ಹೇಳಿ ಬರ್ರೀನಿ." ಎಂದು ಹೊರಟು ನಿಂತ,

"ನಾನೂ ಇಲ್ಲೇ ಮಲಗ್ತೀನಿ ಮಲಗ್ಲಾ ಡ್ಯಾಡೀ"

"ಮಲಕ್ಕೋ ಮರಿ."

ಸಂತೋಷವಾಯಿತು ನಿರ್ಮಲೆಗೆ. ತಾನು ಡ್ಯಾಡಿಯ ಜೊತೆ ಹೊರಗಡೆಯೇ ಮಲಗುವ ಸಂತೋಷದ ಸಮಾಚಾರವನ್ನು ತಾಯಿಗೆ ಮುಟ್ಟಿಸಿ ಬಂದಳು. ಮಗಳ ಈ ಹುಚ್ಚಾಟಕ್ಕೆ ಏನು ಹೇಳಬೇಕೊ ತಿಳಿಯದಾಯಿತು ಸುನೀತಗೆ. ಅವಳಿಗೆ ಹೆದರಿಕೆ. ಏನಾದರೂ ಅಪಾರ್ಥ ಮಾಡಿ ಸುತ್ತುಮುತ್ತಲೆಲ್ಲಾ ಸಾರಿಕೊಂಡು ಬರುತ್ತಾಳೆ. ಏನು ಮಾಡುವುದು ಎಂದು ಒಂದು ಗಳಿಗೆ ಯೋಚಿಸುವಂತಾಯಿತು ಕೊನೆಗೆ, ದೇವರ ಮೇಲೆ ಭಾರ

ಪ್ರೀತಿ ತುಂಬಿದ ಅವಳ ಇನಿ ದನಿಯನ್ನು ಕೇಳಿದಾಗ ವಿಮಲೆಯೇ ಎದುರಿಗೆ ಬಂದು ನಿಂತಿದ್ದಾಳೆನ್ನಿಸಿತು ರವಿಗೆ. ಒಂದು ಗಳಿಗೆಯ ನಂತರ ತನ್ನ ಯೋಚನೆಗೆ ತನಗೆ ನಗು ಬಂದಿತು. ಮೇಲೇಳುತ್ತಾ,

"ನಿಮ್ಮನ್ನು ಕೇಳಿ ತೆಗೆದುಕೊಳ್ಳಬೇಕೂಂತಿದ್ದೆ. ಆದ್ರೆ ಯಾವಾಗ ಕಣ್ಣು ಹತ್ತಿ ಬಿಟ್ಟಿತೊ ತಿಳಿಯದು."

ಎಂದು ಸುನೀತ ತಂದ ರಗ್ಗನ್ನು ನಿರ್ಮಲಳ ಮೈ ತುಂಬಾ ಹೊದಿಸಿ ಅಲ್ಲೇ ಸ್ಟೂಲಿನ ಮೇಲಿದ್ದ ಸಿಗರೇಟು ಪ್ಯಾಕನ್ನೆತ್ತಿಕೊಂಡು ಸಿಗರೇಟನ್ನು ಹಚ್ಚಿ ತಲೆಯೆತ್ತಿದಾಗ ಸುನೀತ ಇನ್ನೂ ಅಲ್ಲಿಯೇ ನಿಂತಿದ್ದಳು.

ಸುನೀತ ಅವನ ಕಡೆಗೇ ದಿಟ್ಟಿಸುತ್ತಿದ್ದಳು. ರವಿ ಅಂದಿಗೂ ಇಂದಿಗೂ ಅದೆಷ್ಟು ಬದಲಾಗಿ ಹೋಗಿದ್ದಾರೆ! ಮೊದಲಿದ್ದುದರಲ್ಲಿ ಅರ್ಧ ಕೂಡ ಇಲ್ಲ. ಕಣ್ಣು ಗುಳಿ ಬಿದ್ದಿವೆ. ತಲೆಯಲ್ಲಿ ಬಿಳಿ ಕೂದಲು ಕಾಣುತ್ತಿವೆ. ಏರು ಯೌವನದಲ್ಲಿಯೇ ಈ ಮುಪ್ಪು! ಅವನ ಮೇಲೆ ಕರುಣೆ ಉಂಟಾಯಿತು ಸುನೀತಗೆ. ಆ ದಿನ ಹೇಳಿದ್ದನ್ನೇ ಮತ್ತೆ ಹೇಳ ಬೇಕೆನ್ನಿಸಿತು.

ಸುನೀತ ಏನನ್ನೋ ಹೇಳಲು ತವಕಿಸುತ್ತಿರುವಳೆಂದು ಅರ್ಥವಾಯಿತು ರವಿಗೆ. ಆ ದಿನ ಸಿಗರೇಟು ಬಿಡಲು ಹೇಳಿದ್ದಳು. ಪ್ರಯತ್ನಿಸುತ್ತೇನೆ ಎಂದಿದ್ದ. ಬಹುಶಃ ಈದಿನವೂ ಅದರ ವಿಚಾರವಾಗಿಯೇ ಕೇಳುತ್ತಾಳೇನೋ!

"ರವಿ, ಆ ದಿನ ಹೇಳಿದ್ದನ್ನೆಲ್ಲಾ ಯೋಚಿಸಿದಿರಾ?" ಕೇಳಿದಳು ಸುನೀತ.

"ಯೋಚಿಸಿಯಾಯಿತು ಸುನೀತ. ಸೇದುತ್ತಲೇ ಯೋಚಿಸಿದೆ. ಈಗಲೂ ಸಹ ಯೋಚಿಸುತ್ತಲೇ ಇದ್ದೇನೆ. ಇಷ್ಟನ್ನೇ ನಾನು ಪ್ರಯತ್ನಿಸುತ್ತಿರೋದು ನೋಡು"

"ಓ ನಿಮ್ಮ ಧೂಮಪಾನದ ವಿಷಯವೆ? ಅದನ್ನಲ್ಲ, ಇದೇ ಬೇರೆ."

ಇನ್ನು ಯಾವುದೋ ಹಾಗಾದರೆ! ಪ್ರಶ್ನಾರ್ಥಕವಾಗಿ ಸುನೀತಳ ಕಡೆ ನೋಡಿದ.

"ನನಗೊಬ್ಬಳು ತಂಗಿ ಬೇಕಾಗಿದಾಳೆ ಅಂತ ಹೇಳಿದ್ದೆನಲ್ಲಾ! ಅದರ ಬಗ್ಗೆ ಯೋಚಿಸಿದಿರಾಂತ. ಹೀಗೇ ಎಷ್ಟು ದಿನ ಇರಬೇಕೂಂತ ಅಂದ್ಕೊಂಡಿದೀರಿ ರವಿ. ಈ ಬೆಂಗಾಡು ಜೀವನದಲ್ಲಿ ನಿಮಗೆ ಏನು ಸುಖವಿದೆ ಹೇಳಿ?"

ಸುಖವಿದೆ. ಇಲ್ಲವೆಂದು ಹೇಳಿದವರು ಯಾರು? ನಿರ್ಮಲೇನ ಕಣ್ಣು ತುಂಬಾ ನೋಡ್ತಾ, ಅವಳ ಮುದ್ದು ಮಾತುಗಳನ್ನು ಕೇಳುತ್ತಿರೋ ಈ ಜೀವನ ಬೆಂಗಾಡು ಜೀವನ ಹೇಗಾದೀತು? ಎನ್ನಿಸಿತು ರವಿಗೆ. ಹೇಳಿದ.

"ನಿರ್ಮಲ ಒಬ್ಬಳಿದ್ರೆ ಸಾಕು ಸುನೀತ. ನನಗಿನ್ನಾವ ಸುಖದಾಸೆಯೂ ಇಲ್ಲ. ಅವಳ್ನ ಯಾವಾಗ್ಲೂ ನೋಡ್ತಾ, ಅವಳ ಜೊತೆ ಆಟ ಆಡ್ತಿರಬೇಕೂನಿಸುತ್ತೆ"

"ರವಿ ನಿಜಕ್ಕೂ ಇದು ನಿಮ್ಮ ಭ್ರಮೆಯಂತಲೆ ಹೇಳಬೇಕು. ಯಾವಾಗ್ಲೂ ನಾವೆಲ್ಲಾ ಒಂದೇ ಕಡೆ ಹೀಗೇ ಇರುತ್ತೇವೆ ಅಂತ ಹೇಳೊಕ್ಕೆ ಆಗುತ್ತೆ? ಇಷ್ಟಕ್ಕೂ ನಿರ್ಮಲ ಹೀಗೆ ಚಿಕ್ಕವಳಾಗಿಯೇ ಇರ್ತಾಳೆಯೆ? ನಾಳೆ ಬೆಳೆದು ದೊಡ್ಡವಳಾದ ಮೇಲೆ ಅತ್ತೆ ಮನೆಗೆ ಹೋಗದೆ ಇರೋದಕ್ಕೆ ಆದೀತೆ? ಹೆಣ್ಣು ಹುಡುಗಿಯರಿಗೇನು ನಾಲಕ್ಕು ದಿನಕ್ಕೆ ಬಂದು ಬಿಡ್ತಾರೆ. ಆಗ ನಿಮಗೆ ಜೀವನದಲ್ಲಿ ಬೇಸರವಿರದೆ ಮತ್ತೇನಿರುತ್ತೆ ಹೇಳಿ?"

ಸುನೀತಳ ಮಾತನ್ನು ಕೇಳಿ, ಕೆಲ ಕಾಲ ಯೋಚನೆಗೊಳಗಾದ ರವಿ.

"ಈಗಂತೂ ಸಾಧ್ಯವಿಲ್ಲ ಸುನೀತ. ಆನಂದ ಬರಲಿ, ನೋಡಿದರಾಯಿತು." ಎಂದ.

ಸುನೀತ ಮತ್ತೇನೂ ಹೇಳಲಿಲ್ಲ. ಹೋಗಿ ಮಲಗಿದಳು. ಅವಳ ನಿದ್ದೆ ಯಾವಾಗಲೋ ದೂರ ಹೋಗಿತ್ತು. ರವಿಯದೇ ಯೋಚನೆ.

ಹೊರಗಡೆ ಲೈಟಿನ್ನೂ ಉರಿಯುತ್ತಲೇ ಇತ್ತು. ಸಿಗರೇಟಿನ ಹೊಗೆ ಮುತ್ತಿಕೊಂಡು ಮೊದಲಿನ ಹಾಗೆಯೇ ಹಾಲ್‌ನಲ್ಲೆಲ್ಲಾ ಆವರಿಸಿತ್ತು. ಅವನ ಸ್ಥಿತಿಗೆ ಮರುಗುವಂತಾಯಿತು. ಬಹಳ ಹೊತ್ತಿನ ಮೇಲೆ ಸುನೀತೆಗೆ ಕಣ್ಣು ಹತ್ತಿತು. ಅವಳು ಬೆಳಗ್ಗೆ ಎದ್ದಾಗ ಗಂಟೆ ಏಳೂವರೆಯಾಗಿತ್ತು.

ಅಡುಗೆ ಮನೆ ಕಸಗುಡಿಸಿ ನೀರೊಲೆಗೆ ಉರಿ ಹಾಕಿ ಮುಸುರೆ ಪಾತ್ರೆಗಳನ್ನು ತೊಳೆಯುತ್ತಿದ್ದಳು. ಹೊರಗೆ ಬಂದು ನೋಡಿದಾಗ ನಿರ್ಮಲ ಕಣ್ಣು ಬಿಟ್ಟುಕೊಂಡು ಹಾಸಿಗೆಯಲ್ಲೇ ಕುಳಿತಿದ್ದಳು. ರವಿ ಮಾತ್ರ ಇನ್ನೂ ಮಲಗಿಯೇ ಇದ್ದ.

ಒಳಗೆ ಹೋದಾಗ ಸೀತ ಇವಳ ಕಡೆ ಏನೋ ಒಂದು ರೀತಿಯಾಗಿ ನೋಡಿ "ಈಗಿನ್ನಾ ಎದ್ದಿರೇನಮ್ಮಾ" ಎಂದಳು.

"ಹೂಂ, ಎಚ್ಚರವೇ ಆಗಲಿಲ್ಲ. ಏಳು ಹೊತ್ತಾಗಿದೆಯಲ್ಲಾ? ಎಬ್ಬಿಸಬಾರದಾಗಿತ್ತೆ?"

"ರಾತ್ರೀನಾಗ ಹೊತ್ತಾಗೇನಾದ್ರೂ ಮಲಗಿದ್ರೇನೊ ಯಾಕೆ ಎಬ್ಸಾನಾಂತ ಸುಮ್ಮನಿದ್ದಿನ್ರಮ್ಮ" ಎಂದು ಸೀತ ಕೊಂಕು ನಗೆ ನಕ್ಕಳು.

ಸುನೀತಳೇನೊ ಹೊತ್ತಾಗಿಯೇ ಮಲಗಿದ್ದಳು. ಆದರೆ ಸೀತೆ ಅಂದಿದ್ದೇ ಬೇರೆ ಅರ್ಥದಲ್ಲಿ. ಅವಳ ಊಹೆಯೇ ಬೇರೆಯಾಗಿತ್ತು. ಅವಳ ಮಾತಿನಿಂದ ಸುನೀತಳ ಎದೆಗೆ ಮುಳ್ಳು ನಾಟಿದಂತಾಯಿತು. ಎದ್ದು ಬಚ್ಚಲಿಗೆ ಹೋಗಿ ಮುಖ ತೊಳೆದು ಬಂದಳು.

ಕಣ್ಣು ಬಿಟ್ಟುಕೊಂಡು ಹಾಸಿಗೆಯಲ್ಲೇ ಕುಳಿತ ನಿರ್ಮಲೆಗೆ, ರವಿ ಏಳದಿದ್ದುದನ್ನು ನೋಡಿ ಬೇಸರವಾಯಿತು. ತಾನು ಎದ್ದು ಇಷ್ಟು ಹೊತ್ತಾದರೂ ಡ್ಯಾಡಿ ಇನ್ನೂ ಮಲಗಿರೋದೆ! ಎನ್ನಿಸಿರಬೇಕು ಅವಳಿಗೆ. ರವಿಯನ್ನು ಎಬ್ಬಿಸಲೆಂದು ಅವನ ಹತ್ತಿರ ಸರಿದು ಬಂದಳು.

ಸುನೀತ ಕಾಫಿಗೆ ನೀರಿಟ್ಟು ಅಲ್ಲಿಗೆ ಬಂದಾಗ ನಿರ್ಮಲ ರವಿಯ ಮೇಲಿನ ಹೊದಿಕೆಯನ್ನು ಹಿಡಿದೆಳೆಯುತ್ತಾ

"ಡ್ಯಾಡಿ. ಏಳಿ ಡ್ಯಾಡಿ" ಎನ್ನುತ್ತಿದ್ದಳು.

"ಸುಮ್ನಿರು ನಿಮ್ಮಿ, ಅವರಿಗೆ ರಾತ್ರಿ ನಿದ್ದೆ ಸರಿಯಾಗಿ ಬರಲಿಲ್ವೇನೊ, ಮಲಕ್ಕೊಳ್ಳಿ. ಎಬಿಸ್ಬೇಡ. ಬಾ ಇಲ್ಲಿ" ಎಂದು ಸುನೀತ ಮಗಳನ್ನು ತಡೆದಳು.

ರೂಮಿನಲ್ಲಿ ಹಾಸಿಗೆಯನ್ನು ಸುತ್ತಿಡುತ್ತಿದ್ದ ಸೀತ, ಇನ್ನೊಮ್ಮೆ ಕೊಂಕು ನಗೆ ಬೀರುತ್ತಾ ತನ್ನ ಮುಂದೆ ಹಾಯ್ದು ಹೋದಾಗ ಚೇಳು ಕುಟುಕಿದಂತಾಯಿತು ಸುನೀತಗೆ. ಇವಳು ಅಪಾರ್ಥ ಮಾಡಿಕೊಂಡು ನಗುವುದಕ್ಕೆ ಸರಿಯಾಗಿಯೇ ತಾನು ಮಾತಾಡುತ್ತಿದ್ದೇನಲ್ಲಾ ಸುಮ್ಮನಿದ್ದರಾಗುತ್ತಿತ್ತು ಎನ್ನಿಸಿತವಳಿಗೆ.

ರವಿ ಎದ್ದಾಗ ಸುನೀತಳದೂ, ನಿರ್ಮಲೆಯದೂ ಸ್ನಾನವಾಗಿತ್ತು. ಉಪಹಾರಕ್ಕೆ ಅವನಿಗಾಗಿ ಕಾಯುತ್ತಿದ್ದರು. ಅವನು ಎದ್ದಿದ್ದನ್ನು ನೋಡಿ. ನಿರ್ಮಲ ಕರೆಯಲು ಬಂದಳು.

ಅವಳು ಮೋಟು ತೋಳಿನ ಬಿಳಿ ಫ್ರಾಕನ್ನು ಹಾಕಿಕೊಂಡಿದ್ದಳು. ಅರಳಿದ ಗುಲಾಬಿಯ ಮೇಲೆ ಇಬ್ಬನಿ ಹನಿ ಕೂತಂತೆ ಅವಳ ಮುಖದ ಮೇಲೆ ಬಿಸಿ ಹನಿಗಳು ಕುಳಿತಿದ್ದವು. ತುಂಬುಗಣ್ಣಿನಿಂದ ಅವಳನ್ನು ನೋಡುತ್ತಾ ರವಿ ಸಣ್ಣಗೆ ನಕ್ಕು ಹೇಳಿದ.

"ನೋಡು ಮರಿ ನಿನ್ನಿಂದ ಇವತ್ತು ಆಸ್ಪತ್ರೆಗೆ ಲೇಟಾಯಿತ್ತು."

ಅಲ್ಲಿಯ ಕಸ ತೆಗೆಯಲು ಪೊರಕೆ ಹಿಡಿದು ಬಂದ ಸೀತ ಇದನ್ನು ಕೇಳಿ ನಿರ್ಮಲನಿಂದ ಹೊತ್ತಾಯ್ತೋ ಇಲ್ಲ ಸುನೀತಮ್ಮಾವ್ರಿಂದಾನೊ ಎಂನುಕೊಂಡು ವ್ಯಂಗ್ಯ ನಗೆ ತೇಲಿಸಿದ್ದನು ಬಾಗಿಲಲ್ಲೇ ನಿಂತ ಸುನೀತ ಗಮನಿಸದೆ ಹೋಗಲಿಲ್ಲ.

ರವಿ...ನಿರ್ಮಲಾ ಒಳಗಡೆ ಬರಲು ಎದ್ದಾಗ ಅವಳೂ ಅಲ್ಲಿಂದ ಸರಿದಳು.

- ೮ -

ಒಂದು ದಿನ ಸಾಯಂಕಾಲ ನಿರ್ಮಲೆಯ ಜೊತೆಯಲ್ಲಿ ಆಟವಾಡುತ್ತಿರುವಾಗ ಪದ್ಮ ಹೇಳಿದಳು:

"ನಾಳೆ ನಾವೆಲ್ಲಾ ಬೆಟ್ಟದಮ್ಮನ ಜಾತ್ರೆಗೆ ಹೋಗ್ತೀವಿ. ನಿರ್ಮಲ. ನೀವೂ ಹೋಗಲ್ವಾ ?"

"ಜಾತ್ರೆ? ಹಾಗಂದರೇನು? ಪದ್ಮ? ನನಗೆ ಗೊತ್ತೇ ಇಲ್ಲ. ಏನೇನಿರುತ್ತೆ ಅಲ್ಲಿ?"

"ಅಲ್ಲಿ ದೊಡ್ಡ ಉತ್ಸವ ನಡೆಯುತ್ತೆ. ಹೆಣ್ಣು ದೇವ್ರು ಅಲ್ಲಿರೋದು. ಅದಕ್ಕೆ ಅಲಂಕಾರ ಮಾಡಿ. ತೇರ್ನಲ್ಲಿ ಕೂಡಿಸಿ ಎಳೆಯುತ್ತಾರೆ. ತುಂಬಾ ಜನ ಸೇರ್ತಾರೆ. ನಿರ್ಮಲ. ತರ ತರಾ ಆಟದ ಸಾಮಾನು ಬೇಕು ಬೇಕಾದ ತಿಂಡಿ, ರಿಬ್ಬನ್ನು ಬಳೆ ಇನ್ನೂ ಏನೇನು ಬೇಕೊ ಎಲ್ಲಾ ಬಂದಿರುತ್ತೆ."

ಆಟದ ಸಾಮಾನು, ಬಳೆ ರಿಬ್ಬನ್ನು ಎಲ್ಲಾ ಬಂದಿರುತ್ತೆ ಎಂದ ಮೇಲೆ ಅದನ್ನು ನೋಡಲೇಬೇಕೆನ್ನಿಸಿತು ನಿರ್ಮಲೆಗೆ ಮನೇಲಿ ಕೇಳ್ಬೇಕು. ಅಮ್ಮನ್ನ ಕೇಳೋದು ಬೇಡ. ಅಮ್ಮ ಯಾವುದಕ್ಕೂ ಬರೊಲ್ಲ. ಬೇಡಾಂತ ಹೇಳ್ತಾಳೆ. ಡ್ಯಾಡೀನ ಕೇಳ್ಬೇಕು ಎಂದುಕೊಂಡಳು.

ರವಿ ಬಂದ ಕೂಡಲೇ ಪ್ರಾರಂಭಿಸಿದಳು.

"ಡ್ಯಾಡಿ ನಾವೂ ಜಾತ್ರೆಗೆ ಹೋಗೋಣ. ಬೆಟ್ಟದಮ್ಮನ ಜಾತ್ರೆಗೆ. ನನ್ನ ಫ್ರೆಂಡ್ ಪದ್ಮ ಇದಾಳಲ್ಲ. ಅವರ ಮನೇಲಿ ಎಲ್ಲರೂ ಹೋಗ್ತಾರಂತೆ. ಏನು ಡ್ಯಾಡಿ ನಾಳೆ ನಾವೂ ಹೋಗಿ ಬರೋಣ"

ಬೆಟ್ಟದಮ್ಮನ ಜಾತ್ರೆಗೆ ಸುತ್ತ ಮುತ್ತಲ ಹಳ್ಳಿಗಳಿಂದೆಲ್ಲಾ ಜನ ಬಂದು ಸೇರ್ತಾರೆ. ದೊಡ್ಡ ಜಾತ್ರೆ. ಮೂರು ನಾಲಕ್ಕು ಮೈಲಿಗಳ ದೂರದಲ್ಲಿರುವ ಒಂದು ಚಿಕ್ಕ ಹಳ್ಳಿಯ ಬೆಟ್ಟದ ಮೇಲೆ ಅಮ್ಮನ ದೇವಾಲಯವಿದೆ. ಅಲ್ಲೇ ಜಾತ್ರೆ ನಡೆವುದು. ಇದೆಲ್ಲಾರವಿಗೆ ತಿಳಿದಿತ್ತು. ಆದರೆ ಒಮ್ಮೆಯೂ ಹೋಗಿ ನೋಡಿರಲಿಲ್ಲ. ಈಗ ಹುಡುಗಿ ಆಶೆ ಪಟ್ಟಿದ್ದಾಳೆ. ಹೋಗಿ ತೋರಿಸಿಕೊಂಡು ಬರಬೇಕೆನ್ನಿಸಿತ್ತು ಆದರೆ ಆಸ್ಪತ್ರೆಗೆ ರಜೆ ಎಲ್ಲಿಯದು? ಹೇಳಿದ

"ನಾಳೇನೇಂದ್ರೆ ಹೇಗೆ ಹೋಗುವುದು? ರಜ ಇಲ್ಲವಲ್ಲ ನಿರ್ಮಲ. ನಾಡಿದ್ದು ಭಾನುವಾರ. ಬೇಕಾದ್ರೆ ಹೋಗಿ ಬಿಟ್ಟು ಬರೋಣ"

"ಜಾತ್ರೆ ನಾಳೇನೆ ಅಂತೆ ಡ್ಯಾಡಿ. ನಾಡಿದ್ದವರೆಗೂ ಇರುತ್ತಾ?"

"ಇನ್ನೂ ಒಂದು ವಾರದ ವರೆಗೆ ಇರುತ್ತದೆ ಮರಿ. ಆತ್ರ ಯಾಕೆ ಹೇಳು?" ಎಂದು ಹೇಳಿದ ಮೇಲೆ ಆಗಲಿ ಎನ್ನುವಂತೆ ತಲೆಯಾಡಿಸಿದಳು ನಿರ್ಮಲ.

ಎರಡು ದಿನಗಳ ಮೇಲೆ ಬರುವ ಭಾನುವಾರ, ಎರಡು ವರ್ಷಗಳ ಮೇಲೆ ಬಂದಂತಾಯಿತು ಅವಳಿಗೆ. ಜಾತ್ರೆಗೆ ತಾಯಿಯೂ ಹೊರಟಿದ್ದರಿಂದ ಇನ್ನೂ ಹೆಚ್ಚಿನ ಸಂತೋಷವಾಯಿತು. ಜಾತ್ರೆಗಾಗಿ ಸ್ಪೆಷಲ್ ಬಸ್ಸು ಇತ್ತು. ಅದರಲ್ಲೇ ಹೊರಟರು.

ಮೂರನೆಯ ದಿನವಾದುದರಿಂದ ಬೆಟ್ಟದ ಮೇಲೆ ಜನಸಂದಣಿ ಕಡಿಮೆಯಿತ್ತು. ಮೊದಲು ದೇವಾಲಯಕ್ಕೆ ಹೋಗಿ ಹಣ್ಣುಕಾಯಿ ಮಾಡಿಸಿಕೊಂಡು ಬಂದರು. ಅಲ್ಲಿಂದ ಬರುತ್ತಿದ್ದಂತೆ ಬೆಲೂನಿನವನು ಎದುರಾದ. ಬಣ್ಣ ಬಣ್ಣದ ಬೆಲೂನ್‌ಗಳು ನಿರ್ಮಲೆಯನ್ನು ಆಕರ್ಷಿಸಿದವು.

"ಅವೇನು ಡ್ಯಾಡಿ? ದುಂಡಗೆ?, ಸಣ್ಣಗೆ ಬಣ್ಣ ಬಣ್ಣದವು?"

"ಓ ಬೆಲೂನ್ ಬೇಕಾ ಮರಿ?" ಎಂದವನೆ ರವಿ ಬೆಲೂನಿನವನನ್ನು ಕೂಗಿದ.

"ಎಷ್ಟು ಬೇಕು ಸ್ವಾಮಿ?" ಬೆಲೂನಿನವನು ಹತ್ತಿರ ಬಂದು ಕೇಳಿದ,

"ಒಂದು ಸಾಕಾ ನಿರ್ಮಲಾ?" ರವಿ ನಿರ್ಮಲೆಯ ಕಡೆ ನೋಡಿದ.

ಬೆಲೂನಿನವನಾಗಲೆ ಒಂದನ್ನು ತೆಗೆದು ನಿರ್ಮಲೆಯ ಕೈಲಿರಿಸಿದ. ಜೊತೆಗೆ ಗಾಳಿ ತುಂಬದ ಇನ್ನೊಂದನ್ನೂ ಕೊಟ್ಟ.

ಗಾಳಿ ತುಂಬಿರದ ರಬ್ಬರಿನ ತುಣುಕನ್ನು ನೋಡಿ ನಿರಾಶೆಯಾಯಿತು ನಿರ್ಮಲೆಗೆ.

"ಇದನ್ನೇನ್ಮಾಡ್ತಾರೆ ಡ್ಯಾಡಿ ಹೀಗಿದೆ? ಒಂದು ಕೈಲಿ ಗುಂಡಗಿರುವ ಬೆಲೂನನ್ನಾಡಿಸುತ್ತಾ ಇನ್ನೊಂದು ಕೈಲಿ ಅದನ್ನು ಹಿಡಿದು ಕೇಳಿದಳು.

"ಕೊಡು ಮಗಾ ಇಲ್ಲಿ" ಎಂದು ಬೆಲೂನಿನವನು ನಿರ್ಮಲೆಯ ಕೈಯಿಂದ ಅದನ್ನು ತೆಗೆದುಕೊಂಡು ಊದಿ ಗಾಳಿ ತುಂಬಿಸಿ ಗುಂಡು ಮಾಡಿ.

"ಹಿಂಗೆ ಊದಿದ್ರೆ ಗುಂಡಗಾಗ್ತದೆ. ಹಾರಿ ಬಿಟ್ಟರೆ ಮೇಲಕ್ಕೆ ಹೋಗ್ತದೆ" ಎಂದು ಹಿಡಿದು ಆಡಿಸಿ ತೋರಿಸಿದ.

"ಓ ಎಷ್ಟು ಚೆಂದಾಗಿ ಹಾರಾಡುತ್ತೆ" ಖುಷಿಯೊ ಖುಷಿ ನಿರ್ಮಲೆಗೆ.

"ತುಂಬ ಚೂಟಿಯಾಗ್ಯತೆ ಸ್ವಾಮಿ ನಿಮ್ಮ ಮಗಾ" ರವಿ ಸುನೀತರ ಕಡೆ ನೋಡಿ ನಕ್ಕ ಬೆಲೂನಿನವನು.

ನಾಚಿಕೆಯೆನ್ನಿಸಿತು ಸುನೀತಗೆ.

ಅವನಿಗೆ ದುಡ್ಡು ಕೊಟ್ಟು ಮುಂದೆ ನಡೆದರು. ತಿಂಡಿ...ಬಳೆ ಕೇಳಿದ್ದಕ್ಕೆಒಂದೂ ಬೇಡವೆಂದಳು ನಿರ್ಮಲ.

ಬೆಲೂನ್‌ಗಳನ್ನು ಹಾರಿಸುತ್ತಾ ನಡೆದಳು. ಅವು ಹಾರಾಡುವಂತೆ ಅವಳ ಮನಸ್ಸೂ ಹಗುರವಾಗಿ ಹಾರ ತೊಡಗಿತ್ತು

ಅಂದಿನಿಂದ ನಿರ್ಮಲ ಅತ್ಯಂತ ಖುಷಿಯಾಗಿರು ವಂತೆ ಕಂಡು ಬರುತ್ತಿದ್ದಳು. ಅಮ್ಮ ಡ್ಯಾಡಿ ಇಬ್ಬರೂ ಒಟ್ಟಿಗೆ ಜಾತ್ರೆಗೆ ಬಂದಿದ್ದರಲ್ಲ. ಅದಕ್ಕೇ ಇರಬೇಕು.

ಸುನೀತಗೆ ಆನಂದನಿಂದ ಪ್ರತಿ ತಿಂಗಳೂ ತಪ್ಪದೆ ಹಣ ಬರುತ್ತಿತ್ತು. ತನಗೆ ಹಣದ ಕೊರತೆಯಿಲ್ಲವೆಂದರೂ ರವಿ ಕೇಳುತ್ತಿರಲಿಲ್ಲ. ಬಟ್ಟೆ...ಬರೆ... ಹಣ್ಣು ಹಂಪಲು ತರಕಾರಿ ಇಂಥವಕ್ಕೆಲ್ಲಾ ಅವನೇ ಖರ್ಚು ಮಾಡುತ್ತಿದ್ದ. ಆದ್ದರಿಂದ ಸುನೀತ ತಿಂಗಳಿಗೆ ಬೇಕಾಗುವ ಸಾಮಾನನ್ನು ಮೊದಲೇ ತಂದಿರಿಸಿಕೊಂಡುಬಿಡುತ್ತಿದ್ದಳು. ರವಿಯ ಋಣವನ್ನು ಹೊರಲು ಅವಳಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ನಿರ್ಮಲೆಯನ್ನು ತನ್ನ ಸ್ವಂತ ಮಗಳಂತೆ ಪ್ರೀತಿಸುತ್ತಾನೆ, ಈ ಹೊರೆ ಸಾಲದೆ?

ಈಚೆಗೆ ನಿರ್ಮಲೆಗೆ ಹಿಂದೆ ತಂದಿದ್ದ ಫ್ರಾಕುಗಳೆಲ್ಲಾ ತುಂಬಾ ಮೇಲಕ್ಕಾಗುತ್ತಿದ್ದವು. ಒಂದೆರಡು ಜೊತೆ ಹೊಸದನ್ನು ತರಿಸಬೇಕು ಎಂದುಕೊಂಡಳು ಸುನೀತ. ಇದೂ ಅಲ್ಲದೆ ಅವಳ ಕಿವಿಗಿಡಲೂ ಇನ್ನೂ ಏನನ್ನೂ ಮಾಡಿಸಿರಲಿಲ್ಲ. ಅವಳು ಹೀಗೆ ಏನೇನೋ ಲೆಕ್ಕ ಹಾಕಿದ್ದಳು. ಹೆಣ್ಣು ಮಗಳಾದರೆ ಅದು ಮಾಡಿಸ್ಬೇಕು, ಇದು ಮಾಡಿಸ್ಬೇಕು ಎಂದು. ಆನಂದ ಇಲ್ಲೇನಾದರೂ ಇರುತ್ತಿದ್ದರೆ, ಬಯಸಿದ್ದನ್ನೆಲ್ಲಾ ಈಡೇರಿಸಿಕೊಳ್ಳುತ್ತಿದ್ದಳೇನೋ. ಈಗೇನಾದರೂ ಇರುತ್ತಿದ್ದರೆ, ಬಯಸಿದ್ದನ್ನೆಲ್ಲಾ ಅಂಥಾದ್ದಕ್ಕೆ ಆಶಿಸಿದರೆ ರವಿಯ ಋಣಭಾರ ಹೊರಬೇಕು. ತನ್ನಿಂದ ಒಂದು ಕಾಸೂ ಕೊಡಿಸನೆಂದು ಗೊತ್ತು ಅವಳಿಗೆ. ಎಂತಲೇ ಕಿವಿಗೇನೂ ಮಾಡಿಸಿರಲಿಲ್ಲ.

ರವಿ ಅವಳ ಕಿವಿಯನ್ನು ಚುಚ್ಚಿದ್ದರೂ ಕಿವಿಗಿಡುವುದಕ್ಕೆ ತರಿಸುವುದರ ಕಡೆ ಅವನ ಗಮನವೇ ಹೋಗಿರಲಿಲ್ಲ. ಈಗ ಮಾಡಿಸೋಣವೆಂದುಕೊಂಡರೂ ಸುನೀತ ಆ ಸುದ್ದಿಯನ್ನೆತ್ತಲಿಲ್ಲ.

ಅವಳಿಗೆ ಈ ಯೋಚನೆ ಬಂದ ಎರಡು ಮೂರು ದಿನಗಳಲ್ಲಿಯೇ ರವಿ ಏನನ್ನೋ ನೆನೆಸಿಕೊಂಡವನಂತೆ ಕೇಳಿದ.

"ಇವತ್ತು ಆಸ್ಪತ್ರೇಲಿ ಒಂದು ಮಗೂಗೆ ಕಿವಿಗೆ ಚುಚ್ಚಿಸಿಕೊಂಡು ಹೋದ್ರು ಸುನೀತ. ಅಂದ ಹಾಗೆ ನಿರ್ಮಲ ಕಿವಿಗೆ ನಾವೇನೂ ಮಾಡಿಸಲೇ ಇಲ್ವಲ್ಲಾ? ಅವಳಿಗೆ ಕಿವಿ ಚುಚ್ಚಿದ್ದೇ ಮರೆತು ಹೋಗಿತ್ತು. ಇವತ್ತು ನೆನಪಿಗೆ ಬಂತು. ಎಲ್ಲಿ ಮಾಡಿಸೋದು ಸದ್ಯಕ್ಕಂತೂ ಬೆಂಗಳೂರಿಗೆ ಹೋಗೋ ಹಾಗಿಲ್ಲ. ಭದ್ರಾವತಿ ಹೇಗೂ ಇಲ್ಲಿಗೆ ಹತ್ತಿರದಲ್ಲಿದೆ. ಒಂದುದಿನ ಹೋಗಿ ಅಲ್ಲೇ ಹಾಕಿ ಬಿಟ್ಟು ಬರೋಣವೆ?"

ಏನು ಹೇಳಬೇಕೋ ಸುನಿತೆ ಸುಮ್ಮನೆ ನಿಂತಳು.

ಅಲ್ಲಿಯೇ ಬಾಗಿಲ ಬಳಿ ಆಟವಾಡುತ್ತಿದ್ದ ನಿರ್ಮಲಗೆ ತನ್ನ ವಿಷಯವಾಗಿ ಏನನ್ನೋ ಮಾತನಾಡುತ್ತಿರುವರೆಂದು ತಿಳಿಯಿತು. ಅವಳು ರವಿಯ ಇದಿರಿನಲ್ಲಿದ್ದ ಕುರ್ಚಿಯಲ್ಲಿ ಕುಳಿತು,

"ಏನು ಡ್ಯಾಡಿ? ನಿರ್ಮಲಾಂತ ಏನೋ ಮಾತಾಡ್ತಿದ್ರಿ?"

"ನಿನ್ನ ಕಿವಿಗೆ ಓಲೆ ಮಾಡಿಸ್ಬೇಕೂಂತ ಎಂಥಾದ್ದು ಬೇಕು ಮರಿ?"

ನಿರ್ಮಲ ತನ್ನ ಕಿವಿಯ ಅಲೆಗಳ ಮೇಲೆ ಕೈಯಾಡಿಸಿಕೊಂಡಳು. ಓ! ಇದಕ್ಕೆ ಝುಮಕಿ ಹಾಕಿದರೆ ಎಷ್ಟು ಚೆಂದ? ಪದ್ಮ ಹಾಕ್ಕೊಳ್ತಾಳಲ್ಲ ಅಂಥಾದ್ದು. ಅವಳು ಓಡಾಡಬೇಕಾದ್ರೆ ಬಗ್ಗಿದರೆ ಅದೆಷ್ಟು ಚೆನ್ನಾಗಿ ಅಲ್ಲಾಡುತ್ತೆ ಅವಳ ಗೊಂಬೆಗೂ ಹಾಕಿದಾಳೆ ಪದ್ಮ ಮಣಿದು. ಇನ್ನು ತನಗೆ ಬೇಡವಾ ಎನ್ನಿಸಿತು.

"ನಂಗೆ ವಾಲೆ ಬೇಡ. ಝುಮ್ಕಿ ಬೇಕು ಡ್ಯಾಡಿ. ಪದ್ಮ ಹಾಕ್ಕೊಳ್ತಾಳಲ್ಲಾ, ಅಂಥಾದ್ದು."

ಪದ್ಮ ಯಾರೋ! ರವಿ ಒಂದು ದಿನವೂ ಅವಳನ್ನು ನೋಡಿರಲಿಲ್ಲ. ಆ ಹುಡುಗಿ ಒಂದು ದಿನಕ್ಕೂ ಇಲ್ಲಿ ಆಟವಾಡೋದಕ್ಕೆ ಬರುತ್ತಿರಲಿಲ್ಲ. ನಿರ್ಮಲೆಯೇ ಅಲ್ಲಿಗೆ ಹೋಗಿ ಬರುತ್ತಿದ್ದಳು. ಇನ್ನು ಅವಳ ಝುಮ್ಕಿ ಎಂಥಾದ್ದೋ ಯಾರು ನೋಡಿದ್ದಾರೆ. ಆದರೂ ರವಿ ಹೇಳಿದ:

"ಆಗ್ಲಿ ಮರಿ. ಅಂಥಾದ್ದೇ ಮಾಡಿಸೋಣ" ಸಂತೋಷದಿಂದ ಜಿಗಿದಾಡಿದಳು ನಿರ್ಮಲ. ಮಗಳ ಕುಣಿತಕ್ಕೆ ತಾಳ ಹಾಕದೆ ವಿಧಿಯಿರಲಿಲ್ಲ ಸುನೀತಗೆ.

ಭದ್ರಾವತಿಗೆ ನೆನೆಸಿಕೊಂಡಾಗ ಹೋಗಬಹುದಿತ್ತು ಅವರು. ಆನಂದ ಜರ್ಮನಿಗೆ ಹೊರಡುವಾಗ ತನ್ನ ಕಾರನ್ನು ಬೆಂಗಳೂರಿನಲ್ಲಿ ತನ್ನ ಸ್ನೇಹಿತನೊಬ್ಬನಿಗೆ ಕೊಟ್ಟು ಹೋಗಿದ್ದ. ಆ ಸ್ನೇಹಿತ ಈಗ ಹೊಸ ಕಾರನ್ನು ಕೊಂಡಿದ್ದರಿಂದ ಮೊನ್ನೆ ರವಿ ಬೆಂಗಳೂರಿಗೆ ಹೋಗಿದ್ದಾಗ ಆ ಕಾರನ್ನು ಹಿಂದಿರುಗಿಸಿದ್ದ. ಅದು ಬಂದ ಮೇಲೆ ಹೊರಗೆ ಹೋಗುವ ಅವಕಾಶವೇ ಸಿಕ್ಕಿರಲಿಲ್ಲ. ನಿರ್ಮಲ ಎಂದೂ ಕಾರು ಹತ್ತಿಲ್ಲ. ಅವಳು ಅದನ್ನು ಹತ್ತಿದರೆ ಅದೆಷ್ಟು ಸಂತೋಷಿಸುವಳೋ? ಹೊರಗೆ ಹೊರಡಲು ನಿರ್ಮಲೆಗಿಂತಲೂ ಹೆಚ್ಚಿನ ಆತುರ ರವಿಗೆ.

ಊರಿಗೆ ಹೊರಡುವುದೆಂದು ತಿಳಿದು ಬಂದಾಗ, ರಾತ್ರಿಯ ದಿನದ ಸವಿ ನೆನಪು ಮರುಕಳಿಸಿತು ನಿರ್ಮಲೆಗೆ. ಅಮ್ಮ ಡ್ಯಾಡಿ ಒಟ್ಟಿಗೆ ಬರುವುದೇ ಒಂದು ಹಬ್ಬವಾಗಿತ್ತು ಅವಳಿಗೆ. ಉತ್ಸಾಹದಿಂದ ಹೊರಡಲು ಸಿದ್ಧಳಾದಳು.

ಹೊರಡುವಾಗ ಸುನೀತ ಹೆಚ್ಚಿನ ಅಲಂಕಾರ ಮಾಡಿಕೊಳ್ಳದಿದ್ದರೂ, ಎಂದಿಗಿಂತ ಸ್ವಲ್ಪ ಹೆಚ್ಚೆನ್ನಿಸುವಂತೆಯೇ ಇತ್ತು. ಸಣ್ಣಂಚಿನ, ಉದ್ದ ಕಲಾಬತ್ತಿನ ಸೆರಗುಳ್ಳ ರೇಶಿಮೆ ಸೀರೆಯನ್ನುಟ್ಟು ಅದಕ್ಕೊಪ್ಪುವ ಚೋಲಿಯನ್ನು ಹಾಕಿಕೊಂಡಿದ್ದಳು. ಕೊರಳಲ್ಲಿದ್ದ ಎರಡೆಳೆ ಚಿನ್ನದ ಸರಕ್ಕೆ ಇನ್ನೂ ಒಂದು ಸೇರಿಕೊಂಡಿತ್ತು. ಕೈಗಳಿಗೆ ಹರಳಿನ ಬಳೆ! ಗುಂಡಿಗೆ ಎತ್ತರಕ್ಕೆ ಕಟ್ಟಿದ ತುರುಬಿನಲ್ಲಿ ಬಟನ್ ರೋಜಾ ಹೂವೊಂದು ಕಂಗೊಳಿಸುತ್ತಿತ್ತು.

ನಿರ್ಮಲೆಯದು ಎಂದಿನಂತೆಯೇ ಟಿಪ್ಟಾಪ್ ನೈಲಾನ್ ಫ್ರಾಕು, ಸಾಕ್ಸ್, ಹಿಂದಿನಿಂದ ಕೂದಲನ್ನು ಒಳಸಿ ಬಂದು ನೆತ್ತಿಯ ಮೇಲೆ ಹೂವಿನಂತೆ ಕುಳಿತಿದ್ದ ರಿಬ್ಬನ್ ಮಾತ್ರ ಹೊಸ ರೀತಿಯದಾಗಿತ್ತು.

ತಾಯಿ ಮಗಳು ಹೊರಗೆ ಬಂದು ನಿಂತಾಗ, ಸಿಗರೇಟನ್ನೆಳೆಯುತ್ತಿದ್ದ ರವಿ ತಲೆಯೆತ್ತಿದ. ನಿರ್ಮಲೆಯ ಜೊತೆಯಲ್ಲಿ ವಿಮಲೆಯೇ ಬಂದು ನಿಂತಹಾಗಿತ್ತು. ವಿಮಲ ಅಂದು ತುರುಬಿನ ಸುತ್ತ ಇಂಥಾದ್ದೇ ಹೂ ಮುಡಿದು, ಹೀಗೇ ಅಲಂಕರಿಸಿಕೊಂಡಿದ್ದಳು. ಆ ದೃಶ್ಯ ಕಣ್ಣಿಗೆ ಕಟ್ಟಿದಂತಾಯಿತು. ಮಿತ್ರನ ಮಡದಿ ಸುನೀತಳಲ್ಲ. ತನ್ನ ಪ್ರೀತಿಯ ಮಡದಿ ವಿಮಲೆಯೇ ಇವಳು ಎನ್ನಿಸಿತು. ರೆಪ್ಪೆ ಬಡಿಯದೆ ನೋಡುತ್ತಾ ಕುಳಿತ ರವಿ.

ಅವನು ಹಾಗೆ ನೋಡಿದುದು ಸರಿಯಾಗಿ ಕಾಣಲಿಲ್ಲ ಸುನೀತಗೆ. ನಾಚಿಕೆ ಸಂಕೋಚ ಆವರಿಸಿ ಹಿಂದೆ ಸರಿದು ನಿಂತಳು.

"ಯಾಕಮ್ಮಾ ಒಳಗೆ ಹೋದೆ?" ಎಂದ ನಿರ್ಮಲ ತಂದೆಯ ಕಡೆ ತಿರುಗಿ "ಡ್ಯಾಡಿ ಅಮ್ಮ ಇವತ್ತು ತುಂಬಾ ಚೆನ್ನಾಗಿ ಕಾಣ್ತಾಳಲ್ಲವೆ?" ಎಂದಳು. ನಂತರ ಒಳಗೆ ಹೋಗಿ,

"ಬಾಮ್ಮ ಡ್ಯಾಡಿ ಹತ್ರ?" ಎಂದು ತಾಯಿಯ ಕೈ ಹಿಡಿದು ಎಳೆಯ ತೊಡಗಿದಳು.

ಈಗಂತೂ ಸುನೀತ ನಾಚಿಕೆಯ ಮುದ್ದೆಯೇ ಆದಳು. ತಾನು ಹಾಗೆ ನೋಡಬಾರದಿತ್ತೆಂದು ಈಗ ರವಿಗೂ ಅರಿವಾಯ್ತು. ಅವನು ಎದ್ದು ಹೋಗಿ ಕಾರಿನಲ್ಲಿ ಕುಳಿತು ನಿರ್ಮಲೆಯನ್ನು ಕೂಗಿದ.

"ಬಂದೆ" ಎಂದು ನಿರ್ಮಲ ತಾಯಿಗಾಗಿ ಕಾದು ನಿಂತಳು.

"ಮನೆಯ ಕಡೆ ಸರಿಯಾಗಿ ನೋಡಿಕೊಂಡಿರು ಸಂಜೆಗೆ ಬಂದು ಬಿಡ್ತೀನಿ." ಎಂದು ಸೀತೆಗೆ ಹೇಳಿ ಬಂದಳು ಸುನೀತ.ಅವಳು ಹೀಗೆ ಹೊರಗೆ ಹೋಗುವುದೇ ಬೇಕಾಗಿತ್ತು ಸೀತೆಗೆ. ರವಿಯ ಜೊತೇಲಿ ಸಿಕ್ಕಾಬಟ್ಟೆ ತಿರುಗಾಡಿಕೊಂಡು ಬರ್ತಾರೇಂತ ಅಲ್ಲಿ ಇಲ್ಲಿ ಸಾರಿಕೊಂಡು ಬರಬಹುದಾಗಿತ್ತು. ಮನೆಯಲ್ಲಿನ ಅಕ್ಕಿ, ಬೇಳೆ ಸಕ್ಕರೆ ಮೊದಲಾದವನ್ನು ತನ್ನ ಮನೆಗೆ ಸಾಗಿಸಬಹುದು. ಬಾಯಿಗೂ ಲಾಭ. ಕೈಗೂ ಲಾಭ. ಎಂತಲೇ ಒಡತಿಯನ್ನು ಸಂತೋಷವಾಗಿಯೇ ಬೀಳ್ಕೊಡುತ್ತಿದ್ದಳು.

ಸ್ವಲ್ಪ ಹೊತ್ತಿನ ಮುಂಚೆ ಮನೆಯ ಮುಂದೆ ಕಾರು ಬಂದು ನಿಂತಾಗ ಅದನ್ನು ನೋಡಿ ಆಶ್ಚರ್ಯ ಸಂತೋಷ ಒಟ್ಟಿಗೇ ಉಂಟಾಗಿತ್ತು, ನಿರ್ಮಲೆಗೆ, ಹತ್ತಾರು ಬಾರಿ ಒಳಗೆ ಬಂದು ಕಾರು ಬಂದು ನಿಂತಿರುವ ಸುದ್ದಿಯನ್ನು ತಾಯಿಗೆ ತಿಳಿಸಿದ್ದಳು.

"ಯಾರದಮ್ಮಾ ಕಾರು? ಎಲ್ಲಿಂದ ಬಂತು?" ಎಂದು ಕೇಳಿದಾಗ "ನಮ್ಮದೇ" ಎಂದು ತಿಳಿಸಿದ್ದಳು ಸುನೀತ.ತಮ್ಮ ಕಾರು ಎಂದಿದ್ದನ್ನು ಕೇಳಿ, ನಿರ್ಮಲಳ ಆನಂದಕ್ಕೆ ಪಾರವೇ ಇಲ್ಲವಾಗಿತ್ತು. ಅವಳು ಕಾರನ್ನು ಮುಟ್ಟಿ ಮುಟ್ಟಿ ನೋಡಿ,ಹಾರ್ನ ಮಾಡಿ ಪೋಂ ಪೋಂ ಅನ್ನಿಸಿ ಮೆತ್ತನೆಯ ಸೀಟಿನ ಮೇಲೆ ಧಸಕ್ಕನೆ ಕುಳಿತು ಎದ್ದು ನಲಿದಾಡಿದ್ದಳು. ಈಗ ಹೊರಡುವಾಗ ಅಪ್ಪ ಅಮ್ಮನ ನಡುವೆ ತಾನು ಕುಳಿತುಕೊಳ್ಳುವ ಆಶೆ ಅವಳಿಗೆ.

ಸುನೀತ ಹಿಂದಿನ ಸೀಟಿನಲ್ಲಿ ಕುಳಿತುಕೊಳ್ಳಲು ಹೋಗಿದ್ದನ್ನು ನೋಡಿ,

"ಊಹೂಂ, ಅಲ್ಲಿ ಬೇಡ. ನೀನೂ ಮುಂದೇನೆ ಬಾಮ್ಮಾ, ಎಷ್ಟು ಚೆನ್ನಾಗಿದೆ ಇಲ್ಲಿ. ಮೊದಲು ಡ್ಯಾಡಿ. ಅವರ ಪಕ್ಕ ನಾನು...ನನ್ನ ಪಕ್ಕದಲ್ಲಿ ನೀನು" ಎಂದು ಕೈ ತೋರಿಸಿ ಹೇಳಿದಳು.



ಸಿನೇಮಾಕ್ಕೇನೊ ಸೆನ್ಸಾರಿನವರು ಕತ್ತರಿ ಆಡಿಸ್ಬಿಡು. ಆದರೆ ರಸ್ತೆಯಲ್ಲಿ ನಡೆಯುವ ದೃಶ್ಯವನ್ನು ಹೇಗೆ ಕತ್ತರಿಸೋಕಾಗುತ್ತೆ ಹೇಳಿ

"ಒಳ್ಳೆಯ ಹುಡುಗಿಯಾದಳಲ್ಲಾ" ಎಂದುಕೊಳ್ಳುತ್ತಾ ಸುಮ್ಮನೆ ನಿಂತಳು ಸುನೀತ.

"ಅಮ್ಮನೂ ಇಲ್ಲೇ ಕೂತ್ಕೊಂಡ್ರೆ ಡ್ರೈವ್ ಮಾಡೋದಕ್ಕೆ ಕಷ್ಟ ಆಗೋಲ್ಲವೆ ಮರಿ? ನೀನು ನನ್ನ ಪಕ್ಕದಲ್ಲೇ ಕೂತ್ಕೊ. ಅಮ್ಮ ಹಿಂದೇನೆ ಕೂತ್ಕೊಳ್ಳಲಿ" ಎಂದು ಪರಿಹಾರ ಸೂಚಿಸಿದ ರವಿ.

ನಿರ್ಮಲ ಮತ್ತೇನೂ ಹೇಳದೆ ಮುಂದಿನ ಸೀಟಿನಲ್ಲಿ ರವಿಯ ಪಕ್ಕ ಕುಳಿತಳು. ಸುನೀತ ನೀಳವಾಗಿ ಉಸಿರಾಡುತ್ತಾ ಹಿಂದಿನ ಸೀಟಿಗೆ ಹೋದಳು.

ಕಾರು ಸ್ಟಾರ್ಟ್ ಆಗುವಾಗ ನಿರ್ಮಲ ಅಂದಳು.

"ಡ್ಯಾಡಿ...ಡ್ರೈವರ್ನ ಇಟ್ಕೋ. ಆಗ ನಾವು ಮೂರುಜನ ಒಟ್ಟಿಗೆ ಹಿಂದೆ ಕೂತ್ಕೊಳ್ಳೋಣ"

"ಆಗ್ಲಿ ಮರಿ" ಎನ್ನುತ್ತಿದ್ದಂತೆ ಕಾರು ಹೊರಟಿತು. ಸುನೀತ ಹೊರಗಡೆ ದೃಷ್ಟಿ ಹಾಯಿಸಿ ಕುಳಿತಿದ್ದಳು. ಆನಂದೆ ವಿಲಾಯತಿಗೆ ಹೋದ ಮೇಲೆ ಅವಳು ಈ ದಾರಿಯಲ್ಲಿ ಬಂದೇ ಇರಲಿಲ್ಲ. ಈಗ ಎಲ್ಲಾ ಹೊಸದಾಗಿರುವಂತೆ ಕಂಡು ಬರುತ್ತಿತ್ತು.

ಕಾರು ಒಂದು ದೊಡ್ಡ ಹೋಟಲ್ ಮುಂದೆ ನಿಂತಿತು.

"ಮೊದಲು ಒಂದಿಷ್ಟು ಬಿಸಿ ಕಾಫಿಯಾಗ್ಲಿ. ತಲೆ ಚಿಟ ಚಿಟಾಂತಿದೆ. ಇಳೀರಿ ಸುನೀತ" ರವಿ ಕಾರಿನಿಂದಿಳಿದು ಬಾಗಿಲು ತೆಗೆದ.

"ಗಂಡಸರದ್ದೆಲ್ಲಾ ಇಷ್ಟೆ. ನಿಮಗೆ ಮೊದಲು ಹೋಟಲು ದರ್ಶನ ಮಾಡದೆ ಯಾವ ಕೆಲ್ಸಾನೂ ಮಾಡೋಕೆ ಆಗೊಲ್ಲಾನ್ನಿಸುತ್ತೆ." ನಗುತ್ತಾ ಇಳಿದಳು ಸುನೀತ.

ಒಳಗಡೆ ಜನರು ಅಲ್ಲಲ್ಲಿ ಕುಳಿತು ತರತರಾವರಿ ತಿಂಡಿ ತಿನ್ನುತ್ತಿದ್ದರು. ನಿರ್ಮಲ ಅದೇನೆಂದು ತಿಳಿಯದೆ ಅತ್ತ ಇತ್ತ ದೃಷ್ಟಿ ಹೊರಳಿಸುತ್ತ ಡ್ಯಾಡಿಯನ್ನು ಹಿಂಬಾಲಿಸಿದ್ದಳು. ಮಹಡಿ ಹತ್ತಿ ತಾವೇ ಪ್ರತ್ಯೇಕವಾದ ಕೊಠಡಿಯಲ್ಲಿ ಕುಳಿತಾಗ ಇದೇಕೆ? ಎನ್ನುವಂತೆ ರವಿಯ ಕಡೆ ನೋಡಿದಳು. ರವಿಗೆ ಅವಳ ಕುತೂಹಲದ ನೋಟ ಅರ್ಥವಾಗಿ ಹೋಟೆಲ್ ವಿಷಯವನ್ನು ತಿಳಿಸುತ್ತಾ

"ಇದು ಫ್ಯಾಮಿಲಿ ರೂಂ ಅಂತೆ. ಒಂದೇ ಮನೆಯವರು ಹೀಗೆ ಬೇರೆ ಕುಳಿತು ನಿಧಾನವಾಗಿ ಮಾತಾಡುತ್ತಾ ತಿಂಡಿ ತಿನ್ನಬಹುದು."

"ಓ...ಅಮ್ಮ..... ಡ್ಯಾಡಿ.....ಮಕ್ಕಳು ಎಲ್ಲಾ ಒಂದ್ಕಡೆ ಕೂತ್ಕೊಳ್ಳೋದಕ್ಕಾ?" ಎಂದು ನಿರ್ಮಲ ತಾಯಿಯ ಕಡೆ ನೋಡಿದಳು.

ಸುನೀತ ನಕ್ಕಳಷ್ಟೆ. ಏನೂ ಹೇಳಲಿಲ್ಲ.

ತಿಂಡಿ ತಿಂದಾದ ಮೇಲೆ ಷರಾಫ್ ಅಂಗಡಿಯ ಕಡೆ ಹೊರಟರು. ದಾರಿಯಲ್ಲಿ ಶಾಮ್‌ಸನ್ಸ್ ಡ್ರೆಸಸ್ ಬೋರ್ಡು ಕಂಡಿತು.

"ಫ್ರಾಕ್ ಬೇಕಾಗಿತ್ತಾ ಮರಿ?" ಎಂದು ರವಿ ಕೇಳಿದಾಗ

"ಬೇಕು ಡ್ಯಾಡಿ" ಉತ್ಸಾಹದಿಂದ ಕೂಗಿಕೊಂಡಳು ನಿರ್ಮಲ.

ಮೂವರೂ ಅಂಗಡಿಯೊಳಕ್ಕೆ ಹೋದರು. ಫ್ರಾಕ್ಸ್ ಬೇಕೆಂದು ಕೇಳಿದಾಗ ಅಂಗಡಿಯಾತ ಒಂದೊಂದು ಮಾದರಿಯ ಒಂದೊಂದು ಪ್ಯಾಕೆಟ್‌ಗಳನ್ನು ಬಿಚ್ಚಿ ತೋರಿಸುತ್ತಾ ಕೇಳಿದ.

"ಯಾವಿರಲಿ? ಎಷ್ಟಿರಲಿ ಸಾರ್?"

"ಎಲ್ಲವನ್ನೂ ಪ್ಯಾಕ್ ಮಾಡಿ ಬಿಡಿ."

ಒಂದೊಂದು ಪ್ಯಾಕೆಟ್ಟಿನಲ್ಲಿಯೂ ಮೂವತ್ತು, ಮೂವತ್ತು ಫ್ರಾಕ್ಸ್ ಇದ್ದವು. ಅಷ್ಟನ್ನೂ ಪ್ಯಾಕ್ ಮಾಡಿರೆಂದು ರವಿ ಹೇಳಿದಾಗ, ಅಂಗಡಿಯಾತನಿಗೆ ಆಶ್ಚರ್ಯವೇ ಆಯಿತು. ಎಲ್ಲಾದ್ರೂ ಮರೆತು ಹಾಗೆ ಹೇಳಿರಬಹುದೆ? ಇಲ್ಲವೆ ಮೂವತ್ತು ಮಕ್ಕಳೇನಾದ್ರೂ ಇರುವರೆ ತಾನು ಕೇಳಿರುವ ಹಾಗೆ ದ್ವಾಪರ ಯುಗದಲ್ಲಿ ಗಾಂಧಾರಿಗೆ ಒಂದೇ ಸಾರಿಗೆ ನೂರು ಮಕ್ಕಳಾಗಿದ್ದರು. ಆದರೆ ಕಲಿಯುಗದಲ್ಲಿ ಯಾರಿಗೂ ಒಂದೇ ಸಾರಿಗೆ ಒಟ್ಟಿಗೆ ಮೂವತ್ತು ಮಕ್ಕಳಾದುದನ್ನು ಕೇಳಿರಲಿಲ್ಲ. ಏನು ಮಾಡ ಬೇಕೆಂಬುದನ್ನು ತಿಳಿಯದೆ ಅವರ ಕಡೆ ನೋಡತೊಡಗಿದ.

ಆಗ ಸುನೀತ ನಾಲ್ಕನ್ನಾರಿಸಿ ಪ್ಯಾಕ್ ಮಾಡಲು ತಿಳಿಸಿದಳು.

"ನಾಲ್ಕೇ ಸಾಕಾ?" ಕೇಳಿದ ರವಿ.

"ಇನ್ನ್ಯಸ್ನ್ನೂ ಕೊಂಡು ಒಂದರ ಮೇಲೊಂದು ಕೊಡಿಸಬೇಕೆ?" ನಕ್ಕು ಕೇಳಿದಳು ಸುನೀತ.

ಅಂಗಡಿಯಾತ ನಗುತ್ತಲೇ ಪ್ಯಾಕ್ ಮಾಡಿದ.

ಎಷ್ಟು ಬೇಕಾದರೂ ಕೊಳ್ಳೋ ಹಾಗಿದ್ದಾರೆ ಆಸಾಮಿಗಳು, ಸುಮ್ಮನೆ ಯಾಕೆ ಬಿಡಬೇಕು ಎನ್ನಿಸಿತೇನೋ ಅಂಗಡಿಯಾತನಿಗೆ

"ಸೀರೆ ನೋಡ್ತೀರಾ ಸಾರ್... ಲೇಟೆಸ್ಟ್ ಡಿಸಾಯಿನ್ಸ್ ಬಂದಿದೆ" ಎಂದು ರವಿಯನ್ನು ಕೇಳಿದ.

"ಏನೂ ಬೇಡಿ. ಇಷ್ಟೇ ಸಾಕು" ಪ್ಯಾಕೆಟ್ಟನ್ನು ಕೈಗೆತ್ತಿಕೊಳ್ಳುತ್ತಾ ಅಂದಳು ಸುನೀತ.

"ತಗೊಳ್ಳದಿದ್ರೆ ಅಷ್ಟೇ ನೋಡಿಯಮ್ಮ ಅದಕ್ಕೇನಂತೆ," ಎಂದವನೆ ಅಲ್ಲೇ ಇನ್ನೊಂದು ಭಾಗದಲ್ಲಿರಿಸಿದ್ದ ಸೀರೆಗಳಲ್ಲಿ ಕೆಲವನ್ನು ತಂದ.

ಎಲ್ಲಾ ರೇಶಿಮೆಯವು. ಒಡಲಿನಲ್ಲೆಲ್ಲಾ ಜರಿಯ ಹೂವು ಬುಟ್ಟಾ, ಇದ್ದ ಉದ್ದನೆಯ ಜರಿ ಅಂಚುಳ್ಳವು. ಒಂದೊಂದೂ ನೂರಾ ಐವತ್ತು... ಆರುನೂರಕ್ಕೆ ಕಡಿಮೆಯಿರಲಾರದೆನ್ನಿಸಿತು ಸುನೀತೆಗೆ.

ತಾನು ಸ್ವಲ್ಪ ಆಸೆ ತೋರಿಸಿದರೆ ರವಿ ತಗೊಳ್ಳಿ ಎಂದು ಕೊಡಿಸಿಯೇ ಬಿಡುತ್ತಾರೆ. ಆದ್ದರಿಂದ ನೋಡುವುದೇ ಬೇಡ ಎನ್ನಿಸಿ

"ಎತ್ತಿಡಿ" ಎಂದು ಹೇಳಿ ಹಿಂದಿರುಗುವುದರಲ್ಲಿದ್ದಳು.

"ನೋಡಿ ಚೆನ್ನಾಗಿರೋ ಹಾಗಿವೆ. ಯಾವುದಾದರೂ ಒಂದನ್ನ ಸೆಲೆಕ್ಟ್ ಮಾಡಿ." ಎಂದ ರವಿ.

ರವಿ-ಸುನೀತೆಯರನ್ನು ಗಂಡ ಹೆಂಡತಿಯರೆಂದು ಭಾವಿಸಿದ್ದ ಅಂಗಡಿಯಾತ. ಈಗ ರವಿ ಅವಳನ್ನು ನೋಡಿ ಎಂದಾಗ

ಒಳ್ಳೇ ಸತಿ ಭಕ್ತರಾಗಿದಾರೆ, ನೋಡಿ... ಮಾಡಿ ಅಂತ ಮಾತಾಡಿಸ್ತಿದ್ದಾರಲ್ಲಾ! ಎಷ್ಟೇ ಆಗಲಿ ಹೆಂಗಸರ ರಾಜ್ಯವಲ್ಲವೆ ಈಗ! ಎಂದು ಒಳಗೊಳಗೇ ನಕ್ಕ.

"ಯಜಮಾನ್ರು ನೋಡಿ ಅಂದ್ರೂ ಸುಮ್ನೆ ಇದ್ದೀರಲ್ಲಮ್ಮಾ ಎಂದಾಗ, ಸುನೀತಳ ಪಾಡು ಹೇಳಲಾರದಂತಾಗಿತ್ತು. ಇದನ್ನು ಕೇಳಿದ ರವಿ, ಕರವಸ್ತ್ರದಿಂದ ಮುಖವನ್ನೊರಸಿ ಕೊಳ್ಳತೊಡಗಿದ.

ಸುನೀತ ಸುಮ್ಮನೆ ನಿಂತಿದ್ದನ್ನು ನೋಡಿ, ಈ ಅಮ್ಮಾವ್ರಿಂದ ಏನೂ ಪ್ರಯೋಜನವಿಲ್ಲವೆಂದು ಕೊಂಡನೇನೊ ಅಂಗಡಿಯಾತ ಯಜಮಾನರನ್ನು ಹಿಡಿದ.

"ಅವರ್ನೇನು ಕೇಳ್ತೀರಿ, ನೀವೇ ಒಂದನ್ನ ಸೆಲೆಕ್ಟ್ ಮಾಡಿ ಬಿಡಿ ಸಾರ್, ನೀವು ಪ್ರೀತಿಯಿಂದ ಕೊಡಿಸಿದ್ದನ್ನು ಅವ್ರು ಪ್ರೀತಿಯಿಂದ ಉಟ್ಕೊಳ್ತಾರೆ."

ಇವನಿಗೇಕೆ ಇಷ್ಟು ತಲೆ ಹರಟೆ! ಎನ್ನಿಸಿದರೂ, ಗಿಲೀಟ್ ಮಾಡಿ ಗಿರಾಕಿಗಳನ್ನು ಆಕರ್ಷಿಸುವುದೇ ಅವನ ಕೆಲಸ. ಅದಕ್ಕೇಕೆ ಬೇಸರ ಪಡಬೇಕು ಎನ್ನಿಸಿತು ರವಿಗೆ. ಮುಂದೆ ಹೋಗಿ ನಾಲ್ಕಾರು ಸೀರೆಗಳನ್ನು ತಿರುವಿ ಹಾಕಿ, ಎಲೆ ಹಸಿರು ಬಣ್ಣದ ಸೀರೆಯನ್ನು ಹಿಡಿದು ಸುನೀತಳ ಕಡೆಗೊಮ್ಮೆ ನೋಡಿದ. ಅವಳು ನಾಚಿಕೆಯಿಂದ ನೀರಾಗಿ ಹೋಗಿದ್ದಳು.

"ಇದೇ ಇರ್ಲಿ ಡ್ಯಾಡಿ ಅಮ್ಮನಿಗೆ ಚೆನ್ನಾಗಿ ಕಾಣುತ್ತೆ"

ಮಗಳು ಶಿಫಾರಸ್ ಮಾಡಿದ ಮೇಲೆ ಆಯಿತು.

"ಇದನ್ನ ಪ್ಯಾಕ್ ಮಾಡಿ"

"ಇದಕ್ಕೆ ಮ್ಯಾಚ್ ಆಗೋ ಬ್ಲೌಸ್ ಪೀಸ್ ಬೇಕ್ಕೆ ಸಾರ್?"

"ಹೂಂ ಕೊಡು"

ಅಂಗಡಿಗೆ ಬಂದ ಕಾಲು ಗಂಟೆಯಲ್ಲೇ ವ್ಯಾಪಾರ ಮುಗಿಸಿದ ರವಿ. ಇನ್ನೂರಾ ಇಪ್ಪತ್ತು ರೂಪಾಯಿ ಬಿಲ್ಲಾಯಿತು.

ಅಂಗಡಿಯಿಂದ ಹೊರಬಂದ ಮೇಲೆ ಸುನೀತ ಬೇಸರದಿಂದ ಕೇಳಿದಳು.

"ಇನ್ನು ಹೊರಡೋದಿಲ್ವೆ ಊರಿಗೆ?"

ಅವಳ ಮಾತು ಕೇಳಿ ಆಶ್ಚರ್ಯವೇ ಆಯಿತು ರವಿಗೆ.

"ಬಂದ ಕೆಲಸವನ್ನೇ ಮರೆತಿರಲ್ಲಾ! ನಿರ್ಮಲಾ ಕಿವಿಗೆ ಡ್ರಾಪ್ಸ್ ಕೊಳ್ಳೋದು ಬೇಡವೆ?" ಎಂದು ಷರಾಫ್ ಅಂಗಡಿಯೊಂದರ ಮುಂದೆ ಕಾರನ್ನು ನಿಲ್ಲಿಸಿದ.

ಕಾರಿನಿಂದಿಳಿದು ಬಂದ ಗಿರಾಕಿಗಳನ್ನು ಬಹಳ ಸಂತೋಷದಿಂದ ಸ್ವಾಗತಿಸಿದ ಅಂಗಡಿಯಾತ ಬಂದವರು ಕಿವಿಗಿಡುವುದನ್ನು ಮಾತ್ರ ಕೇಳಿದಾಗ ಬಹಳ ನಿರಾಶೆಯೆನ್ನಿಸಿತು ಆತನಿಗೆ. ಇದರ ಜೊತೆಗೆ ಇನ್ನೇನು ಬೇಕು ಹೊಸ ಹೊಸ ನಮೂನೆಯವು ಸಿಕ್ಕುತ್ತವೆ ಎಂದು ಎರಡು ಮೂರು ಸಾರಿ ಹೇಳುತ್ತಲೇ ಅವರು ಕೇಳಿದ ಓಲೆಗಳನ್ನು ತೋರಿಸಿದ.

ರಟ್ಟಿನ ಮುಚ್ಚು ಪೆಟ್ಟಿಗೆಯಲ್ಲಿ ಮಖಮಲ್ ಬಟ್ಟೆಯ ಮೇಲೆ ಜೋಡಿಸಿಟ್ಟ ಓಲೆಗಳನ್ನು ನೋಡಿ, ಕೊನೆಗೆ ಸುತ್ತಲೂ ಚಿನ್ನವಿದ್ದು ಮಧ್ಯೆ ಒಂದು ದೊಡ್ಡ ಮುತ್ತಿರುವ ಓಲೆಗಳನ್ನು ಒಪ್ಪಿಯಾಯಿತು ಅವಕ್ಕೆ ಸರಿಯಾದ ಕಲ್ಲಿಲ್ಲದೆ ಬರೀ ಚಿನ್ನದಿಂದ ಮಾಡಿದ ಝುಮಕಿಗಳನ್ನು ಕೊಂಡರು.

ರವಿ ಪರ್ಸ್ ತೆಗೆಯುವುದಕ್ಕೆ ಮುಂಚೆಯೇ ಸುನೀತ ತನ್ನ ಪರ್ಸಿನಿಂದ ದುಡ್ಡನ್ನು ತೆಗೆದುಕೊಟ್ಟಳು. ಅವನು ಪೆಚ್ಚಾಗಿ ಅವಳ ಕಡೆ ನೋಡುತ್ತಾ ನಿಂತ. ಇನ್ನೇನಾದರೂ ಬೇಕಾ? ಎಂದು ಕೇಳಬೇಕೆನ್ನಿಸಿತು ಅವನಿಗೆ. ಆದರೆ ಕೇಳಲಿಲ್ಲ.

ಅಂಗಡಿಯಾತ ಇಷ್ಟಕ್ಕೇ ಸುಮ್ಮನೆಯಾದಾನೆ!

"ಇಷ್ಟೇ ಸಾಕಾ ಸಾರ್! ನೋಡಿ ಇವು ಹೊಸಾ ಮಾಡಲ್ಸ್ ಬೆಲೆ ಕಡಿಮೆ, ಅಂದ ಹೆಚ್ಚು, "ಎನ್ನುತ್ತಾ ನೆಕ್‌ಲೇಸ್ ಮತ್ತು ಸರಗಳನ್ನು ತೆಗೆದು ತೋರಿಸಿದ.

ರವಿ ನೋಡತೊಡಗಿದ. ಸುನೀತಳಾಗಲೆ ಬಾಗಿಲಲ್ಲಿ ನಿಂತಿದ್ದಳು.

ಒಳ್ಳೆಯ ವಿಚಿತ್ರದವರು ಈ ದಂಪತಿಗಳು ಎನ್ನಿಸಿರಬೇಕು ಅಂಗಡಿಯಾತನಿಗೆ.

"ಯಾವುದಿರಲಿ ಸುನೀತ?" ಸುನೀತಳ ಬಳಿ ಬಂದು ಕೇಳಿದ ರವಿ.

ತಮ್ಮ ಅಂಗಡಿಗೆ ಹೆಂಗಸರು ಯಾರೇ ಬರಲಿ, ಕೊಳ್ಳುವುದು ಒಂದು ಒಡವೆಯನ್ನಾದರೂ, ಹತ್ತಿಪ್ಪತ್ತು ತರಹಗಳನ್ನು ತೆಗಿಸಿ ನೋಡದೆ ಹೋಗುತ್ತಿರಲಿಲ್ಲ. ಆದರೆ ಇವರೋ! ಯಜಮಾನರು ತಾವಾಗಿಯೇ ಕೇಳಿದರೂ ಸುಮ್ಮನಿದ್ದಾರಲ್ಲ! ಎಂದೂ ಅಚ್ಚರಿಯೇ ಆಯಿತು.

ಇನ್ನೊಮ್ಮೆ ರವಿ ಬಲವಂತ ಮಾಡಿ ಕೇಳಿದಾಗ ಸುನೀತ,

"ಬೇಡಿ. ಮನೆಯಲ್ಲಿ ಇವೆಯಲ್ಲಾ ಸಾಲದೆ?" ಎಂದಳು.

"ಇದ್ದರೆ ಏನಂತೆ ಬಿಡಿಯಮ್ಮಾ. ಅವೆಲ್ಲಾ ಹಳೆಯ ಮಾದರಿಯವಿರಬೇಕು. ಇಲ್ಲಿ ನೋಡಿ ನ್ಯೂ ಪ್ಯಾಟರ್ನ್" ಎಂದು ಒಂದು ಮುತ್ತಿನ ನೆಕ್‌ಲೇಸನ್ನು ಎತ್ತಿ ತೋರಿಸಿದ.

"ತುಂಬಾ ಸಿಂಪಲ್ಲಾಗಿ ಚೆನ್ನಾಗಿದೆ" ರವಿ ಹೇಳಿದ.

ಬೇಡವೆನ್ನುವಂತೆ ತಲೆಯಾಡಿಸಿದಳು ಸುನೀತ

"ನೀವು ಹಾಕ್ಕೊಳ್ಳದಿದ್ರೂ, ಇನ್ನ ನಾಲಕ್ಕು ದಿನ ಹೋದ್ರೆ ನಿಮ್ಮ ಮಗಳಿಗೆ ಆಗುತ್ತೆ ತಗೊಳ್ಳಿಯಮ್ಮ"

ಅಂಗಡಿಯಾತ ಹಾಗಂದಿದ್ದನ್ನು ಕೇಳಿ ರವಿ

"ಹೌದು ನಿರ್ಮಲೆಗಾಗುತ್ತೆ ಇರಲಿ" ಎನ್ನುತ್ತಾ ಬೆಲೆಯನ್ನು ವಿಚಾರಿಸಿದ.

"ಮುನ್ನೂರಾ ಎಪ್ಪತ್ತೈದು," ಚಿನ್ನ, ಮುತ್ತು, ಮಜೂರಿಯನ್ನೆಲ್ಲಾ ಲೆಕ್ಕ ಹಾಕಿ ಹೇಳಿದ ಅಂಗಡಿಯಾತ.

ಇಷ್ಟು ದುಬಾರಿ ಬೆಲೆಯದನ್ನು ಇವರೇಕೆ ಕೊಡಿಸಬೇಕು? ನಿಜವಾಗಿ ನಿರ್ಮಲಾಗೇಂತ ಕೊಂಡುಕೊಳ್ತಾರೊ! ಇಲ್ಲ... ಏನೋ ಅನುಮಾನಿಸಿದಳು ಸುನೀತ. ಆದರೆ ನೆಕ್‌ಲೇಸನ್ನು ಪ್ಯಾಕ್ ಮಾಡಿಸಿಕೊಂಡು ನಿರ್ಮಲೆಯ ಜೊತೆ ನಗುನಗುತ್ತಾ ಬಂದಾಗ ಅವಳ ಅನುಮಾನ ಸ್ವಲ್ಪ ಮಟ್ಟಿಗೆ ದೂರವಾಯಿತು.

"ಇಂಥದಕ್ಕೆಲ್ಲಾ ಹೀಗೆ ಖರ್ಚುಮಾಡಿದ್ರೆ ಹೇಗೆ ರವಿ?" ಕಾರಿನಲ್ಲಿ ಹತ್ತಿ ಕುಳಿತ ಮೇಲೆ ಕೇಳಿದಳು ಸುನೀತ.

"ಮನೆಗೂ ಒಂದು ಕಾಸು ಖರ್ಚು ಮಾಡೋದಕ್ಕೆ ಬಿಡ್ತಿಲ್ಲ ನೀವು. ಏನಾದರೂ ಹೀಗೆ ಕೊಂಡರೆ ಅದನ್ನೂ ಬೇಡವೆನ್ನುತ್ತೀರಿ. ನಾನು ಬೇರೆ ಯಾರಿಗಾದರೂ ಕೊಳ್ತೀನೆಯೆ? ನಿರ್ಮಲಳಿಗಾಗಲ್ಲವೆ? ಆನಂದ ಇಲ್ಲಿದ್ದಿದ್ದರೆ ಕೊಡಿಸುತ್ತಿರಲಿಲ್ಲವೆ?" ಎಂದಾಗ ರವಿಯ ಕಂಠವೇಕೊ ಗದ್ಗದಿತವಾಯಿತು.

ಸುನೀತ ಮುಂದೇನೂ ಹೇಳಲಿಲ್ಲ, ಸುಮ್ಮನೆ ಹೊರಗಡೆ ನೋಡುತ್ತಾ ಕುಳಿತಳು.

ರವಿ ಕಾರನ್ನು ಸ್ಟಾರ್ಟ್ ಮಾಡಿದ. ಇಲ್ಲಿಗೆ ಬಂದ ಕೆಲಸ ಮುಗಿಯಿತು. ಆದರೂ ಇಷ್ಟು ಬೇಗ ಊರಿಗೆ ಹೋಗುವುದೆ? ಎನ್ನಿಸಿತು ಅವನಿಗೆ. ಒಂದು ರೌಂಡು ಊರನ್ನೆಲ್ಲಾ ತೋರಿಸಿಕೊಂಡು ಬರಬೇಕು ನಿರ್ಮಲಾಗೆ ಎಂದುಕೊಂಡ.

ಓ! ಎಷ್ಟೊಂದು ಜನ! ಎಷ್ಟು ದೊಡ್ಡ ಮನೆಗಳು! ಒಂದೇ ಸಮನೆ ಆಶ್ಚರ್ಯದಿಂದ ಉದ್ಗರಿಸುತ್ತಿದ್ದಳು ನಿರ್ಮಲ.

ಒಂದು ರೌಂಡು ಆದ ಮೇಲೆ ಒಂದಿಷ್ಟು ಬಾಳೆಹಣ್ಣು, ಬಿಸ್ಕತ್ತು ಕೊಂಡು ತಂದ ರವಿ. ಪಾರ್ಕಿನ ಮುಂದೆ ಕಾರು ನಿಲ್ಲಿಸಿ ಒಳಗೆ ಹೋದರು.

ಹಾರುವ ಬಣ್ಣದ ಚಿಟ್ಟೆಯಂತೆ ನಡೆದಿದ್ದಳು ನಿರ್ಮಲ. ಅಲ್ಲಿದ್ದ ಜಾರು ಬಂಡೆಯಲ್ಲಿ ಕೆಲವು ಮಕ್ಕಳು ಜಾರುತ್ತಿದ್ದವು.

ನಿರ್ಮಲ ಅದರ ಮುಂದೆ ನಿಂತು ಕೌತುಕದಿಂದ ನೋಡತೊಡಗಿದಳು.

"ನೀನೂ ಜಾರ್ತೀಯಾ ಮರಿ?" ಕೇಳಿದ ರವಿ.

"ಹೂಂ" ತಲೆ ಹಾಕಿದಳು ನಿರ್ಮಲ.

ರವಿ ಅವಳನ್ನು ಮೇಲಕ್ಕೆ ಹತ್ತಿ ನಿಲ್ಲಿಸಿದ.

"ಬಿದ್ರೆ ಹಿಡ್ಕೊಬೇಕು ಡ್ಯಾಡಿ. ಹೆದ್ರಿಕೆ"

"ಏನೂ ಬೀಳೋಲ್ಲ. ನಾನಿಲ್ಲೇ ಇರ್ತೀನಿ."

ನಿರ್ಮಲ ನಿಧಾನವಾಗಿ ಕಾಲು ಚಾಚಿ ಕುಳಿತಳು. ಜಾರಲು ಅವಳಿಗೆ ಹೆದರಿಕೆ. ಮೇಲೆ ಹತ್ತಿ ನಿಂತಿದ್ದ ಒಬ್ಬ ಹುಡುಗನಿಗೆ ಅವಳನ್ನು ಮೆಲ್ಲಗೆ ತಳ್ಳುವಂತೆ ಸಂಜ್ಞೆಮಾಡಿದ ರವಿ. ಆ ಹುಡುಗ ನಗುತ್ತಾ ಮೆಲ್ಲಗೆ ನಿರ್ಮಲೆಯನ್ನು ಜರುಗಿಸಿದ.

ಭಯಗೊಂಡ ನಿರ್ಮಲ ಕಿರುಚಬೇಕೆನ್ನುವಷ್ಟರಲ್ಲೇ ಕೆಳಗೆ ಮರಳಿನ ಮೇಲೆ ನಿಂತಿದ್ದಳು.

"ಓ! ಡ್ಯಾಡಿ. ಎಷ್ಟು ಬೇಗ ಜಾರಿಬಿಟ್ಟೆ. ಎಷ್ಟು ಚೆನ್ನಾಗಿತ್ತು!" ಎಂದು ನಿರ್ಮಲ ಇನ್ನೊಮ್ಮೆ ಬಂಡೆಯ ಮೇಲೇರಿದಳು. ಅವಳಿಗೆ ಭಯಹಾರಿ ಸಂತೋಷ ಉಕ್ಕಿತ್ತು. ಪಾಲ್ಕೈದು ಬಾರಿ ಜಾರಿದಳು.

ಕಲ್ಲು ಬೆಂಚೊಂದರ ಮೇಲೆ ಕುಳಿತ ಸುನೀತ, ಮಗಳ ಆಟವನ್ನು ಸಂತೋಷದಿಂದ ನೋಡುತ್ತಿದ್ದಳು.

ನಿಜಕ್ಕೂ ಪುಣ್ಯ ಮಾಡಿದಾಳೆ ನಿರ್ಮಲ. ರವಿ ಅದೆಷ್ಟು ಪ್ರೀತಿಯಿಂದ ಕಾಣ್ತಾರೆ ಅವಳ್ನ. ಆನಂದ ಇಲ್ಲಿದ್ದರೂ ಕೂಡ ಇಷ್ಟು ಮುತುವರ್ಜಿವಹಿಸಿ ಅವಳ ಆಟ ಪಾಟಗಳಿಗೆ ಗಮನ ಕೊಡ್ತಿದ್ರೋ ಇಲ್ಲವೋ. ಅವರಿಗೆ ಯಾವಾಗ್ಲೂ ಕೆಲಸದ ಹುಚ್ಚು. ನನಗೆ ಬೇಸರ ವಾದೀತೆಂದು ಏನೋ ಒಮ್ಮೊಮ್ಮೆ ಸಾಯಂಕಾಲ ಹಾಗೆ ಸುತ್ತಾಡಿಸ್ಕೊಂಡು ಬರ್ತಿದ್ರು ಎಂದುಕೊಂಡಳು.

ಜಾರು ಬಂಡೆ ಬಳಿ ಹೋಗಿ ಮಗಳನ್ನು ಆಡಿಸಲು ಅವಳಿಗೂ ಇಷ್ಟವೆ. ಆದರೆ ರವಿಯ ಜೊತೆಯಲ್ಲಿ ನಿಲ್ಲಲು, ಏನೋ ಸಂಕೋಚ! ಎಂತಲೇ ಸುಮ್ಮನಿದ್ದಳು.

ಹಣ್ಣು, ಬಿಸ್ಕತ್ತನ್ನು ತಿಂದು, ಸ್ವಲ್ಪ ಹೊತ್ತು ಕುಳಿತಿದ್ದು ಮೂವರೂ ಅಲ್ಲಿಂದೆದ್ದರು. ಸಂಜೆ ದೀಪ ಹಚ್ಚುವ ವೇಳೆಗೆ ಮನೆ ತಲುಪಿದರು.

ಮರುದಿನ ಬೆಳಗ್ಗೆ ಎದ್ದು ಮುಖ ತೊಳೆದು ಕಾಫಿ ಕುಡಿದ ಕೂಡಲೆ ಪದ್ಮಳ ಮನೆಗೋಡಿದಳು ನಿರ್ಮಲ. ಪದ್ಮಳಾಗಲೆ ಸ್ಲೇಟು ಪುಸ್ತಕಗಳನ್ನು ಜೋಡಿಸಿಕೊಳ್ಳುತ್ತಾ ಶಾಲೆಗೆ ಹೋಗುವ ಸಿದ್ಧತೆ ನಡೆಸಿದ್ದಳು.

"ನಾವು ನಿನ್ನೆ ಕಾರ್ನಲ್ಲಿ ಭದ್ರಾವತಿಗೆ ಹೋಗಿದ್ವಿ ಪದ್ಮ ಕಾರ್ನಲ್ಲಿ" ಹೆಮ್ಮೆಯಿಂದ ಹೇಳಿದಳು ನಿರ್ಮಲ.

"ನಿಮ್ಮ ಕಾರ್ನಲ್ಲಿ! ಕಾರಿದೆಯಾ ನಿಮ್ಮದು?" ಅಚ್ಚರಿಯಿಂದ ಕೇಳಿದಳು ಪದ್ಮ.

"ಹೂಂ. ಇದೆ ನಮ್ಮದು. ಇಷ್ಟು ದಿನ ಬೆಂಗಳೂರಿನಲ್ಲಿತ್ತಂತೆ. ಆ ದಿನ ನಮ್ಮ ಡ್ಯಾಡಿ ಹೋಗಿದ್ರಲ್ಲಾ ತಂದ್ರು. ನಮ್ಮ ಡ್ಯಾಡಿಗೆ ಹೇಳಿ ನಿನ್ನೂ ಒಂದಿನ ಕಾರಲ್ಲಿ ಹತ್ತಿಸ್ಕೊಂಡು ಹೋಗ್ತೀನಿ. ಬರ್ತೀಯಾ?"

"ಓ! ಆಗಲೀ ನಂಗೆ ಕಾರ್ನಲ್ಲಿ ಹೋಗೋದ್ಕೆ ಎಷ್ಟು ಇಷ್ಟಾಂತ."

"ಸ್ಕೂಲಿಗೆ ಹೊತ್ತಾತಲ್ವೇನೆ? ಇನ್ನೂ ಮಾತಾಡ್ತಾ ನಿಂತಿದೀಯಲ್ಲ"

ಪದ್ಮಳ ತಾಯಿ ಒಳಗಿನಿಂದ ಕೂಗಿದಳು.

"ನಿಮ್ಮಮ್ಮ ಕೂಗ್ತಿದಾರೆ. ನಾ ಬರ್ತೀನಿ ಪದ್ಮಾ"

"ಮಧ್ಯಾನ್ಹ ಬರ್ತೀಯ! ತುಂಬಾ ಹೊತ್ತು ಆಟ ಆಡೋಣವಂತೆ."

"ಹೂಂ ಬರ್ತೀನಿ." ಎಂದು ಹೇಳಿ ಮನೆಯ ಕಡೆ ಓಡಿದಳು ನಿರ್ಮಲ.

– ೯ –

ಮಧ್ಯಾನ್ಹ ರವಿ ಊಟ ಮಾಡಿ ವಿಶ್ರಾಂತಿ ಪಡೆಯುತ್ತಿದ್ದಾಗ ಸುನೀತ ಅಲ್ಲಿಗೆ ಬಂದು, ನೋಟುಗಳನ್ನು ಅವನ ಮುಂದೆ ಹಿಡಿದು

"ತಗೊಳ್ಳಿ ರವಿ." ಎಂದಳು.

ನೋಟುಗಳನ್ನು ನೋಡಿ ರವಿ ತಬ್ಬಿಬ್ಬಾದ. ಇವೆ ಯಾಕೆಂದು ತಿಳಿಯಲಿಲ್ಲ ಅವನಿಗೆ.

"ಯಾಕೆ ಸುನೀತ?" ಕೇಳಿದ.

"ಸೀರೆಯದು, ನೆಕ್‌ಲೇಸಿನದು. ತಗೊಳ್ಳಿ."

"ಅದಕ್ಕೆ ದುಡ್ಡೇಕೆ ಸುನೀತ? ನಾನೇ ಇಷ್ಟಪಟ್ಟು ಕೊಡ್ತಿದೀನಲ್ಲಾ! ನಾನು ಕೊಡಬಾರದೆ?"

ಅವನ ದನಿಯಲ್ಲಿ ವ್ಯಥೆ ತುಂಬಿತ್ತು.

ಸುನೀತ ತಕ್ಷಣ ಏನೂ ಹೇಳಲಾರದಾದಳು. ಸ್ವಲ್ಪ ಹೊತ್ತು ಸುಮ್ಮನೆ ನಿಂತಿದ್ದು ನಂತರ,

"ನಾನು ಅವುಗಳ್ನ ಹಾಗೇ ಇಟ್ಟಿರ್ತೀನಿ ಹಾಗಾದ್ರೆ ಯಾಕೆ ಗೊತ್ತಾ?" ಎಂದು ಸಣ್ಣಗೆ ನಕ್ಕಳು.

"ಗೊತ್ತು. ಹಾಗೇ ಮಾಡಿ, ನಿರ್ಮಲ ದೊಡ್ಡವಳಾಗೋವರೆಗೆ ಹಾಗೇ ಇರಲಿ."

"ನಿರ್ಮಲಾಗೆ ಯಾಕೆ ರವಿ? ಅವರಪ್ಪ ಬಂದ್ಮೇಲೆ ತಂದುಕೊಡ್ತಾನೆ. ಮದ್ವೆ ಆದ್ಮೇಲೆ ಗಂಡ ತಂದು ಕೊಡ್ತಾನೆ. ನಾಳೆ ನನ್ನ ತಂಗಿ ಬರ್ತಾಳಲ್ಲಾ! ಅವಳಿಗೇಂತ."

"ಓ ಹಾಗೋ!" ಜೋರಾಗಿ ನಕ್ಕ ರವಿ, ನಂತರ ಹೇಳಿದ

"ಸದ್ಯಕ್ಕೆ ನಿಮಗಿರಲಿ. ನಿಮ್ಮ ತಂಗಿ ಬಂದ್ಮೇಲೆ ಬೇಕಾದ್ರೆ ನೀವು ಇಷ್ಟ ಪಟ್ಟಿದ್ದನ್ನು ತಂದು ಹಾಕಿ. ಬೇಡ ಅನ್ನೋಲ್ಲ."

ಇಷ್ಟರಲ್ಲಿ ನಿರ್ಮಲ ಅಲ್ಲಿಗೆ ಬಂದಿದ್ದರಿಂದ, ಮಾತು ಅಷ್ಟಕ್ಕೇ ನಿಂತಿತ್ತು.

"ಪದ್ಮನ್ನ ತೋರಿಸಿ ಬಂದ್ನಮ್ಮ. ಚೆನ್ನಾಗಿದೆ ಅಂದಳು. "ಕಿವಿ ಮುಟ್ಟಿನೋಡಿಕೊಳ್ಳುತ್ತಾ ಅಂದಳು ನಿರ್ಮಲ.

"ನೋಡಿ ಸುನೀತ. ಎಷ್ಟು ಹಿಗ್ಗಿನಿಂದ ಹೇಳ್ತಿದಾಳೆ. ಇನ್ನು ನೆಕ್‌ಲೇಸ್ ಹಾಕ್ಕೊಂಡ್ರೆ ಅದೆಷ್ಟು ಸಂತೋಷ ಪಡ್ತಾಳೋ ಏನೊ."

ರವಿ ಅಂದಿದ್ದನ್ನು ಕೇಳಿ. ಒಮ್ಮೆ ಮೃದುವಾಗಿ ನಕ್ಕು ಒಳಗೆ ಹೋದಳು ಸುನೀತ.

"ಡ್ಯಾಡಿ. ನನ್ನ ಫ್ರೆಂಡ್ ಪದ್ಮನ್ನ ಯಾವತ್ತಾದ್ರೂ ಒಂದಿನ ಕಾರ್ನಲಿ ಕೂಡಿಸ್ಕೊಂಡು ಹೋಗ್ತೀರಾ? ನಿರ್ಮಲ ಕೇಳಿದಳು.

"ಆಗ್ಲಿ ಮರಿ ಅದಕ್ಕೇನಂತೆ" ಎನ್ನುತ್ತಾ ಆಸ್ಪತ್ರೆಗೆ ಹೊರಟು ನಿಂತ ರವಿ.

ಸುನೀತ ತನ್ನ ಕೊಠಡಿಯಲ್ಲಿ ಕಿಟಕಿಯ ಮುಂದೆ ಕುಳಿತಿದ್ದಳು. ಅವಳ ದೃಷ್ಟಿ ದೂರಕ್ಕೆ ಹಾಯ್ದಿತ್ತು. ದಟ್ಟ ಹಸುರಿನ ಗಿಡ ಮರಗಳು ಊರಿನಾಚೆ ಕೋಟೆ ಗೋಡೆಯಂತೆ ನಿಂತಿದ್ದವು. ಮೇಲುಗಡೆ ಸ್ವಚ್ಛಂದವಾದ ಆಕಾಶ ಇನ್ನೊಂದು ಕಡೆ ನದಿಯ ನೀರು!

ಪ್ರಕೃತಿ ಅದೆಷ್ಟು ಬಣ್ಣ ಅದೆಷ್ಟು ರೂಪಗಳನ್ನು ತಳೆದಿದ್ದಾಳೆ ಎಂದುಕೊಳ್ಳುತ್ತಿದ್ದಂತೆ, ಅವಳ ಮನಸ್ಸಿನಲ್ಲಿ ಒಂದೊಂದಾಗಿ ಯೋಚನೆಗಳು ನುಗ್ಗಿ ಬಂದವು.

ರವಿ ನಿಮ್ಮ ಮೇಲೆ ತುಂಬಾ ವ್ಯಾಮೋಹ ಇಟ್ಕೊಂಡು ಬಿಟ್ಟಿದಾರೆ. ಇದರಿಂದ ಮುಂದೆ ಹೇಗಪ್ಪಾ ಅನ್ನಿಸುತ್ತೆ. ಆನಂದ ಇನ್ನೇನು ಇಷ್ಟರಲ್ಲೇ ಬರ್ತಾರೆ. ಬಂದಕೂಡಲೆ ಅವರನ್ನ ಬೇರೆ ಕಡೆ ಹಾಕಿದ್ರೂ ಹಾಕಬಹುದು. ಆಗ ರವಿ ನಿರ್ಮಲೇನ ಹೇಗೆ ಬಿಟ್ಟಿರಬಲ್ಲ? ನಿರ್ಮಲಾನೂ ಇವರ್ನ ಬಿಟ್ಟಿರೋದು ಕಷ್ಟವೆ. ಆನಂದ... ರವಿ ಇಬ್ರಿಗೂ ಒಂದೇ ಕಡೆ ವರ್ಗವಾದರೆ ಪರವಾಯಿಲ್ಲ. ಪ್ರಯತ್ನ ಪಟ್ಟು ಹಾಗೆ ಮಾಡಿಸಿಕೊಳ್ಬೇಕು. ಅವರು ಬಂದ ಮೇಲೆ ರವಿಗೆ ಒಂದು ಒಳ್ಳೇ ಸಂಬಂಧ ನೋಡಿ ಮದುವೆ ಮಾಡಿಬಿಡ್ಬೇಕು. ಅವರು ಬೇಗ್ನೆ ಬಂದ್ರೆ ವಾಸಿ. ಎಲ್ಲಾ ಸರಿಹೋಗುತ್ತೆ.

ಹೀಗೇ ಎಷ್ಟೋ ಹೊತ್ತು ಮೆಲುಕು ಹಾಕುತ್ತಾ ಕುಳಿತಿದ್ದಳು ಸುನೀತ.

ಒಂದು ದಿನ ರವಿ ಆಸ್ಪತ್ರೆಯಿಂದ ಬರುತ್ತಿದ್ದಂತೆ "ಸುನೀತಾ!" ಎಂದು ಕೂಗುತ್ತಲೇ ಒಳಗೆ ಬಂದ.

"ಏನು ರವಿ.?" ಕೇಳುತ್ತಾ ಆತುರದಿಂದ ಹೊರಗೆ ಬಂದಳು ಸುನೀತ.

"ಇನ್ನ ಫಿಫ್ಟೀನ್ ಡೇಸ್‌ನಲ್ಲಿ ಆನಂದ ಬರ್ತಾನಂತೆ. ನಿಮ್ಮನ್ನೂ ನಿರ್ಮಲಾನೂ ಬಾಂಬೆಗೆ ಕರ್ಕೊಂಡು ಬಾ ಅಂತ ಬರೆದಿದ್ದಾನೆ"

ಉತ್ಸಾಹದಿಂದ ಹೇಳಿ, ಕೈಲಿದ್ದ ಕಾಗದವನ್ನು ಸುನೀತಳಿಗೆ ಕೊಟ್ಟ.

ಆನಂದ! ತನ್ನ ಮಹದಾನಂದ! ದೀರ್ಘಕಾಲದ ನಂತರ ಬರುತ್ತಿದ್ದಾರೆ. ಅತಿ ಸಂತೋಷದಿಂದ ಸುನೀತಳ ಮೈ ಪುಳಕಿತವಾಯಿತು.

ಪತ್ರವನ್ನು ಹಿಡಿದು ಒಳಗೋಡಿದಳು.

ಮಿತ್ರನು ಬರುವ ಸಮಾಚಾರ ರವಿಗೂ ಹೆಚ್ಚಿನ ಸಂತೋಷವನ್ನುಂಟು ಮಾಡಿತ್ತು. ಆನಂದ ಬಂದ ಮೇಲೆ ಮತ್ತೆ ಆ ಸುದಿನಗಳು ಹಿಂದಿರುಗಿಯಾವೇನೊ ಎನ್ನಿಸುತ್ತಿದ್ದಂತೆ, ವಿಮಲೆಯ ನೆನಪಾಗಿ ನಿರಾಶೆಯ ರೇಖೆಗಳು ಮುಖದ ಮೇಲೆ ಮೂಡಿ ಬಂದವು.

ಹೊರಗಡೆ ಆಟವಾಡುತ್ತಿದ್ದ ನಿರ್ಮಲ ಒಳಗೆ ಬಂದಳು. ಸುನೀತ ಅವಳನ್ನೆತ್ತಿಕೊಂಡು ಮುದ್ದಾಡುತ್ತಾ

"ನಿಮ್ಮ ಅಪ್ಪಾಜಿ ಬರ್ತಾರೆ ಮರಿ. ಕಾಗ ಬರೆದಿದಾರೆ"

"ಹಾಗಂದ್ರೆ ಯಾರಮ್ಮಾ?" ನಿರ್ಮಲಾಗೆ ಏನೆಂದು ಸರಿಯಾಗಿ ಅರ್ಥವಾಗಲಿಲ್ಲ.

"ಅಂದ್ರೆ ನಿಮ್ಮ ಡ್ಯಾಡೀ.! ನಾನು ಹೇಳ್ತಿರಲಿಲ್ಲವೆ? ಓದೋದಕ್ಕೆ ಜರ್ಮನಿಗೆ ಹೋಗಿದಾರೇಂತ. ಅವರು ಬರ್ತಾರೆ. ನೀನು ಕೇಳಿದ್ದನ್ನೆಲ್ಲಾ ಕೊಡಿಸ್ತಾರೆ. ತುಂಬಾ ಮುದ್ದಾಡ್ತಾರೆ ನೋಡು ನಿನ್ನ.

"ಹೋಗಮ್ಮ ಡ್ಯಾಡಿ ಇಲ್ಲೇ ಇದಾರೆ. ಏನೇನೋ ಹೇಳ್ತೀಯ. ನಾನೇನೂ ಅವರ್ನ ಡ್ಯಾಡಿ ಅಂತ ಅನ್ನೋಲ್ಲ."

ಮಗಳ ಮಾತು ಕೇಳಿ ತುಂಬಾ ನಗು ಬಂದಿತು ಸುನೀತೆಗೆ. ರವಿಗೆ ತುಂಬಾ ಹಚ್ಕೊಂಡಿದಾಳೆ. ಆನಂದ ಬರಲಿ. ತಾನಾಗಿ ಎಲ್ಲಾ ಸರಿಹೋಗುತ್ತೆ. ಎನ್ನಿಸಿತು.

"ಹೋಗ್ಲಿ ನಾವು ಅವರ್ನ ಕರ್ಕೊಂಡು ಬರೋದಕ್ಕೆ ಬೊಂಬಾಯಿಗೆ ಹೋಗೋಣವೆ?"

ಮನೇಲಿರೋದಕ್ಕಿಂತ ಪ್ರಯಾಣವೇ ಹೆಚ್ಚಿನ ಸಂತೋಷವನ್ನುಂಟು ಮಾಡುತ್ತಿತ್ತು ನಿರ್ಮಲಾಗೆ. ಆಗ ಅಮ್ಮ ಡ್ಯಾಡಿ ಇಬ್ರೂ ಒಂದೇ ಕಡೆ ಇರ್ತಾರೆ, ಮಾತಾಡ್ತಾರೆ ನಗುತ್ತಿರ್ತಾರೆ. ಮನೇಲಿರೋ ಹಾಗೆ ದೂರ ದೂರ ಸಪ್ಪೆ ಸಪ್ಪೆಯಾಗಿರೊಲ್ಲ. ಸರಿ. ಪ್ರಶ್ನೆಗಳ ಮಳೆ ಸುರಿಸುತ್ತಾ ಕೇಳಿದಳು.

"ಬೊಂಬಾಯಿಗೆ? ಎಲ್ಲಿದೆಯಮ್ಮಾ ಅದು? ಯಾವತ್ತು ಹೋಗೋದು ಅಲ್ಲಿಗೆ? ಕಾರ್ನಲ್ಲಿ ಹೋಗ್ತೀವಾ?

"ಇಲ್ಲಿಗೆ ತುಂಬಾ ದೂರ ಇದೆ ಮರಿ."

"ಹೇಗಿದೆಯಮ್ಮಾ ಅದು? ಈ ಊರಿಗಿಂತಾ ದೊಡ್ಡಾ?"

"ಈ ಊರಿಗಿಂತಾ ದೊಡ್ಡದು ಒಂದು ಬೀದೀನೆ ಇರುತ್ತೆ ಅಲ್ಲಿ. ತುಂಬಾ ದೊಡ್ಡ ಊರು. ಭಾರಿ ಭಾರಿ ಮನೆಗಳು. ಅಗಲವಾದ ಬೀದಿಗಳು. ಎಲ್ಲಿನೋಡಿದ್ರೂ ಜನ."

"ಹಾಗಾದ್ರೆ ಭದ್ರಾವತಿಗಿಂತಾ ದೊಡ್ಡದುನ್ನು."

ಇದುವರೆಗೆ ನಿರ್ಮಲ ಅದೊಂದೇ ದೊಡ್ಡ ಊರನ್ನು ನೋಡಿದ್ದುದು.

"ಅದರ ಹತ್ತಿಪ್ಪತ್ತರಷ್ಟು ದೊಡ್ಡದು. ನೋಡ್ತೀಯಲ್ಲ ಹೇಗಿದ್ರೂ."

ನಿರ್ಮಲಾಗೆ ಸಂತೋಷವೋ ಸಂತೋಷ. ಉತ್ಸಾಹವೋ ಉತ್ಸಾಹ.

ತನ್ನ ಪ್ರಯಾಣದ ವಿಚಾರವಾಗಿ ಅದೆಷ್ಟು ಸಾರಿ ಹೇಳಿ ಬಂದಳೊ ಏನೇನು ಹೇಳಿ ಬಂದಳೊ ತಿಳಿಯದು.

ಬೊಂಬಾಯಿಗೆ ಹೊರಡಲೆಂದು ಆರು ದಿನಗಳ ರಜ ಪಡೆದ ರವಿ. ದಾವಣಗೆರೆಯವರೆಗೆ ಕಾರಿನಲ್ಲಿ ಹೋಗಿ ಅಲ್ಲಿಂದ ರೈಲು ಹತ್ತಿದರು.

ನಿರ್ಮಲ ರೈಲನ್ನು ನೋಡಿದ್ದು ಇದೇ ಮೊದಲು. ಸೆಕೆಂಡ್ ಕ್ಲಾಸಿನ ಕಂಪಾರ್ಟಮೆಂಟ್‌ನಲ್ಲಿ ಕುಳಿತಿದ್ದರಿಂದ ಎಲ್ಲ ರೀತಿಯ ಅನುಕೂಲವಿತ್ತು. ಮೆತ್ತನೆಯ ಸೀಟು.. ಗಾಳಿ ಬೀಸುವ ಫ್ಯಾನು ಎಲ್ಲಾ ಇದ್ದುದರಿಂದ ಕಾರಿಗಿಂತ ಚೆನ್ನಾಗಿದೆಯೆನ್ನಿಸಿತು ನಿರ್ಮಲೆಗೆ.

"ಮನೇಲಿರೋ ಹಾಗೇ ಇದೆ. ತೊಟ್ಟಿಲು ತೂಗಿದ ಹಾಗೆ ತೂಗುತ್ತೆ" ಎಂದು ತನ್ನ ಸಂತೋಷವನ್ನು ವ್ಯಕ್ತಪಡಿಸಿದಳು. ತಾವು ತುಂಬಾ ದೂರ ಹೋಗುತ್ತಿದ್ದೇವೆ. ಕಾರಿನಲ್ಲಿ ಹೋಗುವಾಗ ಪದೇ ಪದೇ ಇಳಿಯುವಂತೆ ಇಲ್ಲಿ ಇಳಿಯಬೇಕಾಗಿಲ್ಲ. ಡ್ಯಾಡಿ..ಅಮ್ಮ ಇಬ್ರೂ ಹತ್ರಾನೆ ಇದಾರೆ, ನಾಳೇವರೆಗೆ ಹೀಗೇ ಹೋಗ್ತಿರ್ತೀವೆ ಎಷ್ಟು ಬೇಕಾದ್ರೂ ಮಾತಾಡಬಹುದು ಎಂದು ಖುಷಿ ಅವಳಿಗೆ.

ಹುಬ್ಬಳ್ಳಿ ನಿಲ್ದಾಣದಲ್ಲಿ ಸ್ವಲ್ಪ ವಯಸ್ಸಾದ ದಂಪತಿಗಳು ಹತ್ತಿದರು. ನಿರ್ಮಲ ಮುದ್ದು ಮುದ್ದಾಗಿ ಮಾತಾಡುತ್ತಿರುವುದನ್ನು ಕೇಳಿದ ಅವರು.

"ನಿಮ್ಮಗಳು ಬಹಳ ಶಾಣೆ ಆದಾಳ್ರಿ" ಎಂದರು ರವಿ ಸುನೀತೆಯರ ಕಡೆ ನೋಡಿ.

"ಶಾಣೆ ಅಷ್ಟೆ ಅಲ್ಲ. ತುಂಟಿ ಕೂಡ." ನಿರ್ಮಲಳ ಕಡೆ ನೋಡಿ ಸಣ್ಣಗೆ ನಕ್ಕ ರವಿ.

"ಹೋಗು ಡ್ಯಾಡಿ ಏನೇನೊ ಹೇಳ್ತೀಯ." ನಿರ್ಮಲ ತನ್ನ ಗುಲಾಬಿಗಲ್ಲಗಳನ್ನು ಊದಿಸಿಕೊಂಡು ಕುಳಿತಳು.

ಅವಳು ಕುಳಿತ ರೀತಿಯನ್ನು ನೋಡಿ ಆ ದಂಪತಿಗಳು ತಮ್ಮ ಬೊಚ್ಚು ಬಾಯನ್ನರಳಿಸಿ ನಕ್ಕರು.

ಬೊಂಬಾಯಿಯಲ್ಲಿಳಿದಾಗ, ಆ ದೊಡ್ಡ ನಗರವನ್ನು ನೋಡಿ ನಿರ್ಮಲೆಗೆ ಮಾತ್ರವೇ ಅಲ್ಲದೆ ಸುನೀತೆಗೂ ಆಶ್ಚರ್ಯವಾಯಿತು. ಅಲ್ಲಿನ ಹೋಟೆಲ್ ಒಂದರಲ್ಲಿ ತಂಗಿಯಾಯಿತು. ಮರುದಿನವೇ ಆನಂದ ಬರುವವನಿದ್ದ. ವಿಮಾನ ತಲುಪುವುದಕ್ಕೆ ಒಂದು ಗಂಟೆ ಮುಂಚಿತವಾಗಿಯೇ ಸಾಂತಾಕ್ರೂಸ್, ನಿಲ್ದಾಣಕ್ಕೆ ಹೋದರು.

ಅಲ್ಲೇ ನಿಂತಿದ್ದ ಒಂದು ವಿಮಾನವನ್ನು ತೋರಿಸುತ್ತಾ ರವಿ ನಿರ್ಮಲೆಗೆ ವಿವರಿಸತೊಡಗಿದ್ದ. ಸುನೀತ ಆಗಾಗ್ಗೆ ತನ್ನ ಕೈ ಗಡಿಯಾರದ ಕಡೆ ನೋಡುತ್ತಾ, ಹೊತ್ತಾಯಿತಲ್ಲವೆ? ನಿಮ್ಮ ವಾಚ್‌ನಲ್ಲೆಷ್ಟಾಗಿದೆ? ಎಂದು ರವಿಯನ್ನು ಕೇಳುತ್ತಿದ್ದಳು. ಆನಂದನು ಬರುವ ಸಮಯ ಹತ್ತಿರವಾದಂತೆಲ್ಲಾ ಗಳಿಗೆಗಳು ಬಹಳ ನಿಧಾನವಾಗಿ ಜಾರುತ್ತಿರುವಂತೆ ತೋರುತ್ತಿದ್ದವು.

ಇಷ್ಟು ವರ್ಷಗಳೇ ಪತಿಯನ್ನಗಲಿದ್ದಾರೆ. ಇನ್ನು ಕೆಲವುಗಳಿಗೆಗಳು ತಡೆಯಲಾರರಲ್ಲಾ. ಎಂದುಕೊಂಡು ರವಿ ಮನಸ್ಸಿನಲ್ಲೇ ನಕ್ಕ.

ಸರಿಯಾದ ಸಮಯಕ್ಕೆ ಆನಂದನನ್ನು ಹೊತ್ತ ವಿಮಾನ ಹಾರಿಕೊಂಡು ಬಂದಿತು. ಕಾತುರಗೊಂಡಿದ್ದ ಸುನೀತಳ ಕಣ್ಣು, ಇಳಿದು ಬರುತ್ತಿದ್ದ ಆನಂದನ ಮೇಲೆ ನಾಟಿದವು.

ತನ್ನ ಮನದನ್ನೆ... ಹಾಗೂ ಮುದ್ದು ಮಗಳನ್ನು ಕಾಣಲು ಆನಂದನಿಗೂ ಅಷ್ಟೇ ಆತುರವಿತ್ತೇನೊ! ಅವನ ಕಣ್ಣುಗಳೂ ಸಹ ದೂರದಲ್ಲಿ ನಿಂತಿರುವ ಇವರಿಗಾಗಿಯೇ ಅರಸುತ್ತಿದ್ದವು. ಸ್ವಲ್ಪ ದೂರ ಬರುತ್ತಿದ್ದಂತೆ, ರವಿ ಸುನೀತ ಕಣ್ಣಿಗೆ ಬಿದ್ದರು, ಜೊತೆಗೆ ರವಿಯ ಕೈ ಹಿಡಿದು ನಿಂತಿರುವ ಪುಟ್ಟ ಹುಡುಗೀ ಓ ಅವಳೇ ನಿರ್ಮಲ! ತನ್ನ ಮುದ್ದು ಕುವರಿ! ಆನಂದ ಮುಗುಳ್ನಗೆ ತೇಲಿಸುತ್ತ ಅವರನ್ನು ಸಮೀಪಿಸಿದ

"ಅದೋ! ಡ್ಯಾಡಿ ಬಂದ್ರು ನೋಡ್ಮರಿ" ಸುನೀತ ಬಾಗಿ ಮಗಳ ಕಿವಿಯಲ್ಲಿ ಪಿಸುಗುಟ್ಟಿದಳು.

ನಿರ್ಮಲಳಿಗೇಕೊ ಸಂಕೋಚವೆನ್ನಿಸಿತು. ಅವಳು ರವಿಯ ಹಿಂದೆ ತನ್ನ ಮುಖವನ್ನವಿತಿಟ್ಟುಕೊಂಡಳು.

"ಅರೆ. ಇದೇನು ಮರಿ... ನೋಡು ಮಾತಾಡೊಲ್ವೆ?" ರವಿ ಅವಳ ಗಲ್ಲವನ್ನು ಹಿಡಿದೆತ್ತಿ ಹೇಳುತ್ತಿದ್ದಂತೆಯೇ ಆನಂದ ಅವರ ಮುಂದೆ ನಿಂತಿದ್ದ.

ನಿರ್ಮಲ ಮುಖವನ್ನು ಮುಂದೆ ಮಾಡಿ. ತನ್ನ ಪುಟ್ಟ ಬಾಯನ್ನು ಅರಳಿಸಿದಳು.ಮುತ್ತಿನಂತಹ ಹಲ್ಲು ಇಣುಕಿದವು. ಅವಳ ಮುಗ್ಧ ಸರಳ ನೋಟ ಆನಂದನ ಕಡೆ ಹಾಯಿತು.

ತಾನು ಹತ್ತಿರ ಬರುತ್ತಲೂ ಸುನೀತ ಮಗಳಿಗೆ ಸಂಜ್ಞೆ ಮಾಡುವಳು, ಅವಳು ಓಡಿ ಬಂದು. ತನ್ನ

ಕ್ಕಿ ಓಪಿಮೆ ಡ್ಯಾಡಿ ಎಂದು ಕೂಗುವಳು. ಆಗ ಮನಸ್ಸಿಗೆ ಎಷ್ಟು ತೃಪ್ತಿಯಾಗುವುದು ಎಂದೆಲ್ಲಾ ಲೆಕ್ಕ ಹಾಕಿಕೊಂಡಿದ್ದ ಆನಂದ. ಈಗ ಅವನಿಗೆ ಸ್ವಲ್ಪ ನಿರಾಶೆಯೇ ಆಯಿತು. ಇನ್ನೂ ಹೊಸದು. ನಾಚಿಕೆಯಿರಬೇಕು ನಾಲ್ಕು ದಿನ ಹೋದರೆ ತಾನೇ ಹತ್ತಿರ ಬರುತ್ತಾಳೆ ಎನ್ನಿಸಿತು ಮರುಕ್ಷಣ.

ಅವನು ನಿರ್ಮಲೆಯ ಗಲ್ಲ ಸವರಿ ಮೃದುವಾಗಿ ನಕ್ಕ ಅಷ್ಟೆ. ನಂತರ ರವಿಯ ಭುಜದ ಮೇಲೆ ಕೈಹಾಕಿ. "ಹೇಗಿದ್ದೀಯಾ? ಎಂದೆಲ್ಲಾ ವಿಚಾರಿಸಿದ.

ಸುನೀತಳಿಗೆ ಏನೋ ಒಂದು ರೀತಿಯ ನೂತನ ಅಪೂರ್ವಾನುಭವ! ಮದುವೆಯಾದ ಹೊಸತರಲ್ಲಿ ಇದೇ ರೀತಿಯ ಅನುಭವವಾಗಿತ್ತು. ಅವಳು ನಾಚಿಕೊಂಡು ಕೊನೆಗಣ್ಣಿನಿಂದ ಆನಂದನ ಕಡೆ ನೋಡುತ್ತಾ ನಿಂತಿದ್ದಳು.

"ಏನು ಸುನೀ. ಒಳ್ಳೆ ಮದುವೆ ಹೆಣ್ಣಾಗಿದ್ದೀಯಲ್ಲ" ಎನ್ನುತ್ತಾ ಆನಂದ ಮಡದಿಯ ಲಜ್ಜಾ ವದನವನ್ನು ಕಣ್ಣು ತುಂಬಾ ನೋಡುತ್ತ ಮೈ ಮರೆತ.

ರವಿ ಟ್ಯಾಕ್ಸಿಯನ್ನು ಗೊತ್ತುಮಾಡಿಕೊಂಡು ಬಂದ. ಎಲ್ಲರೂ ಕುಳಿತರು. ಆನಂದ ನಿರ್ಮಲಳನ್ನು ಕರೆದರೂ ಅವನ ಹತ್ತಿರ ಹೋಗದೆ ಅವಳು ರವಿಯ ಪಕ್ಕದಲ್ಲೇ ಕುಳಿತಳು. ಇದನ್ನು ನೋಡಿದ ಆನಂದನಿಗೆ,

ಅವಳು ತನ್ನ ತಾಯಿಗಿಂತ ರವಿಗೆ ಹೆಚ್ಚಾಗಿ ಹಚ್ಚಿಕೊಂಡಿದ್ದಾಳಲ್ಲಾ! ಇದೊಳ್ಳೆಯ ವಿಚಿತ್ರವೆನ್ನಿಸಿತು.

ಪತಿಯ ಪಕ್ಕದಲ್ಲಿ ಕುಳಿತ ಸುನೀತ ಮೌನ ಗೌರಿಯೇ ಆಗಿದ್ದಳು. ದೀರ್ಘಕಾಲದ ನಂತರ, ಆತನ ಸಾಮಿಪ್ಯದಿಂದ. ಅವಳ ಮೈ ರೋಮಾಂಚನಗೊಂಡಿತ್ತು. ಯಾವುದೋ ಒಂದು ಮಧುರ ಸುಖದಲ್ಲಿ ಮುಳುಗಿದ್ದಳು. ಮಾತಿಗಿಂತ ಮೌನವೇ ಹಿತವೆನ್ನಿಸಿತ್ತೇನೋ ಅವಳಿಗೆ. ಆನಂದನಿಗೊರಗಿ ಸಮಾಧಿಸ್ಥಳಂತೆ ಕಣ್ಣು ಮುಚ್ಚಿ ಕುಳಿತಿದ್ದಳು.

ಅವಳು ಈ ರೀತಿ ಕುಳಿತಿರುವುದನ್ನು ನೋಡಿ. ಮಾತಿನ ಮಲ್ಲಿ ಮೂಕಿಯಾದಳೆ ಎನ್ನಿಸದಿರಲಿಲ್ಲ ಆನಂದನಿಗೆ.

ಊರಿಗೆ ಬಂದ ಸ್ವಲ್ಪ ಹೊತ್ತಿನಲ್ಲಿಯೇ ಒಂದು ಅರ್ಜೆಂಟು ಕೇಸು ಬಂದಿದೆಯೆಂದು ರವಿಗೆ ತಿಳಿಯಿತು. ಅವನು ಅವಸರದಿಂದ ಆಸ್ಪತ್ರೆಗೆ ಹೊರಟ. ಸೀತ, ಅಡಿಗೆ ಮಾಡಿಟ್ಟು ಕಾದಿದ್ದಳು. ಆನಂದ ಸ್ನಾನ ಮಾಡಿ ಊಟ ಮುಗಿಸಿದ. ಅವನು ಹೊರಗೆ ಬಂದಾಗ, ಹಾಲ್‌ನಲ್ಲಿ ಕುರ್ಚಿಯ ಕೈ ಹಿಡಿದು ನಿಂತಿದ್ದ ನಿರ್ಮಲ ಏನನ್ನೋ ಗಂಭೀರವಾಗಿ ಆಲೋಚಿಸುತ್ತಿರುವಂತೆ ಕಂಡು ಬಂದಿತು.

ಆನಂದ ಅವಳ ಕಡೆ ನೋಡಿ ಮೃದುವಾಗಿ ನಕ್ಕ: ಅದಕ್ಕೆ ಪ್ರತಿಯಾಗಿ ಅವಳು ನಗಲಿಲ್ಲ. ಪರೀಕ್ಷಿಸುವವಳಂತೆ ಅವನ ಕಡೆ ನೋಡುತ್ತಿದ್ದಳು. ಆನಂದ ಅವಳನ್ನು ಕರೆಯುತ್ತಾ

"ನಿರ್ಮಲ, ರೂಮಿಗೆ ಬಾ. ನಿಂಗೆ ಚಿತ್ರ ತೋರಿಸ್ತೀನಿ" ಎಂದ.

"ಊಹೂಂ." ತಲೆಯಾಡಿಸಿದಳು ನಿರ್ಮಲ.

ಸುನೀತ ಹೊರಗೆ ಬಂದಳು. ನಿರ್ಮಲ ಹಾಗೇಕೆ ನಿಂತಿರುವಳೆಂದು ಅವಳಿಗೆ ಅರ್ಥವಾಯಿತು. ಮೆಲ್ಲಗೆ ನಗುತ್ತಾ,

"ರವಿ ಇಲ್ಲಿಗೆ ಬಂದ ತಕ್ಷಣ ಹೊರಟು ಹೋದ್ರಲ್ಲಾ! ಅದಕ್ಕೇ ಹೀಗಿದಾಳೆ. ಅವರ್ನ ಒಂದು ಗಳಿಗೇನೂ ಬಿಟ್ಟಿರೋಲ್ಲ ನೋಡಿ" ಎಂದು ಆನಂದನಿಗೆ ಹೇಳಿದಳು.

"ಓ ಹಾಗೇನು" ಎನ್ನುತ್ತಾ ತನ್ನ ಕೊಠಡಿಯೊಳಗೆ ಹೋದ ಆನಂದ.

ಸುನೀತೆಯೂ ಒಳಗೆ ಹೋದಳು. ಆನಂದ ಮಂಚಕ್ಕೊರಗಿದ್ದ. ಅವನ ಕಾಲು ಬಳಿ ಕುಳಿತು.

"ನೋಡಿ, ರವಿ ಇಲ್ಲದೆ ಹೋಗಿದ್ದರೆ ನಮ್ಮ ಸ್ಥಿತಿ ಏನಾಗುತ್ತಿತ್ತೋ. ನಿರ್ಮಲ ಹುಟ್ಟಿದಾಗ ಆದ ಘಟನೆಯನ್ನು ಬರೆದು ನಿಮಗೆ ತಿಳಿಸಿದ್ದೆನಲ್ಲಾ, ಅವರು ನನಗೆ ಯಾವ ರೀತಿಯಾದ ಕಷ್ಟವೂ ಆಗದ ಹಾಗೆ ನೋಡ್ಕೊಂಡ್ರು. ವಿಮಲೆ ಹೋದ ದುಃಖವನ್ನೂ ನುಂಗಿಕೊಂಡು, ಈ ತಾಯಿ ಮಕ್ಕಳಿಗಾಗಿ ಟೊಂಕ ಕಟ್ಟಿ ನಿಂತು ಬಿಟ್ರು. ನಮ್ಮ ನಿಮ್ಮಂತೂ ಅವರ ಕಣ್ಮಣಿಯಾಗಿಬಿಟ್ಟಿದಾಳೆ ಬಿಡಿ. ಅವಳಿಗೆ ಯಾವ ಕೊರತೇನೂ ಇಲ್ಲದ ಹಾಗೆ ತುಂಬಾ ಮುದ್ದಿನಿಂದ ನೋಡ್ಕೊಳ್ತಿದಾರೆ. ಅದಕ್ಕೇ ಅವಳಿಗೂ ಅವರೂಂದ್ರೆ ಅಷ್ಟೊಂದು ಪ್ರೀತಿ. ಅವರ ಋಣವನ್ನ ಈ ಜನ್ಮದಲ್ಲಿ ತೀರಿಸೋದಕ್ಕೆ ಆಗುತ್ತೋ ಇಲ್ಲೊ ಹೇಳಲಾರೆ" ಎಂದೆಲ್ಲಾ ಹೇಳಿದಳು.

ರವಿಯನ್ನು ಅಷ್ಟು ಹೊಗಳಿದ್ದುದು ಸರಿ ಬರಲಿಲ್ಲ ಆನಂದನಿಗೆ. ತನ್ನ ಮಗಳನ್ನು ಅವನೇಕೆ ಅಷ್ಟು ಹಚ್ಚಿಕೊಳ್ಬೇಕು? ನಿಮ್ಮ ತಂದೆ ದೂರದ ಊರಿಗೆ ಹೋಗಿದಾರೆ, ನಾನು ಅವರ ಸ್ನೇಹಿತ. ಅವರು ಇಷ್ಟರಲ್ಲೇ ಬರ್ತಾರೆ, ನಿನ್ನ ಮುದ್ದಿನಿಂದ ನೋಡಿಕೊಳ್ತಾರೆ ಎಂದು

ಹೇಳಿ ದೂರವಿರುವ ತಂದೆಯ ಬಗ್ಗೆ ಅಭಿಮಾನವನ್ನು ಹುಟ್ಟಿಸಬಾರದಿತ್ತೆ? ತಂದೆಯನ್ನು ಕಾಣುವ ಹಂಬಲ, ಕಾತುರಗಳನ್ನುಂಟುಮಾಡಬಾರದಿತ್ತೆ?" ಎಂದು ರವಿಯ ಬಗ್ಗೆ ಸ್ವಲ್ಪ ಅಸಮಾಧಾನವೇ ಉಂಟಾಯಿತು .ಪಕ್ಕಕ್ಕೆ ತಿರುಗಿ ಸಿಗರೇಟನ್ನು ಹಚ್ಚಿದ.

ತಮಗೆ ಇಷ್ಟು ಉಪಕಾರ ಮಾಡಿದವರ ಬಗ್ಗೆ ಒಂದು ಒಳ್ಳೆಯ ಮಾತನ್ನಾದರೂ ಆಡಬಾರದೆ ಇವರು? ಎಂದು ಆನಂದನ ವರ್ತನೆಯ ಬಗ್ಗೆ ಬೇಸರವೇ ಆಯಿತು ಸುನೀತೆಗೆ. ಆದರೆ ಮರು ಕ್ಷಣ ಪ್ರಯಾಣದ ಆಯಾಸವೊ ಏನೋ ನಾನಿದನ್ನೆಲ್ಲಾ ಯಾಕೆ ಹೇಳಿದೆನೋ ಏನೊ ಎನ್ನಿಸಿತು.

ಆನಂದ ಏನೂ ಮಾತನಾಡದೆ ಹಾಗೇ ಪಕ್ಕಕ್ಕೆ ತಿರುಗಿಕೊಂಡು ಮಲಗಿದ್ದ. ಸ್ವಲ್ಪ ಹೊತ್ತಿನಲ್ಲೇ ಅವನಿಗೆ ನಿದ್ದೆ ಬಂದಂತೆ ಕಂಡಿತು. ಮಲಗುತ್ತಾರೇನೊ ಮಲಗಲಿ ಎಂದು ಈಚೆ ಎದ್ದು ಬಂದಳು. ಇವರು ಬಂದಾಗಿನಿಂದ ಏನೊ ಒಂದು ತರಹ ಇದ್ದಾರಲ್ಲಾ!ಬಹುಶಃ ನಿರ್ಮಲ ಅವರ ಹತ್ತಿರ ಹೋಗದೆ ಇರೋದರಿಂದಲೊ ಏನೊ ಎನ್ನಿಸಿತು. ಅವಳು ಮಗಳ ಹತ್ತಿರ ಬಂದು.

""ಇವ್ರೆ ನಿಮ್ಮ ಡ್ಯಾಡಿ ನಿಮ್ಮಿ. ಪದ್ಮನ್ಗೆ ಅವರ ತಂದೆ ಇಲ್ಲವಾ ಹಾಗೆ, ಹೋಗು ಡ್ಯಾಡೀಂತ ಮಾತಾಡ್ಸು. ಎತ್ಕೊಂಡು ಮುದ್ದಾಡ್ತಾರೆ. ಜಾಣ ಮರಿ" ರಮಿಸಿದಳು.

"ನಾನು ಹಾಗನ್ನಲ್ಲಮ್ಮ ಅವರ್ನ" ದೃಢ ನಿರ್ಧಾರದ ಸ್ವರದಲ್ಲಿ ಸೆಟೆದುಕೊಂಡು ಹೇಳಿದಳು ನಿರ್ಮಲ.

"ಮತ್ತೇನಂತೀಯ ಮಗು?"

"ಅಪ್ಪಾಜಿ ಅಂತ ಬೇಕಾದ್ರೆ ಅಂತೀನಿ. ಡ್ಯಾಡಿ ಅನ್ನೊಲ್ಲ. ಆಸ್ಪತ್ರೆಗೆ ಹೋಗಿದಾರಲ್ಲ ಅವರೇ ನಂದೆ ಡ್ಯಾಡಿ."

"ಓ ಇದೇನು ಮರಿ ನಿನ್ನ ಹುಚ್ಚಾಟ! ಅವ್ರು ಇಲ್ಲಿದಾರಲ್ಲ ನಿಮ್ಮಪ್ಪಾಜಿಯ ಸ್ನೇಹಿತರಮ್ಮಾ. ಇವರು ಇಷ್ಟು ದಿನ ಊರ್ನಲ್ಲಿ ಇರಲಿಲ್ವಲ್ಲ ಅದಕ್ಕೆ ಅವರೆ ನಮ್ಮನ್ನೆಲ್ಲಾ ನೋಡ್ಕೊಳ್ತಿದ್ರು ಅಷ್ಟೆ"

"ಹಾಗಾದ್ರೆ ಅಪ್ಪಾಜಿ ಅಂತೀನಿ ಬಿಡಮ್ಮಾ: ಅವರು ಡ್ಯಾಡಿ, ಇವರು ಅಪ್ಪಾಜಿ ಆಯ್ತೆ?" ಆನಂದನ್ನು ಡ್ಯಾಡಿ ಅನ್ನೋದಕ್ಕೆ ಯಾಕೋ ಅವಳ ಮನಸ್ಸು ಒಪ್ಪಲಿಲ್ಲ. ಅಪ್ಪಾಜಿ ಅನ್ನುವುದಕ್ಕಿಂತ ಡ್ಯಾಡಿ ಎನ್ನೋ ಪದಕ್ಕೆ ಹೆಚ್ಚು ಮಹತ್ವವೇನೊ ನಿರ್ಮಲಾಳ ಅಭಿಪ್ರಾಯದಲ್ಲಿ. ಎಂತಲೇ ರವಿಗೆ ಮಾತ್ರ ಮೀಸಲು ಆ ಪದ.

"ಹೋಗ್ಲಿ ಹಾಗೇ ಅನ್ನು"

ಎರಡು ಪದಗಳ ಅರ್ಥವೂ ಒಂದೇ ತಾನೆ. ರವೀ ಹಾಗೆ ಕೂಗಿ ಅವಳಿಗೆ ಅದೇ ಅಭ್ಯಾಸವಾಗಿದೆ. ಅವಳನ್ನು ಯಾಕೆ ಬಲವಂತ ಪಡಿಸಬೇಕೆಂದುಕೊಂಡು ಸುಮ್ಮನಾದಳು ಸುನೀತ.

ಆನಂದ ನಿದ್ರೆ ಬಂದವನಂತೆ ನಟಿಸುತ್ತಿದ್ದ ಅಷ್ಟೆ. ಹೊರಗೆ ತಾಯಿ ಮಗಳು ಆಡುತ್ತಿದ್ದ ಮಾತುಗಳು ಸ್ಪಷ್ಟವಾಗಿ ಕೇಳಿಸುತ್ತಿದ್ದವು. ಈ ಮಗು ಇಷ್ಟು ಹಚ್ಚಿಕೊಳ್ಳೋದಕ್ಕೆ ರವಿ ಅವಕಾಶ ಕೊಡಬಾರದಾಗಿತ್ತು. ಎಷ್ಟೇ ಹತ್ತಿರದ ಸ್ನೇಹಿತರಾಗಲಿ, ತಾನಿಲ್ಲದ ವೇಳೆಯಲ್ಲಿ ಸುನೀತ ಹಗಲೂ ರಾತ್ರೆ ಅವನನ್ನು ಮನೆಯಲ್ಲಿರಿಸಿಕೊಳ್ಳುವುದೇಕೆ ಬೇಕಿತ್ತು? ಎಂದೆಲ್ಲಾ ಯೋಚಿಸಿದಾಗ, ಸುನೀತಳ ವಿಷಯದಲ್ಲಿ ಅವನಿಗೆ ತುಂಬಾ ಅಸಮಾಧಾನವೇ ಆಯಿತು. ಸ್ವಲ್ಪ ಹೊತ್ತು ಹಾಗೆಯೇ ಮಲಗಿದವನಂತಿದ್ದು ಆ ಮೇಲೆ ಎದ್ದು ಬಂದ,



"ನಿರ್ಮಲಾ!" ಎಂದು ಮುದ್ದಾಗಿ ಕೂಗಿದ.

"ಹೋಗು ನಿಮ್ಮಿ, ನಿಮ್ಮಪ್ಪಾಜಿ ಕರೀತಿದಾರೆ. ಏನಪ್ಪಾಜಿ ಅನ್ನು ತಿಳಿಯ್ತೆ?" ಎಂದು ಹೇಳಿಕೊಟ್ಟು ಸುನೀತ ಮಗಳನ್ನು ಕಳುಹಿಸಿದಳು.

"ಏನಪ್ಪಾಜಿ" ಬಾಗಿಲ ಬಳಿ ನಿಂತು ಕೇಳಿದಳು ನಿರ್ಮಲ.

ಅಪ್ಪಾಜಿ ಎನ್ನುವ ಪದ ಮಗಳ ಬಾಯಿಂದ ಮುದ್ದಾಗಿ ಹೊರ ಬಂದಾಗ ಆನಂದನ ಹೃದಯ ಹರುಷದಿಂದ ಕುಣಿದಾಡಿತು. ಸಂಭ್ರಮದಿಂದ ಎದ್ದು ಕುಳಿತ. ತನ್ನ ಚರ್ಮದ ಸೂಟ್‌ಕೇಸನ್ನು ತೆರೆದು

"ನಿಂಗೇನು ತಂದಿದೇನೆ ನೋಡು ಬಾ ಇಲ್ಲಿ"ಮಮತೆಯಿಂದ ಮಗಳನ್ನು ಕರೆದ.

ತನ್ನ ಪುಟ್ಟ ಪುಟ್ಟ ಹೆಜ್ಜೆಗಳನ್ನಿಟ್ಟುಕೊಂಡು, ಮೆಲ್ಲಗೆ ಒಳಗೆ ಬಂದು ಮಂಚದ ಬಳಿ ನಿಂತಳು ನಿರ್ಮಲ

"ನೋಡು ನಿನಗೆ ಫ್ರಾಕ್ಸ್ ತಂದಿದೀನಿ. ಚೆನ್ನಾಗಿದಾವಾ?"

ನಿರ್ಮಲ ತನ್ನ ಕಣ್ಣುಗಳನ್ನು ಅಗಲವಾಗಿ ಅರಳಿಸಿ ಚೆನ್ನಾಗಿವೆಯೆನ್ನುವಂತೆ ತಲೆಯಾಡಿಸಿದಳು.

"ಇದು ನಿಮ್ಮಮ್ಮನಿಗೆ" ಪರ್ಸೊಂದನ್ನು ಹಿಡಿದು ತೋರಿಸಿದ,

"ಡ್ಯಾಡಿಗೆ?" ಇದ್ದಕ್ಕಿದ್ದಂತೆ ತಲೆಯೆತ್ತಿ ಕೇಳಿದಳು

"ಇದೋ ಈ ಪೆನ್ನು" ಎಂದು ಒಂದು ಪೆನ್ನನ್ನು ತೋರಿಸಿ ಮತ್ತೆ ಅದನ್ನು ಹಾಗೆಯೇ ಸೂಟ್‌ಕೇಸ್‌ನಲ್ಲಿ ಇಡುವುದರಲ್ಲಿದ್ದ.

"ನಾ ಕೊಡ್ತೀನಿ ಕೊಡಿಲ್ಲಿ" ಆನಂದನ ಕೈಯಿಂದ ಪೆನ್ನನ್ನು ಕಿತ್ತುಕೊಂಡು ಅಲ್ಲಿಂದ ಓಡಿದಳು.

ಆನಂದ ಪೆಚ್ಚಾಗಿ ಅವಳು ಹೋದ ಕಡೆಗೇ ನೋಡ ತೊಡಗಿದ.

ಆ ದಿನ ಸೀರಿಯಸ್ ಕೇಸೊಂದು ಬಂದಿದ್ದರಿಂದ ರವಿ ಆಸ್ಪತ್ರೆಯಲ್ಲೇ ಉಳಿಯ ಬೇಕಾಯಿತು. ಸುನೀತ ಊಟವನ್ನು ಅಲ್ಲಿಗೇ ಕಳುಹಿಸಿದಳು.

ಡ್ಯಾಡಿಗೆ ಪೆನ್ನನ್ನು ತೋರಿಸುವ ಆತುರ ನಿರ್ಮಲೆಗೆ. ಅದನ್ನು ಹಿಡಿದು ಮುಂದಿನ ಬಾಗಿಲವರೆಗೂ ಹತ್ತಾರು ಬಾರಿ ಓಡಾಡಿ ಬೀದಿಯ ಉದ್ದಕ್ಕೂ ದೃಷ್ಟಿ ಹಾಯಿಸಿ. ನಿರಾಶೆಗೊಂಡಳು. ಅವಳು ಹೀಗೇಕೆ ಓಡಾಡುತ್ತಿರುವಳೆಂದು ಆನಂದನಿಗೆ ಅರ್ಥವಾಯಿತು.

"ಯಾಕೆ ಹೀಗೆ ಓಡಾಡ್ತೀಯ ನಿರ್ಮಲ?"

"ಯಾಕಿಲ್ಲ" ನಿರಾಶೆಯ ನೋಟವನ್ನು ಬೀರಿ ಅಂದಳು ನಿರ್ಮಲ,

ಮರುದಿನ ಸುನೀತ ರುಚಿ ರುಚಿಯಾದ ಭಕ್ಷ್ಯಗಳನ್ನು ತಯಾರಿಸಿದಳು. ಹುಳಿ, ಪಲ್ಯ ಕೂಟುಗಳು ತಿಂದು ಎಷ್ಟು ಕಾಲವಾಯಿತೋ ಆನಂದ. ಅಲ್ಲಿಇವನ್ನು ಮಾಡಿದರೂ ಇಲ್ಲಿಯಷ್ಟು ರುಚಿಯಾಗೆಲ್ಲಿ ಮಾಡುತ್ತಾರೆ? ಎಂದುಕೊಂಡು ಭರ್ಜರಿಯಾಗಿಯೇ ಮಾಡಿದಳು.

ಇದುವರೆಗೆ ಆನಂದನ ಜೊತೆ ಮಾತಾಡಲು ಸಾಕಷ್ಟು ಅವಕಾಶವೇ ಸಿಕ್ಕಿರಲಿಲ್ಲ ರವಿಗೆ. ನಿಧಾನವಾಗಿ ಕುಳಿತು ತುಂಬಾ ಮಾತನಾಡಬೇಕೆಂದು ಆಸ್ಪತ್ರೆಯ ಕೆಲಸವನ್ನು ಬೇಗನೆ ಮುಗಿಸಿಕೊಂಡು ಬಂದ.

ಗೆಳೆಯರಿಬ್ಬರೂ ಊಟ ಮುಗಿಸಿಕೊಂಡು ಹಾಲ್‌ನಲ್ಲಿ ಬಂದು ಕುಳಿತರು. ಪಚ್ಚಕರ್ಪೂರ ಹಾಕಿದ ಘಮಘಮಿಸುವ ಅಡಿಕೆ ಪುಡಿ, ಒಗುರಾದ ವೀಳೆಯದೆಲೆ ಸಿದ್ಧವಾಗಿತ್ತು.

ಅಡಿಕೆಪುಡಿಯನ್ನು ತೆಗೆದುಕೊಳ್ಳುತ್ತಾ, ಸೂಕ್ಷ್ಮವಾಗಿ ರವಿಯಕಡೆ ನೋಡಿದ ಆನಂದ. ರವಿ ತುಂಬಾ ಇಳಿದು ಹೋಗಿರುವಂತೆ ಕಂಡು ಬಂದಿತು. ಮುಖದ ಮೇಲೆ ಅಲ್ಲೊಂದು ಇಲ್ಲೊಂದು ಗೆರೆಗಳು ಮೂಡಿದ್ದವು. ಗೆಳೆಯನ ಸ್ಥಿತಿಗೆ ಮರುಕವುಂಟಾಯಿತು ಅವನಿಗೆ.

ಸರಿಯಾಗಿರುವ ಹೆಣ್ಣನ್ನು ನೋಡಿ ಮದುವೆ ಮಾಡಿಬಿಡಬೇಕು. ಚಿಂತೆಯಲ್ಲೇ ಮುಪ್ಪಾಗಲು ಇವನನ್ನು ಬಿಡಬಾರದು ಎಂದುಕೊಂಡು ಎಲೆಗೆ ಸುಣ್ಣ ಸವರಿ ಬಾಯಲ್ಲಿ ಹಾಕಿಕೊಂಡು ಜಗಿಯುತ್ತಾ, ಸಿಗರೇಟ್ ಪ್ಯಾಕನ್ನು ಹೊರ ತೆಗೆದ. ತಾನೊಂದನ್ನು ಹಚ್ಚಿ ರವಿಯ ಮುಂದೆ ಒಂದನ್ನು ಹಿಡಿದ.

"ಈಗ ಸಿಗರೇಟು ವರ್ಜಿತ ಆನಂದ್" ಕ್ಷೀಣವಾಗಿ ನಕ್ಕು ಹೇಳಿದ ರವಿ.

ಇದನ್ನು ಕೇಳಿ ಆಶ್ಚರ್ಯವೋ ಆಶ್ಚರ್ಯ ಆನಂದನಿಗೆ. ಧೂಮಪಾನಪ್ರಿಯ ರವಿ, ಇದ್ದಕ್ಕಿದ್ದಂತೆ ಸಿಗರೇಟು ಬಿಡಲು ಏನು ಕಾರಣವೊ ತಿಳಿಯದಾಯಿತು ಅವನಿಗೆ.

ವಿಮಲೆ ಹೋದ ಮೇಲೆ ಸೇದುವ ಅಭ್ಯಾಸ ಇನ್ನೂ ಬಲವಾಗಿ ಬೆಳೆದಿರಬೇಕೆಂದು ಊಹಿಸಿದ್ದ. ಆದರೆ ತನ್ನ ಊಹೆಗೆ ಸುಳ್ಳಾಯಿತು. ಈ ವೈರಾಗ್ಯವೇಕೋ ಪ್ಯಾಕನ್ನು ಹಾಗೇ ಹಿಡಿದುಕೊಂಡು ಅಚ್ಚರಿಯಿಂದ ನೋಡುತ್ತಾ ಕುಳಿತ ಆನಂದ.

ಇಷ್ಟರಲ್ಲಿ ಸುನೀತ ಅಲ್ಲಿಗೆ ಬಂದಳು.

"ನಾನು ಕೇಳ್ತಿರೋದು ನಿಜವೆ ಸುನೀ? ರವಿ ಈಗ ಸಿಗರೇಟು ಬಿಟ್ಟು ಬಿಟ್ಟಿದ್ದಾನಂತಲ್ಲಾ?"

"ಹೂಂ. ಈಗ ಮೂರು ನಾಲ್ಕು ತಿಂಗಳಿಂದ ಅವರು ಸೇದತಾನೆ ಇಲ್ಲ. ಇದಕ್ಕೆಲ್ಲಾ ನಿಮ್ಮ ಮಗಳೆ ಕಾರಣ."

ಏನೆಂದು ಅರ್ಥವಾಗದವನಂತೆ ಆನಂದ ಅವಳ ಕಡೆ ನೋಡುತ್ತಾ ಕುಳಿತ. ಸುನೀತ ಹೇಳ ತೊಡಗಿದಳು.

"ಒಂದು ದಿನ ಇವರು ಸಿಗರೇಟು ಸೇದಿ ನೆಲದ ಮೇಲೆ ಹಾಕಿದ್ರು. ಅದು ಪೂರ್ತಿಯಾಗಿ ಸುಟ್ಟಿರಲಿಲ್ಲ. ಇನ್ನೂ ಹೊಗೆಯಾಡ್ತಿತ್ತು. ಅವರ ಹತ್ತಿರ ಹೋಗಬೇಕೆಂದು ಬರುವಾಗ ನಿಮ್ಮಿ ಅದರ ಮೇಲೆ ಕಾಲಿಟ್ಟಳು. ಕಾಲಿಗೆ ಚುರುಕು ಮುಟ್ಟುತ್ತಲೂ ಹೋ ಎಂದು ಅಳಲು ಶುರು ಮಾಡಿದಳು. ನಾನು ಬಂದು ನೋಡಿದಾಗ ಇವರು ಅವಳ್ನ ಎತ್ಕೊಂಡು ಇನ್ಮೇಲೆ ಈ ಸಿಗರೇಟ್ನೇ ಸೇದೋಲ್ಲ ಮರೀಂತ ಹೇಳಿದವರು ಆವತ್ನಿಂದ ಸೇದೋದನ್ನ ಬಿಟ್ಟೇ ಬಿಟ್ಟರು ನೋಡಿ."

"ಅವಳ ಎಳೇ ಚರ್ಮ ಸುಟ್ಟಿದ್ದನ್ನು ನೋಡಿ ನನಗೆ ಎಷ್ಟು ನೋವಾಯ್ತೂಂತ ಆನಂದ್" ಎಂದ ರವಿ.

ಸ್ವಲ್ಪ ಚರ್ಮ ಸುಟ್ಟಾಕ್ಷಣ ಅಷ್ಟು ನೋವಾಗಬೇಕೆ? ಕೇವಲ ಇಷ್ಟಕ್ಕೇ ಇಂತಹ ಪ್ರತಿಜ್ಞೆಯೆ? ಪ್ರಾಣಕ್ಕಿಂತಲೂ ಹೆಚ್ಚಾಗಿದ್ದ ವಿಮಲ, ಅಷ್ಟು ಸೇದಬೇಡಿರೆಂದು ಕಾಡಿ ಬೇಡಿದ್ದರೂ ಬಿಡದೆ ಇದ್ದವನು, ನಿರ್ಮಲಾಗೆ ಸ್ವಲ್ಪ ನೋವಾಗಿದ್ದಕ್ಕೆ ಬಿಟ್ಟುಬಿಡಲು ಕಾರಣವಾದರೂ ಏನಿರಬೇಕು?

ಆಸ್ಪತ್ರೆಯಲ್ಲಿ ರಕ್ತ...ಮಾಂಸ...ಸುಟ್ಟ ಘಾಯಗಳನ್ನೆಷ್ಟು ನೋಡಿರಲಿಕ್ಕಿಲ್ಲ? ಆಪರೇಷನ್ ಮಾಡುವಾಗ, ಕೊರಡಿನ ಮೇಲೆ ಕೈಯಾಡಿಸುವಂತ ಕತ್ತರಿ ಚಾಕುಗಳ ಪ್ರಯೋಗಗಳನ್ನು ಮಾಡಿಲ್ಲ! ಇವೆಲ್ಲಾ ಅಭ್ಯಾಸವಿದ್ದವನಿಗೆ ಈ ಸಣ್ಣ ಘಟನೆ ಅಂತಹ ಬೃಹತ್ ಪರಿವರ್ತನೆ ಮಾಡಲು ಕಾರಣ? ಇವಳೇನು ಅವನ ಸ್ವಂತ ಮಗಳೆ? ಇಷ್ಟಕ್ಕೂ ಸ್ನೇಹಿತನ ಮಗಳಿಗಾಗಿ ಆಳವಾಗಿ ಬೇರು ಬಿಟ್ಟ ಚಟವನ್ನು ಬಿಟ್ಟು ಬಿಡಲು ಕಾರಣ?

ಒಂದಾದ ನಂತರ ಒಂದು ಅಲೆ ಎದ್ದು ಬಂದು, ದಡಕ್ಕಪ್ಪಳಿಸುವಂತೆ ಪ್ರಶ್ನೆಗಳೆದ್ದವು ಆನಂದನ ಮನಸ್ಸಿನಲ್ಲಿ.

ರವಿಯ ಮದುವೆ ವಿಚಾರವಾಗಿ ಕೇಳಬೇಕೆಂದಿದ್ದುದು ಮರೆತೇ ಹೋಯಿತು ಅವನಿಗೆ.

ಮಿತ್ರನ ಇಷ್ಟು ದಿನಗಳ ಅನುಭವವನ್ನು ಕೇಳಿ ತಿಳಿದುಕೊಳ್ಳಬೇಕು. ಇನ್ನೂ ಏನೇನೇನನ್ನೋ ಮಾತಾಡಬೇಕು ಎಂದು ಲೆಕ್ಕ ಹಾಕಿಕೊಂಡು ಬಂದಿದ್ದ ರವಿ. ಆದರೆ ಗೆಳೆಯನು ಮೌನ ತಳೆದು ಏನೋ ಒಂದು ರೀತಿ

ಯಾಗಿ ಕುಳಿತಿರುವುದನ್ನು ನೋಡಿ, ಕೇಳಿದಾದ. ಆಸ್ಪತ್ರೆಗೆ ಹೊರಡುವುದೆಂದುಕೊಂಡು ಕೋಟು ತೊಟ್ಟು ನಿಂತ. ಜೇಬಿನ ಮೇಲೆ ಕೈಯಾಡಿಸಿದಾಗ ಹೊಸದಾದ ಪೆನ್ನು ಕೈಗೆ ತಡೆಯಿತು. "ಇದೆಲ್ಲಿಂದ ಬಂತು?" ಎನ್ನುತ್ತಿದ್ದಂತೆ ನಿರ್ಮಲ ಕೈ ಚಪ್ಪಾಳೆ ತಟ್ಟಿದಳು.

"ನಾನು ಸಿಕ್ಕಿಸಿದ್ದೆ ಡ್ಯಾಡಿ. ಅಪ್ಪಾಜಿ ನಿಮಗೇಂತ ತಂದಿದಾರೆ" ಎಂದಾಗ ಕಳ್ಳಿ ಎಂದು ರವಿ ಪ್ರೀತಿಯಿಂದ ಅವಳ ಗಲ್ಲ ಸವರಿದ.

ತನಗಿಲ್ಲದ ಸುಖ ಇವನಿಗೆ. ಆ ಪುಟ್ಟ ಹೃದಯವನ್ನು ಗೆದ್ದಿದ್ದ ರವಿಯ ಮೇಲೆ ಕೊಂಚ ಈರ್ಷೆಯೇ ಉಂಟಾಯಿತು ಆನಂದನಿಗೆ. ರೆಪ್ಪೆ ಹೊಡೆಯದೆ ನಿರ್ಮಲಳ ಕಡೆಗೇ ನೋಡತೊಡಗಿದ.

ಹೀಗೆ ನೋಡುತ್ತಿದ್ದಂತೆ ಅವನ ಹೃದಯದಲ್ಲಿ ಸಂಶಯದ ಹೊಗೆಯೊಡಲು ಪ್ರಾರಂಭವಾಯಿತು.

ಓದುತ್ತಿದ್ದಾಗ ರವಿಯ ಜೊತೆಯಲ್ಲಿ ಅವನ ಮನೆಗೆ ಎಷ್ಟೋ ಸಾರಿ ಹೋಗಿದ್ದ. ಅವನ ತಾಯಿ ಗೌರಮ್ಮನನ್ನು ಚೆನ್ನಾಗಿ ನೋಡಿದ್ದ. ಚಿಕ್ಕವಾದರೂ ಹೊಳೆಯುವ ಆಕೆಯ ಕಣ್ಣು, ನೀಳವಾಗಿದ್ದು ತುದಿಯಲ್ಲಿ ಸ್ವಲ್ಪ ಬಾಗಿದ್ದ ಮೂಗು, ಕೊಂಚ ಉಬ್ಬಿದ ಗಲ್ಲ. ಇವು ಅವನ ಕಣ್ಣ ಮುಂದೆ ಸುಳಿದವು. ನಿರ್ಮಲ ತದ್ರೂಪು ಆಕೆಯ ಹಾಗೇ ಇದ್ದಾಳೆ ಎನ್ನಿಸಿ, ಕಿಡಿಗಳು ಒಂದಕ್ಕೊಂದು ಸೋಂಕಿ, ಕ್ಷಣಮಾತ್ರದಲ್ಲಿ ದೊಡ್ಡ ಜ್ವಾಲೆ ಭುಗಿಲ್ ಎಂದು ಏಳುವಂತೆ ಸಂಶಯದ ಜ್ವಾಲೆ ಎದ್ದಿತು.

ಆ ಜ್ವಾಲೆಯ ಶಾಖಕ್ಕೆ ಸಿಲುಕಿ ತಾನು ತಳಮಳಿಸುತ್ತಿರುವಹಾಗೆ, ರವಿ...ಸುನೀತ...ದೂರ ನಿಂತು ತನ್ನ ದುರವಸ್ಥೆಯನ್ನು ಕಂಡು ಗಹ ಗಹಿಸಿ ನಗುತ್ತಿರುವಂತೆ ತೋರಿತು. ಅವನ ಮೈ ಆದ್ಯಂತವೂ ಬೆವರಿ, ಬಾಯಲ್ಲಿ ಬಿಸಿಯುಸಿರು ಹೊರ ಹೊಮ್ಮುತ್ತು. ಏನೋ ಒಂದು ರೀತಿಯ ಮೂಕ ಸಂಕಟವನ್ನನುಭವಿಸತೊಡಗಿದ.

ಆನಂದ ಯಾಕೋ ಒಂದು ತರಹ ಇದ್ದಾನೆ, ಮೈ ಸರಿಯಿಲ್ಲವೇನೊ ಎನ್ನಿಸಿತು. ಇನ್ನು ಹೊರಡಬೇಕೆಂದು ಹೇಳಿದ್ದ ರವಿಗೆ,

"ನಾನಿನ್ನು ಬರ್ತೀನಿ ಆನಂದ್. ಹ್ಯಾವ್ ರೆಸ್ಟ್" ಎಂದು ಹೇಳಿ ಹೊರಟುಬಿಟ್ಟ.

ಆನಂದ ಏನನ್ನೂ ಉತ್ತರಿಸಲಿಲ್ಲ. ರವಿಯ ಮುಖವನ್ನು ನೋಡುವುದು ಕೂಡ ಅವನಿಗೆ ಬೇಡವಾಗಿತ್ತು. ಧಿಗ್ಗನೆ ಎದ್ದು ತನ್ನ ಕೊಠಡಿಯೊಳಗೆ ಹೋಗಿ, ಮಂಚದ ಮೇಲೆ ಬಿದ್ದುಕೊಂಡು ಛಾವಣಿಯನ್ನೇ ದಿಟ್ಟಿಸುತ್ತಾ ಮಲಗಿದ.

ಕಾಡಿನ ಒಂದು ಮೂಲೆಯಲ್ಲಿ ಬಿದ್ದ ಕಿಡಿ ಕ್ರಮೇಣ ಇಡೀ ಕಾಡನ್ನೇ ದಹಿಸುವಂತೆ, ಹೃದಯದ ಮೂಲೆಯಲ್ಲಿ ಎದ್ದಿದ್ದ ಸಂಶಯಾಗ್ನಿ ಅವನ ಇಡೀ ಶರೀರವನ್ನೇ ವ್ಯಾಪಿಸುತ್ತಿರುವಂತೆ ತೋರಿತು.

ಹೀಗೇ ಇರಬೇಕು. ಇಲ್ಲದಿದ್ದರೆ ಇದೆಲ್ಲಾ ಹೇಗಾಗುತ್ತಿತ್ತು. ಏನನ್ನೋ ಯೋಚಿಸಿ ನಿರ್ಧರಿಸಿಕೊಂಡಾಗ, ಅವನ ಹೃದಯ ಕೂಗಿ ಹೇಳಿತು.

ಅತಿ ಸಂತಾನ ಪ್ರಿಯರು ತಮಗೆ ಮಕ್ಕಳಿಲ್ಲದೆ ಹೋದರೆ ಇರುವ ಆಸ್ತಿ ಅನ್ಯರ ಪಾಲಾಗುವದಲ್ಲಾ ಎಂದು ಹೆದರುವವರು, ತಾವು ಬಂಜೆಯರಾದರೆ ತಮ್ಮ ಪತಿಗಳು ಮರು ಮದುವೆಯಾದರೆ ಗತಿಯೇನು? ಎಂದುಕೊಳ್ಳುವ ಕೆಲವು ಸ್ತ್ರೀಯರು, ತಮ್ಮ ಪತಿಯಿಂದ ಸಂತಾನ ಭಾಗ್ಯವಿಲ್ಲ ಎಂದು ತಿಳಿದು ಬಂದಾಗ, ಅನ್ಯ ಪುರುಷರ ಮೂಲಕ ಸಂತಾನ ಪಡೆಯುತ್ತಾರೆಂಬುದನ್ನು ಎಷ್ಟೋ ಕಡೆ ಕೇಳಿದ್ದ. ಇದೂ ಹೀಗೆಯೇ ಆಗಲಾರದೇಕೆ?

ನಿರ್ಮಲ ರವಿಯ ತಾಯಿ ಗೌರಮ್ಮನ ರೂಪವನ್ನೇ ಹೊತ್ತಿರುವುದು ಸುನೀತೆಗೆ ಅಷ್ಟು ವರ್ಷಗಳವರೆಗೆ ಆಗದಿದ್ದ ಸಂತಾನ, ರವಿ ಬಂದ ಮೇಲೆ ಆದುದು, ಅವನ ಸಂಶಯಕ್ಕೆ ಪುಷ್ಟಿ ಕೊಡುವ ಕಾರಣಗಳಾಗಿದ್ದವು.

ಎಂತಹ ವಿಶ್ವಾಸಘಾತುಕತೆ? ಕಲಾ ಸೇವಕರೆಂದು ಸಂಗೀತ ಪ್ರೇಮಿಗಳೆಂದು ಹೇಳಿಕೊಂಡು, ರವಿ... ಸುನೀತ ಇದಿರು ಬದಿರಿಗೆ ಕುಳಿತು ಹಾಡುತ್ತಿದ್ದುದು ಕೇವಲ ನಾಟಕ! ತಾನಿಲ್ಲದಿದ್ದಾಗ ವಿಮಲೆಯ ಕಣ್ಣು ತಪ್ಪಿಸಿ ಅದೆಷ್ಟು ಸಾರಿ ಬಂದು ಕುಳಿತುಕೊಳ್ಳುತ್ತಿದ್ದನೊ ಇಲ್ಲಿ! ಸ್ನೇಹದ ತೆರೆಯ ಮರೆಯಲ್ಲಿ ಒಳ್ಳೆಯ ನಾಟಕವನ್ನೇ ಆಡಿದರು.

ಹೀಗೆ ಯೋಚಿಸಿದಂತೆಲ್ಲಾ ಆನಂದನ ವಿಶಾಲ ಮನಸ್ಸು ಕ್ಷಣ ಕ್ಷಣಕ್ಕೂ ಸಂಕುಚಿತವಾಗ ತೊಡಗಿತು. ಹಿಂದಿನದನ್ನೆಲ್ಲಾ ಸಂಕೀರ್ಣ ದೃಷ್ಟಿಯಿಂದಲೇ ಅಳೆಯತೊಡಗಿದ್ದ ಅವನು. ವಿಚಾರ ಮಾಡುವ ಶಕ್ತಿ, ವಿವೇಕ ಎಲ್ಲವನ್ನೂ ಕಳೆದುಕೊಂಡ.

ಸುನೀತ ತನ್ನ ಊಟವನ್ನು ಮುಗಿಸಿ, ಸೀತೆಗೆ ಊಟಕ್ಕೆ ಕೊಟ್ಟು ಕಳುಹಿಸಿ ಆನಂದನ ಕೊಠಡಿಗೆ ಬಂದಳು. ಅವಳು ಒಳಗೆ ಅಡಿಯಿಡುವುದಕ್ಕೆ ಮುಂಚೆಯೆ ಆನಂದ ಎದ್ದು,

"ನನಗೆ ತುಂಬಾ ತಲೆನೋವು ಡೋಂಟ್ ಡಿಸ್ಟರ್ಬ್ ಮಿ, ಹೋಗು" ಎಂದವನೆಗೆ ಧಡಾರನೆ ಬಾಗಿಲು ಮುಚ್ಚಿ, ಬೋಲ್ಟು ಹಾಕಿ ಬಿಟ್ಟ.

ಊಹಿಸಲಾರದ ಅವನ ವರ್ತನೆಯನ್ನು ಕಂಡು ಸುನೀತ ಭೂಮಿಗೆ ಇಳಿದು ಹೋದಳು. ಬಾಗಿಲಲ್ಲೇ ಕುಸಿಯುತ್ತಿದ್ದಂತೆ ಕೆನ್ನೆಯ ಮೇಲೆ ಧಾರೆ ಧಾರೆಯಾಗಿ ಕಣ್ಣೀರಿಳಿಯ ತೊಡಗಿತು.

ಏನಾಯಿತು ಇವರಿಗೆ? ಬುದ್ಧಿಯೇನಾದರೂ ವಿಕಲ್ಪವಾಗಿದೆಯೇ? ಇಲ್ಲವೆ ನನ್ನ ಮೇಲೇನಾದರೂ ಕೋಪವೆ? ಅಲ್ಲಿದ್ದಾಗ ಪತ್ರಗಳನ್ನು ತಡವಾಗಿ ಬರೆಯುತ್ತಿದ್ದೆನೆಂದೆ? ಹಾಗೇನಾದರೂ ಇದ್ದಲ್ಲಿ ಬಾಯಿಬಿಟ್ಟು ಕೇಳಬಹುದಿತ್ತಲ್ಲವೆ? ಅಷ್ಟಕ್ಕೇ ಧಡೀರೆಂದು ಬಾಗಿಲು ಹಾಕಿಕೊಳ್ಳುವ ಪ್ರಮೇಯವೇನಿತ್ತು? ಅಥವ ಕುಡಿಯುವ ಅಭ್ಯಾಸವನ್ನೇನಾದರೂ ಮಾಡಿಕೊಂಡಿದ್ದಾರೊ ಏನೊ? ನಾನು ನೋಡಿದರೆ ಅಡ್ಡಿಪಡಿಸಬಹುದೆಂದು ಹೆದರಿ ತಲೆ ನೋವೆಂತ ನೆಪ ಹೇಳಿದ್ರೂ ಏನೋ!

ದೊಡ್ಡ ಕೆಲಸ, ದೊಡ್ಡ ಸಂಬಳ, ಪ್ರೀತಿಸೋ ಪತಿ, ಮುದ್ದಾಗಿರೋ ಮಗಳು, ಇನ್ನೇನು ಬೇಕು ಎಂದುಕೊಂಡಿದ್ದೆ. ಆದರೆ ಈಗ ಆಗುತ್ತಿರುವುದೇನು? ಮೊದಲು ಮಕ್ಕಳಿಲ್ಲವಲ್ಲಾ ಎನ್ನುವ ಕೊರಗನ್ನು ಹಚ್ಚಿಕೊಂಡು ಅವರ ಮನಸ್ಸನ್ನು ಬೇಸರಪಡಿಸುತ್ತಿದ್ದೆ. ಈಗ ಸಂತಸ ನಲ್ಮೆಯಿಂದ ಅವರ ಮನ ತುಂಬ ಬೇಕು. ಬಾಳನ್ನು ಹಾಲ್ಗಡಲನ್ನಾಗಿ ಮಾಡ ಬೇಕು. ಸುಖದ ನೆಲೆವೀಡಾಗಬೇಕು. ಹೀಗೇ ಆಶೆಯ ಕುಸುಮಗಳನ್ನು ಹೊತ್ತು ಆನಂದನಿಗಾಗಿ ಕಾದಿದ್ದೆ. ಆದರೆ ಆ ಕುಸುಮಗಳು ಬತ್ತಿ ಹೋಗಿ ಹುಡಿಗೂಡಬೇಕೆ ? ಎನ್ನಿಸಿ ಅವಳಿಗೆ ಅಪಾರ ದುಃಖವಾಯಿತು.

ಓ ನಾನು ಎಷ್ಟೋ ಆಶೆ ಇಟ್ಟುಕೊಂಡು ನಿಮಗಾಗಿ ಕಾದಿದ್ದೆನಲ್ಲಾ. ನನಗಿನ್ನಾರು ದಿಕ್ಕು ನೀವು ಮುನಿದರೆ! ಪ್ರಲಾಪಿಸತೊಡಗಿದಳು.

ಸುನೀತ ಜೋರಾಗಿ ಅಳುತ್ತಿರುವುದನ್ನು ಕೇಳಿ ಕಸಿವಿಸಿಯಾಯಿತು ಆನಂದನಿಗೆ. ಮತ್ತು ಇಳಿದು ಮೇಲೆ ಬುದ್ಧಿ ಸ್ವಲ್ಪ ಸ್ಥಿಮಿತಕ್ಕೆ ಬರುವಂತೆ ಕೋಪವಿಳಿದು ಸ್ವಲ್ಪ ಸಮಾಧಾನವಾಯಿತು. ಹಾಗೇ ಯೋಚಿಸತೊಡಗಿದ.

ಈಗ ಆದದ್ದು ಆಗಿ ಹೋಗಿದೆ. ನಾನು ಹೀಗೆ ಬೇಸರಪಟ್ಟುಕೊಂಡರೆ ಮನಸ್ಸಿಗೆ ಶಾಂತಿಯೇ ಇಲ್ಲವಾಗಬಹುದು. ಸುಮ್ಮನೆ ಕೂಗಾಡಿದರೆ ತನ್ನ ಮಾನವೆ ಅಲ್ಲವೆ ಹೋಗುವುದು? ಸಮಾಧಾನದಿಂದ ಪರೀಕ್ಷಿಸಿ ಅವಳಿಗೆ ಬುದ್ಧಿ ಹೇಳಿ ಮುಂದಿನದನ್ನು ಯೋಚಿಸಬೇಕು. ಈಗ ದುಡುಕುವುದರಿಂದ ಯಾವ ಪ್ರಯೋಜನವೂ ಇಲ್ಲ. ಹೀಗೆ ನಿರ್ಧರಿಸಿ ಮೆಲ್ಲಗೆ ಹೋಗಿ ಬಾಗಿಲು ತೆರೆದು ಮತ್ತೆ ಹಾಗೆಯೇ ಮಲಗಿದ.

ಸರ್ರನೆ ಒಳಗೆ ನುಗ್ಗಿದಳು ಸುನೀತ. ಆನಂದನ ಪಾದಗಳನ್ನು ಹಿಡಿದು ನೆಲದ ಮೇಲೆ ಮಂಡಿಯೂರಿ ಕುಳಿತಳು. ಸತತವಾಗಿ ಸುರಿವ ಕಣ್ಣೀರಿನ ಧಾರೆ ಅವನ ಪಾದಗಳನ್ನು ತೊಳೆಯತೊಡಗಿತು.

ಆನಂದ ಅಲುಗಾಡದೇ ಹಾಗೇ ಬಿದ್ದುಕೊಂಡಿದ್ದ. ಸಾಂತ್ವನದ ಒಂದು ಮಾತೂ ಅವನ ಬಾಯಿಂದ ಹೊರ ಬರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ತನಗೆ ತಾನೇ ಸಮಾಧಾನ ಮಾಡಿಕೊಂಡು ಅವನ ಕಡೆ ನೋಡಿದಳು ಸುನೀತ.

ಆನಂದನ ಕಣ್ಣುಗಳಿನ್ನೂ ಕೆಂಪಾಗಿಯೇ ಇದ್ದವು. ಅವನ ಕ್ರಾಪು ಚದುರಿ ಹೋಗಿ ಒಂದು ರೀತಿಯ ಮಲಿನತೆ ಮುಸುಕಿತ್ತು.

ಸುನೀತಗೀಗ ಒಂದು ರೀತಿಯ ಸಂದೇಹವಾಗತೊಡಗಿತು. ಬಹುಶಃ ಕುಡಿಯಲೆಂದು ಹಾಗೆ ಮಾಡಿದರೊ ಏನೊ! ಕಣ್ಣೀರೊರೆಸಿಕೊಳ್ಳುತ್ತಾ ಕೇಳಿದಳು.

"ನಿಮಗೆ ಅಷ್ಟು ಕುಡಿಯುವ ಚಟವಿದ್ದರೆ ನನ್ನ ಅಂಜಿಕೆಯೇಕೆ? ಕಲಿತ ಚಟವನ್ನು ಇದ್ದಕ್ಕಿದ್ದಂತೆ ಬಿಡುವುದು ಕಷ್ಟವೆ ಎನ್ನುವುದು ನನಗೇನೂ ಗೊತ್ತಿಲ್ಲವೆ?"

ಇದನ್ನು ಕೇಳಿದ ಆನಂದನ ತುಟಿಗಳ ಮೇಲೆ ನೀರಸ ನಗೆಯೊಂದು ತೇಲಿ ಬಂತು ಅಷ್ಟೆ, ಏನೂ ಹೇಳಲಿಲ್ಲ.

ಅವನು ಮೌನವಾಗಿದ್ದುದನ್ನು ನೋಡಿ ತಾನು ಊಹಿಸಿದ್ದುದು ನಿಜವೆನ್ನಿಸಿತು. ನಾಚಿಕೆಯಾಗಿರಬೇಕು. ಅದಕ್ಕೇ ಸುಮ್ಮನಿದ್ದಾರೆ. ಎನ್ನಿಸಿ ಅವಳ ಮುಖದ ಮೇಲೆ ಗೆಲುವು ಮೂಡಿತು.

"ಈಗ ಕುಡಿಯುತ್ತೀರಿ. ಕಲಿತು ಬಂದಿದ್ದೀರಿ ಅಭ್ಯಾಸ ಸುತ್ತೆ. ಮುಂದೆ ಬೇಡವೆನಿಸಿದರೆ ಅದನ್ನು ನೀವಾಗಿಯೇ ಬಿಡುತ್ತೀರಿ. ರವಿ ಎಷ್ಟು ಸೇದುತ್ತಿದ್ದರೆಂದು ನಿಮಗೆ ಗೊತ್ತಿಲ್ಲವೆ? ವಿಮಲ ಎಷ್ಟು ಹೇಳಿದ್ದರೂ ಬಿಟ್ಟಿರಲಿಲ್ಲ. ಈಗ ತಾವಾಗಿಯೇ ಬಿಟ್ಟಿದ್ದಾರೆ. ನೀವೂ ಹಾಗೇ ಒಂದು ದಿನ ಪೂರ್ತಿಯಾಗಿ ಬಿಟ್ಟು ಬಿಡುತ್ತೀರೆಂದು ನನಗೆ ಗೊತ್ತು."

ಸುನೀತ ಮಂಚವೇರಿ ಆನಂದನ ತಲೆದೆಸೆಯಲ್ಲಿ ಕುಳಿತಿದ್ದಳು. ಅವಳ ಬೆರಳುಗಳು ಅವನ ಕ್ರಾಪಿನ ಮೇಲೆ ನಾಜೂಕಾಗಿ ಚಲಿಸುತ್ತಿದ್ದವು.

ರವಿ...ರವಿ...ಯಾವಾಗಲೂ ಅವನ ಸ್ಮರಣವೇ ಇವಳಿಗೆ. ಅವಳ ಸುಳಿ ಬೆರಳುಗಳು ಚೇಳುಗಳ ಹಾಗೆ ಕುಟುಕಿದಂತಾಯಿತು ಅವನಿಗೆ. ಎರಡೂ ಕೈಗಳಿಂದ ತನ್ನ ತಲೆಯಿಂದ ಭದ್ರವಾಗಿ ಹಿಡಿದುಕೊಂಡ.

"ತಲೆ ನೋವೆ? ಎಲ್ಲಿ ಹಾಗೇ ಒತ್ತುತ್ತೀನಿ ಸ್ವಲ್ಪ" ಅವನ ಕೈಗಳನ್ನು ಸರಿಸಿ, ಸುನೀತಳ ಕೋಮಲ ಕರಗಳು ಅವನ ಹಣೆಯ ಮೇಲೆ ನಿಂತವು.

ಹೃದಯದಲ್ಲಿ ಕಹಿ! ಬಾಯಲ್ಲಿ ಸಿಹಿ! ಓ ನಾರಿ ನಿನ್ನನ್ನು ಬ್ರಹ್ಮನು ಹೂವು, ಮಧು, ಮಣ್ಣು ಮತ್ತು ಸ್ವಲ್ಪ ವಿಷವನ್ನು ಬೆರೆಸಿ ಸೃಷ್ಟಿಸಿದ್ದಾನೆಂದು ಕೇಳಿದ್ದೆ. ಇಲ್ಲ ಇಲ್ಲ, ಅವನು ಕೇವಲ ವಿಷದಿಂದಲೇ

ಹಿನ್ನಷ್ಟು ತೃಪ್ತಿಪಿರಬೇಕು. ಎಂದು ಒಳಗೊಳಗೇ ಸಿಟ್ಟಿನಿಂದ ಅಂದುಕೊಂಡ ಆನಂದ.

ಸುನೀತ ಎಷ್ಟೋ ಹೊತ್ತಿನವರೆಗ ಅವನ ತಲೆಯನ್ನು ಒತ್ತುತ್ತಲೇ ಕುಳಿತಿದ್ದಳು. ಆನಂದ ಅನ್ಯ ಮನಸ್ಕನಾಗಿ ಹಾಗೇ ಮಲಗಿದ್ದ.

ಸುನೀತಳ ಮನಸ್ಸಿನಲ್ಲಿ ಮಾತ್ರ ಭಯ, ಸಂದೇಹ ನಿರಾಶೆಯ ಅಲೆಗಳು ಒಂದೊಂದಾಗಿ ಏಳುತ್ತಲೇ ಇದ್ದವು.

ಇದಾದ ಎರಡು ದಿನಗಳಲ್ಲಿ ಆನಂದ ತನ್ನ ಬಟ್ಟೆ ಬರೆಗಳನ್ನು ಸರಿಯಾಗಿಡಲೆಂದು ಬೀರುವಿನ ಬಾಗಿಲನ್ನು ತೆಗೆದ. ಅದರಲ್ಲಿ ಸುನೀತಳ ಸೀರೆಗಳು ನಿರ್ಮಲೆಯ ಬಟ್ಟೆ ಬರೆಗಳು ತುಂಬಿದ್ದವು. ಒಂದು ಕಡೆ. ಪ್ಲಾಸ್ಟಿಕ್ ಕವರಿನಲ್ಲಿದ್ದ ಹೊಸಾ ಹೊಸಾ ಸೀರೆ ಕಣ್ಣಿಗ ಬಿತ್ತು. ತೆಗೆದುಕೊಂಡು ನೋಡಿದ. ಗಳಿಗೆಯನ್ನು ಸಹ ಬಿಚ್ಚಿರಲಿಲ್ಲ. ಸುನೀತಳೇ ಕೊಂಡಳೋ...ಅಥವ ರವಿಯೇ ಕೊಡಿಸಿದನೊ ತಿಳಿಯುವ ಕುತೂಹಲ ಉಂಟಾಯಿತು ಅವನಿಗೆ.

ಇಷ್ಟರಲ್ಲಿ ಯಾತಕ್ಕೋ ನಿರ್ಮಲ ಅಲ್ಲಿಗ ಬಂದಳು. ಅವಳನ್ನು ಹತ್ತಿರ ಕರೆದು ಕೇಳಿದ.

"ಈ ಸೀರೆ ತುಂಬಾ ಚೆನ್ನಾಗಿದೆ ನಿರ್ಮಲ. ಅಮ್ಮ ಇದನ್ನು ಯಾವಾಗ ಕೊಂಡುಕೊಂಡಳು?"

"ಓ ಇದನ್ನೇ! ಭದ್ರಾವತೀಲಿ ತಗೊಂಡ್ವಿ."

"ಭದ್ರಾವತಿಯಲ್ಲೇ? ಯಾವಾಗ ಹೋಗಿದ್ರಿ ಅಲ್ಲಿಗೆ? ಯಾರು ಯಾರು ಹೋಗಿದ್ರಿ?"

"ನಾನು ಅಮ್ಮ ಡ್ಯಾಡಿ ಹೋಗಿದ್ವಿ ಕಾರ್ನಲ್ಲಿ. ನನ್ನ ಈ ಹೊಸ ಫ್ರಾಕು, ಈ ಕಿವೀದು, ಎಲ್ಲಾ ಅಲ್ಲೇ ತಗೊಂಡಿದ್ದು" ಎಂದು ತನ್ನ ಫ್ರಾಕು ಕಿವಿಯನ್ನು ಮುಟ್ಟಿ ತೋರಿಸಿದಳು ನಿರ್ಮಲ.

"ಹಾಗಾದ್ರೆ ಈ ಸೀರೇನೂ ಅಲ್ಲೇ ಕೊಂಡಿದ್ದಲ್ವೆ"

"ಹೂಂ...ಅಲ್ಲೇ . ಅಮ್ಮ ಬೇಡಾಂದ್ರು. ಇರ್ಲಿ ತಗೋಂತ ಹೇಳಿ ಡ್ಯಾಡಿ ತಗೊಂಡ್ರು."

ಆ ಸೀರೆಯನ್ನು ಆಗಲೇ ಸುಟ್ಟು ಹಾಕಿ ಬಿಡುವಷ್ಟು ಕೋಪ ಬಂದಿತ್ತು ಆನಂದನಿಗೆ. ಹಲ್ಲು ಕಡಿಯುತ್ತಾ ಸಿಟ್ಟಿನಿಂದ ಒಂದು ಕಡೆ ಎಸೆದುಬಿಟ್ಟ. ಆ ಪ್ರೇಮಿಯಿಂದ ಈ ಪ್ರೇಮಿಕೆಗೆ ಇನ್ನೂ ಎಂತೆಂತಹ ಉಪಹಾರಗಳು ಬಂದಿವೆಯೊ ನೋಡಬೇಕು. ಎಂದುಕೊಂಡು ಮೆಲ್ಲಗೆ ಒಡವೆ ಪೆಟ್ಟಿಗೆಗೆ ಕೈ ಹಾಕಿದ.

ಅದನ್ನು ತೆಗೆಯುತ್ತಿದ್ದಂತೆಯೆ ನಿಗಿ ನಿಗಿ ಹೊಳೆಯುವ ನೆಕ್‌ಲೇಸು ಅವನ ಕಣ್ಣನ್ನು ಚುಚ್ಚಬೇಕೆ?

ಇಷ್ಟರಲ್ಲೇ ಒಳಗೇನೋ ಕೆಲಸ ಮಾಡುತ್ತಿದ್ದ ಸುನೀತ ಅಲ್ಲಿಗೆ ಬಂದಳು. ಆನಂದ ನೆಕ್ ಲೇಸನ್ನು ಹಿಡಿದು ನೋಡುತ್ತಿರುವುದನ್ನು ಕಂಡು,

"ಓ ಅದು ಅಲ್ಲೇ ಇರಲಿ, ಮುಟ್ಟಬೇಡಿ. ನಗುತ್ತಲೇ ಹೇಳಿದಳು.

ಅವನು ತಂದುಕೊಟ್ಟದ್ದಲ್ಲವೆ? ಮುಟ್ಟಿದರೆ ಮಾಸಿ ಹೋಗುವುದು ಎಂದೇನೊ!

"ಯಾತಕ್ಕೆ ಇದನ್ನು ಕೊಂಡಳೂಂತ ಯೋಚಿಸ್ತಿರಬೇಕಲ್ಲವೆ ನೀವು? ಭದ್ರಾವತಿಗೆ ಹೋಗಿದ್ದಾಗ ಅಂಗಡಿಯವನೆ ಬಲವಂತಕ್ಕೆ ಕೊಂಡಿದ್ದಾಯ್ತು: ರವಿಯ ಹೆಂಡತಿ ಬರ್ತಾಳಲ್ಲಾ ಅವಳಿಗೇಂತ ಹಾಗೇ ಇಟ್ಟಿದೀನಿ. ನಾನು ಯಾತಕ್ಕೆ ಹಾಕ್ಕೊಳ್ಳಿ ಹೇಳಿ ಇದನ್ನ. ನನಗೇನು ಕಡಿಮೆ ಮಾಡಿದೀರಿ ನೀವು?"

ಅವಳು ಹೇಳಿದುದನ್ನು ಕೇಳಿ

ಕಥೆ ಕಟ್ಟಿ ಅದನ್ನು ಬಣ್ಣ: ಬಳಿಯುವ ಕಲೆಯನ್ನೂ ಚೆನ್ನಾಗಿಯೇ ಅಭ್ಯಾಸ ಮಾಡಿದಾಳೆ. ಏನೂ ತಿಳಿಯದ ಹುಡುಗ ಎಂದುಕೊಂಡಿರಬೇಕು. ನನ್ನನ್ನ. ತನ್ನ ಹುಳುಕು ಹೊರ ಬೀಳಬಾರದೆಂದು, ಯಾವ ರೀತಿಯಿಂದಲೊ ಮುಚ್ಚಿಡಲು ಹೋಗುತ್ತಾಳೆ. ನನಗೆ ಅಷ್ಟು ತಿಳಿಯುವುದಿಲ್ಲವೆ ? ಅಂಗೈ ಹುಣ್ಣಿಗೆ ಕನ್ನಡಿ ಯಾಕೆ ಬೇಕು ಎನ್ನಿಸಿತು ಆನಂದನಿಗೆ.

ಅವನ ಚಿತ್ತಸ್ವಾಸ್ಥ್ಯ ಕೆಟ್ಟು ಹೋಯಿತು. ಏನೋ ತಳಮಳ ಎಂಥದೋ ಯಾತನೆ ಉಂಟಾಯಿತು. ಬಟ್ಟೆಗಳನ್ನೆಲ್ಲಾ ಹೇಗೆ ಹೇಗೋ ತುರುಕಿ, ಬೀರುವಿನ ಬಾಗಿಲು ಮುಚ್ಚಿ ಬಂದು ಕಿಟಕಿಯ ಹತ್ತಿರದಲ್ಲಿದ್ದ ಕುರ್ಚಿಯಲ್ಲಿ ಕುಸಿದು ಕುಳಿತ.

"ಬಾ ಸುನೀತ ಕೂತ್ಕೊ" ಹೊರಗೆ ಹೋಗಲಿದ್ದ ಸುನೀತಳನ್ನು ಕರೆದ.

ಸುನೀತ ಹಾಗೇ ಹಿಂತಿರುಗಿ ಬಂದು ಇನ್ನೊಂದು ಕುರ್ಚಿಯಲ್ಲಿ ಕುಳಿತಳು.

"ಯಾವಾಗ ಸುನೀತ ರವಿಯ ಮದುವೆ? ಹೆಣ್ಣು ನೋಡಿದ್ದೀಯೇನು?"

"ಅವರು ಮೊದಲು ಮದುವೆಗೆ ಒಪ್ಪಿದರಲ್ಲವೆ, ಹೇಳು ಯಾವುದು? ಮದುವೆ ಯಾವಾಗ ಎಂದು ನಿಶ್ಚಯಿಸಿವುದು ?"

"ನೀನು ಕೇಳಲಿಲ್ಲವೆ?"

"ನಾನು ಎಷ್ಟೋ ಸಾರಿ ಕೇಳಿ ನೋಡಿದೆ. ಅವರು ಒಪ್ಪುತ್ತಲೇ ಇಲ್ಲ. ನೀವು ಬಂದ ಮೇಲೆ ನೋಡಿಕೊಂಡರಾಯಿತು ಎಂದುಕೊಂಡೆ.. ನೀವು ಕೇಳಿ ನೋಡಿ ಏನನ್ನುತ್ತಾರೊ"

"ಓ! ನಾನು ಬಂದ ಮೇಲೆ ನೋಡಿದರಾಯಿತೆಂದು ಸುಮ್ಮನಾದಳಂತೆ. ಇದುವರೆಗೆ ಸರಸವಾಡಲು ಅವನು ಬೇಕಾಗಿತ್ತಲ್ಲ! ಈಗ ನಾನು ಬಂದಿರೋವಾಗ ಹಾಗಿರಲು ಸಾಧ್ಯವಿಲ್ಲವಲ್ಲ. ಅದಕ್ಕೇ ಈಗ ಅವನಿಗೆ ಮದುವೆ ಮಾಡಿಸಲು ನಾನು ಹೋಗಬೇಕಂತೆ!" ಎಂದು ಯೋಚಿಸಿಕೊಳ್ಳುತ್ತಾ ಸುಮ್ಮನಿದ್ದ ಆನಂದ.

ಅವನು ಏನನ್ನು ಯೋಚಿಸುತ್ತಿರುವನೆಂದು ಸುನೀತೆಗೆ ಹೇಗೆ ತಿಳಿಯಬೇಕು? ಹೇಳಿದಳು.

"ರವಿ ಬರ್ತಾರಲ್ಲ ಕೇಳಿ" ಎನ್ನುತ್ತಾ ಅಲ್ಲಿಂದ ಎದ್ದು ಹೋದಳು.

ಅವಳು ಹೊರಟು ಹೋದ ಮೇಲೆ ಕಿಟಕಿಯ ಕಡೆ ತಿರುಗಿ ಆಗಸವನ್ನೇ ದಿಟ್ಟಿಸ ತೊಡಗಿದ ಆನಂದ. ನೀಲಿಯ ಆಕಾಶ ನಿರ್ಮಲವಾಗಿತ್ತು. ಹಾಗೆಯೇ ನೋಡುತ್ತಿದ್ದಂತೆ ಮೋಡಗಳ ತುಣುಕುಗಳು ಬಂದು ಮುಸುಕಿದವು. ಶುಭ್ರವಾಗಿದ್ದ ಆಕಾಶದ ಆ ಭಾಗ ತುಂಬಾ ಗಜಿಬಿಜಿಯಾಗಿ ಕಂಡು ಬಂದಿತು.

ತನ್ನ ಸಂಸಾರವೂ ಹೀಗೇ ಅಲ್ಲವೆ? ಸುಖ ಶಾಂತಿಗಳಿಂದ ಕೂಡಿದ ಸುಂದರ ಸಂಸಾರ ರವಿಯಿಂದಾಗಿ ಅಂದಗೆಟ್ಟಿತು ಎಂದು ಭಾರವಾಗಿ ನಿಡುಸುಯ್ದ.

ರವಿ ಮಧ್ಯಾಹ್ನ ಬಂದಾಗ ಅವನ ಮದುವೆಯ ಸುದ್ದಿಯನ್ನೆತ್ತಿದ.

"ಮುಂದೆ ಏನು ಯೋಚಿಸಿದ್ದೀಯ ರವಿ? ಸುಮ್ಮ ಮದುವೆಯಾಗಿ ಒಂದು ಕಡೆ ಸೆಟಲ್ ಆಗೋದು ಒಳ್ಳೆಯದು ಅನ್ನಿಸುತ್ತೆ."

"ನನಗೆ ಇಷ್ಟವೇ ಇಲ್ಲ ಆನಂದ್. ಆ ವಿಷಯವಾಗಿ ನಾನು ಯೋಚಿಸಿ ಕೂಡಾ ನೋಡಿಲ್ಲ."

"ಸುನೀತಳೇನೂ ಇಲ್ಲೇ ಇರೋದಿಲ್ವಲ್ಲಾ? ಇಷ್ಟರಲ್ಲೇ ನನಗೆ ಛೇಂಜ್ ಆದ್ರೂ ಆಗಬಹುದು."

ಸುನೀತ ಇಲ್ಲಿರೋದಕ್ಕೂ ನಾನು ಒಬ್ಬೊಂಟಿಗನಾಗಿರೋದಕ್ಕೂ ಏನು ಸಂಬಂಧ? ಆನಂದ ಯಾಕೆ ಹೀಗೆ ಹೇಳುತ್ತಿದ್ದಾನೊ ಅರ್ಥವಾಗಲಿಲ್ಲ ರವಿಗೆ. ನಿಮ್ಮಿ ಇಲ್ಲೇ ಇರೋದಿಲ್ವಲ್ಲಾ ಅಂದಿದ್ದರೆ ಅದಕ್ಕಾದರೂ ಒಂದು ಅರ್ಥವಿರುತ್ತಿತ್ತು. ಹೀಗೇಕೆ ಕೇಳಿದನೊ ಎಂದು ಬೇಸರವೇ ಆಯಿತು ಅವನಿಗೆ.

ಇದ್ದಕ್ಕಿದ್ದ ಹಾಗೆ ವಿಮಲೆಯಿದ್ದಾಗ, ತಾವು ನಾಲ್ಕು ಜನ ಸಂತೋಷದಿಂದ ಕಾಲ ಕಳೆಯುತ್ತಿದ್ದ ಆ ಸುಂದರ ದಿನಗಳ ನೆನಪಾಗಿ ವ್ಯಥೆಯ ರೇಖೆಗಳು ಅವನ ಮುಖದಲ್ಲಿ ಮೂಡಿ ಆನಂದ ಬೇರೆ ರೀತಿಯಲ್ಲಿ ಅರ್ಥ ಮಾಡಿಕೊಳ್ಳಲು ಅವಕಾಶ ಮಾಡಿಕೊಟ್ಟಂತಾಯಿತು.

"ಯಾವಾಗ ಆಗಬಹುದು? ಏನಾದರೂ ತಿಳಿಯಿತೆ?" ಅಧೀರನಾಗಿ ಕೇಳಿದ ರವಿ.

"ಯಾವಾಗ ಮಾಡುತ್ತಾರೆಂದು ತಿಳಿಯದು. ಅವರಾಗಿ ಮಾಡವವರೆಗೂ ನಾನು ಸುಮ್ಮನೆ ಕುಳಿತುಕೊಂಡಿರಲಿಕ್ಕಾಗುತ್ತದೆಯೆ? ನಾನೇ ಕೇಳಿ ಛೇಂಜ್ ಮಾಡಿಸಿಕೊಳ್ಳಬೇಕು. ಇಲ್ಲೇನು ಒಂದು ಸರಿಯಾದ ಸ್ಕೂಲಾದರೂ ಇದೆಯೆ ನಿರ್ಮಲಾನ ಸೇರ್ಸೋದಕ್ಕೆ ? ಅವಳ ವಿದ್ಯಾಭ್ಯಾಸದ ದೃಷ್ಟಿಯಿಂದಲಾದರೂ ಹೋಗಬೇಕಾಗುತ್ತದಲ್ಲಾ ?"



ನಿರ್ಮಲ ತನ್ನ ಕಣ್ಮಣಿ. ಅವಳನ್ನು ತನ್ನ ಕಣ್ಣ ಮುಂದಿಟ್ಟುಕೊಂಡೇ ವಿದ್ಯಾಭ್ಯಾಸ ಮಾಡಿಸಬೇಕೆಂಬ ಆಸೆಯಿತ್ತು ರವಿಗೆ. ಸಂಗೀತವನ್ನು ಚೆನ್ನಾಗಿ ಕಲಿಸಬೇಕು. ಅವಳು ಹಾಡುವುದನ್ನು ಮೈಮರೆತು ಕೇಳಬೇಕು ಎಂದೆಲ್ಲಾ ಲೆಕ್ಕ ಹಾಕಿಕೊಂಡಿದ್ದ.

ನಿರ್ಮಲಳನ್ನು ಅಗಲುವುದು ಸಾಧ್ಯವೆ? ವಿಮಲೆಯ ಪ್ರತಿರೂಪ ಅವಳು. ತಮ್ಮಿಬ್ಬರ ಪ್ರೇಮದ ಫಲ. ಇವಳಿಂದಲೆ ಅಲ್ಲವೇ ವಿಮಲೆ ಇಲ್ಲದ ದುಃಖವನ್ನು ಮರೆಯಲು ಸಾಧ್ಯವಾದುದು! ಅವಳ ಅಗಲುವಿಕೆಯ ಕಲ್ಪನೆಯೇ ಭರಿಸಲಸಾಧ್ಯವಾದ ನೋವನ್ನುಂಟು ಮಾಡಿತು. ಮುಚ್ಚು ಮರೆಯೇಕೆ? ಎಲ್ಲವನ್ನೂ ಬಿಡಿಸಿ ಹೇಳಿ ಬಿಡಲೆ ಎನ್ನಿಸಿತು. ಆದರೆ ಮರುಕ್ಷಣ ಸುನೀತಳ ಸ್ಥಿತಿಯೇನಾಗುತ್ತದೋ, ದುಃಖ ನಿರಾಶೆಯಿಂದ ಮನೋ ವಿಕಾರವಾದರೆ ಅದನ್ನು ನೋಡುವುದಕ್ಕಾದರೂ ಆದೀತೆ! ಆಗ ತನಗಾದರೂ ಆನಂದನಿಗಾದರೂ ಸುಖವೆ? ತನ್ನ ಬಾಳು ಹೇಗೋ ದುಃಖಮಯವಾಗಿದೆ. ಜೊತೆಗೆ ಆನಂದನ ಬಾಳನ್ನೂ ಏಕೆ ನೀರಸವನ್ನಾಗಿ ಮಾಡಬೇಕು? ಅವನ ಬಾಳು ನೆಮ್ಮದಿಯಾಗಿದ್ದರೆ ನಿರ್ಮಲಾಗೂ ಸುಖ ಎಂದುಕೊಂಡು ಆ ವಿಚಾರವನ್ನು ಹಿಂದಕ್ಕಟ್ಟಿದ.

ರವಿ ಸುಮ್ಮನೆ ಕುಳಿತಿದ್ದುದನ್ನು ನೋಡಿ, ಒಳಗೇ ಕುದಿಯತೊಡಗಿದ ಆನಂದ, ಕೊನೆಗೆ ಗಡುಸಾಗಿಯೇ ಹೇಳಿದ.

"ನೀನು ಯಾಕೆ ಮ್ಯಾರೇಜ್‌ಗೆ ಒಪ್ತಿಲ್ಲಾನ್ನೋದು ಗೊತ್ತು, ರವಿ. ನಿನ್ನ ಬಾಳು ಹಾಳಾಯಿತೆಂದು ಇನ್ನೊಬ್ಬರ ಸಂಸಾರಕ್ಕೆ ಕೊಳ್ಳಿ ಹಚ್ಚುವ ಕಾರ್ಯವನು ಬಿಟ್ಟು ಬಿಡು".

ಹೀಗೆಂದವನೆ ಧಿಗ್ಗನೆದ್ದು ತನ್ನ ಕೊಠಡಿಗೆ ಹೋಗಿ ಬಿಟ್ಟ ಆನಂದ.

ರವಿ ಮೂಕ ವಿಸ್ಮಿತನಾಗಿ ಅದೆಷ್ಟೋ ಹೊತ್ತಿನವರೆಗ ಕಲ್ಲಿನಂತೆ ಕುಳಿತಲ್ಲೇ ಕುಳಿತಿದ್ದ.

"ಡ್ಯಾಡೀ..." ಎಂದು ನಿರ್ಮಲ ಮುದ್ದಾಗಿ ಮಾತನಾಡಿಸಿಕೊಂಡು ಬಂದಾಗ, ಕಣ್ಣೀರು ತಾನಾಗಿಯೇ ನುಗ್ಗಿ ಬಂತು. ನಿರ್ಮಲ ನೋಡಿಯಾಳೆಂದು ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಂಡರೂ ಸಹ ಅವಳು ಕಣ್ಣೀರನ್ನು ನೋಡಿಯೇ ಬಿಟ್ಟಳು.

"ಅಳ್ತಿದೀಯ ಡ್ಯಾಡಿ...ನೀನತ್ರೆ ನಂಗೂ ಅಳು ಬರುತ್ತೆ."

ಹೀಗನ್ನುತ್ತಿದ್ದಂತೆ ರವಿ ಅವಳನ್ನು ಎತ್ತಿ ಬಿಗಿಯಾಗಿ ಅಪ್ಪಿಕೊಂಡ.

ತನ್ನ ಹಾಗೂ ಸುನೀತಳ ವಿಷಯದಲ್ಲಿ ಕೆಟ್ಟ ಭಾವನೆಯನ್ನಿಟ್ಟುಕೊಂಡಿದ್ದಾನೆ ಆನಂದ. ಈ ಸಂಶಯದಿಂದ ತನ್ನ ಅವನ ಗೆಳೆತನದ ಪವಿತ್ರ ಬಂಧನವನ್ನೂ ಕಡಿದೆಸೆಯಲು ಸಿದ್ಧನಾಗಿದ್ದಾನೆ. ಇನ್ನು ಮೇಲೆ ತಾನು ಇಲ್ಲಿಗೆ ಬರದೆ ಇರುವುದೇ ಮೇಲು. ಎಂದು ಸ್ವಲ್ಪ ಹೊತ್ತಿನ ಮುಂಚೆ ನಿರ್ಧರಿಸಿಕೊಂಡಿದ್ದ.

ಈಗ ನಿರ್ಮಳಳನ್ನು ಅಪ್ಪಿದಾಗ ಆ ನಿರ್ಧಾರ ಸಡಿಲುವ ಸ್ಥಿತಿಗೆ ಬಂದಿತು.

"ಓ ಮರಿ! ನಿನ್ನ ಹೇಗೆ ಬಿಟ್ಟಿರಲಿ?" ಎಂದು ಕನಲಿತು ಅವನ ಹೃದಯ.

ಆದರ ನಿರ್ಮಲಳ ಏಳಿಗೆಗಾಗಿ, ಸುನೀತಳ ಸಂತೋಷಕ್ಕಾಗಿ ಆನಂದನ ತೃಪ್ತಿಗಾಗಿ ನೋವಿನ ಕಡಲನ್ನು ಹೃದಯದಲ್ಲಿ ಅಡಗಿಸಿಕೊಳ್ಳಲೇ ಬೇಕು. ಇದರ ಹೊರತು ಬೇರೆಯ ಮಾರ್ಗವೇ ಇಲ್ಲ. ಎಂದು ನಿಶ್ಚಯಿಸಿದ. ಈಗ ತಾನು ಕಣ್ಣೀರು ಹಾಕಿದ್ದಕ್ಕೆ ಸರಿಯಾದ ಕಾರಣವನ್ನು ಹೇಳಿ ಮಗುವನ್ನು ಸಮಾಧಾನಪಡಿಸಬೇಕಲ್ಲಾ!

"ಆಸ್ಪತ್ರೇಲಿ ಒಂದು ಮಗೂಗೆ ತುಂಬಾ ಕಾಯಿಲೆಯಾಗಿದೆ ನಿರ್ಮಲ. ಅದು ನರಳುತ್ತಿದ್ದುದನ್ನು ನೆನೆಸಿಕೊಂಡೆ ಸಂಕಟವಾಯ್ತು ಅಷ್ಟೆ. ಈಗ ನಾನು ಆಸ್ಪತ್ರೆಗೆ ಹೋಗ್ತೀನಿ, ಬರಲೆ?" ಎಂದ.

"ಅಯ್ಯೋ ಪಾಪ! ನಾನೂ ಬರ್‍ತೀನಿ ಆಸ್ಪತ್ರೆಗೆ. ತೋರಿಸ್ತೀರಾ ಡ್ಯಾಡಿ?"

"ಈಗ ಬೇಡ ಮರಿ. ಅದಕ್ಕೆ ವಾಸಿಯಾಗಲಿ. ಆಗ ಬರುವಂತೆ. ಈಗ ನಾನು ಹೋಗಲೆ?"

ತನ್ನ ವಾತ್ಸಲ್ಯಪೂರ್ಣವಾದ ನೋಟವನ್ನು ಅವಳ ಮೇಲಿನಿಂದ ಕೀಳಲಾರನೋ ಎನ್ನುವಂತೆ ಅವಳ ಕಡೆ ಸ್ವಲ್ಪ ಹೊತ್ತು ನೋಡುತ್ತಿದ್ದು ನಂತರ ಎದ್ದು ಧಡ ಧಡನೆ ಹೊರಟು ಬಿಟ್ಟ.

ರವಿ...ಆನಂದ ಮಾತಾಡುತ್ತಿದ್ದಾಗ ಒಳಗಿದ್ದ ಸುನೀತೆಗೆ ನೀನು ಮ್ಯಾರೇಜ್‌ಗೆ ಯಾಕೆ ಒಪ್ತಿಲ್ಲಾ ನ್ನೋದುನನಗೆ ಗೊತ್ತು ಎಂದು ಆನಂದನಂದಿದ್ದು ಕೇಳಿಸಿತ್ತು.

ಓ ದೇವರೆ! ಇವರ ಬಾಯಿಂದ ಇಂತಹ ಮಾತು ಬರಬಹುದೆ? ಈ ದುರ್ಬುದ್ಧಿಯಾದರೂ ಏಕುಂಟಾಯಿತೂ ಇವರಿಗೆ? ಸಂಶಯವೇಕೆ ಮೊಳೆಯಿತು? ಗೆಳೆಯನ ಸಂಸಾರ ಎಂದುಕೊಂಡು ಅಭಿಮಾನದಿಂದ ಶುದ್ಧ ಭಾವನೆಯಿಂದ ಆಧಾರವಾಗಿ ನಿಂತಿದ್ದ ಪವಿತ್ರಾತ್ಮನ ಮುಖಕ್ಕೆ ಈ ಕಪ್ಪುಮಸಿಯೆ? ನನ್ನ ಹೃದಯವನ್ನು ಇವರು ಅರ್ಥ ಮಾಡಿಕೊಂಡಿರುವುದು ಇಷ್ಟೇನಾ? ದೂರ ದೇಶಕ್ಕೆ ಹೋಗಿ ಬಂದು ನಮ್ಮಿಂದ ಮನಸ್ಸನ್ನು ದೂರ ಮಾಡಿಕೊಳ್ಳುವಂತಾಗಬೇಕೆ? ಎಂದು ವ್ಯಥೆಪಟ್ಟಿತು ಅವಳ ಮನಸ್ಸು.

ನೀವು ಸುಮ್ಮನೆ ಕಳಂಕ ಹೊರಿಸುತ್ತಿದ್ದೀರಿ, ನಿಮ್ಮ ದುರ್ಭಾವನೆಯನ್ನು ಕಿತ್ತೊಗೆಯಿರಿ ಎಂದು ಈಗಲೇ ಎದ್ದು ಹೊರಗೆ ಹೋಗಿ ಹೇಳಿ ಬಿಡಲೆ ಎನ್ನಿಸಿತು.

ಆದರೆ ಸಂಶಯ ಮೊಳೆತು, ಗಿಡವಾಗಿ ದಿನ ದಿನಕ್ಕೆ ಎತ್ತರವಾಗಿ ಬೆಳೆಯುತ್ತಿರುವಾಗ ನಾನು ಇಷ್ಟು ಹೇಳಿದ ಕೂಡಲೆ ಅದು ಬುಡ ಸಮೇತ ಕಿತ್ತು ಹೋದೀತೆ? ಸಮಯ ಬರಲಿ ತಾನಾಗಿಯೇ ಸಂಶಯ ಪರಿಹಾರವಾಗುತ್ತೆ ಎಂದು ವ್ಯಥೆಪಡುತ್ತಾ ಒಳಗೇ ಕುಳಿತಿದ್ದಳು.

ರವಿ ನಿರ್ಮಲೆಗೆ ಸಮಾಧಾನ ಹೇಳಿ ಧಡ ಧಡ ಹೊರಟು ಹೋದಾಗ, ದುಃಖ ಉಮ್ಮಳಿಸಿ ಕಣ್ಣೀರಿನ ರೂಪದಲ್ಲಿ ಕಾಣಿಸಿಕೊಂಡಿತು.

ಎರಡು ಮೂರು ದಿನಗಳಾದವು. ಮನೆಗೆ ನಿತ್ಯ ತಪ್ಪದೆ ಬರುತ್ತಿದ್ದ ರವಿ ಬರಲೇ ಇಲ್ಲ. ಯಾಕೆ ಬರಲಿಲ್ಲ ಡ್ಯಾಡೀ...ಎಂದು ತನ್ನಲ್ಲೇ ಪ್ರಶ್ನೆ ಹಾಕಿಕೊಂಡು ಸುಮ್ಮನಾಗಿದ್ದಳು ನಿರ್ಮಲ. ಈ ವಿಷಯವಾಗಿ ಆನಂದನನ್ನಾಗಲಿ, ಸುನೀತಳನ್ನಾಗಲಿ ಕೇಳುವ ಧೈರ್ಯ ಅವಳಿಗೆ ಬರಲಿಲ್ಲ.

ಒಂದು ವಾರವಾಯಿತು. ಡ್ಯಾಡಿಯ ದರ್ಶನವಿಲ್ಲ. ಈಗ ತನ್ನ ಬೇಸರವನ್ನು ಹತ್ತಿಕ್ಕದಾದಳು ನಿರ್ಮಲ. ತಾಯಿಯನ್ನು ಕೇಳಿದಳು.

"ಯಾಕಮ್ಮಾ ಡ್ಯಾಡಿ ಮನೆಗೆ ಬರ್‍ತಿಲ್ಲ?"

"ಅವರು ಯಾವುದೋ ಊರಿಗೆ ಹೋಗಿದಾರಂತೆ ನಿರ್ಮಲ" ಉದಾಸೀನ ಭಾವನೆಯಿಂದ ಎತ್ತಲೋ ನೋಡುತ್ತಾ ಹೇಳಿದಳು ಸುನೀತ.

"ಯಾವತ್ತು ಬರ್‍ತಾರಮ್ಮ ಊರ್‍ನಿಂದ?"

"ಏನೋ ಸರಿಯಾಗಿ ಗೊತ್ತಿಲ್ಲ ಮರಿ. ಇನ್ನೂ ಹದಿನೈದು ದಿನ ಆಗುತ್ತೋ ಏನೋ?"

ಇಷ್ಟಲ್ಲದೆ ಸುನೀತ ಇನ್ನೇನು ಹೇಳುತ್ತಾಳೆ. ಅವರು ಬಾರದಿರುವ ಕಾರಣವನ್ನು ತಿಳಿಸಿದರೆ ಮಗುವಿಗೇನರ್ಥವಾಗುತ್ತದೆ? ಅರ್ಥವಾದರೂ ಅದನ್ನು ತಿಳಿಸಲಿಕ್ಕಾದೀತೆ? ಎಂದು ಏನೋ ಒಂದು ಕಾರಣವನ್ನು ಹೇಳಿ ಮುಗಿಸಿದ್ದಳು.

ಇನ್ನೂ ಹದಿನೈದು ದಿವಸವೆ! ಈಗ ತುಂಬಾ ಆಲೋಚನೆಗೊಳಗಾದಳು ನಿರ್ಮಲ. ಹದಿನೈದು ದಿನಗಳು ಅವಳಿಗೆ ಬಹಳ ದೀರ್ಘ ಕಾಲವೆನ್ನಿಸಿತು. ಆಸ್ಪತ್ರೇಲಿ ಒಂದು ಮಗೂಗೆ ತುಂಬಾ ಖಾಯಿಲೆ ಅಂದಿದ್ರು. ಹಾಗಾದ್ರೆ ಅದನ್ನ ಹಾಗೇ ಬಿಟ್ಟು ಹೋದರೆ ವಾಸಿಯಾದ್ಮೇಲೆ ನೀನೂ ಬರುವಿಯಂತೆ ಅಂದಿದ್ರು. ಅವರು ಊರ್‍ನಿಂದ ಬರೋವರೆಗೆ ಮಗು ಅಲ್ಲೇ ಇರುತ್ತಾ? ಯಾವಾಗ ಊರಿಗೆ ಹೋದ್ರೂ ಏನೇನು ತರ್‍ಬೇಕು ಮರಿ ನಿನಗೆ ಅಂತ ಕೇಳ್ತಿದ್ರು. ಯಾಕೋ ಈ ಸರ್ತಿ ಏನೂ ಕೇಳಲೇ ಇಲ್ಲವಲ್ಲಾ? ಎನ್ನಿಸಿತು ನಿರ್ಮಲಳಿಗೆ.

ಎದುರಿನಲ್ಲಿದ್ದರೆ, ರವಿಯ ವಿಷಯವಾಗಿ ಮಗಳು ಇನ್ನೂ ಏನೇನು, ಪ್ರಶ್ನೆಗಳನ್ನು ಕೇಳುವಳೋ ಎಂದು ಹೆದರಿ, ಸುನೀತ ಆಗಲೇ ಅಲ್ಲಿಂದೆದ್ದು ಹೋಗಿದ್ದಳು. ತಾಯಿ ಎದ್ದು ಹೋದ ಮೇಲೆ ನಿರ್ಮಲ ಎದ್ದು ಬಂದು ಕಿಟಕಿಯ ಹತ್ತಿರ ನಿಂತು, ದೂರದವರೆಗೂ ದೃಷ್ಟಿ ಹಾಯಿಸಿದಳು. ಮರಗಳ ಮತ್ತು ಗುಡ್ಡಗಳ ನಡುವೆ ಹಾವು ಹರಿದಂತೆ ಉದ್ದನೆಯ ರಸ್ತೆ ಮಲಗಿತ್ತು. ಡ್ಯಾಡಿ ಊರಿಗೆ ಹೋದ ದಾರಿ ಅಲ್ವೆ? ಮತ್ತೆ ಹಿಂದಿರುಗೋದೂ ಅದೇ ದಾರಿಯಿಂದಲೆ ಅಲ್ವಾ! ಆ ದಾರಿಯನ್ನು ನೋಡುತ್ತಿದ್ದಂತೆ ಎಷ್ಟೋ ಸಮಾಧಾನವೆನ್ನಿಸಿತು ಅವಳಿಗೆ.

ಸುನೀತ ಗಂಡನಿದಿರಿಗೆ ಸಂತೋಷವಾಗಿರುವಂತೆ ತೋರಿಸಿ ಕೊಳ್ಳುತ್ತಿದ್ದರೂ, ಒಳಗೊಳಗೇ ಕೊರಗು ತ್ತಿದ್ದಳು. ರವಿ ಬೇಸರಪಟ್ಟುಕೊಂಡು ಮನೆಗೆ ಬರು ತ್ತಿಲ್ಲವೆನ್ನುವುದು ಅವಳಿಗೆ ತಿಳಿದಿತ್ತು.

ಈಗ ಊಟಕ್ಕೇನು ಮಾಡುತ್ತಿದ್ದಾರೋ! ಅಡುಗೆ ಯವನನ್ನಿಟ್ಟುಕೊಂಡು ಮಾಡಿಸಿದರೂ ಸರಿಯಾಗಿ ಊಟ ಮಾಡುತ್ತಾರೋ ಇಲ್ಲವೊ. ಇಲ್ಲಾಗಿದ್ದರೆ ತಾನು ಬಲವಂತಮಾಡಿ ಊಟಕ್ಕೆಬ್ಬಿಸುತ್ತಿದ್ದಳು. ವಾರಕ್ಕೊಮ್ಮೆ ಅಭ್ಯಂಜನ ಸ್ನಾನವನ್ನೂ ತಪ್ಪಿಸುತ್ತಿರ ಲಿಲ್ಲ. ನಿರ್ಮಲಳ ಜೊತೇಲಿ ಮಾತಾಡ್ತಾ ಬೇಸರ ವಿಲ್ಲದೆ ಕಾಲಾನೂ ಸರಿಯಾಗಿ ಕಳೀತಿತ್ತು. ಪಾಪ! ಒಂಟಿಯಾಗಿ ಆ ಮನೇಲಿ ಹೇಗಿರ್‍ತಾರೊ, ನಿರ್ಮಲಾನ ಬಿಟ್ಟಿರೋದಕ್ಕೆ ಎಷ್ಟು ಕಷ್ಟವಾಗುತ್ತೊ ಏನೋ, ಎಂದೆಲ್ಲಾ ಯೋಚಿಸಿ ಒಮ್ಮೊಮ್ಮೆ ಆಲೋಚನೆ ಗೊಳಗಾಗುತ್ತಿದ್ದಳು. ಮೇಣದ ಹಾಗಿರೋ ಆನಂದನ ಹೃದಯ ಪಾಷಾಣವೇಕಾಯಿತು ಎಂದೂ ಅನ್ನಿಸು ವುದು. ಹೀಗೇ ಯೋಚನೆ ಬಂದಾಗ ಅವಳ ಮುಖಕ್ಕೆ ರಾಹು ಬಡಿದಂತಾಗುತ್ತಿತ್ತು.

ಅವಳ ಮಂಕು ಬಡಿದ ಮುಖವನ್ನು ನೋಡಿದಾಗ ಲೆಲ್ಲಾ ಇವಳಿಗೆ ಅವನ ನೆನಪಿನ್ನೂ ಮಾಸಿಲ್ಲ ಎಂದು ಕೊಳ್ಳುತ್ತಿದ್ದ ಆನಂದ. ಇಲ್ಲಿವರೆಗೆ ಅದು ಕಾಡುತ್ತಲೇ ಇರುತ್ತದೆ. ಆದಷ್ಟು ಬೇಗ ಈ ಸ್ಥಳವನ್ನು ಬಿಟ್ಟು ಹೋಗುವುದೇ ಮೇಲು ಎಂದುಕೊಂಡು ಬದಲಾ ವಣೆಗಾಗಿ ಪ್ರಯತ್ನಿಸುತ್ತಿದ್ದ. ಪ್ರಾಜೆಕ್ಟ್‌ನ ಕೆಲಸ ಈ ವೇಳೆಗಾಗಲೆ ಮುಕ್ತಾಯ ಘಟ್ಟಕ್ಕೆ ಮುಟ್ಟಿದ್ದರೂ ಉಳಿದ ಕಾರ್ಯ ಇವನನ್ನೇ ಅವಲಂಬಿಸಿತ್ತು. ಆದು ದರಿಂದ ಆನಂದನ ಪ್ರಯತ್ನಕ್ಕೆ ಶೀಘ್ರ ಫಲವಿನ್ನೂ ದೊರೆತಿರಲಿಲ್ಲ.

ರವಿ ಊರಿನಲ್ಲಿದ್ದರೂ, ಆನಂದನ ಕಣ್ಣಿಗೆ ಬೀಳ ದಂತೆ ಬಹಳ ಎಚ್ಚರಿಕೆ ವಹಿಸಿದ್ದ. ತಾನು ಆದಷ್ಟು ಬೇಗ ಇಲ್ಲಿಂದ ಬೇರೆಯ ಕಡೆ ಹೋದರೆ ಸುನೀತಳ ಬಾಳು ನೆಮ್ಮದಿಯಾದೀತು, ಕದಡಿದ ಗಂಡ ಹೆಂಡಿರ ಮನಸ್ಸು ಒಂದಾಗಬಹುದು. ಆದರೆ ನೆನಪಿಸಿದ ಕೂಡಲೆ ನೆರವೇರುತ್ತದೆಯೆ? ಬೇರೆ ಸ್ಥಳಕ್ಕಾಗಿ ಅರ್ಜಿ ಹಾಕಿಕೊಂಡಿದ್ದ. ಆದರೆ ಮೇಲಿನಿಂದ ಇನ್ನೂ ಯಾವ ಉತ್ತರವೂ ಬಂದಿರಲಿಲ್ಲ.

ಆಸ್ಪತ್ರೆ... ಮನೆ ಎರಡರ ಹೊರತು ಮತ್ತೆಲ್ಲೂ ಹೆಚ್ಚಿಗೆ ಹೊರಗೆ ಹೋಗುತ್ತಿರಲಿಲ್ಲ. ಸಾಯಂಕಾಲ ತಿರುಗಾಡಲು ಹೋಗುವುದನ್ನೂ ಬಿಟ್ಟಿದ್ದ. ಒಂದು ವೇಳೆ ಸುನೀತ... ಆನಂದ.. ನಿರ್ಮಲ ತಿರುಗಾಡಲು ಬಂದರೆ, ನಿರ್ಮಲ ಡ್ಯಾಡೀಂತ ಕೂಗಿಕೊಂಡು ತನ್ನ ಕಡೆ ಬಂದರೋ ಎನ್ನುವ ಹೆದರಿಕೆ ಅವನಿಗೆ. ಆಸ್ಪತ್ರೆ ಯಿಂದ ಬಂದ ಮೇಲೆ ಮನೆಯಲ್ಲಿ ಸುಮ್ಮನೆ ಕುಳಿತು ಮಾಡುವುದೇನೆಂದು ಹೊಸ ಹೊಸ ವೈದ್ಯ ಗ್ರಂಥ ಗಳನು ತರಿಸಿಕೊಂಡು ಓದುತ್ತಿದ್ದ. ವಿಮಲೆಯ ನೆನಪು ಬಂದಾಗ ಮಾತ್ರ ಶೂನ್ಯ ಮನಸ್ಕನಾಗಿ ಎತ್ತ ಲೋ ನೋಡುತ್ತಾ ಸುಮ್ಮನೆ ಕುಳಿತು ಬಿಡುತ್ತಿದ್ದ.

ನಿರ್ಮಲಳಿಗೀಗ ದಿನಗಳನ್ನು ಲೆಕ್ಕ ಹಾಕುವುದೇ ಕೆಲಸವಾಗಿತ್ತು. ಹದಿನೈದು ದಿನಗಳು ಮುಗಿದು ಇಪ್ಪತ್ತು ದಿನಗಳಿಗೆ ಬಂದಿತ್ತು. ಅಮ್ಮ ಹೇಳಿದಂತೆ ಡಾ ಡಿ ಬರಲಿಲ್ಲ. ಡ್ಯಾಡಿ ಊರಿಗೆ ಹೋಗಿದ್ರೆ ಇಷ್ಟು ದಿನವಾದರೂ ಬಾರದೆ ಇರುತ್ತಿದ್ರೆ? ಇಲ್ಲೇ ಇದ್ದಾರೊ ಏನೋ. ಅವತ್ತು ಡ್ಯಾಡಿ ಏನೇನೊ ಜೋರಾಗಿ ಅಂತಿದ್ರಲ್ಲಿ ಅದಕ್ಕೋ ಏನೋ ಅವತ್ತಿನಿಂದ ಬರ್‍ತಾ ಯಿಲ್ಲ.

ಆನಂದನ ಅಂದಿನ ಉಗ್ರರೂಪ ಅವಳ ಕಣ್ಣುಗಳ ಮುಂದೆ ಸುಳಿಯಿತು. ಚಳಿ ಬಂದವಳಂತೆ ನಡುಗುತ್ತಾ ಮಂಡಿಗಳ ಮೇಲೆ ಮೊಳಕೈಗಳನ್ನೂರಿಕೊಂಡು ಗಲ್ಲ ಗಳಿಗೆ ಕೈಗಳನ್ನು ಹಚ್ಚಿಕುಳಿತಳು. ಆ ಪುಟ್ಟ ಮನಸ್ಸಿಗೆ ಏನೋ ಹೊಳೆದು ಮುಖವರಳಿತು.

ಒಂದು ದಿನ ರವಿ ಬೆಳಗಿನ ಡ್ಯೂಟಿಯನ್ನು ಮುಗಿಸಿ ಕೊಂಡು ಮನೆಗೆ ಹೋದನು. ಸೀರಿಯಸ್ ಕೇಸೊಂದಿ ದ್ದುದರಿಂದ ಸ್ವಲ್ಪ ಹೊತ್ತಿನಲ್ಲಿಯೇ ಆಸ್ಪತ್ರೆಗೆ ಮರಳಿದ. ಮಧ್ಯಾಹ್ನದ ಮೂರು ಗಂಟೆಯ ಸಮಯ ವಿರಬಹುದು. ರೋಗಿಯನ್ನು ಪರೀಕ್ಷಿಸಿ, ಆತನನ್ನು ಕರೆದು ತಂದವರಿಗೆ ಪ್ರಿಸ್ಕ್ರಿಪ್ಷನ್ ಬರೆದುಕೊಟ್ಟು ತನ್ನ ರೂಮಿಗೆ ಬಂದು ಇನ್ನೂ ಕುಳಿತುಕೊಳ್ಳುತ್ತಿ ದ್ದಂತೆಯೆ ಮೇಲ್ ನರ್ಸ್ ಒಬ್ಬನು ಬಂದು ಹೇಳಿದ.

"ಸಾರ್ ಆ ಇಂಜನಿಯರರ ಮಗು ನಿಮ್ಮನ್ನು ಕೇಳ್ತಿದೆ.

ಯಾರಿರಬಹುದೆಂದು ರವಿಗೆ ಬೇಗ ಅರ್ಥವಾಗ ಲಿಲ್ಲ. ಆಶ್ಚರ್ಯದಿಂದ ಕೇಳಿದ.

"ಯಾವ ಇಂಜನಿಯರು? ಅವರ ಮಗು ಇಲ್ಲಿ ಗೇಕೆ ಬಂತು?"

"ಅದೇ ಮಗು ಸಾರ್. ನಿರ್ಮಲಾಂತ ನೀವು ಆಗಾಗ ಹೇಳ್ತಿದ್ರಲ್ಲಾ."

"ಓ ನಿರ್ಮಲಾನೆ!" ಎನ್ನುತ್ತಾ ರವಿ ಹೊರಗೆ ಬಂದ.

ನಿರ್ಮಲಳ ಕಣ್ಣುಗಳು ರವಿಗಾಗಿ ಆ ಕಡೆ ಈ ಕಡೆ ಹುಡುಕಾಡುತ್ತಿದ್ದವು. ಅವನನ್ನು ನೋಡಿದ ಕೂಡಲೆ.

"ಡ್ಯಾಡೀ!!" ಎನ್ನುತ್ತಾ ಓಡಿ ಬಂದು ಕಾಲು ಗಳನ್ನು ತಬ್ಬಿ ನಿಂತಳು. ರವಿ ಆನಂದದಿಂದ ಮೂಕ ಸ್ಮಿತನಾಗಿ ನಿಂತ. ಅವನ ಕೈ ಅವಳ ತಲೆಯನ್ನು ಸವ ರಿತು. ಕಿವಿಗಳಲ್ಲಿ ಆ ಪ್ರೀತಿಯ ಕರೆ ಮೊರೆಯಿತು. ಹೃದಯ ಆ ಶೀತಲ ಮೃದುಸ್ಪರ್ಶದ ಸುಖವನ್ನನು ಭವಿಸಿತು. ಸಂತೋಷದಿಂದಾಗಿ ಬಾಯಿಂದ ಮಾತು ಗಳು ಹೊರಡದಾದವು. ನಿರ್ಮಲಳನ್ನು ತನ್ನ ಕೊಠಡಿಗೆ ಕರೆದೊಯ್ದ.

"ಊರ್‍ನಿಂದ ಯಾವಾಗ ಬಂದೆ ಡ್ಯಾಡಿ!" ಎಂದು ರವಿಯ ಪಕ್ಕದಲ್ಲಿ ಕಾಲಿಳೆಬಿಟ್ಟುಕೊಂಡು ಕುರ್ಚಿಯ ಮೇಲೆ ಕುಳಿತಳು.

"ಊರಿಗೆ? ತಬ್ಬಿಬ್ಬಾದ ರವಿ.

"ಹೂಂ. ನೀನು ಊರಿಗೆ ಹೋಗಿದ್ದೆಯಂತಲ್ಲಾ! ಅಮ್ಮ ಹೇಳಿದಳು, ಅಲ್ಲಿಂದ ಬಂದ ಕೂಡ್ಲೆ ಮನೆಗೆ ಯಾಕೆ ಬರ್ಲಿಲ್ಲ?"

ಇವಳು ಪದೇ ಪದೇ ನನ್ನ ವಿಷಯವಾಗಿ ಕೇಳು ತ್ತಿದ್ದಳೇನೊ. ಅದಕ್ಕೆ ಸುನೀತ ಹಾಗೆ ಹೇಳಿರಬೇಕು ಎನ್ನಿಸಿತು.

"ಹೂಂ. ಮರಿ ಹೋಗಿದ್ದೆ. ನಾನು ಬಂದಿದ್ದೀ ನೀಂತ ಯಾರು ಹೇಳಿದ್ರು? ಒಬ್ಳೇ ಬಂದು ಬಿಟ್ಟಿ ದೀಯಲ್ಲಾ?"

"ನಂಗೆ ಯಾರೂ ಹೇಳ್ಲಿಲ್ಲ. ನೀನು ಬಹಳ ದಿನ ಆದ್ರೂ ಬರಲಿಲ್ಲಲ್ಲ. ಇನ್ನ ಹದಿನೈದು ದಿನಕ್ಕೆ ಬರ್‍ತಾ ರೇಂತ ಅಮ್ಮ ಆ ದಿನ ಹೇಳಿದ್ದಳು. ಆದ್ರೆ ನೀನು ಇಷ್ಟು ದಿನ ಆಯ್ತು ಬರ್‍ಲೇ ಇಲ್ಲ. ನೋಡೋಣ ಆಸ್ಪತ್ರೆ ಲೇನಾದ್ರೂ ಇರ್‍ತೀಯೇನೋಂತ ಬಂದೆ. ಈಗ ಬಾ ಡ್ಯಾಡಿ ಮನೆಗೆ.

"ಈಗ ಇಲ್ಲಿ ತುಂಬಾ ಕೆಲಸ ಇದೆ ಮರಿ. ನಾಳೆ ಬರ್‍ತೀನಿ"

"ಇಲ್ಲ ಡ್ಯಾಡೀ.. ಇವತ್ತೇ ಬರ್‍ಬೇಕು."

ಈಗ ಏನು ಮಾಡಬೇಕೋ! ತಿಳಿಯದಾಯಿತು ರವಿಗೆ.

"ಆ ದಿನ ಅಪ್ಪಾಜಿ, ಜೋರಾಗಿ ಮಾತಾಡಿದ್ರಲ್ಲಾ! ಅದಕ್ಕೆ ಹೆದ್ರಿಕೇನ ನಿಂಗೇ" ಸ್ವಲ್ಪ ಹೊತ್ತಿನಮೇಲೆ ಏನನ್ನೋ ಯೋಚಿಸಿ ಕೇಳಿದಳು ನಿರ್ಮಲ.

ಒಂದು ಕ್ಷಣ ರವಿ ಬೆಚ್ಚಿದ. ಹುಡುಗಿ ಹೀಗೆ ತಿಳ್ಕೊಂಡ್ರೆ ಕಷ್ಟ ಎನ್ನಿಸಿ

"ಅಪ್ಪಾಜಿ ತಮಾಷೆಗೆ ಹಾಗಂದ್ರು. ನಾವಿಬ್ರೂ ಸ್ನೇಹಿತರಲ್ಲವೇ?" ಎಂದ.

"ಹೌದಲ್ಲಾ! ಹಾಗಾದ್ರೆ ಬಾ. ಡ್ಯಾಡಿ ಈಗ್ಲೆ!"

ರವಿ ಏನನ್ನೋ ಹೇಳಬೇಕೆಂದಿರುವಷ್ಟರಲ್ಲಿ, ನಿರ್ಮಲಳನ್ನು ಹುಡುಕಿಕೊಂಡು ಸೀತ ಅಲ್ಲಿಗೆ ಬಂದಳು.

"ನೀವು ಇಲ್ಲೇ ಬಂದಿದೀರಾಮ್ಮಾ! ಅಲ್ಲಿ ಅಪ್ಪಾಜಿ, ಅಮ್ಮಾವ್ರು ಎಲ್ಲಾ ಕಡೆ ಹುಡುಕಿದ್ರು ಒಳ್ಳೆ ಕೆಲ್ಸ ಮಾಡಿದ್ರಿ, ಬರ್‍ರಿ ಮನೆಗೆ."

"ನೋಡಿದೆಯಾ ಸೀತ, ಒಬ್ಬಳೆ ಹೇಗೆ ಬಂದಿ ದಾಳೆ! ಪಾಪ ಸುನೀತ... ಆನಂದ ಇಬ್ರೂ ಎಷ್ಟು ಗಾಬರಿ ಪಟ್ರೋ" ಎಂದು ಆತಂಕಗೊಂಡ ರವಿ.

"ಹಂ." ಎಂದು ಮುಖ ಸೊಟ್ಟಗೆ ಮಾಡಿ ಸೀತ ನಿರ್ಮಲಳನ್ನು ಇನ್ನೊಮ್ಮೆ ಕರೆದಳು.

"ಹೋಗು ನಿರ್ಮಲ. ಹೀಗೆಲ್ಲಾ ಮನೇಲಿ ಹೇಳದೆ ಕೇಳದೆ ಬರಬಾರದು ಮರಿ."

ರವಿ ನಿರ್ಮಲಳಿಗಾಗಿ, ಆಳಿನ ಕೈಲಿ ದುಡ್ಡು ಕೊಟ್ಟು ಬಿಸ್ಕತ್ ಪೊಟ್ಟಣವನ್ನು ತರಿಸಿದ್ದ.ಅದನ್ನು ಅವಳಿಗೆ ಕೊಡಹೋದಾಗ

"ಊ ಹೂಂ... ನಂಗಿದೇನೂ ಬೇಡ. ನೀನು ಬಾ."

"ನನಗೆ ತಿರುಗಿ ತಿರುಗಿ ಕಾಲು ನೋವು ಹತ್ತವೆ ಬರ್‍ರವ್ವ ಬೇಗ್ನೆ?" ಸೀತ ಸಿಟ್ಟಿನಿಂದ ರವಿ ಕಡೆಗೊಮ್ಮೆ ನೋಡಿ ಅಂದಳು.

"ಜಾಣ್ಮರಿ ಹೋಗಮ್ಮ ಊರ್‍ನಿಂದ ಈಗಿನ್ನು ಬಂದಿದೇನಿ. ಕಾಯಿಲೆಯವರ್‍ನ ಇನ್ನೂ ನೋಡಿಲ್ಲ. ಕೆಲ್ಸ ಎಲ್ಲಾ ಮುಗಿದ ಮೇಲೆ ಬರ್‍ತೀನಿ"

ಬಾ ಅಂತ ಕರೆದ್ರೆ ಈ ಡ್ಯಾಡಿ ಬರೋಲ್ಲ. ಅಮ್ಮ ಕರದಳು ಅಂದ್ರೆ ಏನಾದ್ರೂ ಬರ್‍ತಾರೊ ಏನೋ ಎನ್ನಿ ಸಿತು ನಿರ್ಮಲಾಗೆ

"ಅಮ್ಮ ಈಗ್ಲೆ ಕರ್‍ಕೊಂಡು ಬಾ ಅಂದಳು ಡ್ಯಾಡಿ ಬಾ ಮತ್ತೆ"

ನಿರ್ಮಲೆ ಅಂದಿದ್ದನ್ನು ಕೇಳಿ ಗಾಬರಿಯಿಂದ ರವಿ ಸೀತೆಯ ಕಡೆಗೊಮ್ಮೆ ನೋಡಿದ. ಸೀತೆಯೇನಾದ್ರೂ ಮಗು ಹೀಗಂದಳೂಂತ ಆನಂದನ ಮುಂದೆ ಹೇಳಿದ್ರೆ ಅವನು ಏನು ಅರ್ಥ ಮಾಡಿಕೊಳ್ಳಲಿಕ್ಕಿಲ್ಲ ಎಂದುಕೊಂಡ ತಕ್ಷಣ ಹೇಳಿದ.

"ನಿನ್ನ ಕೈಲಿ ಯಾಕೆ ಹೇಳಿ ಕಳಿಸ್ತಾಳೆ ನಿರ್ಮಲ ಅಮ್ಮ! ಮೈಲೇನಾದ್ರೂ ಹುಷಾರಿಲ್ಲದಿದ್ರೆ ಸೀತೆ ಕೈಲಿ ಹೇಳಿ ಕಳಿಸ್ತಿದ್ದಳು. ಅಗ್ಲಿ ನಡಿ. ಇನ್ನು ಸ್ವಲ್ಪ ಹೊತ್ತಿ ಗೆಲ್ಲಾ ಬಂದು ಬಿಡ್ತೀನಿ" ಎಂದೆಲ್ಲಾ ಹೇಳಿ ಒಪ್ಪಿಸಿ, ಬಿಸ್ಕತ್ತು ಪೊಟ್ಟಣವನ್ನು ಕೊಟ್ಟು ಕಳುಹಿಸಿದ.

ನಿರ್ಮಲ ಹಿಂತಿರುಗಿ ನೋಡಿಕೊಂಡು ನಿಧಾನ ವಾಗಿ ಹೊರಟಳು.

ಅವಳು ಹೋದ ಮೇಲೆ ದೀರ್ಘವಾಗಿ ನಿಟ್ಟು ಸಿರುಯ್ದು ತನ್ನ ಕೆಲಸದ ಮೇಲೆ ಹಾಜರಾದ ರವಿ.

ಸೀತೆಯೊಂದಿಗೆ ಬರುತ್ತಿದ್ದ ಮಗಳನ್ನು ದೂರ ದಿಂದಲೇ ನೋಡಿದ ಸುನೀತ;, ಸದ್ಯ ಬಂದಳು. ಎಲ್ಲಿಗೆ

ಹೋಗಿದ್ದಳೋ ಏನೋ ಎಂದು ಸಮಾಧಾನಪಟ್ಟು ಕೊಂಡಳು.

ನಿರ್ಮಲ ಬಂದ ಕೂಡಲೆ "ಎಲ್ಲಿ ಹೋಗಿದ್ದಿ ನಿಮ್ಮಿ? ಎಲ್ಲಿಗಾದ್ರೂ ಹೋದ್ರೆ ನನಗೆ ಹೇಳಿ ಹೋಗಬೇಕು. ನನಗೆಷ್ಟು ಗಾಬರಿಯಾಗಿತ್ತೂಂತ" ಎಂದಳು.

ನಿರ್ಮಲ ಬಂದಿರುವುದನ್ನು ತಿಳಿದು ಒಳಗಿದ್ದ ಆನಂದ ಎದ್ದು ಬಂದು ಕೇಳಿದ.

"ಎಲ್ಲಿದ್ದಳು ಸೀತಾ?"

"ಆಸತ್ರೇಲೇ ಡಾಕ್ಟರ ಸಾಹೇಬ್ರತ್ರ ಮಾತಾಡ್ತಿದ್ಳು."

"ಇವಳು ಅಲ್ಲಿಗೇ ಹೋಗಿರ್ಬೇಕೂಂತ ನಿನಗೆ ಹೇಗೆ ತಿಳಿಯ್ತು?"

"ಇನ್ನೆಲ್ಲಿ ಓಗ್ತಾರೆ ಬುದ್ಧಿ. ಓದ್ರೆ ಆ ಪದ್ಮಮ್ಮನ ಕಾವ. ಇಲ್ದಿದ್ರೆ ಆಸ್ಪತ್ರೆತಾವ ಅಂತ ಹಂಗೇ ಅಂದಾಜು ಮಾಡ್ಕೊಂಡು ಹೋದೆ. ಅಮ್ಮಾ ನಿನ್ನ ಕರಿಯ್ತಾರೆ ಬಾ ಅಂತ ನಿರ್ಮಲಮ್ನೋರು ಆ ಡಾಕ್ಟರ ಸಾಹೇಬ್ರನ್ನ ಬಲವಂತ ಮಾಡಿ ಕರೀತಿದ್ರು." ಎಂದು ಹೇಳಿ ಸೀತ ಸುನೀತಳ ಕಡೆಗೆ ಕುಹಕ ನೋಟ ಬೀರಿದಾಗ,

ಗಡಗಡನೆ ನಡುಗಿದಳು ಸುನೀತ. ಭಗವಂತಾ ಆನಂದ ಈ ಮಾತನ್ನೇನಾದ್ರೂ ನಂಬಿದ್ರೆ ಹೇಗೆ? ನಿಮ್ಮಿ ಹಾಗಂತ ಯಾಕೆ ಹೇಳಿದಳೋ ಏನೋ!

ಇದಕ್ಕೆ ಏನು ಹೇಳ್ತೀಯ ಎನ್ನುವಂತೆ ಆನಂದ ಸುನೀತಳ ಕಡೆ ನೋಡಿದ. ಆ ತೀಕ್ಷ್ಣ ನೋಟವನ್ನು ಎದುರಿಸಲಾರದೆ ಹಿಡಿಯಾಗಿ ಹೋದಳು ಸುನೀತ.

ಅವನನ್ನು ಕರೆಯಲು ಹುಡುಗಿಯನ್ನು ಕಳುಹಿಸಿ ಏನೂ ಅರಿಯದವಳ ಹಾಗೆ ನಟಿಸುತ್ತಿದ್ದಾಳಲ್ಲಾ ಎಂದು ಸುನೀತಳ ಮೇಲೆ ಆನಂದನಿಗೆ ತುಂಬಾ ಸಿಟ್ಟು ಬಂದಿತ್ತು. ಅವನು ಯಾವುದೋ ಕೆಲಸದ ಮೇಲೆ ಸೀತೆಯನ್ನು ಬೇರೆಯ ಕಡೆ ಕಳುಹಿಸಿ, "ಒಳಗೆ ಬಾ" ಎಂದು ಸುನೀತೆಗೆ ಹೇಳಿ ಮುಂದೆ ನಡೆದ. ವಧಾ ಸ್ಥಾನಕ್ಕೆ ಹೋಗುವ ಅಪರಾಧಿಯಂತೆ ಸುನೀತ ಅವನ ಹಿಂದೆ ಹೋದಳು.

ರೂಮಿನೊಳಕ್ಕೆ ಬಂದ ಆನಂದ ಮಂಚದ ಮೇಲೆ ಧೊಪ್ಪೆಂದು ಕುಳಿತ. ಸುನೀತ ಗೋಡೆಗೊರಗಿಕೊಂಡು ನಿಂತಳು.

ಆನಂದ ಮಾಳಿಗೆಯ ಕಡೆ ನೋಡುತ್ತಾ ಏನನ್ನೋ ಯೋಚಿಸುತ್ತಿರುವಂತೆ ತೋರಿತು.

ಈ ಭೀಕರ ಮೌನ ಸಹಿಸಲಸಾಧ್ಯವಾಯಿತು ಸುನೀತೆಗೆ. ಇವರ ಬಾಯಿಂದ ಯಾವ ಪ್ರಶ್ನೆ ಬರುತ್ತದೊ! ಎಂಥಾದ್ದೋ ಅದು! ಉತ್ತರ ಹೇಳದಿದ್ದರೆ ಏನು ಮಾಡುತ್ತಾರೋ ಎಂದು ಹೆದರಿಕೊಳ್ಳುತ್ತಾ ಆನಂದನ ಕಡೆಗೇ ದೃಷ್ಟಿಯನ್ನು ತೇಲಿಸಿ ನಿಂತಳು.

ಕೆಲವು ಕ್ಷಣಗಳ ನಂತರ ದೀರ್ಘ ನಿಟ್ಟುಸಿರಿಟ್ಟು ಪ್ರಾರಂಭಿಸಿದ ಆನಂದ.

"ಏನಿದ್ದರೂ ಇವತ್ತು ಎಲ್ಲಾ ಫೈನಲ್ ಆಗಿ ಬಿಡಬೇಕು. ಸುನೀತ."

"ಯಾವ ವಿಷಯ? ಏನು ಫೈನಲ್ಲೋ ಒಂದೂ ತಿಳಿಯಲಿಲ್ಲ ಸುನೀತೆಗೆ. ಮುಗ್ಧಳಂತೆ ಪಿಳಿ ಪಿಳಿ ನೋಡುತ್ತಾ ನಿಂತಳು.

"ರವಿನ್ನ ನೋಡಬೇಕೂ ಅನ್ನಿಸಿದ್ರೆ ಆ ಮಗೂನ ಕಳಿಸ್ಬೇಕಾಗಿತ್ತ?"

"ನಾನು ಯಾಕೆ ಹೇಳಿ ಕಳಿಸ್ಲಿ? ಖಂಡಿತವಾಗಿಯೂ ನಿಮ್ಮಿ ಆಸ್ಪತ್ರೆಗೆ ಹೋಗಿರ್ತಾಳೇಂತ ನಾನು ಎಣಿಸಿಯೇ ಇರಲಿಲ್ಲ. ಇಲ್ಲದೆ ಹೋಗಿದ್ರೆ ನಾನು ಅಷ್ಟೆಲ್ಲಾ ಗಾಬರಿ ಪಟ್ಕೊಂಡು ಹುಡುಕಿಸುತ್ತಿದ್ದನೆ?"

"ನೀನು ಕರದೇಂತ ಹೇಳಿದಳಂತಲ್ಲ! ಮಗು ಎಲ್ಲಾದ್ರೂ ಸುಳ್ಳು ಹೇಳುತ್ತಾ?"

"ನೋಡಿ. ಅವಳು ಹಾಗೆ ಯಾಕೆ ಹೇಳಿದಳು ಅಲ್ಲೀಂತ ನನಗೂ ಅನ್ನಿಸ್ತು. ಹಾಗೇ ಯೋಚನೆ ಮಾಡಿದ್ಮೇಲೆ ನಿಮ್ಮಿ ಅವರ್ನ ಮನೆಗೆ ಬರ್ರೀಂತ ಕರೆದಿರಬೇಕು. ಅವರು ಬರೊಲ್ಲಾಂತ ಏನಾದ್ರೂ ಹೇಳಿದ್ರೇನೋ! ತಾನು ಕರೆದರೆ ಬರೋದಿಲ್ಲ. ಅಮ್ಮ ಕರೆದಳೂಂದ್ರೆ ಬರಬಹುದೇನೋಂತ ಹಾಗೆ ಹೇಳಿರಬೇಕು. ನೀವು ಅದನ್ನೇ ನಿಜಾಂತ ತಿಳ್ಕೊಂಡ್ರೆ ಹೇಗೆ?"

ಬಣ್ಣ ಕಟ್ಟಿ ಹೇಳೋದ್ರಲ್ಲಿ ನಿಸ್ಸೀಮಳು ಇವಳು ಎನ್ನಿಸಿತು ಆನಂದನಿಗೆ. ಬೇಸರದಿಂದ ನುಡಿದ.

"ಸುಳ್ಳು ಹೇಳಿದ್ರೂ ಅದಕ್ಕೊಂದು ಮಿತಿಯಿರ್ಬೇಕು ಸುನೀತ."

ಸುನೀತೆಗಾಗಲೆ ದುಃಖ ಒತ್ತರಿಸಿಬಂದಿತ್ತು. ಅದನ್ನು ಹೇಗೋ ತಡೆದು,

"ನಿಮ್ಮಾಣೆಯಾಗಿ ಹೇಳ್ತೀನಿ. ನಾನು ಹೇಳಿ ಕಳ್ಸಿಯೇ ಇಲ್ಲ. ನೀವು ನಂಬದೆ ಹೋದ್ರೆ ನಾನೇನು ಮಾಡಲಿ? ಇಷ್ಟಕ್ಕೂ ಈಗ ಅವರ್ನ ಕರೆಸೋ ಪ್ರಮೇಯ

ವಾದರೂ ಏನಿದೆ ಹೇಳಿ? ಹಾಗೇನಾದರೂ ಇದ್ದರೆ ನಿಮಗೇ ತಿಳಿಸಿ ಕರಯಿರೀಂತ ಹೇಳ್ತಿರಲಿಲ್ವ?"

"ಓ! ನನಗೇಕೆ ಹೇಳ್ತೀಯ? ನಿಮ್ಮಿಬ್ಬರಿಗೂ ನಾನೀಗ ಕಂಟಕವಾಗಿ ಬಂದು ಬಿಟ್ಟಿದೀನಿ ಅಲ್ವೆ? ನಿಜ. ಈಗ ನಿನಗಾಗಲಿ ಅವನಿಗಾಗಲಿ ಇಷ್ಟು ದಿನ ಅಗ ಲಿರುವುದೆಂದರೆ ಕಷ್ಟವೆ!"

ಅವನ ಕೊನೆಯ ಮಾತು ಕೇಳಿ ಕಾಯ್ದ ಸೀಸ ಕಿವಿಯಲ್ಲಿ ಹುಯ್ದಂತಾಯಿತು ಸುನೀತೆಗೆ. ಇನ್ನು ಕೇಳ ಲಾರೆ ಎನ್ನುವಂತೆ ತನ್ನ ಕಿವಿಗಳನ್ನು ಮುಚ್ಚಿಕೊಂಡು.

"ಅಯ್ಯೋ ! ನೀವೇಕೆ ಹೀಗೆ ಚುಚ್ಚು ಮಾತ್ನಿಂದ ಕೊಲ್ತಿದೀರಿ. ಒಂದೇ ಸರ್ತಿಗೆ ವಿಷವನ್ನಾದ್ರು ಕೊಟ್ಟು ಬಿಡಿ. ತೃಪ್ತಿಯಿಂದ ಕುಡಿದು ಕಣ್ಣುಮುಚ್ಕೊಂಡು ಬಿಡ್ತೀನಿ" ಎಂದು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಇಷ್ಟರಲ್ಲೇ ಹೊರಗಡೆ ರವಿ ಮಾತನಾಡಿದ ಶಬ್ದ ಕೇಳಿಸಿತು.

"ನೋಡು, ಅವನು ಬಂದಿರೋ ಹಾಗಿದೆ. ಹೇಳಿ ಕಳುಹಿಸಿದ ಮೇಲೆ ಬರದೆ ಇರುತ್ತಾನೇನು? ಹೋಗು. ಅದೇನು ಮಾತಾಡಬೇಕೊ ಮಾತಾಡು.!"

ಸುನೀತ ಏನೋ ಹೇಳಬೇಕೆಂದು ಹೋದಳು. ಗಂಟ ಲಿನಿಂದ ಸ್ವರವೇ ಹೊರಡಲಿಲ್ಲ. ದುಃಖಾವೇಗ ಇನ್ನೂ ತೀವ್ರವಾಯಿತು. ಅಳುತ್ತಾ ಮುಖ ಮುಚ್ಚಿ ಕೊಂಡು ಅಡಿಗೆಮನೆ ಕಡೆ ಓಡಿಬಿಟ್ಟಳು.

ಇಲ್ಲಿಗೆ ಬರಲು ರವಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ನಿರ್ಮಲಾಗೆ ಬರುತ್ತೇನೆಂದು ಮಾತು ಕೊಟ್ಟಿದ್ದ ದರಿಂದ ಬರಲೇಬೇಕಾಯಿತು. ಬರುತ್ತೇನೆಂದು ಹೇಳಿ ಹೋಗದೆ ಇದ್ದರೆ ಸುಳ್ಳು ಹೇಳಿದರೆಂದು ಹುಡುಗಿ ತಿಳಿಯುತ್ತಾಳೆ. ಇದರಿಂದ ನಾನಾಗಿಯೇ ಹುಡುಗಿಗೆ ಸುಳ್ಳನ್ನು ಹೇಳಿಕೊಟ್ಟಂತಾಗುತ್ತದೆ ಎಂದುಕೊಂಡು ಇವತ್ತೊಂದು ದಿನ ಹೋಗುವುದು. ಇನ್ನು ಮುಂದೆ ಆಸ್ಪತ್ರೆ ಹತ್ತಿರವೋ ಮನೆಯ ಹತ್ತಿರವೋ ಬಂದರೆ ಊರಿನಲ್ಲಿಲ್ಲ ಅಂತ ಹೇಳು ಎಂದು ಆಳಿನ ಕೈಲಿ ಹೇಳಿ ಕಳುಹಿಸಬೇಕು. ಎಂದೆಲ್ಲಾ ಯೋಚಿಸಿಕೊಂಡು ಬಂದಿದ್ದ.

ಗೇಟಿನ ಬಳಿ ನಿಂತು ಕಾಯುತ್ತಿದ್ದ ನಿರ್ಮಲ ರವಿ ಬರುತ್ತಲೂ ಕೈ ಹಿಡಿದು ಒಳಗೆ ಕರೆದಿದ್ದಳು. ಇಲ್ಲೇ ಇರಲೆಂದು ರವಿ ವರಾಂಡದಲ್ಲಿಯೇ ಕುಳಿತ. ಇದ ರಿಂದ ನಿರ್ಮಲಾಗೆ ಒಳ್ಳೆಯದೇ ಆಯಿತು. ಅಪ್ಪಾಜಿ ಹತ್ತಿರ ಡ್ಯಾಡಿ ಮಾತಾಡುತ್ತಾ ಕುಳಿತುಕೊಳ್ಳುವುದು ಅವಳಿಗೆ ಇಷ್ಟವೇ ಇರಲಿಲ್ಲ. ಇದರಿಂದ ಸಂತೋಷ ವಾಗಿ ರವಿಯ ಹತ್ತಿರ ಕುಳಿತು ಮಾತಿಗೆ ಶುರು ಮಾಡಿದ್ದಳು.

ರವಿಗೂ ಅಷ್ಟೇ. ತನ್ನನ್ನು ಯಾರೂ ಮಾತ ನಾಡಿಸಲಿಲ್ಲವೆಂದು ಬೇಸರವೇನೂ ಆಗಲಿಲ್ಲ. ದೇವರ ವಿಗ್ರಹವನ್ನು ನೋಡುತ್ತಾ ಆನಂದಿಸಬೇಕೆಂದು ಬರುವ ಭಕ್ತನು ಗುಡಿಯಲ್ಲಿ ಎಲ್ಲಿ ಕುಳಿತರೆ ಏನು? ಒಟ್ಟ ಸಲ್ಲಿ ಮೂರ್ತಿಯ ದರ್ಶನವಾಗುತ್ತಿದ್ದರೆ ಸಾಕು. ಅಲ್ಲಿ ಯಾರು ಬಂದರೇನು ಬಿಟ್ಟರೇನು? ಬಂದವರು ಮಾತಾಡಿಸಿದರೆಷ್ಟು ಬಿಟ್ಟರೆಷ್ಟು? ಹಾಗೆಯೇ ರವಿಗೂ. ಮುಖ್ಯವಾಗಿ ನಿರ್ಮಲಾಳ ಮುದ್ದು ಮಾತುಗಳನ್ನು ಕೇಳಬೇಕು ತಾನಿಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಅವಳ ಮನ ತಣಿಸಬೇಕು. ಆನಂದ ಮಾತಾಡಿಸಿದರೆಷ್ಟು ಬಿಟ್ಟರೆಷ್ಟು? ಇದಾವುದೂ ಅವನಿಗೆ ಬೇಕಿರಲಿಲ್ಲ.

ರವಿ ಇಷ್ಟು ಸ್ವಾತಂತ್ರ್ಯ ವಹಿಸಿ ತನ್ನ ಮನೆಯಲ್ಲಿ ಕುಳಿತೇ ಸ್ವೇಚ್ಛೆಯಾಗಿ ನಿರ್ಮಲಳೊಂದಿಗೆ ಮಾತಾ ಡುತ್ತಾ, ಆಗಾಗ್ಗೆ ನಗುತ್ತಾ ಇದ್ದುದನ್ನು ಕೇಳಿ ಒಳಗೇ ಉರಿಯತೊಡಗಿದ ಆನಂದ.

ಸ್ವಲ್ಪ ಹೊತ್ತಿನ ಮೇಲೆ ತಾನು ಈ ರೀತಿ ಒಳಗೇ ಕುದಿಯುವುದಕ್ಕಿಂತ ಅವನನ್ನು ಮಾತಾಡಿಸಿ ನೋವನ್ನುಂಟು ಮಾಡ ಬೇಕೆನ್ನಿಸಿತು. ಎದ್ದು ಹೊರಗ ಬಂದ. ಅವನು ಬಂದಿದ್ದನ್ನು ರವಿ ನೋಡಲೇ ಇಲ್ಲ. ಅವನು ತನ್ನ ಪಾಡಿಗೆ ತಾನು ನಿರ್ಮಲಳ ಜೊತೆ ಮಾತಾಡುವುದರಲ್ಲಿ ಮಗ್ನನಾಗಿದ್ದ.

ಆನಂದನೇ ಮಾತೆತ್ತಿದ.

"ಏನು ಸಮಾಚಾರ? ಇಷ್ಟು ದಿನಗಳು ಕಾಣಲೇ ಇಲ್ವಲ್ಲ ರವಿ? ಮನೆ ಕಡೆ ಯಾಕೆ ಬರ್ಲಿಲ್ಲ?"

ಆ ದಿನ ಇವನು ನನ್ನ ಮನಸ್ಸನ್ನು ನೋಯಿಸಿ ದೂರ ಮಾಡಿಕೊಂಡು ಇವತ್ತು ಏನೂ ತಿಳಿಯದವನ ಹಾಗೆ ಕೇಳ್ತಾನಲ್ಲಾ ಎಂದುಕೊಂಡು ರವಿಗೆ ಬೇಸರವೇ ಆಯಿತು. ಮಂದವಾಗಿ ನಕ್ಕು ಹೇಳಿದ.

"ಏನೋ ಸುಮ್ನೆ ಬರಲಿಲ್ಲ. ಇವತ್ತು ನಿರ್ಮಲ ಇದ್ದಕ್ಕಿದ್ದ ಹಾಗೆ ಬಂದು ಪೀಡಿಸಿದಳು. ಬರಬೇಕಾ ಯಿತು."

"ನಿರ್ಮಲಳಿಗಾಗಿ ಬಂದೆಯಾ ಇಲ್ಲವೆ... ಎಂದು ತನ್ನಲ್ಲೇ ಅಂದುಕೊಂಡು ಸುಮ್ಮನಾದ.

ಅಡಿಗೆ ಮನೆಯಲ್ಲಿ ಕುಳಿತ ಸುನೀತ, ತನ್ನೆರಡು ಮಂಡಿಗಳ ಮೇಲೆ ತಲೆ ಹುದುಗಿಸಿಕೊಂಡಿದ್ದಳು. ರವಿ ಈಗ ಯಾಕೆ ಬಂದರೋ! ಮಗುವಿನಂತಹ ಮನಸ್ಸು ಅವರದು. ನಿಮ್ಮಿಗೆ ಬೇಸರವಾಗಬಾರದೆಂದು ಓಡಿ ಬಂದಿದ್ದಾರೆ. ಆನಂದನ ಹೃದಯದ ತುಂಬಾ ಸಂಶಯದ ಹಾಲಾಹಲ ತುಂಬಿದೆಯೆಂದು ಅವರಿ ಗಿನ್ನೂ ಸರಿಯಾಗಿ ಗೊತ್ತಿರಲಾರದು. ಮಾತು ಮಾತಿನಲ್ಲಿಯೂ ಆನಂದ ಕಹಿಯನ್ನೇ ಉಗುಳು ತ್ತಿದ್ದಾರೆ. ಪಾಪ! ರವಿಯ ಹೃದಯ ಅದೆಷ್ಟು ನಲಿ ಯುತ್ತಿದೆಯೋ! ವ್ಯಂಗ್ಯ ಬಾಣಗಳಿಂದ ಅದೆಷ್ಟು ಜರ್ಝರಿತವಾಗಿದೆಯೋ! ಇಷ್ಟಾದರೂ ಸ್ವಲ್ಪವೂ ಉದ್ರೇಕಕ್ಕೆಡೆ ಕೊಟ್ಟಿಲ್ಲ.

ಮಳೆ, ಗಾಳಿ, ಗುಡುಗು, ಮಿಂಚಿನಾರ್ಭಟ ನಡೆ ದಿದ್ದರೂ ಚಲಿಸದೆ ಏಕಾಗ್ರತೆಯಿಂದ ಕುಳಿತಿರುವ ತಾಪಸಿಯಂತೆ ಶಾಂತ ಮನಸ್ಕರಾಗಿ ಕುಳಿತಿದ್ದಾರೆ. ಅವರು ಮಾಡಿರುವ ಸಹಾಯಕ್ಕೆ ಕೃತಜ್ಞತೆ ಹೇಳುವು ದಂತೂ ಬೇಡ, ಕೃತಘ್ನತೆಯನ್ನಾದರೂ ಬಿಡ ಬಾರದೆ? ನಾನಿಲ್ಲಿ ಹೀಗೆ ನರಕ ಯಾತನೆಯನ್ನನುಭವಿಸು ತ್ತಿದ್ದೇನೆಂದು ಅವರಿಗೇನಾದರೂ ಗೊತ್ತಾಗಿದ್ದಿದ್ದರೆ, ಬಹುಶಃ ಇಲ್ಲಿಗೆ ಬರುತ್ತಿರಲಿಲ್ಲವೇನೋ! ಹೀಗೇ ಹೊಯ್ದಾಡುತ್ತಿದ್ದ ಅವಳ ಕಣ್ಣಿನಿಂದ ಉರುಳುತ್ತಿದ್ದ ಬಿಸಿ ನೀರಿನಿಂದ ಸೀರೆಯ ಸೆರಗೆಲ್ಲಾ ನೆನೆದು ಮುದ್ದೆ ಯಾಗಿ ಹೋಗಿತ್ತು.

ಆನಂದ ಹೊರಗೆ ಬಂದು ರವಿಯ ಜೊತೆಯಲ್ಲಿ ಮಾತಿಗೆ ಕುಳಿತ ಮೇಲೆ ನಿರ್ಮಲಳಿಗೆ ತುಂಬಾ ಬೇಸರವಾಯಿತು. ಅವಳು ಎದ್ದು ಬಂದು ಗಿಡಗಳ ನಡುವೆ ಓಡಾಡತೊಡಗಿದಳು. ಬೆಳಗ್ಗೆ ಅವಳು ಹಾಸಿಗೆಯಿಂದೆದ್ದು ಬಂದು ನೋಡಿದಾಗ ಆ ಹೂವು ಇಬ್ಬನಿ ಮುತ್ತುಗಳನ್ನು ಹೊತ್ತು ಮುಗು ಳ್ನಗೆ ಸೂಸುತ್ತಾ ಅವಳನ್ನು ಕರೆದಂತಾಗಿತ್ತು. ಮಂದ ವಾದ ಗಾಳಿಗೆ ತೂಗಾಡುತ್ತಿದ್ದ ಆ ಗುಲಾಬಿ ನಿರ್ಮ ಲೆಗೆ ತುಂಬಾ ಸುಂದರವಾಗಿ ಕಂಡಿತ್ತು. ರೆಂಬೆಯನ್ನು ಬಾಗಿಸಿ ಕಿತ್ತುಕೊಳ್ಳುವ ಆಸೆ! ಆದರೆ ಅಂದು ಡ್ಯಾಡಿ ಹೇಳಿದ ಮಾತು ನೆನಪಿಗೆ ಬಂದು ಆ ವಿಚಾರ ವನ್ನು ಅಲ್ಲಿಗೇ ಬಿಟ್ಟಿದ್ದಳು. ಇದಕ್ಕೆ ಕಾರಣ

ಒಂದು ದಿನ ನಿರ್ಮಲ ಗಿಡಗಳಲ್ಲರಳಿದ್ದ ಬಣ್ಣ ಬಣ್ಣದ ಹೂಗಳನ್ನೆಲ್ಲಾ ಕಿತ್ತು ಕಟ್ಟಿಕೊಂಡು ಮುಂಡಿದುಕೊಳ್ಳಬೇಕೆಂಬ ತನ್ನ ಆಸೆಯನ್ನು ರವಿಯ ಮುಂದೆ ಹೇಳಿಕೊಂಡಾಗ,

"ಇವೆಲ್ಲಾ ಗಿಡಗಳಲ್ಲೇ ಇದ್ದರೆ ನೋಡೋದಕ್ಕೆ ಅಂದವಾಗಿರುತ್ತೆ ಮರಿ. ಮುಡಿದುಕೊಂಡ್ರೆ ಸ್ವಲ್ಪ ಹೊತ್ತಿಗೆಲ್ಲಾ ಜಡೇಲಿ ಬಾಡಿ ಹೋಗ್ತವೆ. ಗಿಡಗಳ ಅಂದವೂ ಕೆಡುತ್ತದೆ. ಒಂದೆರಡು ಒಳ್ಳೆಯ ಹೂ ಕಿತ್ತು ಮುಡಿದರೆ ಸಾಕಲ್ಲವೆ? ಎಂದು ಹೇಳಿ ಹೋಗಿ ದೊಡ್ಡದಾಗಿ ಅರಳಿದ್ದ ಒಂದು ಗುಲಾಬಿ ಹೂ ವನ್ನು ಕಿತ್ತು ಅವಳ ಜಡೆಗೆ ಮುಡಿಸಿದ್ದ.

ಅಂದಿನಿಂದ ನಿರ್ಮಲ ಎಲ್ಲಾ ಹೂಗಳನ್ನು ಕೀಳು ತ್ತಿರಲಿಲ್ಲ. ಒಂದೆರಡನ್ನು ಮಾತ್ರ ಕಿತ್ತು ಮುಡಿಯು ತ್ತಿದ್ದಳು.

ಈ ದಿನ ಗಿಡಗಳಲ್ಲರಳಿದ ಆ ದೊಡ್ಡ ಹೂವನ್ನು ರವಿಗೆ ತೋರಿಸಿ ಕೇಳಬೇಕೆಂದು ಅವಳಿಗೆ ಬೆಳಗಿನಿಂದಲೂ ಆಶೆಯಿತ್ತು. ಅವಳ ಜೊತೆಯಲ್ಲಿಯೇ ರವಿ ಬಂದಿದ್ದರೆ ಮೊದಲು ಆ ಹೂವನ್ನೇ ತೋರಿಸುತ್ತಿದ್ದಳೇನೋ! ಆದರೆ ಅವಳು ಕರೆದ ತಕ್ಷಣ ರವಿ ಬಾರದಿದ್ದುದರಿಂದ ಅವಳಿಗೆ ಒಂದು ರೀತಿಯ ನಿರಾಶೆಯಾಗಿತ್ತು. ಮನೆಗೆ ಬಂದಮೇಲೆ ಎಲ್ಲಿಗೆ ಹೋಗಿದ್ದೆ, ಹಾಗೆಲ್ಲಾ ಹೋಗ ಬಾರದು ಎಂದು ಗದ್ದರಿಸಿದ್ದರಿಂದ ಬೇಸರವಾಗಿತ್ತು.

ಈ ಬೇಸರದ ಕಾರಣ ರವಿ ಬರುತ್ತಲೂ ಹೂವನ್ನು ತೋರಿಸಲು ಮರೆತಿದ್ದಳು. ಈಗ ನೆನಪಿಗೆ ಬಂದು, ಗಿಡದ ಬಳಿಗೆ ಬಂದಿದ್ದಳು. ಆ ಗುಲಾಬಿ ಬೆಳಗಿನಷ್ಟು ಕಳೆಯಿಂದಿರಲಿಲ್ಲ. ಮಂಕಾಗುತ್ತಾ ಬಂದಿತ್ತು. ನಾಳೆ ಇನ್ನೂ ಬಾಡುತ್ತೆ. ಈ ದಿನವೇ ಕಿತ್ತು ಡ್ಯಾಡಿ ಕೈಗೆ ಕೊಟ್ಟು ಮುಡಿಸು ಅನ್ಬೇಕು.

ಅವಳು ಹೂವಿನ ಕಡೆ ಒಂದು ಸಾರಿ, ರವಿಯ ಕಡೆಗೊಂದು ಸಾರಿ ನೋಡುತ್ತಾ ನಿಂತಳು, ರವಿ ಅವಳ ಕಡೆ ನೋಡಲೇ ಇಲ್ಲ. ನಾನೇ ಕಿತ್ಕೊಂಡು ಅಲ್ಲಿಗೆ ತಗೊಂಡುಹೋಗ್ತೀನಿ ಎಂದುಕೊಂಡು ರೆಂಬೆಯನ್ನು ಬಾಗಿಸಿ ಹೂವಿಗೆ ಕೈ ಹಾಕಿದಳು. ಮುರಿಯುವ ಅವಸರ ದಲ್ಲಿ ರೆಂಬೆಯನ್ನು ಹಿಡಿದಿದ್ದ ಕೈಗೆ ಮುಳ್ಳೊಂದು ಬಲವಾಗಿ ನಾಟಿತು. ನಿರ್ಮಲ ಮೆಲ್ಲಗೆ ಮುಳ್ಳನ್ನು ಬಿಡಿಸಲು ಹೋದಳು. ಅದು ಬಿಡಲಿಲ್ಲ. ಜೋರಾಗಿ ಎಳೆ ಯೋಣವೆಂದರೆ, ಬೆರಳು ಎಲ್ಲಿ ತುಂಡುಹೋದಾವೂ ಎನ್ನುವ ಹೆದರಿಕೆ. ಲಂಗಕ್ಕೆ ಬೇರೆ ಒಂದೆರಡು ಮುಳ್ಳು ಗಳು ನಾಟಿದ್ದವು. ಬೆರಳಿನಿಂದ ರಕ್ತದ ತೊಟ್ಟೊಂದು ಲಂಗದ ಮೇಲೆ ಬಿತ್ತು. ಹೆದರಿ ಒಮ್ಮೆ ಚೀರಿ ಬಿಟ್ಟಳು.

"ಡ್ಯಾಡೀ ಮುಳ್ಳು ಚುಚ್ತು, ರಕ್ತ ಬರ್ತಿದೆ!"

ಅವಳ ಕೂಗು ಕಿವಿಗೆ ಬೀಳುತ್ತಲೂ ಧಿಗ್ಗನೆ ಎದ್ದ ರವಿ. ಒಂದೇ ಬಾರಿಗೆ ಹಾರಿ ಬಂದು, ನಿರ್ಮಲೆಯ ಬೆರಳನ್ನು ಒತ್ತಿ ಹಿಡಿದ. ಅವಳ ಕೋಮಲವಾದ ಬೆರಳು ಗಳಿಂದ ರಕ್ತ ಇಳಿಯುತ್ತಿತ್ತು. ಲಂಗದ ಮೇಲೆ ನಾಲ್ಕೆ ದು ಕಡೆ ತೊಟ್ಟುಗಳು ಬಿದ್ದವು. ಕಣ್ಣಿನಿಂದ ಧಾರಾಕಾರ ವಾಗಿ ನೀರು ಸುರಿಯುತ್ತಿದ್ದಂತೆ ಹಾಯ್ ಅಪ್ಪಾ ನೋವು"ಎಂದು ನರಳಿದಳು.

ಕುಮಾರಿಯ ಕಣ್ಣೀರನ್ನು ಕಂಡು, ರವಿಯ ಕರುಳು ಚುರ್ ಎಂದಿತು. ಅವನು ಆಸ್ಪತ್ರೆಯಲ್ಲಿ ಎಷ್ಟೋ ವೇಳೆ ಕಾಲುವೆಗಟ್ಟಲೆ ರಕ್ತ ಹರಿಯುತ್ತಿದ್ದುದನ್ನು ನೋಡಿದ್ದ. ಅದರಿಂದ ಅವನಿಗೆ ಹೆದರಿಕೆಯಾಗಲಿ, ಇಷ್ಟು ನೋವಾಗಲಿ ಆಗಿರಲಿಲ್ಲ. ಆದರೆ ತನ್ನ ಕರು ಳಿನ ಕುಡಿಯ ಬೆರಳುಗಳಿಂದ ಕೆಲವು ಹನಿ ತೊಟ್ಟಿಕ್ಕು ತ್ತಿದ್ದುದನ್ನು ನೋಡದಾದ. ಅವಳ ಬೆರಳುಗಳನ್ನು ಒತ್ತಿ ಹಿಡಿದು, ಸಿಟ್ಟಿನಿಂದ ಮುಳ್ಳಿನ ಕಡೆ ನೋಡಿದ. ಇದ್ದಕ್ಕಿದ್ದ ಹಾಗೆ ಅವನಿಗೆ ಹಿಂದೆ ಕೇಳಿದ್ದ ಒಂದು ಕತೆಯ ನೆನಪಾಯಿತು

ನಿರ್ಮಲ ಚಿಟ್ಟನೆ ಚೀರಿದ್ದು ಒಳಗಿದ್ದ ಸುನೀತಗೆ ಕೇಳಿಸಿತು. ಹೊರಗೆ ಬರಲೆಂದು ಧಾಪಿಸಿದ್ದವಳು ಮತ್ತೆ ಹಾಗೇ ಹಿಮ್ಮೆಟ್ಟಿದ್ದಳು. ಆನಂದ ಕಣ್ಣು ಕೆಂಪಗೆ ಮಾಡಿಕೊಂಡಿದ್ದನ್ನು ನೋಡಿ ಹೆದರಿದ್ದಳು.

ಸುನೀತ ಹೊರಗೆ ಬಂದಿದ್ದರೆ ಒಂದು ಚೂರು ಬಟ್ಟೆಯನ್ನಾದರೂ ಕೇಳಬಹುದಿತ್ತು ಎಂದುಕೊಳ್ಳುತ್ತಾ ಗುಲಾಬಿ ಹೂವಿನ ಕಡೆ ನೋಡಿದಾಗ ಇದರಂತೆ ಆಕೆಯೂ ಸಹ ಮುಳ್ಳಿನ ಮಧ್ಯೆ ಇದ್ದಾಳೆಂಬ ಅರಿವಾಯಿತು ರವಿಗೆ.

ನಿರ್ಮಲ ನೋವಿನಿಂದ ಕೂಗಿದಾಗ ರವಿ ಧಿಗ್ಗನೆದ್ದು ತಕ್ಷಣ ಹಾರಿದ್ದು, ಆನಂದನಿಗೆ ಆಶ್ಚರ್ಯವನ್ನುಂಟು ಮಾಡಿತ್ತು. ಅಕಸ್ಮಾತ್ತಾಗಿ ನೋವಿನಿಂದ ಬಂದ ಕೂಗನ್ನು ಕೇಳಿ ಎದ್ದು ಹೋಗಬೇಕೆಂದೆನ್ನಿಸಿದ್ದರೂ ತಕ್ಷಣ ಏಳಲಾಗಿರಲಿಲ್ಲ ಅವನಿಗೆ. ರವಿ ಹೊರಗಡೆ ಹೋದ ಮೇಲೆ, ತಾನು ಹೋಗಲೋ ಬೇಡವೊ ಎಂದುಕೊಳ್ಳುತ್ತಾ ಎದ್ದವನು ಮತ್ತೆ ಹಾಗೇ ಕುಳಿತಿದ್ದ. ರವಿ. ಹೆತ್ತ ತಂದೆಯಾದುದರಿಂದ ತಕ್ಷಣ ಗಾಬರಿಗೊಂಡು ಮೇಲೆದ್ದ ಎಂದು ತರ್ಕಿಸಿದ ಆನಂದ. ಅವನಿಗೆ ತಟ್ಟಿದ ನೋವು ತನಗೇಕೆ ತಟ್ಟಲಿಲ್ಲ? ಅವಳು ನಿಜಕ್ಕೂ ತನ್ನ ಮಗಳಾಗಿದ್ದರೆ ತಟ್ಟದಿರುತ್ತಿತ್ತೆ? ಹೆಸರಿಗೆ ಅಪ್ಪ ಅನಿಸಿಕೊಂಡವನ ಕರುಳಿಗೆ, ಬೇಗನೆ ಚುರುಕು ಹೇಗೆ ತಟ್ಟೀತು?

ಈ ತರ್ಕದಿಂದ, ನಿರ್ಮಲಳನ್ನು ಸುನೀತ ರವಿಯಿಂದಲೇ ಪಡೆದಿರುವಳೆಂಬುದು ಮತ್ತಷ್ಟು ದೃಢವಾಯಿತು. ಎಲ್ಲಾದರೂ ಹಾಳಾಗಿ ಹೋಗಲಿ ಎಂದು ಎದ್ದು ಒಳಗೆ ಹೋದ.

ಆನಂದ ಹಾಗೆ ಇದ್ದಕ್ಕಿದ್ದಂತೆ ಎದ್ದು ಹೋದುದರಿಂದ ರವಿಗೇನೂ ಬೇಸರವಾಗಲಿಲ್ಲ. ಅವನ ಗಮನವೆಲ್ಲಾ ಮಗಳ ಮೇಲೆಯೇ ಇತ್ತು. ಆಸ್ಪತ್ರೆಗೆ ಕರೆದುಕೊಂಡು ಹೋಗಲೋ ಬೇಡವೋ ಎಂದು ಯೋಚಿಸುತ್ತಿದ್ದ.

"ಆಸ್ಪತ್ರೆಗೆ ಬರ್‍ತೀನಿ ಡ್ಯಾಡಿ. ಬ್ಯಾಂಡೇಜು ಹಾಕ್ತೀಯ" ಲಂಗದ ತುದಿಯಿಂದ ಕಣ್ಣೀರನ್ನೊರಸಿಕೊಂಡು ಹೇಳಿದಳು ನಿರ್ಮಲ.

ರವಿ ಏನೂ ಹೇಳದೆ ಸುಮ್ಮನಿದ್ದ.

"ಅವತ್ತೊಂದಿನ ಮಗೂಗೆ ತುಂಬಾ ಕಾಯಿಲೆಯಾಗಿದೇಂತ ಹೇಳಿದ್ದೆಯಲ್ಲ ಡ್ಯಾಡಿ, ಹುಷಾರಾಯ್ತಾ ಅದ್ಕೆಗೆ? ನಾನು ನೋಡ್ಬೇಕು ತೋರುಸ್ತೀರಾ?"

"ಹೂಂ ನಡಿ ಮರಿ ತೋರಿಸ್ತೀನಿ."

ಎಂದು ರವಿ ಅವಳನ್ನು ಆಸ್ಪತ್ರೆಗೆ ಕರೆದೊಯ್ದ.

ರವಿ ನಿರ್ಮಲೆಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋದ ಮೇಲೆ, ಆನಂದ ಒಳಗಡೆ ಹೋದ. ಅಡಿಗೆ ಮನೆಯಿಂದ ಬಿಕ್ಕಿ ಬಿಕ್ಕಿ ಅಳುತ್ತಿರುವುದು ಕೇಳಿಸಿತು. ಅಲ್ಲಿಗೆ ಹೋಗಿ ನೋಡಿದಾಗ, ಸುನೀತ ಮುಖ ಮುಚ್ಚಿಕೊಂಡು ಅಳುತ್ತಿದ್ದಳು. ಅವಳು ಅಳುತ್ತಿದ್ದುದನ್ನು ನೋಡಿದ ಅವನಿಗೆ ಹೇಗೆ ಹೇಗೋ ಆಯಿತು. ಅಲ್ಲಿ ನಿಲ್ಲದೆ ಹಾಗೇ ಹಿಂತಿರುಗಿ ಬಂದು ಹಾಸಿಗೆಯಲ್ಲಿ ಬಿದ್ದುಕೊಂಡ. ಈಗ ಅವನ ಮನಸ್ಸಿನ ಯೋಚನೆ ಬೇರೊಂದು ದಿಟ್ಟಿಗೇ ಓಡಲು ಪ್ರಾರಂಭಿಸಿತು.

ಸುನೀತ ಏನಂಥಾ ತಪ್ಪು ಮಾಡಿರುವಳೆಂದು ತಾನಷ್ಟು ಕೋಪಿಸಿಕೊಳ್ಳಬೇಕು! ಅವಳು ತನ್ನ ಮನಸ್ಸಿನ ಆಶೆಯನ್ನು ನೆರವೇರಿಸಿಕೊಳ್ಳೋದಕ್ಕೆ ಸ್ವಲ್ಪ ಎಡವಿರಬಹುದು. ಮಕ್ಕಳ ಪ್ರೇಮದಿಂದ ಆ ಕೆಲಸವನ್ನು ಮಾಡಿರಬೇಕೇ ಹೊರತಾಗಿ, ದೈಹಿಕ ಸುಖಕ್ಕೆ ಅಲ್ಲಾ ಅನ್ನಿಸುತ್ತೆ. ಮೊದಲು ಈ ಉದ್ದೇಶದಿಂದ ಪ್ರಾರಂಭವಾದುದು, ಪ್ರೀತಿ ಅನುರಾಗದ ಬಲೆ ಇಬ್ಬರ ಸುತ್ತಲೂ ಹೆಣೆದು ಕೊಳ್ಳುತ್ತಾ ಬಂತೇನೋ!

ಈಗ ಆ ಬಲೆಯಿಂದ ಈಚೆಗೆ ಬರಲಾರದೆ ರವಿ ಒದ್ದಾಡುತ್ತಿದ್ದಾನೆ, ಸುನೀತೆಯೂ ಒದ್ದಾಡುತ್ತಿದ್ದಾಳೆ. ಅದರ ಬಂಧನದಲ್ಲಿ ಇರಲಾರರು. ಅದರಿಂದ ತಪ್ಪಿಸಿಯೂಕೊಳ್ಳಲಾರರು ಅನ್ನೋ ಹಾಗಾಗಿದೆ. ಇದರಿಂದ ಯಾರಿಗೆ ತಾನೆ ಸುಖವಿದೆ? ಸುನೀತೆಗಿದೆಯೆ? ರವಿಗಿದೆಯೆ? ಅಥವ ತನಗೆ ಇದೆಯೆ? ಆ ಮಗುವಾದರೂ ಏನು ತಪ್ಪು ಮಾಡಿದೆ? ಇವರು ಮಾಡಿದ ತಪ್ಪಿಗೆ ಅದು ಬಳಲಬೇಕಾಗಿ ಬಂದಿದೆಯಲ್ಲಾ!

ಇದೆಲ್ಲಾ ಯಾಕೆ ಬೇಕು? ಸುನೀತ ಇಷ್ಟಪಟ್ಟರೆ ರವಿಯ ಹತ್ತಿರವೇ ಇರಲಿ. ನಿರ್ಮಲೆಯೂ ಸಂತೋಷದಿಂದಿದ್ದಾಳು. ಆಗ. ಗಂಡಸರಿಗೇನು? ಧರ್ಮದ ಬಂಧನ, ಕಳಂಕ, ಒಂದೂ ಇಲ್ಲ. ಅವರು ಬೇಕಾದ ಹಾಗಿರಬಹುದು. ಈ ಕಟ್ಟಳೆಗಳೆಲ್ಲಾ ಹೆಂಗಸರಿಗೇ ಏಕಿರಬೇಕು? ಈಗಲೇ ಹೋಗಿ ಸುನೀತಗೆ ಹೇಳಿಬಿಡಬೇಕು.

ನೀನು ಸ್ವತಂತ್ರಳು. ಯಾರಿಗೂ ಹೆದರಬೇಕಾದುದಿಲ್ಲ. ನಿನಗೆ ಇಷ್ಟ ಬಂದ ಹಾಗಿರಬಹುದು. ಆಶೆಯನ್ನು ಹತ್ತಿಕ್ಕಿ ಸುಮ್ಮನೆ ದುಃಖಿಸುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು. ಹೀಗಂದುಕೊಂಡು ಅವನು ಮತ್ತೆ ಸುನೀತ ಇದ್ದಲ್ಲಿಗೆ ಹೋದ. ಅವಳಿನ್ನೂ ಶೋಕಮೂರ್ತಿಯಾಗಿಯೇ ಕುಳಿತಿದ್ದಳು.

"ಸುನೀತಾ!!" ಅತ್ಯಂತ ಪ್ರೀತಿಯಿಂದ ಕೂಗಿದ ಆನಂದ. ಅವನ ದನಿಯಲ್ಲಿ ಕೋಪವಾಗಲಿ, ಆಕ್ರೋಶವಾಗಲಿ, ಬೇಸರವಾಗಲಿ ಒಂದೂ ಇರಲಿಲ್ಲ. ಅತ್ಯಂತ ಶಾಂತವಾಗಿತ್ತು ಆತನ ದನಿ.

ಬಾಯಿ ತುಂಬಾ ಪ್ರೇಮದಿಂದ ತನ್ನನ್ನು ಕರೆದದ್ದು ಕೇಳಿ ಕಣ್ಣೊರೆಸಿಕೊಳ್ಳುತ್ತಾ, ತಲೆಯೆತ್ತಿ ನೋಡಿದಳು ಸುನೀತ.

ಅವನ ದನಿಯಂತೆ ಮುಖ ಮುದ್ರೆಯೂ ಅಷ್ಟೆ. ಭಯಂಕರವಾಗಿಯಾಗಲಿ ಬಿಗುವಿನಿಂದ ಕೂಡಿದುದಾಗಲಿ ಆಗಿರದೆ ಶಾಂತಿಯಿಂದ ಕೂಡಿತ್ತು.

"ನಿನ್ನ ಕಷ್ಟವೆಲ್ಲಾ ಪರಿಹಾರವಾಯಿತು. ಸುನೀತ. ಇನ್ನು ಮುಂದೆ ನೀನು ಹೀಗೆ ದುಃಖಿಸಬೇಕಾಗಿಲ್ಲ." ಅದೇ ಶಾಂತ ದನಿಯಲ್ಲಿ ನುಡಿದ ಆನಂದ.

ಹಾಗಾದರೆ ನನ್ನ ಮೇಲಿದ್ದ ಸಂಶಯ ತೊಲಗಿತೆ? ಇವರ ಮನಸ್ಸು ಇಂದು ತಿಳಿಯಾಯಿತೆ? ಎಂದುಕೊಂಡಾಗ ಅವಳ ಮುಖದ ಮೇಲೆ ಆಶೆಯ ರೇಖೆಯೊಂದು ಮೂಡಿತು.

"ಇಷ್ಟು ದಿನ ನಿನ್ನನ್ನು ವೃಥಾ ದುಃಖಕ್ಕೀಡು ಮಾಡಿದೆ. ಮೊದಲೇ ಅರಿವಾಗಿದ್ದರೆ ಹೀಗಾಗುತ್ತಲೇ ಇರಲಿಲ್ಲ." ಇಷ್ಟು ಹೇಳಿ ದೀರ್ಘವಾಗಿ ನಿಡುಸುಯ್ದ ಆನಂದ.

ಓ! ದೇವರು ಇವರ ಕಣ್ಣನ್ನು ತೆರೆಸಿದ. ಪಾಪ ಎಷ್ಟೊಂದು ಪಶ್ಚಾತ್ತಾಪ ಪಡ್ತಿದಾರೆ. ಸುನೀತಳ ದುಃಖ ಮರೆಯಾಗಿ ಸಂತೋಷದಿಂದ ಮುಖ ಅರಳಿತು.

ಆನಂದ ಮತ್ತೆ ತನ್ನ ಮಾತನ್ನು ಮುಂದುವರೆಸುತ್ತಾ,

"ಇನ್ನು ಮುಂದೆ ನೀನು ರವಿಯೊಂದಿಗೇ ಇರಬಹುದು ಸುನೀತ. ನನ್ನದೇನೂ ಇದಕ್ಕೆ ಅಭ್ಯಂತರವಿಲ್ಲ. ಮನಸ್ಸು ಯಾವ ಕಡೆಯಿರುತ್ತದೆಯೋ ಅದರಂತೆ ನಡೆದರೆ ಮಾತ್ರ ಯಾರಿಗಾದರೂ ಜೀವನದಲ್ಲಿ ಸುಖವುಂಟಾಗುತ್ತದೆ. ಬಲವಂತದ ಮಾಂಗಲ್ಯದಿಂದ ಯಾರಿಗೂ ಸುಖ ಸಿಗದೆಂದು ನನಗೀಗ ಮನವರಿಕೆಯಾಗಿದೆ. ಎಂತಲೇ ನಾನು ಈ ನಿರ್ಧಾರಕ್ಕೆ ಬರಬೇಕಾಯಿತು."

ಒಂದು ಕ್ಷಣ ನಿಲ್ಲಿಸಿ ಮತ್ತೆ ಹೇಳತೊಡಗಿದ.

"ಕದ್ದು ಮುಚ್ಚಿ ಮಾಡುವದಕ್ಕಿಂತ ಧೈರ್ಯವಾಗಿ ಮನಸ್ಸಿಗೊಪ್ಪುವಂತೆ ಇರೋದೆ ಒಳ್ಳೆಯದು. ಹೌದು ನಿನಗೆ ಮನೆತನದ್ದು, ಸಮಾಜದ್ದು, ಅಥವ ನನ್ನದೆ ಹೆದರಿಕೆಯಿರಬಹುದು. ಅದಕ್ಕೆ ಹೆದರಿ ಆತ್ಮವನ್ನೇಕೆ ವಂಚಿಸಿಕೊಳ್ಳಬೇಕು? ಪಾಶ್ಚಾತ್ಯ ದೇಶಗಳಲ್ಲಿರೋ ಹಾಗೆ ಈ ವಿಷಯಗಳಲ್ಲಿ ನಮ್ಮ ದೇಶದಲ್ಲಿಯೂ ಉದಾರತೆ ಇದ್ದಿದ್ದರೆ ಚೆನ್ನಾಗಿತ್ತೆಂದೆನ್ನಿಸುತ್ತದೆ. ಧರ್ಮದ ಹೆದರಿಕೆ, ಸಮಾಜದ ನೀತಿ ನಿಯಮಗಳಿಂದ ನಮ್ಮ ದೇಶದ ಸ್ತ್ರೀಯರ ಬಾಳು ಹಾಳಾಗುತ್ತಿದೆ. ಸುನೀತ..." ಇನ್ನೂ ಏನೇನೋ ಹೇಳುವುದರಲ್ಲಿದ್ದ ಆತ.

ಪತಿಯ ಬಾಯಿಂದ ಬಂದ ಈ ನುಡಿಗಳನ್ನ ಕೇಳುತ್ತಿದ್ದಂತೆ ಕೋಪ, ಜಿಗುಪ್ಸೆ, ಅಸಹ್ಯ, ಅಪಮಾನ, ಭೀತಿಯಿಂದ ಸುನೀತ ದೇಹಾದ್ಯಂತವೂ ಕಾವೇರಿ ಕಂಪಿಸಿತು. ತನ್ನ ಕಿವಿ... ಕಣ್ಣನ್ನು ಮುಚ್ಚಿಕೊಳಿತಳು. ಹೃದಯ ಇಬ್ಭಾಗವಾಗುತ್ತಿದೆಯೋ ಎನ್ನಿಸುವಂತಿತ್ತು.

ಆನಂದ ಇದುವರೆಗೂ ಎತ್ತಲೋ ನೋಡುತ್ತಾ ಬಡಬಡಿಸುತ್ತಿದ್ದವನು ಅವಳ ಕಡೆ ನೋಡಿದ್ನ

ಕೆರಳಿದ ಕಾಳಿಯೋ! ಶೋಕಮೂರ್ತಿಯೋ! ತಿಳಿಯದಾಯಿತು. ಹಾಗೆ ನೋಡುತ್ತಲೇ ಮುಂದುವರಿಸಿದ ಆನಂದ.

"ಇನ್ನೂ ಏನು ಯೋಚಿಸುತ್ತಿದ್ದಿ? ಇದುವರೆಗೂ ನನ್ನೆದಿರಿನಲ್ಲಿಯೇ ಕಣ್ಣು ಮುಚ್ಚಾಲೆಯಾಡಿದ್ದು ಸಾಕು. ನಾನು... ಜರ್ಮನಿಯಲ್ಲಿರಬೇಕಾದರೆ ನೀವು ಸ್ವಲ್ಪ ಬುದ್ಧಿ ಉಪಯೋಗಿಸಿ, ನಿಮ್ಮಿಬ್ಬರ ಸಂಬಂಧದ ವಿಷಯವಾಗಿ ಒಂದು ಲೆಟರ್ ಬರೆದಿದ್ದರೆ, ನನಗೆ ಎಷ್ಟೋ ಉಪಕಾರ ಮಾಡಿದಂತಾಗುತ್ತಿತ್ತು. ಮತ್ತು ನಾನು ಇಲ್ಲಿಗೆ ಬರದೆ ಅಲ್ಲಿಯೇ ಇದ್ದುಕೊಂಡು; ನನ್ನ ಪಾಡೇನೋ ನೋಡಿಕೊಳ್ಳುತ್ತಿದ್ದೆ. ಇದೆಲ್ಲವನ್ನು ಮುಚ್ಚಿ, ನನ್ನ ಹೃದಯಕ್ಕೆ ಕಿಚ್ಚಿಟ್ಟು ನೀವೂ ಇದರ ಶಾಖಕ್ಕೆ ಒದ್ದಾಡುವಂತಾಯಿತು."

"ಆ...ನಂ...ದಾ!! ಸಾಕಿನ್ನು" ಚೀರಿದಳು ಸುನೀತ.

ಆನಂದ ಬೆಚ್ಚಿಬಿದ್ದ. ಶೋಕಮೂರ್ತಿಯಾಗಿದ್ದ ಸುನೀತ ಈಗ ಭಯಂಕರ ಕಾಳಿಯಂತಾದಳು. ಆವೇಶ ಬಂದವಳಂತೆ ನುಡಿಯುತ್ತಾ,

"ಮೈಮೇಲೆ ಎಚ್ಚರವಿದ್ದು ಮಾತಾಡುತ್ತಿದ್ದೀರಾ? ಯಾರೊಂದಿಗೆ ಮಾತನಾಡುತ್ತಿದ್ದೀರಿ ಎಂಬ ಕಲ್ಪನೆಯಾದರೂ ಇದೆಯೆ ನಿಮಗೆ? ನಿಮ್ಮ ಮಾತಿನಿಂದ ಆರ್ಯನಾರಿಯರ ಕುಲಕ್ಕೇ ಕಳಂಕ ಹಚ್ಚುತ್ತಿರುವಿರೆಂದು ಯೋಚಿಸಿದ್ದೀರಾ? ಇಂಥಾ ಕ್ಷುಲ್ಲಕ ಮಾತುಗಳನ್ನಾಡಿ, ನಿಮ್ಮನ್ನು ನೀವೇ ಅವಮಾನಮಾಡಿಕೊಳ್ಳುತ್ತಿರುವಿರಿ ಎನ್ನುವುದು ಮರೆಯಬೇಡಿ. ಆತ್ಮವಂಚನೆ ಮಾಡಿಕೊಳ್ಳುವವಳು ನಾನಲ್ಲ. ನೀವು! ನಿಮ್ಮ ಆತ್ಮವನ್ನೇ ಕೊಲೆಗೈಯ್ಯುತ್ತಿರುವಿರಿ"

ಉಸಿರು ತಿರುಗದಂತೆ ಮಾತಾಡುತ್ತಿದ್ದಳು. ತಗಡಿನ ಕತ್ತಿಯನ್ನು ಝಳಪಿಸಿದರೆ ಅದು ಬಳುಕುವಂತೆ, ಅವಳ ದೇಹವೆಲ್ಲಾ ಆವೇಶ ಮತ್ತು ಉದ್ವಿಗ್ನತೆಯಿಂದ ಬಳುಕುತ್ತಿತ್ತು.

ದಟ್ಟವಾಗಿ ಕವಿದು ಬಂದು, ಹೆಪ್ಪುಗಟ್ಟಿದ ಮೋಡಗಳು, ಒಂದಕ್ಕೊಂದು ತಗುಲಿ ರಪರಪನೆ ಮಳೆ ಸುರಿಸಿ ನಂತರ ಶಾಂತವಾಗುವಂತೆ, ಒಂದೇ ಉಸುರಿನಲ್ಲಿ ಇಷ್ಟನ್ನೂ ಹೇಳಿ ಶಾಂತಳಾದಳು. ಆದರೆ ಒಳಗೇ ದುಃಖ ಒತ್ತರಿಸಿ ಬರುತ್ತಿತ್ತು.

ಆದರೆ ತನ್ನದು ಹಾಗಲ್ಲ. ನನ್ನ ಮೇಲೆ ಆನಂದ ತುಂಬಾ ಸಂದೇಹಪಡುತ್ತಿದ್ದಾರೆ. ಇದಕ್ಕಿಂತ ಹೀನ ಅದೃಷ್ಟ ಇನ್ನೇನಿರಬಹುದು! ಆನಂದ ಇಂದಿನಂತೆ ಸಿಟ್ಟಿನಿಂದ ಹೇಳಿದಿದ್ದರೆ ಒಂದಾದರೊಂದು ದಿನ ತಮ್ಮ ತಪ್ಪಿನ ಅರಿವಾಗಿ, ತಾವೇ ದಾರಿಗೆ ಬರುತ್ತಾರೆಂದು ತಿಳಿದಿದ್ದಳು. ಆದರೆ ಇವತ್ತು ಆನಂದ ಶಾಂತ ಸ್ವರದಲ್ಲಿ ನೊಂದವನಂತೆ ಹೇಳಿದುದನ್ನು ನೋಡಿದರೆ ಅವನು ಪರ್ಯಾಲೋಚಿಸಿಯೇ ಒಂದು ನಿರ್ಧಾರಕ್ಕೆ ಬಂದಂತಿತ್ತು. ಇನ್ನು ಏನು ಹೇಳಿದರೂ, ಎಷ್ಟು ಹೇಳಿದರೂ ಅವರ ಮನಸ್ಸು ಬದಲಾಗಲಾರದೆಂಬುದು ಚೆನ್ನಾಗಿ ತಿಳಿಯಿತು. ಆದುದರಿಂದಲೇ ಅವಳಿಗೆ ತುಂಬಾ ಯಾತನೆಯಾದುದು.

ಹೀಗೆಲ್ಲಾ ಅಂದುಕೊಳ್ಳುತ್ತಿದ್ದಂತೆ, ಮುಂದೆ ತನ್ನ ಬಾಳಿಗೆ ಯಾವ ಅರ್ಥವೂ ಇಲ್ಲವೆನ್ನಿಸಿತು. ಆನಂದನ ಸಂಶಯ ದೂರವಾದೀತು, ಮುಂದೆ ಬಾಳು ಸುಂದರವಾದೀತು ಎಂದು ಬೆಟ್ಟದಷ್ಟು ಆಶೆಯನ್ನಿಟ್ಟುಕೊಂಡಿದ್ದಳು. ಆನಂದನ ಮಾತುಗಳನ್ನು ಕೇಳಿದ ಕ್ಷಣವೇ ಆ ಆಶೆ ಬಯಲಾಗಿ ಹೋಯಿತು. ಆನಂದನ ಸಂಶಯದ ನುಡಿಗಳನ್ನು ಕೇಳುತ್ತಿದ್ದಂತೆಯೆ ಏನು ಮಾಡಬೇಕೆಂಬುದು ತಿಳಿಯದೆ. ಸುಮ್ಮನೆ ನಿರ್ವಿಕಾರಭಾವದಿಂದ ಕುಳಿತಳು.

"ಇದ್ದಿದ್ದನ್ನು ಇದ್ದ ಹಾಗೆ ಹೇಳಿದರೆ ಅತ್ತು ರಾದ್ಧಾಂತಮಾಡಿ ಈಗ ಕಲ್ಲಿನಂತೆ ಕುಳಿತಿದ್ದೀಯಲ್ಲಾ! ನಿರ್ಮಲ ಸಂಪೂರ್ಣವಾಗಿ ರವಿಯ ತಾಯಿಯಂತೇ ಇರುವುದು ಹೇಳುತ್ತದೆ ನಿನ್ನ "ತಪ್ಪೇನೆಂದು? ಅಂಗೈ ಹುಣ್ಣಿಗೆ ಕನ್ನಡಿ ಯಾಕೆ ಬೇಕು ಹೇಳು?" ಎಂದು ಇನ್ನೊಮ್ಮೆ ಗುಡುಗಿದ ಅವನು.

ಅದನ್ನು ಕೇಳುತ್ತಿದ್ದಂತೆ, ದೇವರೆ ಈ ಅಪವಾದವನ್ನು ಕೇಳುವುದಕ್ಕಿಂತ ಕಣ್ಣು ಮುಚ್ಚುವುದೇ ಮೇಲು ಎಂದು ಸುನೀತ ಮನಸ್ಸಿನಲ್ಲೇ ಭಗವಂತನನ್ನು ಪ್ರಾರ್ಥಿಸಿ ನಂತರ.

"ಇಷ್ಟಕ್ಕೇ ಸಂಶಯವೆ? ಎಷ್ಟೋ ಮಕ್ಕಳು ತಂದೆಯಂತೆಯೂ ಇರುವುದಿಲ್ಲ. ತಾಯಿಯ ಹಾಗೂ ಇರೋದಿಲ್ಲ. ಹಿಂದಿನ ನಮ್ಮ ಹತ್ತು ಪೀಳಿಗೆಯವರ ಪೈಕಿ ಯಾರ ರೂಪವನ್ನಾದರೂ ಹೊತ್ತಿರಬಹುದು ಎಂದು ಹೇಳುವುದಿಲ್ಲವೆ?"

"ಏನನ್ನಾದರೂ ಹೇಳಿ ನನ್ನ ಬಾಯಿ ಮುಚ್ಚಿಸಲು ಯತ್ನಿಸುತ್ತಿರುವೆಯಲ್ಲವೆ? ನಿನಗೆ ಮಕ್ಕಳಾಗುವ ಸೂಚನೆ ಕಂಡು ಬಂದದ್ದು ಯಾವಾಗ? ರವಿ ಬಂದ ಮೇಲೆ ಅಲ್ಲವೆ? ನಿರ್ಮಲ ಥೇಟ್ ರವಿಯ ತಾಯಿಯನ್ನೇ ಹೋಲುತ್ತಿರುವುದು ಏನೆಂದು ತಿಳಿಸುತ್ತದೆ? ಇದನ್ನು ವಿಚಾರಮಾಡಿ ನೋಡಿದರೆ, ವಿಷಯವೇನೆಂದು ಎಂತಹ ದಡ್ಡನಿಗೂ ತಿಳಿಯಲಾರದೆ ಇರದು ತಿಳಿಯಿತೆ?"

"ದೇವರು ಯಾವಾಗ ಕಣ್ಣು ಬಿಟ್ಟನೊ ಆಗ ಆಯಿತು. ಇದಕ್ಕೂ ರವಿ ಬರುವುದಕ್ಕೂ ಸಂಬಂಧವೇನು? ನಾನು ಮಕ್ಕಳಿಗಾಗಿ ಹಂಬಲಿಸುತ್ತಿದ್ದುದೇನೊ ನಿಜ. ಆದರೆ ಇದರ ಅರ್ಥ ನೀತಿಯನ್ನು ಬಿಟ್ಟು ಹೋಗಬೇಕೆಂದೇನೂ ಇರಲಿಲ್ಲ. ಒಂದು ವೇಳೆ ಆಗದೆ ಹೋಗಿದ್ದರೆ ನನ್ನ ದುರಾದೃಷ್ಟವನ್ನು ಹಳಿದುಕೊಳ್ಳುತ್ತ ಹಾಗೇ ಕಾಲ ತಳ್ಳುತ್ತಿದ್ದೆ. ನಿಮ್ಮ ಪಾದ ಮುಟ್ಟಿ ಬೇಕಾದರೆ ಹೇಳುತ್ತೇನೆ. ನಮ್ಮಿಬ್ಬರ ಸಂಬಂಧ ಅಣ್ಣತಂಗಿಯರದಾಗಿತ್ತು." ಎಂದು ಸುನೀತ ಆನಂದನ ಕಾಲುಗಳನ್ನು ಹಿಡಿದು ಕಣ್ಣೀರಿನ ಅಭಿಷೇಕ ಮಾಡತೊಡಗಿದಳು.

ಅವಳ ಕಣ್ಣೀರು ಕಲ್ಲನ್ನೂ ಕರಗಿಸುವಂತಿತ್ತು. ಆನಂದನ ಹೃದಯ ಮಾತ್ರ ಈ ಸಮಯದಲ್ಲಿ ಕಲ್ಲಿಗಿಂತಲೂ ಕಠಿಣವಾಗಿ ವಜ್ರದಂತಾಗಿತ್ತು.

"ಹೋಗಲಿ. ನೀನು ಏನೇ ಮಾಡಿರು. ತಪ್ಪಾಯಿತೆಂದು ಒಂದು ಸಾರಿ ಹೇಳಿಬಿಡು, ಮರೆತು ಬಿಡುತ್ತೇನೆ. ನಮ್ಮ ಬೆಲೆಯುಳ್ಳ ವಸ್ತುವೊಂದು ಚರಂಡಿಯಲ್ಲೇನಾದರೂ ಬಿದ್ದರೆ, ಅದನ್ನು ಎತ್ತಿಕೊಂಡು ತೊಳೆದಿಟ್ಟುಕೊಳ್ಳುವುದಿಲ್ಲವೆ? ಹಾಗೇ ಅಂದುಕೊಳ್ಳುತ್ತೇನೆ ಇದನ್ನೂ..."

ಈ ಪ್ರಶ್ನೆಗೆ ಸುನೀತ ಏನೆಂದು ಉತ್ತರಿಸಿಯಾಳು? ತನ್ನ ಪತಿ ಇಷ್ಟು ವಿಧವಾಗಿ ಪರೀಕ್ಷಿಸುತ್ತಿದ್ದಾರೆಂದರೆ, ಅದು ಪೂರ್ವ ಜನ್ಮದಲ್ಲಿ ಮಾಡಿದ ಕರ್ಮವೇ ಇರಬೇಕು; ಎನ್ನಿಸಿತು.

"ನಿಮ್ಮ ಅನುಮಾನ ಎಂದೆಂದಿಗೂ ಪರಿಹಾರವಾಗದೆಂದು ತೋರುತ್ತದೆ. ದೊಡ್ಡ ಮನಸ್ಸು ಮಾಡಿ ಕ್ಷಮಿಸುತ್ತೇನೆ ಎನ್ನುತ್ತೀರಿ ತಪ್ಪನ್ನು ಮಾಡದೆ ಇರುವ ನಾನು, ನಿಮ್ಮ ದಯಾಭಿಕ್ಷಕ್ಕೆ ಪಾತ್ರಳಾಗುತ್ತೇನೆಂದು ಹೇಗೆ ಹೇಳಲಿ? ಮಾಡಬಾರದ ಕೆಲಸವನ್ನೂ



ದೀಪಾವಳಿಯ ದಿವ್ಯ ಜ್ಯೋತಿಗಳು
ಮನೆ ಮನೆಗೂ ಬೆಳಗಿ ಹರುಷವ ತರಲಿ !
ಎಲ್ಲೆಡೆಗೂ ಸುಖ - ಶಾಂತಿ
ಸಂಪದಭಿವೃದ್ಧಿಯನ್ನು ಹರಿಡಲಿ !



ನಿಮ್ಮ ಅಚ್ಚುಮೆಚ್ಚುವ
ಬಟ್ಟೆಗಳೊಂದಿಗೆ ನಮ್ಮ
ದೀಪಾವಳಿ ಕಾಣಿಕೆಗಳು
ನಿಮಗೆ ಹಬ್ಬದ ಉಡುಗರೆ

ಇಂದು ಸಂದರ್ಶಿಸಿರಿ



# ಬಿ. ಬಾಬು & ಕಂಪನಿ

ಬ್ರಾಡ್ವೆ....ಹುಬ್ಬಳ್ಳಿ ಫೋನ್: 3160

ನಿಮ್ಮ ನೆಚ್ಚಿನ ಬಟ್ಟೆಗಳ ಸೌಧ

ಮಾಡಿ ನಿಮ್ಮ ಕಣ್ಣಿಗೆ ಮಣ್ಣೆರಚುವುದು ಸುಲಭ. ಆದರೆ ದೇವರ ಕಣ್ಣಿಗೆ ಮಣ್ಣೆರಚಲಾದೀತೆ?

ನಾನು ಏನು; ಹೇಗಿದ್ದೆ ಅನ್ನುವುದು ನನ್ನ ಆತ್ಮಕ್ಕೆ ತಿಳಿದಿದೆ. ದೇವರಿಗೆ ತಿಳಿದಿದೆ. ಈ ರೀತಿ ಅಪಮಾನ, ಶಂಕೆಗೆ ಗುರಿಯಾಗುವುದು ನನ್ನ ಹಣೆಯಲ್ಲಿ ಬರೆದಿದೆಯೇನೋ! ಅದನ್ನು ಯಾರಿಂದ ತಪ್ಪಿಸಲು ಸಾಧ್ಯವಾದೀತು!"

ಇದ್ದಕ್ಕಿದ್ದಂತೆ ಅವಳ ಗಂಟಲು ಬಿಗಿದು ಬಂದಿದ್ದರಿಂದ ಮಾತು ಅಷ್ಟಕ್ಕೇ ನಿಂತಿತು. ಒಂದು ಕ್ಷಣ ಕಾಲ ಈರ್ವರ ಮಧ್ಯೆ ಮೌನ ಆವರಿಸಿತು. ಸ್ವಲ್ಪ ಹೊತ್ತಿನ ನಂತರ ಮತ್ತೆ ಸುನೀತ.

"ಓಹ್ ನನ್ನದರಂತಹ ಕೆಟ್ಟ ಹಣೆಯ ಬರಹ ಯಾರದೂ ಇರಬಾರದು. ಹಾಲಿನಂಥಾ ನಮ್ಮ ಸಂಸಾರಕ್ಕೆ ಹುಳಿ ಹಿಂಡಿ ಕ್ರೂರವಿಧಿ ಕಾರಸ್ಥಾನವನ್ನು ರಚಿಸಿ ಕೆಂಗಣ್ಣಿನಿಂದ ನೋಡುತ್ತಿರುವಾಗ, ಆ ಕಣ್ಣೆ ನುರಿಗೆ ಸಿಲುಕಿ ಬೇಯಲೇಬೇಕಾಗಿ ಬಂದಿದೆ" ಇಷ್ಟು ಹೇಳಿ ಭದ್ರವಾಗಿ ಕಣ್ಣನ್ನು ಮುಚ್ಚಿಕೊಂಡ ಅವಳು ಅರ್ಧಮೃತಪ್ರಾಯಳಂತಾಗಿದ್ದಳು.

ಸುನೀತ ಹೇಳುತ್ತಿದ್ದುದನ್ನು ಕೇಳುತ್ತಿದ್ದಂತೆ ಆನಂದನ ಕೊರಳಿಂದ ಗಳಿಗೆಗೊಂದು ಭಾರವಾದ ನಿಟ್ಟುಸಿರು ಹೊರ ಹೊಮ್ಮುತ್ತಿತ್ತು. ವಿದೇಶಕ್ಕೆ ಹೋಗಿ ಹೆಚ್ಚು ಅನುಭವ ಪಡೆದದ್ದಾಗಿತ್ತು. ಮೊದಲಿಗಿಂತಲೂ ಉನ್ನತ ಅಧಿಕಾರ! ಕೈ ತುಂಬಾ ಹಣ! ಕೀರ್ತಿ ಇಷ್ಟೆಲ್ಲಾ ಇದ್ದರೂ ಮುಖ್ಯವಾಗಿ ಬೇಕಾದ ಶಾಂತಿಯೇ ಇಲ್ಲವಾಗಿತ್ತು ಅವನಿಗೆ.

ಇವೆಲ್ಲ ಕೆಲವು ಕಾಲ ಸುಖ ಕೊಡಬಲ್ಲವು. ಆದರೆ ನಿತ್ಯ ನೂತನ ಚೈತನ್ಯ, ಸ್ಫೂರ್ತಿ, ಸುಖ... ಶಾಂತಿ ಮನೆಯಿಂದಲೇ ಸಿಗಬೇಕಲ್ಲವೆ? ಆದಕ್ಕೇ ಮನೆಯೇ ಸ್ವರ್ಗ ಎನ್ನುತ್ತಾರೆ. ಒಲವು, ನಲಿವು, ಪ್ರೇಮ ಪರಸ್ಪರ ಹೃದಯಗಳನ್ನರಿತು ಬಾಳದ ಬಾಳು ಹಾಳು ಎನ್ನಿಸಿತು ಅವನಿಗೆ. ನಂತರ ಹೀಗೇ ಯೋಚಿಸತೊಡಗಿದ.

ಬಾಳು ಹಾಳೆಂದು ಅದನ್ನು ಕೊನೆಗಾಣಿಸಿಕೊಳ್ಳಲಾದೀತೆ? ಸುಖವೋ ದುಃಖವೋ ಅನುಭವಿಸಲೇ ಬೇಕು. ನಾಲ್ಕು ಜನರ ಕಣ್ಣಿಗೆ ಸಂತೋಷವಾಗಿರೋ ಹಾಗೆ ತೋರಿಸಿಕೊಳ್ಬೇಕು. ಈ ಯಾಂತ್ರಿಕ ಜೀವನವನು ಹೀಗೆಯೇ ಸವೆಸದೆ ಬೇರೆದಾರಿಯೇ ಇಲ್ಲ.

ಆನಂದ ರವಿ- ಸುನೀತೆಯರ ಮೇಲಿನ ಸಂಶಯವನ್ನು ಬಿಡುವಂತೆಯೆ ಇರಲಿಲ್ಲ. ನಿರ್ದಯತೆಯಿಂದ ಮಡದಿಯನ್ನು ಹೊರದೂಡುವಂತೆಯೂ ಇರಲಿಲ್ಲ. ತಾನು ದೊಡ್ಡ ಅಧಿಕಾರಿಯಾಗಿ, ತಿಳಿದವನೆನ್ನಿಸಿ, ಹೆಂಡತಿಯನ್ನು ಹೊರದೂಡಿ, ತನ್ನ ಕೈ ಕೆಳಗಿನವರಿಗೆಲ್ಲಾ ಮನೆಯ ಹಗರಣವನ್ನು ಎತ್ತಿ ತೋರಿಸುವ ಮನಸ್ಸಿರಲಿಲ್ಲ. ಏನಿದ್ದರೂ ಅಡಗಿಸಿಕೊಂಡು ಮೌನವಾಗಿರಬೇಕೆಂದು ಅವನ ಬಯಕೆ. ಸುನೀತ ತಪ್ಪನ್ನೊಪ್ಪಿಕೊಳ್ಳದಿದ್ದುದು, ಅವನಿಗೆ ನೋವು ಹಾಗೂ ಕ್ರೋಧವನ್ನುಂಟು ಮಾಡಿತ್ತು.

ಅಂದಿನಿಂದ ಆನಂದ ಸುನೀತೆಯನ್ನು ಹೆಚ್ಚಿಗ ಮಾತಾಡಿಸುವುದನ್ನೇ ಬಿಟ್ಟು ಬಿಟ್ಟ. ನಿರ್ಮಲೆಯನ್ನೂ ಅಷ್ಟೆ. ಅವಳಾಗಿ ಮಾತಾಡಿಸಿದರೆ, ಅವಳು ಕೇಳಿದ್ದಕ್ಕಷ್ಟು ಉತ್ತರ ಹೇಳಿ ಸುಮ್ಮನಾಗಿ ಬಿಡುತ್ತಿದ್ದ. ಹೊತ್ತಿಗೆ ಸರಿಯಾಗಿ ಊಟ, ತಿಂಡಿಗೆ ಮಾತ್ರಮನೆಗೆ ಬರುತ್ತಿದ್ದ. ನಂತರ ತಾನಾಯಿತು ತನ್ನ ಕೆಲಸವಾಯಿತು. ಒಂದೊಂದು ದಿನ ಬೇಸರವಾಗಿ ಆಫೀಸಿನಲ್ಲಿಯೇ ಮಲಗಿಬಿಡುತ್ತಿದ್ದ.

ಸುನೀತಳ ಜೊತೆ ಮೊದಲಿನಂತೆ ಇರಲು ಸಾಧ್ಯವಿಲ್ಲವೆಂದು ಎಂದಿನಿಂದ ತಿಳಿದನೊ ಅಂದಿನಿಂದ ಮನೆಗೆ, ಹೊರಗಿನವನಂತೆಯೇ ಇರತೊಡಗಿದ್ದ. ಯಾವುದರಲ್ಲಿಯೂ ಉತ್ಸಾಹವಿಲ್ಲ. ಆಸಕ್ತಿಯಿಲ್ಲ. ಒಂದು ರೀತಿಯ ವಿರಕ್ತ ಮನೋಭಾವ ಬೆಳೆಯುತ್ತಾ ಬಂದಿತು.

ಅವನ ಈ ಅನಾಸಕ್ತಿ, ಬೇಸರ ನಿಟ್ಟುಸಿರನ್ನು ನೋಡಿ, ಕೇಳಿ, ಸುನೀತ ದಿನದಿನಕ್ಕೆ ಕುಗ್ಗಿ ಹೋಗತೊಡಗಿದಳು. ಶಂಕಾಸ್ಪದಳಾಗಿ ಬಾಳುವವಳ ಬಾಳು ಅದೆಷ್ಟು ಕಠಿಣವಾದುದು ಹೀಗೆ ಬಾಳುವುದಕ್ಕಿಂತ ಸಾವೇ ಸಾವಿರ ಪಾಲು ಮೇಲು ಎನ್ನಿಸತೊಡಗಿತು. ಆನಂದನ ಶಂಕೆಯ ಅಗ್ನಿಕುಂಡದಲ್ಲಿ ತಾನು ಜೀವಂತ ದಹಿಸಿ ಹೋಗುತ್ತಿರುವವಳಂತೆ ಅನುಭವವಾಗತೊಡಗಿತು. ಪತಿಯ ಪ್ರೇಮಕ್ಕೆ ಹೀಗೆ ಹೊರತಾಗಿ ಬಾಳುವುದು ಸಾಧ್ಯವೇ ಇಲ್ಲ. ರವಿ ಮದುವೆಯಾದರೂ ಆದರೆ, ಇವರ ಸಂಶಯ ಸ್ವಲ್ಪ ಮಟ್ಟಿಗಾದರೂ ಪರಿಹಾರವಾದೀತು. ಯಾಕೋ ಅವರು ಈಚೆಗೆ ಈ ಕಡೆ ಬರಲೇ ಇಲ್ಲ. ನಾನೇ ಹೋಗಿ ಅವರನ್ನು ಮದುವೆಗೊಪ್ಪಿಕೊಳ್ಳಿ ಎಂದು ಪ್ರಾರ್ಥಿಸಬೇಕು ನಮ್ಮ ಸಂಬಂಧ ಎಂತಹ ಪವಿತ್ರವಾದುದೆಂದು ಮನದಟ್ಟಾಗುವಂತೆ ಆನಂದನಿಗೆ ಹೇಳಿ ಸಂಶಯವನ್ನು ದೂರಮಾಡಿರೆಂದು ಕೇಳಿಕೊಳ್ಳಬೇಕೆಂದುಕೊಂಡಳು.

ಒಂದು ದಿನ, ರವಿಯನ್ನು ಕರೆದುಕೊಂಡು ಬರಲು ಆಳನ್ನು ಕಳುಹಿಸಿದಳು. ರವಿ ಒಂದು ತಿಂಗಳು ರಜ ತೆಗೆದುಕೊಂಡಿರುವುದಾಗಿ ತಿಳಿದು ಬಂದಿತು. ಬಂದ ನಂತರ ಕರೆಸಬೇಕು. ಮದುವೆಗೆ ಒಪ್ಪದೆ ಹೋದರೆ. ನಮ್ಮಿಬ್ಬರ ಸಂಬಂಧ ಯಾವ ರೀತಿಯಿತ್ತೆಂದು ತಿಳಿಸಿದರೂ ಆನಂದ ಒಂದು ವೇಳೆ ಒಪ್ಪದೆ ಇದ್ದ ಪಕ್ಷದಲ್ಲಿ, ಕೊನೆಗೆ ಒಂದೇ ದಾರಿ, ಎಂದೇನೋ ನಿಶ್ಚಯಿಸಿದಳು ಸುನೀತ.

ರವಿ ಅಂದು ಆನಂದನ ಮನೆಗೆ ಹೋದಾಗ, ತಾನು ತಿಳಿದುಕೊಂಡಿದ್ದಕ್ಕಿಂತಲೂ ಹೆಚ್ಚಾಗಿ, ಸುನೀತಳ ಬಾಳು ದುಸ್ಸಹವಾಗಿದೆಯೆಂದು ಕಂಡು ಬಂದಿತ್ತು. ಇದರಿಂದ ಅವನ ಹೃದಯ ಅಶಾಂತಿಯ ಆಗರವೇ ಆಯಿತು. ಎಲ್ಲವನ್ನೂ ಹೇಳಿ ಬಿಡುವುದೇ ಮೇಲು. ಪಾಪ! ಸುನೀತಗೇಕೆ ಕಷ್ಟ ಎಂದು ಯೋಚಿಸಿ, ಎರಡು ಮೂರು ಸಾರಿ ಅದಕ್ಕಾಗಿ ಪ್ರಯತ್ನ ಪಟ್ಟಿದ್ದರೂ ಹೇಳಲಾಗಿರಲಿಲ್ಲ.

ವಿಮಲೆಯ ನೆನಪಾಗಿ ಹೇಳುವುದನ್ನು ನಿಲ್ಲಿಸಿತ್ತು. ತಾಯಿ ಇಲ್ಲವೆನ್ನುವುದು ನಿರ್ಮಲೆಗೆ ಇಷ್ಟು ಬೇಗ ತಿಳಿಯಬಾರದು. ತಾನು ತಾಯಿಯಿಲ್ಲದ ತಬ್ಬಲಿಯೆಂದು ತಿಳಿದರೆ, ಆ ಎಳೆಯ ಹೃದಯ ಅದೆಷ್ಟು ನೊಂದೀತು! ಅವಳು ಇನ್ನೂ ಕೆಲವು ಕಾಲ ಸುನೀತಳ ಪ್ರೀತಿಯ ಆಸರೆಯಲ್ಲಿ ಸುಖವಾಗಿ ಬೆಳೆಯಲಿ ಎನ್ನಿಸಿತು. ಕೆಲವು ದಿನಗಳ ಮಟ್ಟಿಗಾದರೂ ತಾನು ದೂರವಿದ್ದರೆ, ಆನಂದ ಕೋಪವನ್ನು ತೊರೆದಾನು ಎಂದು ಯೋಚಿಸಿ, ಒಂದು ತಿಂಗಳು ಅವರ ಕಣ್ಣಿಗೆ ಬೀಳದಂತಿರಬೇಕು ಎಂದುಕೊಂಡು, ಆನಂದನ ಮನೆಯವರ್‍ಯಾರಾದರೂ ಕೇಳಿದರೆ ರಜೆಯ ಮೇಲೆ ಹೋಗಿದ್ದಾರೆಂದು ತಿಳಿಸಲು ಮನೆಯ ಆಳಿಗೆ, ಹಾಗೂ ಆಸ್ಪತ್ರೆಯ ಆಳುಗಳಿಗೆ ತಿಳಿಸಿದ್ದ. ಆದುದರಿಂದ ಸುನೀತ ಅವನಿಗಾಗಿ ಹೇಳಿ ಕಳುಹಿಸಿದಾಗ ಆಳು ಹಾಗಂತ ಹೇಳಿದ್ದ.

ಸಂಕಟ, ಅನುಮಾನ, ನಿರಾಶೆ, ಭೀತಿ, ಇವುಗಳಲ್ಲಿಯೇ ಕಾಲ ನಿಧಾನವಾಗಿ ಉರುಳುತ್ತಿತ್ತು. ರವಿ ವಿಮಲ ಇವರ ಪರಿಚಯವಾದ ಮೇಲೆ, ಕಷ್ಟದ ದಿನಗಳು ಕಳೆದುಹೋಗಿ ಸುಖದ ದಿನಗಳು ಶಿರುಗಿದ್ದವು. ಮಳೆಗಾಲದ ಮೋಡದಂತೆ ಅದೂ ಕೆಲವು ದಿನಗಳ ವರೆಗೆ ಮಾತ್ರ!

ಮತ್ತೆ ದುರ್ದಿನಗಳು ಆರಂಭವಾಗಿತ್ತು. ಮೊದಲಿಗಿಂತ ಭಯಾನಕ! ಭೀಕರ ದಿನಗಳು! ಈ ದಿನಗಳಲ್ಲಿ ತನ್ನ ಜೀವನ ಸುಖಾಂತವಾಗುವುದೋ ದುಃಖಾಂತವಾಗುವುದೋ ತಿಳಿಯದು. ಭವಿಷ್ಯ ಗರ್ಭದಲ್ಲಡಗಿರುವ ರಹಸ್ಯವನ್ನು ಭೇದಿಸುವುದಾದರೂ ಎಂತು?

ಇದನ್ನೆಲ್ಲಾ ಆಗಾಗ್ಗೆ ಯೋಚಿಸುವುದೇ ಸುನೀತಳ ಕೆಲಸವಾಗಿತ್ತು.

ನಿರ್ಮಲೆಗಂತೂ ತುಂಬಾ ಬೇಸರದ ದಿನಗಳಾಗಿದ್ದವು ಇವು. ಬೆರಳುಗಳಿಗೆ ಗಾಯವಾದ ದಿನ ರವಿ ಅವಳನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಿದ್ದಾಗ ಹೇಳಿದ್ದ. ನಾನು ಒಂದು ತಿಂಗಳು ಬೇರೆ ಕಡೆ ಹೋಗಬೇಕಾಗುತ್ತೆ ಮರಿ ಎಂದು. ನಾನೂ ನಿನ್ನ ಜೊತೇನೆ ಬರ್‍ತೀನಿ ಎಂದು ಹಟ ಹಿಡಿದಿದ್ದಳು ಅವಳು. ಈಗ ಬೇಡಮ್ಮ ಇನ್ನೊಂದು ಸರ್‍ತಿ ಯಾವಾಗ ಲಾದರೂ ಹೋದಾಗ ಬರುವಿಯಂತೆ ಎಂದು ತಿಳಿಸಿದ್ದ ರವಿ. ಇದರಿಂದ ಅವಳಿಗೆ ಸ್ವಲ್ಪ ಸಮಾಧಾನವಾಗಿತ್ತು. ಇನ್ನೂ ಎಷ್ಟು ದಿನವೊ ಡ್ಯಾಡಿ ಬರೋದಕ್ಕೆ ಎಂದು ಆಗಾಗ್ಗೆ ನೆನಪುಮಾಡಿಕೊಳ್ಳುತ್ತಿದ್ದಳು.

ಪದ್ಮಾನೂ ಇರಲಿಲ್ಲ. ಅವಳ ತಾಯಿ ಹೆರಿಗೆಗೆಂದು ತವರಿಗೆ ಹೋಗಿದ್ದಳು. ಆಕೆಯ ಜೊತೆಯಲ್ಲಿ ಪದ್ಮಾನೂ ಹೋಗಿದ್ದಳು. ಇದರಿಂದ ದಿನವಿಡೀ ಮಂಕು ಕವಿದವಳಂತೆ ಇರುತ್ತಿದ್ದಳು ನಿರ್ಮಲ.

ಆನಂದ ಮನೆಯಲ್ಲಿ ಹೆಚ್ಚಿಗೆ ಇರುತ್ತಲೇ ಇರಲಿಲ್ಲ. ಒಂದೆರಡು ಮಾತುಗಳಿಗಿಂತ ಹೆಚ್ಚಾಗಿ ಯಾರೊಂದಿಗೂ ಮಾತು ಆಡುತ್ತಿರಲಿಲ್ಲ. ನಗು, ನಲಿವು, ತಿರುಗಾಟ ಎಲ್ಲಾ ನಿಂತು ಹೋಗಿತ್ತು. ನಿರ್ಮಲ ಸುಮ್ಮನೆ ಕುಳಿತು ಬೇಸರಪಟ್ಟುಕೊಳ್ಳುತ್ತಾಳೆಂದು, ಸುನೀತ ಸಂಜೆ ಹೊತ್ತು ಸೀತೆಯ ಜೊತೆಯಲ್ಲಿ ಅವಳನ್ನು ಹೊರಗೆ ಕಳುಹಿಸುತ್ತಿದ್ದಳು. ಸೀತ ಪಾರ್ಕ್‌ಗೋ, ಶಾಲೆಯ ಮೈದಾನದ ಕಡೆಗೋ ಕರೆದುಕೊಂಡು ಹೋಗುತ್ತಿದ್ದಳು.

ಒಂದು ಸಂಜೆ ಶಾಲೆಯ ಮೈದಾನದಲ್ಲಿ ಬಹಳ ಹೊತ್ತು ಆಟವಾಡುತ್ತಿದ್ದು, ನಂತರ ಸೀತೆಯ ಜೊತೆಯಲ್ಲಿ ಮನೆಯ ಕಡೆ ಹೊರಟಿದ್ದಳು ನಿರ್ಮಲ. ಸ್ವಲ್ಪ ದೂರ ಹೋದ ಮೇಲೆ ರವಿ ಮುಂದಿನ ಬೀದಿಯಿಂದ ಆ ಕಡೆ ಬರುತ್ತಿರುವುದು ಕಾಣಿಸಿತು. ಅವನು ಇವಳನ್ನು ನೋಡಲಿಲ್ಲ.

ಡ್ಯಾಡಿ ಒಂದು ತಿಂಗಳು ಊರಿಗೆ ಹೋಗ್ತೀನಿ ಅಂದಿದ್ರಲ್ಲಾ! ಅವರೋ ಅಲ್ಲವೊ ಎಂದು ನಿರ್ಮಲ ಇನ್ನೊಮ್ಮೆ ಸರಿಯಾಗಿ ನೋಡಿದಳು. ಅವನ ಕೈಲಿ ಸ್ಟೆತೋಸ್ಕೋಪ್ ಇದ್ದುದರಿಂದ ಡ್ಯಾಡೀನೆ ಎಂದು ಅವಳಿಗೆ ನಂಬಿಕೆಯಾಯಿತು.

ಆಶೆಯಿಂದ ಹೆಜ್ಜೆಗಳನ್ನು ಮುಂದುವರೆಸಿದಳು. ಅವನ ಹತ್ತಿರ ಹೋಗಲು ಇನ್ನು ಸ್ವಲ್ಪವೇ ದೂರವಿತ್ತು. ಇದ್ದಕ್ಕಿದ್ದ ಹಾಗೆ ರವಿ ಯಾತಕ್ಕೋ ತಲೆ ಎತ್ತಿದಾಗ, ನಿರ್ಮಲೆ ಬರುತ್ತಿರುವುದು ಕಾಣಿಸಿತು. ಅವಳಿಗೆ ಕಾಣಿಸಬಾರದೆಂದು ತಕ್ಷಣ ಪಕ್ಕದಲ್ಲಿದ್ದ ಸಂದಿಯೊಳಗೆ ಹೊರಟ.

"ಡ್ಯಾಡಿ ನನ್ನ ನೋಡಲೇ ಇಲ್ಲ. ಆ ಕಡೆ ಹೋಗಿಬಿಟ್ರಲ್ಲಾ"

"ಡ್ಯಾಡಿ! ಡ್ಯಾಡೀ..." ನಿರ್ಮಲ ಆ ಕಡೆ ಓಡಿದಳು.

ಅವಳು ಕೂಗುವುದನ್ನು ಕೇಳಿಸಿಕೊಳ್ಳದವನಂತೆ ರವಿ ಬೇಗ ಬೇಗನೆ ನಡೆದಿದ್ದ. ನಿರ್ಮಲ ಜೋರಾಗಿ ಓಡತೊಡಗಿದಳು.

"ನಿಲ್ರಮ್ಮಾ! ಯಾಕೆ ಹಂಗೋಡ್ತೀರಿ?" ಎಂದು ಸೀತೆ ಕೂಗುತ್ತಿದ್ದುದೂ ಅವಳ ಕಿವಿಗೆ ಬೀಳಲೇ ಇಲ್ಲ.

ನಿರ್ಮಲ ಓಡುತ್ತಿರುವುದು ತಿಳಿಯಿತು ರವಿಗೆ. ಎಲ್ಲಿಯಾದರೂ ಬಿದ್ದರೋ ಅವಳನ್ನೇಕೆ ಓಡಿಸ್ತೀನು ಎಂದು ಅವನು ಹಿಂದಕ್ಕೆ ತಿರುಗಿ ನೋಡಿದ. ಅವನು ನೋಡಿದ್ದನ್ನು ಕಂಡು ಸಂತೋಷವಾಯಿತು ನಿರ್ಮಲೆಗೆ. ಈ ಸಂತೋಷದ ಭರದಲ್ಲಿ ಅವನ ಕಡೆ ನೋಡುತ್ತಲೇ ಮುಂದೆ ನುಗ್ಗಿ ರಸ್ತೆಯ ಬದಿಯಲ್ಲಿದ್ದ ಕಲ್ಲೊಂದನ್ನು ಎಡವಿ ಮುಗ್ಗರಿಸಿ ಬಿದ್ದು ಬಿಟ್ಟಳು.

"ನಿ...ರ್ಮ...ಲಾ!" ಕೂಗುತ್ತಾ ಒಂದೇ ಉಸುರಿಗೆ ಓಡಿ ಬಂದ ರವಿ. ಸೀತೆಯೂ ಓಡಿ ಬಂದಳು. ಅವಳನ್ನು ಎಬ್ಬಿಸಿ ನಿಲ್ಲಿಸಿದಾಗ ಹಣೆಯೊಡೆದು ರಕ್ತ ಸುರಿಯುತ್ತಿತ್ತು. ಮೈ ಕೈ ಎಲ್ಲಾ ತರಿದು ಹೋಗಿತ್ತು.

ನನ್ನಿಂದ ನಿನಗೆ ಎಷ್ಟು ತೊಂದರೆಯಾಯಿತು ಮಗು! ಆ ದಿನ ಮುಳ್ಳು ಚುಚ್ಕೊಂಡು ಕಣ್ಣೀರು ಹರಿಸಿದ್ದೆ. ಈ ದಿನ ಬಿದ್ದು ರಕ್ತ ಹರಿಸ್ತಿದೀಯ ಎಂದು ಒಳಗೇ ಮರುಗಿದ ರವಿ. ಅವಳು ಕೂಗಿದ ತಕ್ಷಣ ತಾನೇಕೆ ನಿಲ್ಲಲಿಲ್ಲವೋ ಎಂದು ತನ್ನನ್ನೇ ಹಳಿದುಕೊಳ್ಳುವಂತಾಯಿತು.

ಆಸ್ಪತ್ರೆಯಲ್ಲಿ ತಂದು ಮಲಗಿಸಿದಾಗ ಎಚ್ಚರವೇ ಇರಲಿಲ್ಲ ನಿರ್ಮಲೆಗೆ. ಸುನೀತೆಗೆ ತಿಳಿಸಲೆಂದು ಸೀತ ಮನೆಗೆ ಹೋದಳು.

ಅವಳ ಗಾಯಗಳಿಗೆ ಔಷಧಿ ಹಾಕಿ, ಮಂಚದ ಪಕ್ಕದಲ್ಲಿ ಮೌನವಾಗಿ ಕುಳಿತ ರವಿ. ಈ ಸಮಯದಲ್ಲಿ ಅವನು ವೈದ್ಯನಿಗಿಂತ ಓರ್ವ ನಿರ್ಭಾಗ್ಯ ತಂದೆಯಾಗಿದ್ದ. ನಿರ್ಮಲೆಗಾದ ನೋವು ತನಗೇ ಆದಂತಿತ್ತು. ಎಷ್ಟೋ ಪ್ರಾಣಗಳನ್ನು ಉಳಿಸುವ ವೈದ್ಯನಾಗಿದ್ದರೂ ಇರೋ ಒಬ್ಬ ಮಗಳನ್ನು ರಕ್ಷಿಸಲಾರದೆ ಗಳಿಗೆ ಗಳಿಗೂ

ಕೊಲ್ಲುತ್ತಿದ್ದೇನೆಲ್ಲ ಎಂಬ ಸಂಕಟವುಂಟಾಯಿತು. ವಿಮಲೆಯನ್ನು ಕಳೆದುಕೊಂಡು, ಮಗಳು ಈ ಸ್ಥಿತಿಗೆ ಬಂದ ತನ್ನ ದೌರ್ಭಾಗ್ಯಕ್ಕಾಗಿ ಅವನ ಹೃದಯ ರೋಷಿಸಿತು.

ಮನೆಗೆ ಬಂದ ಸೀತ ನಿರ್ಮಲೆಯು ಬಿದ್ದ ಸಮಾಚಾರವನ್ನು ತಿಳಿಸಿದಾಗ, ಸುನೀತಗೆ ಗಾಬರಿ ಆಶ್ಚರ್ಯ ಏಕ ಕಾಲದಲ್ಲಿ ಉಂಟಾಯಿತು. ಒಂದು ಕ್ಷಣ ಮಂತ್ರ ಮುಗ್ಧಳಂತೆ ನಿಂತು ಬಿಟ್ಟಳು.

ಹಾಗಾದ್ರೆ ರವಿ ರಜದ ಮೇಲೆ ಊರಿಗೆ ಹೋಗಿಲ್ಲವೆ ? ಯಾಕೆ ಹಾಗಂತ ಹೇಳಿದ್ರೋ ! ನಿರ್ಮಲಾನ ಇಲ್ಲಿಗೇ ಎತ್ಕೊಂಡು ಬಂದಿದ್ರೆ ಆಗ್ತಿರೋದು! ಅವರ ಹತ್ತಿರ ಯಾಕೆ ಬಿಟ್ಟು ಬಂದಳೋ ಸೀತ ! ಮಗೂಗೆ ಎಷ್ಟು ನೋವಾಗಿದೆಯೋ ಈಗ ನಾನಲ್ಲಿಗೆ ಹೋದ್ರೆ ಇವರು ಏನೇನೆಲ್ಲಾ ಭಾವಿಸ್ಕೊಳ್ತಾರೋ ! ಎಂದು ಯೋಚಿಸುವಂತಾಯಿತು. ಕೊನೆಗೆ ಏನಾದರಾಗಲಿ, ಎನ್ನಿಸಿ ಆಸ್ಪತ್ರೆಯ ಕಡೆಗೆ ಹೊರಟು ಬಿಟ್ಟಳು.

ಅವಳು ಆಸ್ಪತ್ರೆಗೆ ಬಂದಾಗ ಮಗುವಿಗೆ ಎಚ್ಚರವೇ ಇರಲಿಲ್ಲ.

ಮಂಚದ ಬಳಿಯೇ ರವಿ ಕುರ್ಚಿಯನ್ನು ಹಾಕಿಸಿಕೊಂಡು ಕುಳಿತಿದ್ದ. ಅಲ್ಲೆಲ್ಲಾ ನಿಶ್ಶಬ್ದತೆ ನೆಲೆಸಿತ್ತು. ಈ ನೀರವತೆ ಅವಳ ಹೃದಯದಲ್ಲಿ ಭಯವನ್ನು ಹುಟ್ಟಿಸುವಂತಿತ್ತು. ಮಗುವಿಗೆ ಎಷ್ಟು ಪೆಟ್ಟಾಗಿದೆಯೋ ಎಂದು ನಡುಗಿದಳು.

"ತುಂಬಾ ಪೆಟ್ಟಾಗಿದೆಯೆ ರವಿ? ನನ್ನ ಮಗೂನ ಉಳಿಸಿ ಕೊಡ್ರಿ" ಹೇಳುತ್ತಾ ಸುನೀತ ಅಳುವುದಕ್ಕೆ ಮೊದಲು ಮಾಡಿದಳು.

ಅಳಬಾರದೆಂದು ಸಂಜ್ಞೆ ಮಾಡಿದ ರವಿ. ಸೀರೆಯ ಸೆರಗಿನಿಂದ ತುದಿಯನ್ನು ಬಾಯಲ್ಲಿ ಅಮುಕಿಕೊಂಡು ಒತ್ತಿ ಬರುತ್ತಿರುವ ದುಃಖವನ್ನು ಹತ್ತಿಕ್ಕಲು ಪ್ರಯತ್ನಿಸಿದಳು.

"ಗಾಬರಿ ಬೇಡ ಸುನೀತ. ಫ್ರಿಕ್ ಕೊಟ್ಟಿದೀನಿ, ಇನ್ನೂ ಸ್ವಲ್ಪ ಹೊತ್ತಿಗೆಲ್ಲಾ ಎಚ್ಚರವಾಗುತ್ತೆ" ಎಂದು ಹೇಳಿ ನಿಡುಸುಯ್ದ ರವಿ.

ಸ್ವಲ್ಪ ಧೈರ್ಯ ಬಂದಿತು ಸುನೀತಗೆ. ಅವಳು ರವಿಯ ತಗ್ಗಿದ ದನಿಯನ್ನೂ, ಕುಗ್ಗಿದ ಮುಖವನ್ನೂ ಗಮನಿಸಿದಳು. ಅವನು ತುಂಬಾ ಇಳಿದು ಹೋಗಿದ್ದಾನೆನ್ನಿಸಿತು. ತನ್ನಿಂದ ಇವರಿಗೆ ಎಷ್ಟು ಕಷ್ಟ ಬಂತಲ್ಲಾ ಎಂದು ದುಃಖಿಸಿದಳು. ಕೊನೆಗೆ ಮೆಲ್ಲಗೆ

"ರವಿ. ಪ್ರತಿ ಸಾರಿಯೂ ನಿಮ್ಮಿಂದಲೇ ಉಪಕಾರವಾಗ್ತಿದೆ. ಅಮೃತಧಾರೆ ಎರೆದಿರಿ. ಅದಕ್ಕೆ ಬದಲಾಗಿ ನಮ್ಮಿಂದ ಕಹಿಯನ್ನುಣ್ಣುತ್ತಿರುವಿರಿ. ನಿಮಗೆ ಮುಖ ತೋರಿಸಲೂ ನಾಚಿಕೆಯೆನ್ನಿಸುತ್ತದೆ. ಆನಂದನ ಬಾಯಿಂದ ಬಂದ ಕಟುನುಡಿಗಳು ಶಲ್ಯದಂತೆ ನಿಮ್ಮ ಹೃದಯವನ್ನಿರಿದಿರಬೇಕು. ಅವರು ಜರ್ಮನಿಯಿಂದ ಬರುತ್ತಿದ್ದಂತೆ ಇಂತಹ ಸಂಶಯಭೂತವನ್ನು ಹೊತ್ತು ತರುತ್ತಾನೆಂದುಕೊಂಡಿದ್ದರೆ ನಿಮ್ಮಿಂದ ಯಾವುದಕ್ಕೂ ಸಹಾಯವನ್ನಪೇಕ್ಷಿಸುತ್ತಿರಲಿಲ್ಲ" ಎಂದು ದೀರ್ಘವಾಗಿ ನಿಡುಸುಯ್ದು ಒಂದು ಕ್ಷಣ ಸುಮ್ಮನಿದ್ದು ನಂತರ ಹೇಳತೊಡಗಿದಳು.

"ರವಿ. ಗೆಳೆಯನ ಸಂಸಾರಕ್ಕಾಗಿ ನಿಮ್ಮ ಸುಖವನ್ನೇ ಬಲಿಗೊಟ್ಟು ದುಃಖವನ್ನು ಕೊಂಡುಕೊಂಡಂತಾಯಿತು. ಇದಕ್ಕೆಲ್ಲಾ ನಾನೇ ಕಾರಣ ಅನ್ನಿಸುತ್ತೆ. ಅವರೇನೂ ನನ್ನನ್ನು ತಮ್ಮ ಹೃದಯದಿಂದಲೇ ಹೊರದೂಡಿದ್ದಾರೆ. ನಾನು ಅವರಿಗೇನೂ ಸಂಬಂಧ ಇಲ್ಲವೆನ್ನುವಂತೆ ವರ್ತಿಸುತ್ತಿದ್ದಾರೆ. ಅವರ ಹೃದಯದಲ್ಲಿ ಆಳವಾಗಿ ಬೇರೂರಿರುವ ಸಂಶಯದ ಬೇರನ್ನು ಕಿತ್ತೊಗೆಯುವುದು ನನ್ನ ಶಕ್ತಿಗೆ ಮೀರಿದುದಾಗಿದೆ. ನಿಮ್ಮಿಂದ ಸಾಧ್ಯವಾದರೆ ಪ್ರಯತ್ನಿಸಿ ನೋಡೀಂತ ಹೇಳಲು ಒಂದು ದಿನ ನಿಮಗಾಗಿ ಹೇಳಿ ಕಳ್ಸಿದೆ. ನೀವು ಊರ್ನಲ್ಲಿಲ್ಲಾಂತ ತಿಳಿಯಿತು. ಈಗ ಅರ್ಥವಾಗ್ತಿದೆ. ಈ ಕೃತಘ್ನರ ಮುಖ ನೋಡುವುದಕ್ಕೆ ಬೇಸರವಾಗಿ ನಮ್ಮ ಕಣ್ಣಿಗೆ ಮರೆಯಾಗಿದ್ದಿರೆಂದು. ಹೋಗಲಿ, ಕ್ಷಮಿಸಿ ಬಿಡಿ. ಅಲ್ಪರನ್ನು ಕ್ಷಮಿಸುವುದು ದೊಡ್ಡವರ ಗುಣವಲ್ಲವೆ ರವಿ ?"

ಅವಳು ಮುಂದೆ ಇನ್ನೂ ಹೇಳಬೇಕೆಂದಿದ್ದಳು; ಅದನ್ನು ತಡೆದು,

"ಸುನೀತಾ!" ಎಂದಷ್ಟೇ ಹೇಳಿ ಮತ್ತೆ ಸುಮ್ಮನಾದ.

"ರವಿ, ಏನಾದರೂ ಮಾಡಿ ಅವರ ಶಂಕೆಯನ್ನು ನಿವಾರಿಸೋದಕ್ಕೆ ಪ್ರಯತ್ನ ಮಾಡಿ ನೋಡಿ. ಅವರ ಹೃದಯದಿಂದ ಆ ಪಿಶಾಚಿ ತೊಲಗದೆ ಹೋದರೆ ನನ್ನ ದುರಾದೃಷ್ಟಕ್ಕೆ ಕೊನೆಯೇ ಇಲ್ಲವೇನೋ ಎಂದುಕೊಳ್ಳುತ್ತೇನೆ. ಹೀಗೇನಾದರೂ ಆದರೆ ನಿರ್ಮಲ ತಾಯಿಯಿಲ್ಲದ ತಬ್ಬಲಿ ಅನ್ನಿಸಿಕೊಳ್ಳುವ ಪರಿಸ್ಥಿತಿ ಒದಗಿದರೂ ಒದಗಬಹುದು. ಇದುವರೆಗೂ ಅವಳಿಗಾಗಿ ಹಿಂದು ಮುಂದು ನೋಡಿದ್ದಾಯಿತು. ನೀವೊಂದು ಮದುವೆಯಾಗಿ ಅವಳ ರಕ್ಷಣೆಯ ಭಾರವನ್ನು ಹೊತ್ತರೆ ಪರಲೋಕದಲ್ಲಿ ಶಾಂತಿಯಿಂದಿರಬಲ್ಲೆ"

ಇಷ್ಟು ಹೇಳುವವರೆಗೆ ತಡೆ ಹಿಡಿದಿದ್ದ ಕಣ್ಣೀರನ್ನು ಮತ್ತೆ ಕಾಲುವೆಯಾಗಿ ಹರಿಸಿದಳು ಸುನೀತ.

ಆ ಕೊಠಡಿಯಲ್ಲಿ ಬೇರೆ ಯಾರೂ ಇಲ್ಲದಿದ್ದರಿಂದ ಅವಳು ತನ್ನ ಮನಸ್ಸಿನಲ್ಲಿದ್ದುದನ್ನು ಸರಾಗವಾಗಿ ಹೇಳಿಕೊಳ್ಳಲು ಅವಕಾಶವಾಯಿತು.

ರವಿ ಎಂತಹ ಘೋರ ಅಪಮಾನವನ್ನಾಗಲೀ, ಎಷ್ಟೇ ದೊಡ್ಡ ನಿಂದೆಯನ್ನಾಗಲೀ ಸಹಿಸಿಕೊಳ್ಳಬಲ್ಲವನಾಗಿದ್ದ. ಆದರೆ ನಿರ್ಮಲ ತಬ್ಬಲಿಯಾಗುವಳೆಂಬ ಕಲ್ಪನೆಯನ್ನೂ ಕೂಡ ಸಹಿಸಲಾರದವನಾಗಿದ್ದ. ಎಂತಲೇ ಸುನೀತ ಹಾಗಂದಾಗ ಅವನ ಹೃದಯ ಗಡಗಡನೆ ನಡುಗಿತು.

ಅತ್ಯಂತ ಅಧೀರನಾಗಿ ಹೇಳತೊಡಗಿದ.

"ಸುನೀತ ಬೆಲೆಯುಳ್ಳ ಜೀವನವನ್ನು ಹೀಗೆ ಅಂತ್ಯಗೊಳಿಸಿಕೊಳುವ ಕಲ್ಪನೆಯೂ ಕೂಡ ತಪ್ಪೆಂದು ಭಾವಿಸುತ್ತೇನೆ. ಹೀಗೆಲ್ಲಾ ಯೋಚಿಸದಿರಿ."

"ನನ್ನ ಬಾಳಿಗೆ ಯಾವ ಬೆಲೆಯೂ ಇಲ್ಲವಾಗಿದೆ ರವಿ. ಜೀವ ರೋಸಿ ಹೋಗಿದೆ."

"ಕಷ್ಟವನ್ನು ಎದುರಿಸುವ ಧೈರ್ಯ ತಂದುಕೊಳ್ಳಬೇಕು ಸುನೀತ. ಬಾಳಿಗೆ ಬೆಲೆಯಿಲ್ಲವೆಂದು ತಿಳಿಯುವುದು ತಪ್ಪಲ್ಲವೆ?"

"ಹೆಣ್ಣಾದವಳಿಗೆ ಅಂತಹ ಅಪಮಾನದಿಂದ ಎಷ್ಟು ನೋವಾಗಬಹುದೆಂದು ನೀವು ತಿಳಿದಿದ್ದರೆ ಖಂಡಿತಾ ಹೀಗೆ ಹೇಳುತ್ತಿರಲಿಲ್ಲ ರವಿ. ಅನುಭವಿಸುವವರಿಗೇ ಅದು ತಿಳಿಯುತ್ತದೆ."

"ನಿಮಗೆ ನೋವಾಗಿದೆಯೆಂದು ತಿಳಿಯದೆ ಇಲ್ಲ ಸುನೀತ. ಆನಂದನ ಶಂಕೆಯನ್ನು ಖಂಡಿತ ಪರಿಹರಿಸುತ್ತೇನೆ. ನೀವು ನಿಶ್ಚಿಂತೆಯಿಂದಿರಿ."

ಸುನೀತ ಆಶೆ ತುಂಬಿದ ಕಣ್ಣಿನಿಂದ ಅವನ ಕಡೆ ನೋಡುತ್ತಿದ್ದಳು. ಖಂಡಿತ ಪರಿಹರಿಸುತ್ತಾರೆಯೆ? ಅಂದುಕೊಂಡಾಗ ಯಾಕೋ ಅನುಮಾನಿಸಿದಳು ನಂತರ

ಇವರ ಇವರು ಅಂದ ಹಾಗೆಯೇ ಆಗಲಿ. ಆನಂದನ ಹೃದಯಕ್ಕೆ ಮುಸುಕಿರುವ ಶಂಕೆಯ ಮೋಡಗಳು ಚೆದುರಿ ತಿಳಿ ನೀಲಾಗಸದಂತೆ ಆನಂದನ ಹೃದಯ ಶೋಭಿಸಲಿ, ಎಂದು ದಯಾಮಯನಾದ ಭಗವಂತನಲ್ಲಿ ಮೊರೆಯಿಟ್ಟಳು.

ಈ ವೇಳೆಗೆ ನಿರ್ಮಲೆಗೆ ಎಚ್ಚರವಾಗಿ ಮುಲುಗಾಡತೊಡಗಿದ್ದನ್ನು ಕಂಡು ಮಾತನ್ನು ನಿಲ್ಲಿಸಿದರು.

"ಡ್ಯಾಡೀ," ನಿರ್ಮಲೆಯ ಕೊರಳಿನಿಂದ ಸಣ್ಣಗೆ ಹೊರ ಬಿತ್ತು.

"ಮರೀ" ಮೃದುವಾಗಿ ಅವಳ ತಲೆ ನೇವರಿಸಿ ಮಾತಾಡಿಸಿದ ರವಿ.

ನಿರ್ಮಲ ನಿಧಾನವಾಗಿ ಕಣ್ಣು ತೆರೆದಳು. ಸುನೀತ ರವಿ ಇಬ್ಬರೂ ಕಣ್ಣಿಗೆ ಬಿದ್ದರು. ಅವಳ ಮುಖದ ಮೇಲೆ ಹರುಷದ ರೇಖೆಗಳು ಮೂಡಿದವು. ಕಣ್ಣು ಮಿಂಚಿದವು.

ರವಿ...ಸುನೀತ ಪ್ರೀತಿ ಮಮತೆಯಿಂದ ಅವಳ ಕಡೆ ನೋಡುತ್ತಿದ್ದರು. ತೃಪ್ತಿಯಿಂದ ಇವರಿಬ್ಬರ ಕಡೆಗೂ ನೋಡಿದಳು ನಿರ್ಮಲ.

ಆನಂದ ಮನೆಗೆ ಬಂದಾಗ, ಸುನೀತ ಕಾಣಲಿಲ್ಲ. ನಿರ್ಮಲೆಯ ಸುಳಿವೂ ಇದ್ದಂತಿರಲಿಲ್ಲ. ಇಬ್ಬರೂ ಎಲ್ಲಿ ಹೋದರೋ ಎಂದು ಆಶ್ಚರ್ಯವೇ ಆಯಿತು ಆನಂದನಿಗೆ. ಬಟ್ಟೆಗಳನ್ನು ಬದಲಾಯಿಸಿ ಬಚ್ಚಲು ಮನೆಗೆ ಹೋಗಿ ಕೈ ಕಾಲು ಮುಖ ತೊಳೆದು ಬಂದು, ಆರಾಮಾಸನದಲ್ಲಿ ಕುಳಿತಾಗ ಆಳು ಬಂದು ಹೇಳಿದ.

"ಸಂಜೇನಾಗ ವಾಕಿಂಗೋಗಿ ಬರ್ತಾ ಇರೋವಾಗ ನಿರ್ಮಲಮ್ಮಾವ್ರು ರಸ್ತೇಲಿ ಬಿದ್ಬಿಟ್ಟರಂತೆ ಬುದ್ಧಿ, ಆಸ್ಪತ್ರೇಲಿ ಐದಾರಂತೆ ಈಗ. ಹೀಗಂತ ಸೀತಕ್ಕ ಹೇಳುತ್ತಲೂ ಅಮ್ಮಾವ್ರು ಅಲ್ಲಿಗೆ ಹೋದ್ರು."

"ಹೌದೇನೋ?" ಎಂದವನೆ ಆನಂದ ನಿರ್ಮಲೆಯನ್ನು ನೋಡಿಕೊಂಡು ಬರಲು ಆಸ್ಪತ್ರೆಯ ಕಡೆ ಹೊರಟ.

ಸೀತ ಹೊರಗಡೆಯೇ ನಿಂತಿದ್ದಳು. ಆನಂದ ಬರುತ್ತಲೂ ನಿರ್ಮಲ ಇದ್ದ ಕೊಠಡಿಯ ಕಡೆ ಕೈ ಮಾಡಿ ತೋರಿಸಿದಳು. ಆನಂದ ಅಲ್ಲಿಗೆ ಹೋದ. ಒಳಗೆ ಅಡಿಯಿಡುತ್ತಿದ್ದಂತೆ ಅಲ್ಲಿನ ದೃಶ್ಯವನ್ನು ನೋಡಿ ಸ್ತಬ್ಧನಾಗಿ ನಿಂತು ಬಿಟ್ಟ.

ನಿರ್ಮಲ ಮಲಗಿದ್ದ ಮಂಚದ ಆ ಕಡೆ ಈ ಕಡೆ ಕುರ್ಚಿಗಳಲ್ಲಿ ರವಿ ಸುನೀತ ಕುಳಿತಿದ್ದರು. ಅವರಿಬ್ಬರ ಮುಖಗಳೂ ನಿರ್ಮಲೆಯ ತೀರಾ ಸಮೀಪದಲ್ಲಿದ್ದವು. ಇಬ್ಬರ ಕೈಗಳೂ ಅವಳ ತಲೆಯನ್ನು ನೇವರಿಸುತ್ತಿದ್ದವು.ಆ ಮಮತೆಯ ಬಂಧನದಲ್ಲಿ ಅವರು ಮೈಮರೆತಿರುವಂತೆ ತೋರಿತು ಆನಂದನಿಗೆ.

ಪ್ರೇಮದ ಸೆಳೆತಕ್ಕೆ ಯಾವ ಅಂಜಿಕೆಯೂ ಇರುವುದಿಲ್ಲ. ಮಗುವಿನ ಆರೈಕೆಯಲ್ಲಿ ಅದೆಷ್ಟು ತನ್ಮಯರಾಗಿದ್ದಾರೆ? ಈ ಪವಿತ್ರವಾದ ದೃಶ್ಯವನ್ನು ನಾನು ಹೋಗಿ ಕಲುಷಿತಗೊಳಿಸಲಾರೆ. ಇವರು ಇಂದು ಇರುವ ಹಾಗೆ ಮುಂದೆಯೂ ಇರಲಿ. ಎಂದುಕೊಳ್ಳುತ್ತಾ ಭಾರವಾದ ಹೆಜ್ಜೆಗಳನ್ನು ಹಾಕುತ್ತಾ ಹಿಂತಿರುಗಿ ನಡೆದೇ ಬಿಟ್ಟ ಆನಂದ.

ಅವನು ಒಳಗೆ ಹೋಗದೆ ಹಾಗೇ ಹಿಂತಿರುಗಿದುದನ್ನು ನೋಡಿದ ಸೀತ ಒಳಗೆ ಹೋಗಿ ಸುನೀತಗೆ

"ಅಮ್ಮಾ, ಸಾಹೇಬ್ರು ಇಲ್ಲೀತನಕ ಬಂದಿದ್ರಮ್ಮಾ, ಯಾಕೋ ಹಂಗೇ ಹೊರಟೋದ್ರು." ಎಂದು ತಿಳಿಸಿದಳು.

ಏನು ಹೇಳಬೇಕೆಂದು ಸುನೀತಗೆ ತಕ್ಷಣ ಹೊಳೆಯಲಿಲ್ಲ. ಒಂದು ಕ್ಷಣ. ನಂತರ ಸಾವರಿಸಿಕೊಂಡು

"ಬಂದು ಹಾಗೇ ಹೋಗಿ ಬಿಟ್ರು? ನಾವು ನೋಡಲೇ ಇಲ್ಲ"

ಗಾಬರಿಯಿಂದ ರವಿಯ ಕಡೆ ನೋಡಿ ಹೇಳಿದಳು ಸುನೀತ.

ಒಂದು ಕ್ಷಣ ರವಿ ಏನನ್ನೋ ಯೋಚಿಸಿ,

"ನೀವು ಇಲ್ಲೆ ಇರಿ ಸುನೀತ. ಬಂದುಬಿಟ್ಟೆ" ಎಂದವನೇ ಕುಳಿತಲ್ಲಿಂದ ಮೇಲೆದ್ದ.

ಮನೆಯ ಕಡೆ ಹೊರಟಿದ್ದ ಆನಂದನಿಗೆ ಚಿತ್ತ ಸ್ವಾಸ್ಥ್ಯ ತಪ್ಪಿ ಹೋದಂತಾಗಿತ್ತು. ಅವನು ಏನೇನನ್ನೋ ಯೋಚಿಸುತ್ತಾ ನಡೆದಿದ್ದ.

ಕಣ್ಮರೆಯಾಗಿ ನಾನು ಎಲ್ಲಿಗಾದರೂ ಹೋಗುವುದೇ ಮೇಲು. ಅವರು ಮೊದಲಿನ ಹಾಗೆ ಸುಖದಿಂದಿದ್ದಾರು. ಈಗ ಹೊರಡಲು ಇದೇ ಸರಿಯಾದ ಸಮಯ. ಎಂದು ಬೇಗ ಬೇಗನೆ ಮನೆಗೆ ಬಂದವನೇ ತನ್ನ ಪ್ರಯಾಣಕ್ಕೆ ಬೇಕಾದ ಬಟ್ಟೆ ಬರೆಗಳನ್ನು ಜೋಡಿಸಿಕೊಳ್ಳ ತೊಡಗಿದ. ಲೆದರ್ ಸೂಟ್‌ಕೇಸು ತುಂಬುತ್ತಲೂ ಕಿಟ್‌ನಲ್ಲೂ ಕೆಲವು ಅಗತ್ಯವಾದ ಸಾಮಾನುಗಳನ್ನು ಹಾಕಿಕೊಂಡು ಹೊರಡಲು ಅನುವಾದ. ಆಳು ನೋಡಿಕೊಂಡಾನೆಂದು, ಅವನಿಗೆ ಏನೋ ಕೆಲಸ ಹೇಳಿ ಹೊರಗಡೆ ಕಳುಹಿಸಿದ್ದ. ಅವನು ಹೊರಗಡೆ ಬರುತ್ತಿದ್ದಂತೆ, ಬಾಗಿಲ ಬಳಿ ಟಪ್ ಟಪ್ ಬೂಡ್ಸಿನ ಸದ್ದು ಕೇಳಿಸಿತು. ಬೆಚ್ಚಿ ತಲೆಯೆತ್ತಿ ನೋಡಿದ. ರವಿ ಒಳಗೆ ಬರುತ್ತಿದ್ದಾನೆ. ಇವನು ಹಾಲಿನ ಬಾಗಿಲಿಗೆ ಬರುವುದಕ್ಕೂ ರವಿ ವರಾಂಡದಲ್ಲಿ ಅಡಿಯಿರಿಸುವುದಕ್ಕೂ ಸರಿ ಹೋಯಿತು. ಬಂದವನೇ ರವಿ ಬಾಗಿಲಿಗೆ ಅಡ್ಡವಾಗಿ ನಿಂತ. ಯಾರ ಬಾಯಿಂದಲೂ ಮಾತು ಹೊರಡಲಿಲ್ಲ. ಮುಖಗಳು ಮಾತ್ರ ಪರಸ್ಪರ ದಿಟ್ಟಿಸುತ್ತಿದ್ದವು. ಕೊನೆಗೆ ರವಿಯೇ ಮೌನ ಮುರಿದ.

"ಇಷ್ಟು ಹೊತ್ತಿನಲ್ಲಿ ಪ್ರಯಾಣವೆಲ್ಲಿಗೆ ಆನಂದ್?"

"ಮನಸ್ಸು ಬಂದಲ್ಲಿಗೆ."

"ಮನಸ್ಸು ಬಂದಲ್ಲಿಗೆ! ಹುಂ. ಸರಿ, ಕೈ ಹಿಡಿದ ಮಡದಿಗೂ ಒಂದು ಮಾತು ಹೇಳದೆ ಹೀಗೆ ಹೊರಡುವುದು ತಪ್ಪಲ್ಲವೆ?"

"ತಪ್ಪು ಒಪ್ಪುಗಳನ್ನು ತಿಳಿಸಲು ನೀನು ಯಾರು? ಯಾವುದರಿಂದ ನಿನಗೆ ಈ ಅಧಿಕಾರ ಬಂದಿದೆ?"

"ಯಾರಿಂದ ಅನ್ನುತ್ತೀಯಾ? ಕೇಳು. ನನ್ನ ತಂಗಿ ಸುನೀತಳಿಂದ. ನಡೆ ಒಳಗೆ. ಎಲ್ಲವನ್ನೂ ತಿಳಿಸುತ್ತೇನೆ."

ರವಿ ಒಳಗೆ ಹೊರಟ. ಮಂತ್ರಮುಗ್ಧನಂತೆ ಆನಂದ ಅವನನ್ನು ಅನುಕರಿಸಿದ.

ಆನಂದ ಸುಮ್ಮನೆ ನಿಂತಿರುವುದನ್ನು ನೋಡಿ,

"ಟೇಕ್ ಯುವರ್ ಸೀಟ್ ಪ್ಲೀಸ್" ಎಂದು ಸಣ್ಣಗೆ ನಕ್ಕ.

"ನನ್ನ ಸರ್ವಸ್ವವನ್ನೂ ಅಪಹರಿಸಿದ ನೀನು ಈ ಮನೆಯನ್ನೇಕೆ ಬಿಡುತ್ತೀ?" ಎಂದು ಆನಂದ ತನ್ನಲ್ಲೇ ಅಂದುಕೊಂಡು. ಹಾಗೆಯೇ ಕುರ್ಚಿಯಲ್ಲಿ ಧೊಪ್ ಎಂದು ಕುಸಿದ.

"ಇದುವರೆಗೆ ನಾನು ನಿನಗೆ ನಿಜಾಂಶವನ್ನು ತಿಳಿಸದೆ ತಪ್ಪು ಮಾಡಿದಿದೆನೇನೋ ಅನ್ನಿಸುತ್ತೆ, ಆನಂದ್."

ತಾನೊಂದು ಕುರ್ಚಿಯಲ್ಲಿ ಕುಳಿತುಕೊಳ್ಳುತ್ತಾ ಹೇಳಿದ ರವಿ.

"ಅದೇ! ನಿರ್ಮಲ ನಿನ್ನ ಮಗಳು ಎಂದು ತಿಳಿಸಬೇಕೆನ್ನುವುದಲ್ಲವೆ?"

"ಹೌದು. ನಿರ್ಮಲ ನನ್ನ ಮಗಳು. ಇದುವರೆಗೆ ತಿಳಿಸದೆ ಮುಚ್ಚಿಟ್ಟದ್ದು ತಪ್ಪಾಯ್ತಲ್ಲವೆ?"

"ನನಗೆಂದೋ ತಿಳಿದಿತ್ತು ರವಿ. ನೀನು...ಸುನೀತ ಇಬ್ಬರೂ ಸೇರಿ ವಿಮಲೆಯನ್ನು ಕೊಂದಿರಿ. ಆಕೆ ಪ್ರಣ ಮಾಡಿದ್ದಳು. ಬೇಗನೆ ಕಣ್ಣು ಮುಚ್ಚಿದಳು. ಇದನ್ನೆಲ್ಲಾ ನೋಡುವುದು ತಪ್ಪಿತು. ಈಗ ನನ್ನನ್ನು ಜೀವಂತ ಸುಡ್ತಿದೀರಿ. ಇದರಿಂದ ತಪ್ಪಿಸಿಕೊಂಡು ಹೋಗ ಬೇಕಂತಲೇ ನಾನೀಗ ನಿಶ್ಚಯಿಸಿರೋದು. ನಾನು ಕಣ್ಮರೆಯಾದರ ನಿಮ್ಮ ದಾರಿ ನಿಷ್ಕಂಟಕವಾಗುವುದಲ್ಲವೆ?"

ಹೀಗಂದವನೆ ಆನಂದ ಧಿಗ್ಗನೆದ್ದು ತನ್ನ ಸೂಟ್‌ಕೇಸ್‌ಗೆ ಕೈ ಹಾಕಿದ.

ರವಿ ಅವನ ಕೈ ಹಿಡಿದು ಮುಂದೆ ಹೋಗಲು ಬಿಡದೆ

"ಸಿಟ್ಟಿಗೆ, ಆವೇಶಕ್ಕೆ ಮುಖ ಕೊಡಬೇಡ ಆನಂದ್, ಮೊದಲು ನಾನು ಹೇಳೋದನ್ನ ಸ್ವಲ್ಪ ಕೇಳು. ನಂತರ ನಿನಗೆ ಹೇಗೆ ತಿಳಿಯುತ್ತದೋ ಹಾಗೆ ಮಾಡುವಿಯಂತೆ." ಎಂದು ಆನಂದನನ್ನು ಕುರ್ಚಿಯಲ್ಲಿ ಕುಳ್ಳಿರಿಸಿ ತಾನೂ ಕುಳಿತು ಕೊಳ್ಳುತ್ತಾ ಹೇಳಿದ.

"ನಿರ್ಮಲ ನನ್ನ ಮಗು, ನಿಜ ಆನಂದ್. ಆದರೆ ಸುನೀತಳ ಹೊಟ್ಟೆಯಲ್ಲಿ ಹುಟ್ಟಿದ್ದಲ್ಲ. ವಿಮಲೆಯ ಹೊಟ್ಟೆಯಲ್ಲಿ ಹುಟ್ಟಿದ್ದು. ಸುನೀತಳ ಮಗು ಹುಟ್ಟುವುದಕ್ಕೆ ಮುಂಚೆಯೇ, ಹೊಟ್ಟೆಯಲ್ಲೇ ಸತ್ತು ಹೋಗಿತ್ತು."

"ಹಾಗಿದ್ದರೆ ನಿನ್ನ ಮಗುವನ್ನು ಸುನೀತಳ ಹತ್ತಿರವೇಕೆ ಬಿಡುತ್ತಿದ್ದೆ? ನಿನ್ನ ಬಂಧುಗಳು ಸುಮ್ಮನಿರುತ್ತಿದ್ದರೆ? ತಬ್ಬಲಿಯಾದ ಮೊಮ್ಮಗಳನ್ನು ಹೀಗೆ ಬಿಡಲು ಒಪ್ಪುತ್ತಿದ್ದರೆ? ಇಲ್ಲಿಯ ಜನರಾದರೂ ಏನೆಂದು ತಿಳಿದುಕೊಳ್ಳುತ್ತಿರಲಿಲ್ಲ? ವಿಮಲಳ ಜೊತೆಯಲ್ಲೇ ಮಗುವೂ ಹೋಯಿತೆಂದು, ಸುನಿತಳೇ ಕಾಗದ ಬರೆದಿದ್ದಾಳಲ್ಲಾ? ಆ ಲೆಟರ್ ಹಾಗೇ ಇದೆ. ಬೇಕಾದರೆ ತೋರಿಸ್ತೀನಿ ನೋಡು" ಎಂದು ಏಳುವುದರಲ್ಲಿದ್ದ ಆನಂದನನ್ನು ತಡೆದು ರವಿ,

"ಸುನೀತೆಗೆ ನಿಜಾಂಶ ತಿಳಿಯದು ಆನಂದ್. ಒಂದು ವೇಳೆ ತಿಳಿದಿದ್ದರೆ...ಅವಳು..." ಮುಂದೆ ಹೇಳದಾದ. ಅವನ ಕಂಠ ಗದ್ಗದಿತವಾಯಿತು.

"ಏನು ನಿಜಾಂಶ?..."

"ಏನೆಂದು ಹೇಳಬೇಕೆ ಇನ್ನೊಮ್ಮೆ? ಅದೇ ವಿಮಲಳ ಹೊಟ್ಟೆಯಲ್ಲಿ ಹುಟ್ಟಿದುದೆಂದು ಅದನ್ನು ಮುಚ್ಚಿಟ್ಟದ್ದೆ ತಿಳಿಯಿತೆ?"

"ಇದೆಲ್ಲಾ ಇಂಪಾಸಿಬಲ್! ಸುಳ್ಳಿನ ಕಂತೆ."

ಸಿಟ್ಟಿನಿಂದ ಕೂಗಿದ ಆನಂದ.

"ಸ್ವಲ್ಪ ನಿಧಾನಿಸು ಆನಂದ್! ಸ್ವಲ್ಪ ನಿಧಾನಿಸು. ಸುನೀತ ಮಕ್ಕಳಿಗೋಸ್ಕರ ಅದೆಷ್ಟು ಹಂಬಲಿಸುತ್ತಿದ್ದಳು ಅನ್ನೋದನ್ನ ನೀನು ಒಪ್ಪಿಕೊಳ್ತೀಯ ತಾನೆ?"

"ಹೌದು. ಯಾರಿಲ್ಲಾಂದ್ರು"

"ನೀನೊಂದು ದಿನ ನನ್ನ ಕೈಗಳನ್ನು ಹಿಡಿದು ಕೇಳಿದ್ದ, ಸುನೀತ ತನ್ನ ಸಂತಾನವನ್ನು ಕಾಣಲು ತುಂಬಾ ಕಾತುರಳಾಗಿದ್ದಾಳೆ ರವಿ, ಹೆರಿಗೆಯಲ್ಲಿ ಏನಾದ್ರೂ ಹೆಚ್ಚು ಕಡಿಮೆಯಾದ್ರೆ ಅವಳು ಉಳಿಯೋದ ಇಲ್ಲಾನ್ನಿಸುತ್ತೆ. ಅವಳ್ನ ಕಾಪಾಡೋ ಜವಾಬ್ದಾರಿ ನಿನ್ನದು. ನಿನಗಿಂತ ಆತ್ಮೀಯರು ಯಾರೂ ಇಲ್ಲ ನನಗೆ ಅಂತ, ನೆನಪಿದೆಯೆ ಆನಂದ್?"

"ಹೌದು, ಹೇಳಿದ್ದೆ. ಅದಕ್ಕೀಗ ನನ್ನನ್ನು ಜೀವಂತ ಕೊಲ್ಲಬೇಕೆ?"

"ಸ್ವಲ್ಪ ಕೇಳು ಆನಂದ್. ನಿನಗೆ ಕೊಟ್ಟ ಮಾತನ್ನ ಉಳಿಸಿಕೊಳ್ಬೇಕೂಂತ ಸದಾ ಯೋಚಿಸ್ತಾ, ಆಗಾಗೆ ಸುನೀತಳ ಯೋಗಕ್ಷೇಮವನ್ನು ವಿಚಾರಿಸ್ತಿದ್ದೆ. ನಿನ್ನನ್ನೂ ಆಗಾಗ್ಗೆ ನೆನೆಸಿಕೊಂಡು, ನಾವಿಬ್ರೂ ತಂದೆಗಳಾಗ್ತೀವಲ್ಲಾ ಅಂತ ಸಂತೋಷ ಪಡ್ತಿದ್ದೆ. ಆದರೆ ಭವಿಷ್ಯದ ಸುಂದರ ಕಲ್ಪನೆಯ ಅರಮನೇನ ವಾನಿಲ್ಲಿ ಕಟ್ಟಿರಬೇಕಾದ್ರೆ, ಅಲ್ಲಿ ದೈವ ವಿಷಾದ ಸೌಧವನು ನಿರ್ಮಿಸುತ್ತಾ ಇದೆ ಅನ್ನೋದು ನನಗ ಹೇಗೆ ತಿಳಿಯಬೇಕು?"

"ವಿಷಾದ ಸೌಧ?" ಸಿಗರೇಟು ಹಚ್ಚುತ್ತಾ ಕೇಳಿದ ನಂದ್.

"ಹೂಂ ಆನಂದ್, ವಿಷಾದ ಸೌಧ! ಒಂದು ದಿನ ರಾತ್ರೆ ವಿಮಲೆಗೆ ಪೇಯಿನ್ಸ್ ಶುರುವಾಯಿತು. ತಕ್ಷಣ ಆಸ್ಪತ್ರೆಗೆ ಕರೆದೊಯ್ದೆ. ಶಸ್ತ್ರ ಚಿಕಿತ್ಸೆ ಮಾಡಿ ಮಗೂನ ತೆಗೆಯ್ಬೇಕಾಯ್ತು. ಆದರೆ...ಆನಂದ್..." ಮುಂದೆ ಹೇಳಲಾಗಲಿಲ್ಲ. ರವಿಯ ಕಣ್ಣು ಬಟ್ಟಲು ತುಂಬಿ ಬಂದಿತ್ತು. ಆನಂದ ರೆಪ್ಪೆ ಬಡಿಯದವನಂತೆ ಅವನ ಕಡೆ ನೋಡುತ್ತಿದ್ದ. ಸ್ವಲ್ಪ ಸುಧಾರಿಸಿಕೊಂಡಾದ ಮೇಲೆ ರವಿ ಪ್ರಾರಂಭಿಸಿದ.

"ನನ್ನ ದುರಾದೃಷ್ಟಕ್ಕೆ ಏನು ಹೇಳಲಿ! ಈ ನಿರ್ಭಾಗ್ಯನ ಕೈಲಿ ವಿಮಲಾನ ಉಳಿಸ್ಕೊಳ್ಳೋದಕ್ಕೆ ಆಗದೆ ಹೋಯ್ತು. ನನ್ನ ಬಾಳಿಗೆ ಬೆಳಕನ್ನು ಚೆಲ್ಲಿದ ಆ ಜ್ಯೋತಿ ನಂದಿ ಹೋಯಿತು. ಆದರೆ ತುಣುಕು ಪ್ರಕಾಶವನ್ನು ಬಿಟ್ಟು ಹೋಯಿತು ಅದೇ ಪ್ರಕಾಶವೇ ನಿರ್ಮಲ!"

"ಹೌದೆ?"

"ಹೌದು ಆನಂದ್. ಇಷ್ಟರಲ್ಲೇ ಸುನೀತಗೆ ನೋವು ಪ್ರಾರಂಭವಾಗಿದೆಯೆಂದು ತಿಳಿಯಿತು. ವಿಮಲಳ ಕಳೇಬರವನ್ನು ಲೇಬರ್ ವಾರ್ಡ್‌ನಲ್ಲಿಯೇ ಬಿಟ್ಟು, ಮನೆಗೆ ಓಡಿ ಬಂದೆ. ಸುನೀತ ಕಂಗಾಲಾಗಿದ್ದಳು. ಅವಳಿಗಿನ್ನೂ ಏಳು ತಿಂಗಳು ಆಗ. ಏನಾಗುತ್ತದೋ ಅಂತ ಹೆದರಿ ನಡುಗುತ್ತಿದ್ದಳು."

"ಏಳು ತಿಂಗಳಲ್ಲೇ ಹೆರಿಗೆ?"

"ಹೂಂ. ಆಸ್ಪತ್ರೆಗೆ ಕರೆ ತಂದಾಯಿತು. ಆಗೆ ಒಳ್ಳೇ ಮಧ್ಯರಾತ್ರಿಯ ಸಮಯ. ನರ್ಸನ್ನುಳಿದು ಯಾರೂ ಹತ್ತಿರ ಇರಲಿಲ್ಲ. ಆಕೆಗೆ ಹೇಳಿ ಸುನೀತಳನ್ನು ಲೇಬರ್ ವಾರ್ಡಿನ ಆಚೆ ಇರೋ ಇನ್ನೊಂದು ಕೊಠಡಿಗೆ ಕಳಿಸಿ ಕೊಟ್ಟೆ. ಹೊರಗೆ ಬಂದು ಮಂಕಾಗಿ ಕುಳಿತೆ.

ಸ್ವಲ್ಪ ಹೊತ್ತಿನಲ್ಲಿ ನರ್ಸ್ ನನ್ನನ್ನು ಕರೆದಳು, ಹೋದೆ. ಆಕೆ ಒಳಗೆ ಹೋಗಿ ಬೆಂದು ಹೋದಂತಿದ್ದ ಮಾಂಸದ ಮುದ್ದೆಯನ್ನು ತಂದು ತೋರಿಸಿದಾಗ ನನ್ನ ಮಾತನ್ನು ಉಳಿಸಿಕೊಳ್ಳಲಾರದೆ ಹೋದೆ. ಸುನೀತಾಗೆ ಹೇಗೆ ಮುಖ ತೋರಿಸಲಿ? ನನ್ನ ಮಗು ಎಲ್ಲಿ ಎಂದು ಕೇಳಿದರೆ ಏನೆಂದು ಹೇಳಲಿ? ಎಂದು ಹೊಯ್ದಾಡತೊಡಗಿದ್ದೆ."

ಆನಂದ ಸಿಗರೇಟಿನ ಬೂದಿ ಕೊಡವುತ್ತಿದ್ದುದನ್ನು ನೋಡುತ್ತಾ ಮುಂದುವರೆಸಿದ ರವಿ.

"ಆ ವಿಷಮ ಪರಿಸ್ಥಿತೀಲಿ ನನ್ನ ಹೃದಯ ಅದೆಷ್ಟು ರೋದಿಸಿತೋ ನೀನು ತಿಳಿಯಲಾರೆ. ಈ ಸಮಯದಲ್ಲಿ ನೀನಾದರೂ ಇದ್ದಿದ್ದರೆ ಏನಾದರೂ ಹೊಳೆಯುತ್ತಿತ್ತು ಎಂದು ನೂರು ಬಾರಿ ಅಂದುಕೊಂಡೆ. ಇಷ್ಟರಲ್ಲೇ,

"ನರ್ಸ್...ಮಗು...ಎಲ್ಲಿ? ಸುನೀತಳ ಕ್ಷೀಣ ದನಿ ಕೇಳಿಸಿ ಬಂತು.

ತಕ್ಷಣ ನಾನು ನರ್ಸನ್ನು ಹತ್ತಿರ ಕರೆದು ಮೆಲ್ಲಗೆ ಹೇಳಿದೆ.

"ಸಿಸ್ಟರ್, ಮಗು ಸತ್ತಿದೆಯೆಂದು ತಿಳಿದರೆ ಆಕೆ ಪ್ರಾಣ ಬಿಟ್ಟಾಳು. ತಾಯಿಯಿಲ್ಲದ ಆ ಮಗುವನ್ನು ತಂದು ಈಕೆಯ ಮಗ್ಗುಲಿಗೆ ಹಾಕಿ. ಇದನ್ನು ಅಲ್ಲಿ ತಗೊಂಡು ಹೋಗಿ, ಈ ಗುಟ್ಟನ್ನು ಮಾತ್ರ ಯಾರಿಗೂ ತಿಳಿಸಬೇಡಿ...ತಾಯಿದೆ ಕಂದನ ಹಂಬಲ...

ಕಂದನಿಗೆ ಮಮತೆಯ ಮಡಿಲು! ಅಳಿದ ಜೀವಿಗಳು ಮರಳಲಾರವು. ಉಳಿದವರಾದರೂ ಸುಖವಾಗಿರಲಿ ಎನ್ನಿಸಿ ಹೋಗಿ ಸಿಸ್ಟರ್ ಎಂದೆ. ಆಕೆ ಹಾಗೆಯೇ ಮಾಡಿದಳು."

"ನೀನು ಹೇಳ್ತಿರೋದು ನಿಜವೆ ರವಿ?" ಎನ್ನುತ್ತಾ ಕುರ್ಚಿಗೊರಗಿದ್ದ ಆನಂದ ಧಿಗ್ಗನೆದ್ದು ಕೇಳಿದ.

"ನಾನೂ ನೀನೂ ಈಗ ಇಲ್ಲಿ ಕುಳಿತಿರೋದು ಎಷ್ಟು ನಿಜವೋ ಅಷ್ಟೇ ನಿಜ ಆನಂದ್. ವಿಮಲೆ ಕಳೆದು ಹೋದದ್ದು ನನ್ನ ಸರ್ವಸ್ವವೆಲ್ಲವೂ ಹೋದಂತಾಗಿತ್ತು. ಅವಳಿಲ್ಲದ ಮನಸ್ಸೂ...ಮನೆ ಎರಡೂ ಶೂನ್ಯ. ಭಣ ಭಣ.

ಆದರೆ ವಿಮಲ ನನ್ನ ಸುತ್ತ ಹರಡಿದ್ದ ಹಸಿರು ಸಿರಿಯನ್ನೆಲ್ಲಾ ಕೊಂಡೊಯ್ದು, ಮರುಭೂಮಿಯನ್ನು ಹರಡಿ ಹೋಗಿದ್ದರೂ, ಅದರ ಮಧ್ಯೆ ಒಂದು ಓಯಸಿಸ್ಸನ್ನು ಬಿಟ್ಟು ಹೋಗಿದ್ದಳು. ಬಾಯಾರಿಸಿದಾಗ ಬಿಸಿಲಲ್ಲಿ ನಡೆದು ನೆತ್ತಿ ಕಾಲು ಸುಡ ತೊಡಗಿದಾಗ ಆ ಓಯಸಿಸ್ಸಿನ ಬಳಿ ಹೋಗಿ ಶ್ರಮ ಪರಿಹಾರ ಮಾಡಿಕೊಳ್ಳುತ್ತಿದ್ದೆ. ನನ್ನ ನೋವೆಲ್ಲಾ ಪರಿಹಾರವಾಗಿ, ಮನಸ್ಸಿಗೆ ಎಷ್ಟೋ ಶಾಂತಿ ಸಿಕ್ಕುತ್ತಿತ್ತು. ಇಂದು ಆ ...ಓಯಸಿಸ್ಸು..."

ಎಂದಾಗ ರವಿಯ ಕೊರಳ ಸೆರೆಗಳು ಬಿಗಿದು ಬಂದವು. ಹೇಳುವುದನ್ನು ನಿಲ್ಲಿಸಿ ಆನಂದನ ಕಡೆ ನೋಡಿದ. ಆನಂದ ಅವನ ಕಡೆಗೇ ನೋಡುತ್ತಿದ್ದ.

ಸ್ವಲ್ಪ ಹೊತ್ತು ಬಿಟ್ಟು ರವಿ ಮತ್ತೆ ಮುಂದುವರೆಸಿದ.

"ನಿರ್ಮಲ ಮಾತಾಡೋದಕ್ಕೆ ಕಲಿತ ಮೇಲೆ ಮೊದಲ್ನೆ ಸರ್ತಿ ನನ್ನನ್ನು ಡ್ಯಾಡಿ ಅಂತ ಕರೆದಾಗ ಎಷ್ಟು ಸಂತೋಷವಾಗಿತ್ತೂಂತ! ಆದರೆ ಸುನೀತಾಗೆ ಅಷ್ಟೇ ಬೇಸರವಾಗಿತ್ತು, ಮಾಮಾ ಅಂತ ಕರಿ. ನಿಮ್ಮ ಡ್ಯಾಡಿ ಬೇರೆ ಊರಿಗೆ ಹೋಗಿದಾರೆ, ಬರ್ತ್ತಾರೆ. ಆಗ ಅವರ್ನ ಡ್ಯಾಡಿ ಅಂತ ಕರಿಬೇಕು ಎಂದು ಎಷ್ಟು ಹೇಳಿದರೂ ಮಗೂಗೆ ಹಿಡಿಸಲೇ ಇಲ್ಲ. ನಾವು ಬೇಡ. ಅಂತ ಹೇಳ್ತಿದ್ದಕ್ಕೆ ಹೆದರ್ಕ್ಕೊಂಡು ಅವಳಿಗೆ ಜ್ವರ ಬಂದು ಬಿಟ್ಟಿತ್ತು. ಏನಾದ್ರೂ, ಹೆಚ್ಚು ಕಡಿಮೆಯಾದೀತೂಂತ ಆ ವಿಷಯಾನ ಅಲ್ಲಿಗೇ ಬಿಟ್ಟಿದ್ದಾಯ್ತು. ನಿರ್ಮಲ ನನ್ನನ್ನು ಹಾಗೆ ಕರೆಯೋದನ್ನ ಕೇಳಿ ನಿನಗೆ ಸಂಶಯ ಅಲ್ವೇ ?"

ರವಿ ಹೇಳುತ್ತಿದ್ದುದನ್ನು ಕೇಳುತ್ತಾ, ಏನನ್ನೋ ದೀರ್ಘವಾಗಿ ಯೋಚಿಸುತ್ತಿದ್ದ ಆನಂದ ಕೇಳಿದ.

"ಇದೆಲ್ಲಾ ಸರಿ, ವಿಮಲಾನ ಮರೆಯೋದಕ್ಕೆ ನೀನು ಮತ್ತೆ ಮದುವೆ ಆಗಬಹುದಿತ್ತಲ್ಲಾ?"

"ನಿಜ. ನೀನು ಹೇಳಿದ್ದನ್ನೇ ಸುನೀತ ಎಷ್ಟೋ ಸಾರಿ ಕೇಳಿದಳು. ಮಾಡಿಕೊಳ್ಳೀಂತ ಒತ್ತಾಯವನ್ನೂ ಮಾಡಿದ್ದಳು. ಆದ್ರೆ ಬೇಡ ಅಂದೆ ನಾನು. ಅದಕ್ಕೆ ಕಾರಣ ಇಷ್ಟೆ. ಬರುವಾಕೆ ಎಂಥವಳೋ? ಅವಳು ಬಂದ್ಮೇಲೆ ನಿರ್ಮಲಾನ ಹೀಗೇ ಪ್ರೀತಿಯಿಂದ ನೋಡಿಕೊಳ್ಳೋದಕ್ಕೆ ಆಗುತ್ತೋ ಇಲ್ಲವೋ! ಆಕೆಯ ಮನಸ್ಸಿನಲ್ಲಿ ಸಂಶಯದ ಬೀಜವೇನಾದ್ರೂ ಮೊಳೆತರೆ! ಎನ್ನಿಸಿ ಆ ವಿಷಯವನ್ನು ತಳ್ಳಿ ಹಾಕಬೇಕಾಯಿತು ನೋಡು."

ಸ್ವಲ್ಪ ಹೊತ್ತು ಸುಮ್ಮನಿದ್ದು ನಂತರ ಗದ್ಗದಿತನಾಗಿ,

"ಆನಂದ್! ನೀನು ಬಂದ ಮೇಲೆ ಸುನೀತ ನಿರ್ಮಲಾನ ನೋಡಿ ಅದೆಷ್ಟು ಸಂತೋಷಪಡ್ತೀಯೊ ಅಂದ್ಕೊಂಡಿದ್ದೆ. ಆದರೆ ಬರ್ತಿದ್ದ ಹಾಗೆ ನೀನು ಸಂಶಯದ ಭೂತವನ್ನೇ ಹೊತ್ಕೊಂಡು ಬರ್ತೀಯಾಂತ ಯಾರು ಅಂದುಕೊಂಡಿದ್ದರು. ಕ್ರಮೇಣ ಅರ್ಥ ಮಾಡಿಕೊಂಡು ಬದಲಾವಣೆ ಹೊಂದುವೆಯಾಂತ ಅನ್ನಿಸ್ತು. ಆದ್ರೆ ಹಾಗಾಗಲಿಲ್ಲ ನೋಡು. ಇದನ್ನೇನಾದರೂ ನೋಡಿದರೆ ನಂಬಿಕೆಯಾಗುತ್ತೇನೊ" ಎಂದು ಜೇಬಿನಲ್ಲಿದ್ದ ಡೈರಿಯನ್ನು ತೆಗೆದುಕೊಟ್ಟ.

ಆನಂದ ನಿಧಾನವಾಗಿ ಡೈರಿಯಲ್ಲಿ ಕಣ್ಣಾಡಿಸಿದ, ಅದರಲ್ಲಿ ವಿಮಲೆಗೆ ಹೆರಿಗೆಯಾದ ಕಾಲ, ಅವಳು ಕೊನೆಯುಸಿರನ್ನೆಳೆದ ವಿಷದ ಗಳಿಗೆಗಳು! ಮಗುವಿನ ತೂಕ, ಎಲ್ಲವೂ ವಿಶದವಾಗಿ ಬರೆಯಲ್ಪಟ್ಟಿತ್ತು. ಇಷ್ಟೇ ಅಲ್ಲದೆ ಸುನೀತೆಗೆ ಹೆರಿಗೆಯಾದ ಕಾಲ, ಅದು ಎಂತಹ ಕೇಸು, ವಿಮಲೆ ಹೋದ ದುಃಖ ಅವನು ನಿರ್ಮಲಳಿಗೆ ಏನೇನು ಕೊಂಡು ತಂದಿದ್ದ, ತನ್ನ ವರ್ತನೆಗಾಗಿ ಸುನೀತ ಎಷ್ಟೋ ವೇಳೆ ಅನುಮಾನಪಟ್ಟ ದಿನಗಳು, ತಾರೀಕು, ಸಮಯ ಇದನ್ನೆಲ್ಲಾ ಕನ್ನಡಿಯಲ್ಲಿನ ಪ್ರತಿಬಿಂಬದಂತಿತ್ತು. ಇದನ್ನೆಲ್ಲಾ ಓದುತ್ತಿದ್ದಂತೆ ಆನಂದನಿಗಾದ ಸಂಶಯವೆಲ್ಲವೂ ತೊಲಗಿ ಹೋಗಿ ಅವನ ಹೃದಯ ಗಂಗಾ ಜಲದಂತೆ ಶುದ್ಧವಾಯಿತು.

"ರವಿ. ಈ ಮಿತ್ರನಿಂದ ಕೇವಲ ದುಃಖವನ್ನೇ ಕೊಂಡೆ. ಅನುಮಾನದ ಗರಗಸದಿಂದ ನಿನ್ನ ಹೃದಯವನ್ನೇ ಕೊಯ್ದೆ ಎನ್ನಿಸುತ್ತದೆ. ಕ್ಷಮಿಸು" ಎಂದು ಆನಂದ ಧಾವಿಸಿ ಬಂದು, ರವಿಯನ್ನಪ್ಪಿದ. ರವಿಯ ಹೃದಯ ತೃಪ್ತಿಯ ಸುಖವನ್ನನುಭವಿಸಿತು. ಮಾತಿಗೂ ಮಿಗಿಲಾಗಿತ್ತು ಆ ಸುಖ. ಆನಂದಾಶ್ರುಗಳು ಕಣ್ಣಿನಿಂದ ಬಳ ಬಳನೆ ಉದುರಿದವು. ಅವನ ಕೈ ಮಿತ್ರನ ಬೆನ್ನನ್ನು ಪ್ರೀತಿಯಿಂದ ನೇವರಿಸುತ್ತಿತ್ತು. ಮೈತ್ರಿ ಸಂಗಮದ ಸುಖದಲ್ಲಿ ಮೈ ಮರೆತ ಅವರು ಬಹಳ ಹೊತ್ತಿನ ಮೇಲೆ ಹೊರ ಜಗತ್ತಿಗೆ ಬಂದರು. ಬಂಧನದಿಂದ ಬಿಡುಗಡೆ ಹೊಂದಿದಾಗ ಇಬ್ಬರೂ ಸುಮ್ಮನೆ ಕುಳಿತರು. ಮಾತಿಗಿಂತ ಮೌನವೇ ಹಿತವಾಗಿತ್ತೇನೋ ಅವರಿಗೆ. ಹೀಗೇ ಕುಳಿತಿದ್ದ ರವಿ, ಇದ್ದಕ್ಕಿದ್ದಂತೆ ಧಿಗ್ಗನೆದ್ದು ನಿಧಾನವಾಗಿ ಹೊರಟುಹೋದ.

ಆಸ್ಪತ್ರೆಯವರೆಗೂ ಬಂದಿದ್ದ ಆನಂದ ಹಾಗೇ ಹಿಂತಿರುಗಿದುದು, ರವಿ ಅವನ ಹಿಂದೆಯೇ ಹೊರಟು ಹೋದುದರಿಂದ ಅನುಮಾನವಾಗಿ, ಸುನೀತ, ನಿರ್ಮಲೆಯನ್ನು ನೋಡಿಕೊಂಡಿರಲು ಆಯಾಗೆ ಹೇಳಿ ಮನೆ ಕಡೆ ಹೊರಟಳು.

ಅವಳು ಬಂದಾಗ ಆನಂದ ಎತ್ತಲೋ ನೋಡುತ್ತಾ ಕುರ್ಚಿಯಲ್ಲಿ ಕುಳಿತಿದ್ದ. ಒಳಗೆ ನೆರಳು ಬಿದ್ದಂತಾಗಿ, ಬಾಗಿಲಕಡೆ ನೋಡಿದ, ಸುನೀತ ಒಳಗೆ ಅಡಿಯಿರಿಸಿದ್ದಳು. ಪಕ್ಕದಲ್ಲಿ ನೋಡಿದಾಗ ರವಿ ಇರಲಿಲ್ಲ ಯಾವಾಗ ಎದ್ದು ಹೋದನೋ, ಎಂದು ಅವನು ಒಮ್ಮೆ ದೀರ್ಘವಾಗಿ ನಿಡುಸುಯ್ದ.

"ಮಗು ಹೇಗಿದೆ? ಯಾಕೆ ಕರ್ಕೊಂಡು ಬರಲಿಲ್ಲ?" ಎಂದ.

ಅವನ ಮಾತಿನಲ್ಲಿ ಕೋಪವಾಗಲಿ, ವ್ಯಂಗ್ಯವಾಗಲಿ ಇರದಿದ್ದುದನ್ನು ಕಂಡು ಆಶ್ಚರ್ಯವೇ ಆಯಿತು ಸುನೀತೆಗೆ.

"ಏನೂ ಪರವಾಗಿಲ್ಲ. ಈಗ ನಿದ್ದೆ ಹತ್ತಿತ್ತು..." ಎಂದಷ್ಟೇ ಹೇಳಿ. ಅವಳು ಆನಂದ ಕುಳಿತಿದ್ದ ಕುರ್ಚಿಯ ಹಿಂದೆ ಹೋಗಿ ನಿಂತಳು. ಇದ್ದಕ್ಕಿದ್ದಂತೆ ಆನಂದ ಅವಳ ಕಡೆ ತಿರುಗಿ,

"ನನ ಅಪರಾಧವನ್ನು ಮನ್ನಿಸು ಸುನೀ, ನಿನನ್ನ ತುಂಬಾ ನೋಯಿಸಿದೆ"

ಪತಿಯ ಪರಿತಾಪದ ದನಿಯನ್ನು ಕೇಳಿ, ಇದೇನು ಕನಸೋ, ನನಸೋ ಎಂದುಕೊಳ್ಳುವಂತಾಯಿತು ಸುನೀತಗೆ. ಆಸ್ಪತ್ರೆಯವರೆಗೂ ಬಂದಿದ್ದ ಇವರು. ನಾನೂ, ರವಿ, ಒಟ್ಟಿಗೆ ಕುಳಿತಿರುವುದನ್ನು ನೋಡಿ ಹಾಗೇ ಹಿಂದಿರುಗಿರಬೇಕು, ಎಷ್ಟು ಕೋಪಗೊಂಡಿದ್ದಾರೋ ಏನೋ! ಅವರಿಗೂ ಏನೇನು ಮಾತು ಕತೆಯಾಗಿದೆಯೋ! ತನ್ನಮೇಲೆ ಎಷ್ಟು ಹಾರಾಡುತ್ತಾರೋ? ಎಂದುಕೊಂಡಿದ್ದಳು. ಈಗ ನೋಡಿದರೆ ತನ್ನ ಊಹೆ ಸುಳ್ಳು ಎಂದುಕೊಳ್ಳುವಂತಾಯಿತು. ತಕ್ಷಣ ಅವಳ ಮುಖದಮೇಲೆ ಆಶ್ಚರ್ಯ! ವಿಸ್ಮಯ! ಸಂತೋಷ! ಕುತೂಹಲದ ವಿವಿಧ ಭಾವಗಳು ಮೂಡಿ ಮರೆಯಾದವು. ಅವಳು ಅವನ ಕಡೆಗೆ ನೋಡುತ್ತಾ ಅಚಲ ಶಿಲೆಯಂತೆ ನಿಂತಳು.

ಇಷ್ಟರಲ್ಲೇ ಪೆನ್ನಮ್ಮ ನಿರ್ಮಲಳನ್ನು ಎತ್ತಿಕೊಂಡು ಬಂದು "ಮನೆಗೋಗ್ತೀನಿಂತ ಅತ್ತು ಬಿಟ್ರವ್ವ ಅದಕ್ಕೆ ಕರ್ಕಂಡು ಬಂದೆ" ಎನ್ನುತ್ತಾ ಅವಳನ್ನು ಕೆಳ ಗಿಳಿಸಿದಳು.

ಕೆಳಗಿಳಿಯುತ್ತಲೇ ನಿರ್ಮಲ,

"ಡ್ಯಾಡಿ ಎಲ್ಲಮ್ಮಾ?"

"ಡಾಡೀನೆ? ಬರ್ತಾರೆ ಬಾಮ್ಮಾ. ಹೊರಗಡೆ ಎಲ್ಲೋ ಹೋಗಿದಾರೆ."

ಆನಂದ ಪ್ರೀತಿಯಿಂದ ಅವಳನ್ನು ಕರೆದಾಗ,

ಡ್ಯಾಡಿ ಹೆಸರು ಹೇಳಿದಕೂಡಲೆ ಅಪಾಜಿ ಸಿಟ್ಟು ಮಾಡಿಕೊಳ್ತಿದ್ರಲ್ಲಾ! ಈಗ ಎಷ್ಟು ಚೆನ್ನಾಗಿ ಕರಿಯ್ತಿದಾರೆ, ಎಂದು ಆಶ್ಚರ್ಯದಿಂದ, ತಾಯಿಯ ಕಡೆಗೊಮ್ಮೆ ಆನಂದನ ಕಡೆಗೊಮ್ಮೆ ದಿಟ್ಟಿಸಿ ನೋಡತೊಡಗಿದಳು ನಿರ್ಮಲ.

ಆನಂದ ಎದ್ದು ಬಂದು ಕೈ ಹಿಡಿದು ಕರೆದೊಯ್ದಾಗ, ಅವಳು ಸುಮ್ಮನೆ ಅವನ ಹತ್ತಿರ ಹೋದಳು. ಸುನೀತಳ ಕೊರಳಿಂದ ಸಂತೋಷದ ಉಸಿರು ಹೊರಟಿತು.

ಮರುದಿನ ಎಂದಿನಂತೆ, ರವಿ ಮನೆಗೆ ಬರದಿದ್ದಾಗ ಯಾಕೆ ಬಂದಿರಲಿಕ್ಕಿಲ್ಲ! ಎನಿಸಿತು ಆನಂದನಿಗೆ. ಹೇಳಿ ಕಳುಹಿಸಿದಾಗ ಅವನು ಬೆಂಗಳೂರಿಗೆ ಹೋಗಿರುವನೆಂದು ತಿಳಿಯಿತು. ತುಂಬಾ ಬೇಸರ ಪಟ್ಕೊಂಡಿರ್ಬೇಕು. ಅವನ ಮನಸ್ಸನ್ನರಿಯದೆ ಏನೇನೋ ಅಂದು ಆಡಿದ. ಬಂದ ಮೇಲೆ ಇನ್ನೊಂದು ಸಾರಿ ಕ್ಷಮೆ ಕೇಳಬೇಕು. ಆದಷ್ಟು ಬೇಗ ಮದುವೆಯಾಗೆಂದು ಒತ್ತಾಯಮಾಡಬೇಕು. ಮೊದಲಿನಂತೆ ಅವನ ಜೀವನ ಸುಖಕರವಾಗಲಾರದೆ! ಎಂದೆಲ್ಲಾ ಯೋಚಿಸಿದ.

ನಿರ್ಮಲ ಇಷ್ಟು ಹೊತ್ತಿಗಾಗಲೇ ಡ್ಯಾಡಿ ಯಾಕೆ ಬರಲಿಲ್ಲವೆಂದು ಮೂರು ನಾಲ್ಕು ಬಾರಿ ಕೇಳಿದ್ದಳು. ಕೊನೆಗೆ ಆನಂದ

"ಬೆಂಗಳೂರಿಗೆ ಹೋಗಿದ್ದಾನಂತಮ್ಮ" ಎಂದು ತಿಳಿಸಿದ.

"ಬೆಂಗಳೂರಿಗೆ ಯಾಕೆ?" ಬೇಸರಗೊಂಡು ಕೇಳಿದಳು ನಿರ್ಮಲ

"ಏನೋ ಕೆಲ್ಸ ಇದೆಯಂತಮ್ಮ"

ಏನು ಕೆಲಸ? ಅಲ್ಲೂ ಕಾಯಿಲೆಯವರಿದ್ದಾರಾ?

"ಹೂಂ. ಮರಿ. ಅಲ್ಲೂ ತುಂಬಾ ಜನ ಇದ್ದಾರೆ."

"ಹಾಗಾದ್ರೆ ಹೋಗ್ಲಿ?"

"ಕಾಯಿಲೆಯವರಿದ್ರೆ ಹೋಗ್ಬೇಕಾ "

"ಹೂಂ ಪಾಪ! ಅವರಿಗೆ ತುಂಬಾ ನೋವಿರುತ್ತೋ ಏನೋ! ಆ ದಿನ ನನ ಬೆರಳಿಗೆ ಗಾಯ ಆಗಿ ರಕ್ತ ಹರಿದಿತ್ತಲ್ಲಾ! ಎಷ್ಟು ನೋವಾಗಿರುತ್ತೆ, ಅಂತಾ! ಡಾಡಿ ಇಲ್ಲದಿದ್ರೆ ನಂಗೆ ವಾಸೀನೇ ಆಗ್ತಿರಿಲ್ಲ ಗೊತ್ತಾ?"

"ಹಾಗಾದ್ರೆ ಡಾಡಿಗೆ ತುಂಬಾ ಕೆಲಸ ಇದ್ದು ಊರಿಗೆ ಹೋಗಿದ್ರೆ. ನನ್ನ ಹತ್ರ ಆಟ ಆಡಿಕೊಂಡಿರ್ತೀಯಾ?"

"ಹೂಂ. ಇರ್ತೀನಿ. ಆದ್ರೆ ಡ್ಯಾಡಿ ಬಂದುಕೂಡ ಓಡಿಹೋಗಿ ಬಿಡ್ತೀನಿ ಅವರ ಹತ್ರ. ಡ್ಯಾಡೀಂದ್ರೆ ನಂಗೆ ತುಂಬಾ ಇಷ್ಟ!

"ನಾನೂಂದ್ರೆ?"

ಸ್ವಲ್ಪಹೊತ್ತು ಯೋಚಿಸುತ್ತಿದ್ದು ನಂತರ ಹೇಳಿದಳು.

"ನೀನೂ ಅಷ್ಟೆ".

ಅವಳು ಈ ಮಾತನ್ನು ಅರೆಮನಸ್ಸಿನಿಂದ ಹೇಳಿದ್ದಾಳೆಂದು ತಿಳಿಯದೆ ಹೋಗಲಿಲ್ಲ ಆನಂದನಿಗೆ. ಆದರೂ ಪ್ರೀತಿಯಿಂದ ಅವಳನ್ನು ಎತ್ತಿಕೊಂಡು ಲಲ್ಲೆ ಗರೆದ.

ಆನಂದನ ಮನಸ್ಸು ಬದಲಾಯಿಸಿದುದು ಒಂದು ದೊಡ್ಡ ಹಬ್ಬವಾಗಿತ್ತು ಸುನೀತೆಗೆ ರವಿ ತನ್ನ ನಿಷ್ಕಲ್ಮಷ ಪ್ರೀತಿಯ ಬಗ್ಗೆ ಸರಿಯಾಗಿ ತಿಳಿಸಿರಬೇಕು, ಮದುವೆಗೂ ಒಪ್ಪಿರಬೇಕು. ಇದರಿಂದ ಇವರ ಸಂಶಯ ದೂರವಾಗಿದೆ ಎಂದುಕೊಂಡಾಗ, ಇನ್ನು ತನ್ನ ಬಾಳಿನ ಕತ್ತಲು ಕಳೆದು ನವೋದಯವಾಯಿತೆಂದೆನ್ನಿಸಿತು.

ಆದರೆ ರವಿಗೋ ! ಅವನ ಬಾಳಿನ ಕತ್ತಲು ಕರಗಿ, ಹೊಂಗಿರಣ ಮೂಡುವುದು ಎಂದು ? ಸರಿಯಾದ ಹೆಣ್ಣನ್ನು ನೋಡಬೇಕು. ಹತ್ತಿರದ ವ್ಯಕ್ತಿ ಆದರೆ ಉತ್ತಮ. ವಿಮಲಳ ಕಡೆಯವರು ಯಾರಾದರೂ ಇದ್ದಾರೋ ಇಲ್ಲವೋ ತಿಳಿಯದು. ಹಾಗಾದರೆ ಎಲ್ಲಿ ನೋಡುವುದು ? ಎಂದುಕೊಳ್ಳುತ್ತಿದ್ದಂತೆ, ತನ್ನ ಚಿಕ್ಕಮ್ಮನ ನೆನಪಾಯಿತು.

ಮಲತಾಯಿ ಮಾಡಿದ್ದ ಅಹಿತವನ್ನೆಲ್ಲಾ ಮರೆತು ಅವಳ ಮಗಳು ಸುಗುಣಳನ್ನು ತಂದುಕೊಳ್ಳಬೇಕು ಎನ್ನಿಸಿತು. ಸುಗುಣ ಒಳ್ಳೆಯ ಹುಡುಗಿ, ನೋಡಲು ಲಕ್ಷಣವಾಗಿದ್ದಳು. ಈಗ ಬೆಳೆದು ಇನ್ನೂ ಅಂದವಾಗಿ ಕಾಣುತ್ತಿರಬೇಕು. ನಮ್ಮ ಕಡೆಯವಳಾದರೆ, ರವಿ ಹಿಂದಿನಂತೆಯೇ ಬಂದು ಹೋಗಿ ನಿಮ್ಮೊನ ಪ್ರೀತಿಯಿಂದ ನೋಡ್ಕೊಳ್ತಿರಬಹುದು. ಅವಳಂತೂ ಅವರ್ನ ಅಷ್ಟು ಹಚ್ಕಂಡು ಬಿಟ್ಟಿದಾಳೆ, ಅವರೂ ಅಷ್ಟೆ !

ದೇವರ ಕಣ್ಣು ತೆಗೆದು ಅವರಿಗೆ ಬೇಗನೆ ಮಗು ಆದ್ರೆ ನಿಮ್ಮಿಯ ಮಾ ಮೋಹ ತಪ್ಪುತ್ತೆ. ನಿಮ್ಮೊನೂ ಅಷ್ಟೆ. ಆನಂದನಿಗೆ ಚೆನ್ನಾಗಿ ಹೊಂದಿಕೊಂಡಾಳು!

## ೧೨

ಒಂದು ವಾರದ ಮೇಲೆ ರವಿ ಇದ್ದಕ್ಕಿದ್ದಂತೆ ಮನೆಯಲ್ಲಿ ಪ್ರತ್ಯಕ್ಷನಾದ,

ನಿರ್ಮಲ ಅವನನ್ನು ನೋಡುತ್ತಲೂ ಎಲ್ಲಿಗೆ ಹೋಗಿದ್ದೆ ಡ್ಯಾಡಿ ಎಂದು ಅವನ ಕಾಲುಗಳನ್ನು ಬಳಸಿ ನಿಂತಳು.

ರವಿಯ ಗಂಟಲಿನಿಂದ ಮಾತು ಹೊರಡಲಿಲ್ಲ, ಅವನು ಪ್ರೇಮ ಪೂರ್ಣವಾಗಿ ಅವಳ ತಲೆ ನೇವರಿಸತೊಡಗಿದ.

"ಹೌದು ರವಿ. ಎಲ್ಲಿ ಹೋಗಿದ್ದೆ ?" ನಿರ್ಮಲ ತುಂಬಾ ಬೇಸರಗೊಂಡಿದ್ದಳು". ಎಂದ ಆನಂದ.

"ಯಾಕೆ ಬೇಸರವಾಯ್ತು ಮರಿ, ನಿನ್ನ ಡ್ಯಾಡಿ ಇಲ್ಲೇ ಇದಾರಲ್ಲ. ನಿನಗೆ ಗೊಂಬೆ ತಂದ್ಕೊಡ್ತಾರೆ, ನೀನು ಕೇಳಿದ್ದೆಲ್ಲಾ ತಂದುಕೊಡ್ತಾರೆ. ಅವರ ಹತ್ರ ಮಾತಾಡ್ಕೊಳ್ತಿರಬೇಕು ತಿಳಿಯ್ತಾ" ಎಂದ ರವಿ.

ಡ್ಯಾಡಿ ಕೂಡ ಹೀಗಂತರಲ್ಲಾ! ಅಪ್ಪಾಜೀನ ಡ್ಯಾಡಿ ಅನ್ನಬೇಕಂತೆ. ಆಶ್ಚರ್ಯವೇ ಆಯಿತು ನಿರ್ಮಲಾಗೆ, ಅವಳು ರವಿಯ ಕಡೆಗೊಮ್ಮೆ ಆನಂದನ ಕಡೆಗೊಮ್ಮೆ ನೋಡುತ್ತಾ ಪೆಚ್ಚಾಗಿ ನಿಂತಳು.

"ಅವಳು ನಿನ್ಮೇಲೆ ಕೋಪ ಮಾಡಿಕೊಂಡಿದ್ದಾಳೆ, ಇಷ್ಟು ದಿವ್ಸ ಬರ್ಲಿಲ್ಲಾಂತ ಅಲ್ವೇ ನಿರ್ಮಲಾ?" ಆನಂದ ನಗುತ್ತಾ ನಿರ್ಮಲೆಯ ಕಡೆ ನೋಡಿದ.

"ಹೌದು ಮರಿ! ಇನ್ಮೇಲೆ ಇಲ್ಲಿ ಇರೋದೇ ಇಲ್ವಲ್ಲ! ಊರಿಗೆ ಹೋಗ್ತೀನಿ. ಅದ ಏನಾಡ್ತೀಯಾ?" ಎಂದ ರವಿ.

"ಊರಿಗೆ ಯಾಕೆ ಡ್ಯಾಡಿ? ಅಲ್ಲೀನೂ ಕಾಯಿಲೆಯವರಿದಾರಾ?

"ಹೂಂ ಮರಿ. ಅಲ್ಲಿ ತುಂಬಾ ಕಾಯಿಲೆಯವರಿದ್ದಾರೆ."

"ಹಾಗಾದ್ರೆ, ನಿಜ ನಿಜವಾಗ್ಲೂ ಹೋಗಿಬಿಡ್ತೀಯಾ?"

"ಹೂಂ."

"ನಾನೂ ನಿನ್ನ ಜೊತೆ ಬರ್ಲಾ?"

"ಬೇಡ್ಮರಿ. ನೀನಿಲ್ಲೇ ಇರ್ಬೇಕು. ಅದು ಬಹಳ ದೂರ ಊರು. ನಿನ್ನ ಕೈಲಿ ಅಲ್ಲಿರೋದಕ್ಕಾಗೋಲ್ಲ ಆದಾಗ ಬರ್ತಿರ್ತೀನಲ್ಲ ನಿನ್ನ ನೋಡೋದಕ್ಕೆ!"




# ಸ್ವಸ್ತಿಕ್
# ಪರ್ಫ್ಯೂಮ್ಡ್
# ಕ್ಯಾಸ್ಟರ್ ಹೇರ್ ಆಯಿಲ್

**ತಲೆಗೂದಲನ್ನು ಸೊಂಪಾಗಿ, ಆರೋಗ್ಯವಂತವಾಗಿ
ಮತ್ತು ಕಾಂತಿಯುತವಾಗಿಡುತ್ತದೆ.**



ಸ್ವಸ್ತಿಕ್ ಪರ್ಫ್ಯೂಮ್ಡ್ ಕ್ಯಾಸ್ಟರ್ ಹೇರ್ ಆಯಿಲ್ ನಿಮ್ಮ ತಲೆಗೂದಲನ್ನು ದಿನವಿಡೀ ಒಪ್ಪ ಓರಣವಾಗಿ ಇಡುವ ಕೂದಲೆಣ್ಣೆಯಾಗಿದ್ದು ನಿಮ್ಮ ಕುಟುಂಬದವರೆಲ್ಲ ಇದನ್ನು ಮೆಚ್ಚುತ್ತಾರೆ. ಇಂದೇ ಒಂದು ಬಾಟಲಿ ಖರೀದಿ ಮಾಡಿರಿ.

ಸ್ವಸ್ತಿಕ್ ಹೌಸ್‌ಹೋಲ್ಡ್
ಅಂಡ್ ಇಂಡಸ್ಟ್ರಿಯಲ್
ಪ್ರಾಡಕ್ಟ್ಸ್ ಲಿಮಿಟೆಡ್

"ಓ! ಹಾಗಾದ್ರೆ ಕಾಯಲೆಯವರ್ನ ನೋಡ್ಕೊಂಡು ಬೇಗ ಬೇಗ ಬಂದ್ಬಿಡು!"

"ಆಗಲಿ ಮರಿ"

ನಿರ್ಮಲೆಯ ಮುಖದ ಮೇಲೆ ಗೆಲುವು ಮೂಡಿತು. ಅವಳು ತೃಪ್ತಿಯಿಂದ. ರವಿ...ಆನಂದರ ಕಡೆ ನೋಡಿದಳು.

"ಈಗ ಹೋಗ್ತೀಯ ಅಪ್ಪಾಜಿ ಹತ್ರ" ಎಂದ ರವಿ

ಒಂದುಗಳಿಗೆ ಯೋಚಿಸಿ ನಂತರ, "ಹೋಗಲ್ಲ"

"ಹೋ...ಗ...ಲ್ಲಾ?" ಆನಂದ, ರವಿ ಒಟ್ಟಿಗೆ ಉದ ರಿಸಿದರು

"ಈಗ ಹೋಗೋಲ್ಲ. ನೀನು ಊರಿಗೆ ಹೋದಾಗ ಅಪ್ಪಾಜಿ ಹತ್ರ ಹೋಗ್ತೀನಿ ಡ್ಯಾಡಿ. ನೀವು ಬಂದ್ಮೇಲೆ ನಿನ್ನ ಹತ್ತಿರ."

ಅವಳು ಹೀಗೆ ಹೇಳಿದ ಮೇಲೆ ತೃಪ್ತಿಯ ರೇಖೆಯೊಂದು ರವಿಯ ಮುಖದ ಮೇಲೆ ಸುಳಿಯಿತು.

"ಎಲ್ಲಿಗೋ ಹೋಗ್ತೀನಿ ಅಂದೆಯಲ್ಲ, ನಿಜವೆ ನೀನು ಹೇಳೋದು?"

ಆನಂದ ಕೇಳಿದಾಗ,

"ಹೂಂ...ನಿಜ...ಆನಂದ" ಎಂದ ರವಿ.

"ನಿಜವೆ? ಎಲ್ಲಿಗೆ?"

"ಮಿಲಿಟರೀಲಿ ಸರ್ವ್ ಮಾಡಬೇಕೂಂತ ಆಶೆಯಾಯ್ತು ಆನಂದ್. ಅಪ್ಲೈ ಮಾಡಿದ್ದೆ. ಈಗ ಅಪ್ರೂವ್ ಆಗಿ ಬಂದಿದೆ. ನಾಳೇನೆ ಹೊರಡಬೇಕಾಗುತ್ತೆ" ಎಂದು ರವಿ, ಆನಂದನ ಕೈಗೆ ಒಂದು ಲಕೋಟೆಯನ್ನು ಕೊಟ್ಟ. ಅದನ್ನು ಓದಿಕೊಂಡ ಆನಂದ.

"ಇದೇನು ರವಿ ಹೀಗ್ಮಾಡಿದೆ? ಇಲ್ಲಿ ಇರೋದಕ್ಕೆ ಬೇಸರವಾಯ್ತ?"

"ಇನ್ನ ಇಲ್ಲಿ ಏನಿದೆ ಆನಂದ್!"

"ಯಾಕೆ ರವಿ ಇಷ್ಟು ಬೇಸರ? ನಿನ...ಮಗಳು ಎನ್ನಬೇಕೆಂದು ಆನಂದನ ಬಾಯಿಗೆ ಬಂದಿತ್ತು; ಆದರೆ ಸುನೀತ ಬಾಗಿಲಲ್ಲೇ ನಿಂತಿದ್ದರಿಂದ ಹಾಗೇ ತಡೆದುಕೊಂಡ. ಪಾಪ! ತನಗೆ ನಿರ್ಮಲೆಯನ್ನು ಬಿಟ್ಟು ಹೋಗಲು ಅದೆಷ್ಟು ದುಃಖವಾಗುತ್ತಿರಬೇಕು! ವಿಮಲ ಹೋದ ದುಃಖವನ್ನೆಲ್ಲಾ, ಈ ಮಗೂನ ನೋಡ್ಕೊಂಡು ಮರೆತುಬಿಟ್ಟಿದ್ದ. ನಾನು ಏನೇನನ್ನೋ ಊಹಿಸಿಕೊಂಡು ಅವನ ಸುಖಕ್ಕೆ ಮುಳ್ಳಾದೆ. ಮೊದಲೇ ಸ್ವಲ್ಪ ವಿಚಾರ ಮಾಡಬಾರದಾಗಿತ್ತೆ? ಈಗ ಏನಂದುಕೊಂಡರೆ ಏನು. ಆಡಿದ ಮಾತು, ಒಡೆದ ಮುತ್ತು ಹಿಂದಿರುಗೋಲ್ಲ ಎನ್ನುತ್ತಾರೆ. ಹೀಗೆ ಆಯಿತು ಇದೂ, ಎಂದುಕೊಂಡು ನಿಡುಸುಯ್ದ ಆನಂದ.

ರಾತ್ರಿ ಗೆಳೆಯರಿಬ್ಬರೂ ಬಹಳ ಹೊತ್ತಿನವರೆಗೆ ಮಾತಾಡುತ್ತಿದ್ದರು. ಮಾತಿನ ಮಧ್ಯ ಇದ್ದಕ್ಕಿದ್ದಂತೆ ಆನಂದ,

"ರವಿ ಈಗ ಅನ್ನಿಸ್ತಿದೆ. ನಿಜಾಂಶ ಸುನೀತಗೆ ತಿಳಿಸಿದ್ರೆ ಚೆನ್ನಾಗಿತ್ತೇನೋ ಅಂತ. ನಿನಗೆ ಇರುವ ಆ ಒಂದು ಸಂತೋಷವನ್ನು ಈ ಮಿತ್ರನಿಗಾಗಿ ತ್ಯಾಗ ಮಾಡಲು ಯಾಕೆ ನಿಶ್ಚಯಿಸಿದೆ? ನಾನು ಹೇಳಿದ್ರೆ ಸಂತೋಷದಿಂದ ನಿರ್ಮಲಾನ ನಿನಗೆ ಒಪ್ಪಿಸ್ತೇನೆ. ಮಗಳಪ್ರೇಮದಿಂದ ನಿನ್ನನ್ನು ವಂಚಿಸಿದೆನೆಂಬ ನೋವು ನನಗೆ ಸದಾ ಇದ್ದೇ ಇರುತ್ತೆ. ನನ್ನ ಮಾತು ಕೇಳಿ ಒಪ್ಪಿಕೊಂಡು, ಮತ್ತೆ ಸರಿಯಾದ ಹುಡುಗಿಯನ್ನು ನೋಡಿ ಮದುವೆಯಾದು. ಇವರಿಂದ ನಮಗೆಲ್ಲರಿಗೂ ಸಮಾಧಾನವಾಗುತ್ತೆ"

"ಇದೊಂದು ಮಾತು ಬಿಟ್ಟು, ಇನ್ನು ಏನನ್ನಾದರೂ ಹೇಳು ಆನಂದ್ ಒಪ್ಪಿಕೊಳ್ತೀನಿ. ನಿರ್ಮಲ ತನ್ನ ಮಗಳಲ್ಲವೆಂದು ತಿಳಿದರೆ, ಸುನೀತ ಏನುಮಾಡಿಕೊಂಡು ಬಿಡುತ್ತಾಳೋ ಎನ್ನುವ ಹೆದರಿಕೆ ನನಗಿದೆ. ಮಕ್ಕಳಿಗಾಗಿ ಹಂಬಲಿಸುತ್ತಿದ್ದ ಆಕೆಯ ಮಡಿಲನ್ನು ತುಂಬಿದೆ ಈ ಮಗು. ಮತ್ತೆ ನನ್ನದೆಂದು ಕಿತ್ತುಕೊಂಡು ಆಕೆಯ ಮಡಿಲನ್ನು, ಬರಿದು ಮಾಡುವ ಸಾಹಸ ಬೇಡ ಎಂದುಕೊಳ್ಳುತ್ತೇನೆ. ಒಂದು ವೇಳೆ ವಿಮಲ ಜೀವಂತಳಾಗಿದ್ದರೆ ನಿರ್ಮಲಾನ ಸುನೀತಗೆ ಒಪ್ಪಿಸುತ್ತಿದ್ದನೆ? ತಾಯಿಯಿಲ್ಲದ ನನ್ನ ಮಗುವಿಗೆ, ತಾಯಿಯ ಪ್ರೇಮವನ್ನು ಎರೆದು ಬೆಳೆಸಿದ್ದಾಳೆ ಸುನೀತ. ಇದಕ್ಕಿಂತ ಹೆಚ್ಚಾಗಿ ನನ್ನ ಮಗುವಿಗೆ ಇನ್ನೇನು ಬೇಕು? ಆಕೆಯ ಉಪಕಾರವೆ ನನ್ನ ಮೇಲೆ ಹೆಚ್ಚಾದಂತಾಯಿತಲ್ಲವೆ?"

ಆನಂದ ಸ್ವಲ್ಪ ಹೊತ್ತು ಯೋಚಿಸುತ್ತಿದ್ದು,

"ಹೋಗಲಿ, ನೀನು ನಿರ್ಮಲಾಗೆ ಚಿಕ್ಕಮ್ಮನನ್ನು ತಂದುಕೊಂಡು ನನ್ನ ಈ ಕೊನೆಯ ಬೇಡಿಕೆಯನ್ನಾದರೂ ಈಡೇರಿಸ್ತೀಯಾ ರವಿ? ಮಕ್ಕಳು ಮರಿಯಾಗಿ ನಿನ್ನ ಮನ, ಮನೆ ತುಂಬಿದರೆ ನನಗೂ ಸುನೀತಗೂ ಎಷ್ಟೋ ನೆಮ್ಮದಿ."

"ನನ್ನ ಬರಿದಾದ ಮನ, ಮನೆಯನ್ನು ಮತ್ತೆ ಯಾರಿಂದಲೂ ತುಂಬಲು ಸಾಧ್ಯವಿಲ್ಲ ಆನಂದ್. ನಾನು

ಜೀವನದುದ್ದಕ್ಕೂ ಸುಖ ಅನುಭವಿಸುವ ಪುಣ್ಯ ಪಡೆದಿದ್ದರೆ ವಿಮಲೆಯೇಕೆ ಕೈ ಬಿಡುತ್ತಿದ್ದಳು ಹೇಳು?"

ಇನ್ನು ಹೆಚ್ಚು ಹೇಳಿ ಪ್ರಯೋಜನವಿಲ್ಲವೆಂದುಕೊಂಡು ಸುಮ್ಮನಾದ ಆನಂದ. ಅವರಿಬ್ಬರಿಗೂ ನಿದ್ದೆ ಹತ್ತಿದಾಗ ಬಹಳ ಹೊತ್ತಾಗಿ ಹೋಗಿತ್ತು.

ಮರುದಿನ ಸುನೀತ, ಹಬ್ಬದಡಿಗೆಯನ್ನು ತಯಾರಿಸಿದಳು. ಸೇವಿಗೆ ಕೀರು ನಿಂಬೆ ಹುಳಿಚಿತ್ರಾನ್ನ, ಬೋಂಡ, ಹಪಳ, ಸಂಡಿಗೆ. ಎಲಾ ಆ ದಿನ ಹೊಸದಾಗಿ ರವಿ...ವಿಮಲ ತಮ್ಮ ಮನೆಗೆ ಬಂದಿದ್ದಾಗ ಮಾಡಿದಂತೆಯೇ.

ರವಿ ಒಂದೊಂದನ್ನಾಗಿ ರುಚಿ ನೋಡುತ್ತಿದ್ದಂತೆ ಹೇಳಿದ,

"ಅದೇ ತರಹ ಇವೆ ಸುನೀತ ಅಡಿಗೆ. ನಾವು ಮೊದಲು ಬಂದಾಗ ಇತ್ತಲ್ಲ ಹಾಗೆ."

ಹೌದು ಅದೇ ಅಡಿಗೆ! ಅಂದು ವಿಮಲ ರವಿ... ಮೊದಲು ಬಂದಿದ್ದಾಗ ಮಾಡಿದ ಹಾಗೆಯೇ! ರವಿಗೆ ಇದು ವಿಮಲೆಯ ನೆನಪನ್ನು ತರಿಸೀತು ಎನಿಸಿದ್ದರೆ ಬೇರೆ ಅಡಿಗೆಯನ್ನಾದರೂ ಮಾಡಬಹುದಿತ್ತು.

"ಹೂಂ ರವಿ ಎಲ್ಲಾ ಆ ದಿನದ ಅಡಿಗೆಯೇ! ಆದರೆ ಪರಿಸ್ಥಿತಿ ಮಾತ್ರ ಬದಲಾಯಿಸಿ ಹೋಗಿದೆ." ಆನಂದ ಹೇಳಿದಾಗ,

ರವಿ ಶುಷ್ಕ ನಗೆಯನ್ನು ತೋರಿಸಿದ.

"ಆ ಪರಿಸ್ಥಿತೀನ ಬದಲಾಯಿಸಬಹುದಾಗಿತ್ತು ರವಿ ನೀವು ಮನಸ್ಸು ಮಾಡಿದ್ರೆ ವಿಮಲೆಯ ದುಃಖವನ್ನು ಮರೆಸೋ ಅಂತಹ ತಂಗಿಯನ್ನು ತರಬಹುದಾಗಿತ್ತು. ನೀವು ಮಿಲಿಟರೀಲಿ ಕೆಲಸ ಮಾಡಲು ಒಪ್ಪಿಕೊಂಡು ಬಿಟ್ಟಿದೀರಿ. ಆದ್ದರಿಂದ ಅದು ಸಾಧ್ಯವಿಲ್ಲದ ಮಾತಾಗಿದೆ. ಇನ್ನೆಲ್ಲಿ ಆ ಸುಂದರ ದಿನಗಳು!"

ಎನ್ನುತ್ತಾ ನಿಡುಸುಯ್ದಳು ಸುನೀತ,

ಅದೇ ಸುಂದರ ದಿನಗಳೇ ನಮ್ಮ ಜೀವನದುದ್ದಕ್ಕೂ ಇರಬೇಕು,

ಎಂದು ನಿರೀಕ್ಷಿಸುವುದು ತಪ್ಪಲ್ಲವೆ ಸುನೀತ? ಹಗಲಿನ ನಂತರ ರಾತ್ರಿಯಲ್ಲವೆ? "ಹಾಗೇ ನಮ್ಮ ಬಾಳೂ ಕೂಡ ಎನ್ನೋದನ್ನ ಮರೆತು ಹೋದಿರಾ!" ಎಂದಾಗ ರವಿಯ ಗಂಟಲು ಬಿಗಿದು ಬಂದಿತ್ತು–

ಹೊರಡುವ ಸಮಯ ಹತ್ತಿರವಾದಂತೆಲ್ಲಾ ನಿರ್ಮಲಾನ ಬಿಟ್ಟು ಹೋಗುವುದು ಹೇಗೆ? ತಾನು ಯಾಕಾದರೂ ದೂರ ಹೋಗಲು ಒಪ್ಪಿದೆನೊ ಎನ್ನಿಸ ತೊಡಗಿತು ರವಿಗೆ.

ರವಿ ತನ್ನ ಮನೆಯಲ್ಲಿನ ಸಾಮಾನುಗಳನ್ನು ತೆಗೆದುಕೊಳ್ಳಲು ಇಷ್ಟಪಡಲಿಲ್ಲ. ಬಟ್ಟೆ ಬರೆಗಳನ್ನು ಆಸ್ಪತ್ರೆ ಕೆಲಸಗಾರರಿಗೆ, ದಾನಮಾಡಿ ಬಿಟ್ಟ. ವಿಮಲೆಯ ಫೋಟೋ ಮತ್ತು ಕೆಲವು ಪುಸ್ತಕಗಳನ್ನು ಹೊರತು ಏನನ್ನೂ ತೆಗೆದುಕೊಳ್ಳಲಿಲ್ಲ.

ಜೊತೆಗೆ ನಿರ್ಮಲೆಯ ಫೋಟೋ ಒಂದಿದ್ದರೆ ಚೆನ್ನಾಗಿತ್ತು ಎನ್ನಿಸಿತು. ಆನಂದನ ಬಳಿ ಹೇಗೂ ಕ್ಯಾಮರಾ ಇತ್ತು. ಸರಿ ತೆಗೆಯುವುದು ಎಷ್ಟು ಹೊತ್ತಿನ ಕೆಲಸ! ನಿರ್ಮಲೆಯನ್ನು ಎತ್ತಿಕೊಂಡು, ತನ ಮುಂದೆ ನಿಲ್ಲಿಸಿಕೊಂಡು. ಹೂ ತುಂಬಿದ ಗುಲಾಬಿ ಗಿಡದಡಿ ನಿಲ್ಲಿಸಿ, ಹೀಗೆ ಎಷ್ಟೋ ಸ್ನ್ಯಾಪ್ಸ್ ತೆಗೆದ.

"ರವಿ ನಾಲ್ಕು ದಿನ ಮುಂಚೆನಾದರೂ ಬರಬಾರದಾಗಿತ್ತೆ? ಒಟ್ಟಿಗೆ ಕೆಲವು ಘಂಟೆಗಳಾದರೂ ಸಂತೋಷವಾಗಿ ಕಾಲ ಕಳೆಯಬಹುದಾಗಿತ್ತು".

ಎಂದ ಆನಂದ.

"ಮುಂಚೆಯೇ ಬರಬೇಕೆಂಬ ಆಶೆ ನನಗೂ ಇತ್ತು ಆನಂದ್, ಆದರೆ ಅವಕಾಶ ಸಿಕ್ಕಬೇಕಲ್ಲಾ!" ಎಂದಷ್ಟೇ ಹೇಳಿ ಸುಮ್ಮನಾದ ರವಿ.

ರವಿ ಹೊರಡುವ ಸಮಯಕ್ಕೆ. ಆಸ್ಪತ್ರೆಯ ಸಿಬ್ಬಂದಿ, ಇನ್ನೂ ಕೆಲವು ಮಿತ್ರರು ಹೊರಗಡೆ ಕಾದಿದ್ದರು,

ಹೊರಡುವಾಗ ರವಿ. ಆನಂದ ಸುನೀತರಿ[illegible] ಹೇಳಿ. ನಂತರ ನಿರ್ಮಲೆಯ ತಲೆ ಸವರುತ್ತಾ

"ನಾನಿನ್ನ ಬರ್‍ತೀನಿ ನಿಮ್ಮಿ" ಎನ್ನುವಾಗ ಅವ[illegible] ಕರುಳೇ ಕಿತ್ತುಬರುವಂತಾಗಿತ್ತು.

ಹೊರಟು ಬಿಟ್ರಾ ಡ್ಯಾಡಿ! ಬಹಳ ದಿವ್ಸ ಇರ್‍ಬೇಡ[illegible] ಅಲ್ಲಿ. ಬೇಗ್ನೆ ಬಂದುಬಿಡ್ತೀಯಲ್ಲಾ! ಎಂದು ನಿರ್ಮಲೆ[illegible] ಮುದ್ದಾಗಿ ಅಂದಳು "ಆಗಲಿ ಮರಿ" ಎನ್ನುವಾ[illegible] ರವಿಯ ಕಣ್ಣು ತುಂಬಿ ಬಂತು.

ನಿರ್ಮಲ ಎಲ್ಲಿ ನೋಡಿಕೊಂಡುಬಿಡ್ತಾಳೋ ಎಂದು ಅವನು ಒಂದು ಪಕ್ಕಕ್ಕೆ ಮುಖ ತಿರುಗಿ[illegible] ಕೊಂಡು, ಕೈಯಾಡಿಸುತ್ತಾ ಹೊರಟುಬಿಟ್ಟ.

ರವಿಯನ್ನು ಕಳುಹಿಸಲು ಸ್ವಲ್ಪ ದೂರದವರೆಗೆ ಹೋಗಬೇಕೆಂದುಕೊಂಡಿದ್ದ ಆನಂದ. ಆದರೆ ಅವನು ಹೊ[illegible] ರಡುವಾಗ ಮಂತ್ರಮುಗ್ಧನಂತೆ ನಿಂತುಬಿಟ್ಟ. ಅವನಿ[illegible] ರವಿ, ಸುನೀತ. ನಿರ್ಮಲ ಎಲ್ಲರಿಗಿಂತಲೂ ಹೆಚ್ಚು[illegible] ದುಃಖವಾಗಿತ್ತು. ಮಗಳನ್ನು ಅಗಲಿ ಹೋಗಲು ರವಿಗೆ ಎಷ್ಟು ವ್ಯಥೆಯಾಗಿದೆಯೆನ್ನುವುದು ಅವನೊಬ್ಬ[illegible] ನಿಗೆ ಮಾತ್ರ ಗೊತ್ತು.

ತನ್ನ ಕರುಳಿನ ಕುಡಿಯನ್ನು ತನ್ನದೇ ಎಂದು ಹೇಳುವ ಅಧಿಕಾರ ಕಳೆದುಕೊಂಡಿದ್ದ ಗೆಳೆಯನಿಗಾ[illegible] ಮರುಗಿದಾಗ ಅವನ ಕಣ್ಣೂ ಹನಿಯಾಡಿತು.

ಸುನೀತೆಯೂ ಬರುತ್ತಿದ್ದ ದುಃಖವನ್ನು ತಡೆದು ಕೊಳ್ಳಲು ಯತ್ನಿಸುತ್ತಾ ಬಾಗಿಲ ಬಳಿಯೇ ನಿಂತಿ[illegible] ದ್ದಳು. ತುಂಬಿಬಂದ ಕಣ್ಣೀರನ್ನೊರೆಸಿಕೊಳ್ಳುತ್ತಾ ಅವಳು ಹೇಳಿದಳು.

"ವಿಮಲ ಮಗುವನ್ನಾದರೂ ಬಿಟ್ಟು ಹೋಗಿ[illegible] ದ್ದರೆ, ಆ ಬಂಧನ, ವ್ಯಾಮೋಹ ರವಿಯನ್ನು ತಡೆಯು[illegible] ತ್ತಿತ್ತೇನೊ?

ಅವಳು ಹಾಗೇ ಹೇಳಿದ್ದನ್ನು ಕೇಳಿ ಒಂದು ಕ್ಷಣ ಬೆಚ್ಚಿದ ಆನಂದ. ನಂತರ ಸಾವರಿಸಿಕೊಂಡು.

"ಅವನ ಸ್ವಂತ ಮಗು ಇದ್ದಿದ್ದರೂ ಬಿಟ್ಟು ಹೋಗುತ್ತಿದ್ದ. ತ್ಯಾಗಿಗಳನ್ನು ಯಾವ ಬಂಧನವೂ ನಿಲ್ಲಿಸಲಾರದು ಸುನೀ. ಇನ್ನೊಬ್ಬರ ಸುಖಕ್ಕಾಗಿ ತಮಗೆ ಅತ್ಯಂತ ಪ್ರಿಯರಾದವನ್ನು ತೊರೆಯುತ್ತಾರೆ ಅಂತಹ ತ್ಯಾಗಿಗಳಲ್ಲಿ ರವಿಯೂ ಒಬ್ಬನು ಎಂದು ಕೊಳ್ಳುತ್ತೇನೆ" ಎಂದು, ಆನಂದ...ಸುನೀತಳ ಕ[illegible] ನೋಡಿದಾಗ,

ಅವಳು ರವಿ ಹೋದ ಕಡೆಗೆ ದಿಟ್ಟಿಸುತ್ತಿದ್ದಳು.

(ಮುಗಿಯಿತು)





# ಪ್ರತಿಭಾವಂತ ಕಲಾವಿದೆ

# ಪ್ರಮೀಳಾ ಜೋಷಾಯ್

ಸೌಂದರ್ಯವಿದೆ, ಜತೆಗೆ ಅಭಿನಯವೂ ಇದೆ. ಇವೆರಡೂ ಭರವಸೆಗಳು ಒಗ್ಗೂಡಿಯೇ ನನ್ನನ್ನು ಚಿತ್ರರಂಗಕ್ಕೆಳೆಸಿವೆ ಎನ್ನುತ್ತಾಳೆ ಪ್ರಮೀಳಾ ಜೋಷಾಯ್.



ಆಕರ್ಷಕ ನಿಲುವಿನ ಪ್ರಮೀಳಾ ಜೋಷಾಯ್

ಲೇಖನ
**ಶ್ಯಾಮಸುಂದರ ಕುಲಕರ್ಣಿ**

ಫೋಟೋಗಳು
**ಕೆ. ವಿ. ಮುನಿಸ್ವಾಮಿ**



ನಿಮ್ಮ ಸೇವೆಯಲ್ಲಿ....

ದ್ವಿತೀಯ ವರ್ಷದಲ್ಲಿ ಪದಾರ್ಪಣ....

# ವಿಜಯ ಟೆಕ್ಸ್‌ಟೈಲ್ಸ

## ರೋಕ ಬಟ್ಟೆ ವರ್ತಕರು

ಜವಳಿಪೇಟೆ....... ಹುಬ್ಬಳ್ಳಿ

Phone 3790

★

ದೀಪಾವಳಿ
ಸರ್ವರಿಗೂ
ಸುಖಪ್ರದವಾಗಲಿ!

★



ದೀಪಾವಳಿಯು ಸರ್ವರಿಗೂ
ಸುಖ-ಶಾಂತಿಯನ್ನೀಯಲಿ



## ದೀಪಾವಳಿ ಹಬ್ಬಗಳ ರಾಜ!!!

ಹಬ್ಬದ ವೈಭವಕ್ಕಾಗಿ ಇದೋ ಇಲ್ಲವೆ

ಬಗೆ ಬಗೆಯ ಬಟ್ಟೆಗಳ ರಾಶಿ

ಕಣ್ಮನಗಳನ್ನು ಥಳಥಳಿಸುವ ಅತ್ಯಾಧುನಿಕ ಬಟ್ಟೆಗಳು

ಯೋಗ್ಯ ಬೆಲೆಯಲ್ಲಿ ಸಿಗುವ ನಿಮ್ಮ ನೆಚ್ಚಿನ ಸ್ಥಳ.

ಇಂದೇ ಸಂದರ್ಶಿಸಿರಿ



Phone: No. 3790
Res : " 3016
" " 4027

# ಮೆ|| ಎಸ್. ಟಿ. ನಾಝುರೆ ಆ್ಯಂಡ್ ಬ್ರದರ್ಸ

ಜವಳಿ ವರ್ತಕರು, ಜವಳಿಸಾಲ, ಹುಬ್ಬಳ್ಳಿ.

ಬಿರುಗಾಳಿಯ ರಭಸದಿಂದ ಆಕೆ ಮುಂದೆ ಬರಲಿತ್ತಿರುವ ದನ್ನು ಕಂಡೂ ಕರುಬಿ, ಚಿತ್ರದಲ್ಲಿ ಅವಳಿಗೆ ವಿಶೇಷ ಅವಕಾಶ ಸಿಗದಂತೆ ಅವಳಿರುವ ಸನ್ನಿವೇಶಗಳಿಗೆ ಕತ್ತರಿ ಪ್ರಯೋಗ ಮಾಡಿಸುವ ಕಲಾವಿದೆಯರೂ ಉಂಟು.

ಪ್ರಮೀಳಾ ಮೊದಲು ಹವ್ಯಾಸಿ ರಂಗಭೂಮಿಯ ಕಲಾವಿದೆ "ಸಖಾರಾಮ ಬೈಂಡರ್" ನಾಟಕದಲ್ಲಿ ಆಕೆಯ ಅಭಿನಯ ಕಂಡೂ ಮೆಚ್ಚಿದ ನಿರ್ದೇಶಕ ಸತ್ಯ ನಾರಾಯಣ ಆಕೆಗೆ "ಸಹಧರ್ಮಿಣಿ" ಚಿತ್ರದಲ್ಲಿ ಸರೋಜಾದೇವಿಯ ಮಗಳ ಪಾತ್ರ ನೀಡಿದರು.

ಚಿತ್ರದಲ್ಲಿ ಅಭಿನಯಿಸಲು ಆಕೆ ಒಪ್ಪಿದರೂ ಮನೆಯವರನ್ನು ಒಪ್ಪಿಸುವದು ಕಷ್ಟವೇ ಆಯಿತು. ಆದರೂ ಆಕೆ ಧೈರ್ಯ ಮಾಡಿ ಚಿತ್ರರಂಗಕ್ಕೆ ಧುಮುಕಿ ದಳು. ಅದಕ್ಕೆ ತಾಯಿಯ ಸಹಕಾರವೂ ಇತ್ತು.

"ತ್ರಿವೇಣಿ" "ಆಶೀರ್ವಾದ" "ದಾರಿತಪ್ಪಿದ ಮಗ" "ಬಿರುಗಾಳಿ" "ಕನಸು-ನನಸು" ಹಾಗೂ "ಹೊಂಬಿಸಿಲು" ಚಿತ್ರಗಳಲ್ಲಿ ಈವರೆಗೆ ಆಕೆ ಅಭಿನಯಿಸಿದಳು.

ಗೀತಪ್ರಿಯ ಅವರ ಸಹಾಯಕರಾಗಿದ್ದ ನಿರ್ದೇಶಕ ನಾಗೇಶ ಅವರು ಸವದತ್ತಿ ಯಲ್ಲಮ್ಮನ ಕ್ಷೇತ್ರದ ಹಿನ್ನೆಲೆ ಆಧರಿಸಿ "ಹರಕೆ" ಚಿತ್ರವನ್ನು ದಿಗ್ದರ್ಶಿಸಿ ದಾಗ ಅವರಲ್ಲಿ ಪ್ರಮೀಳಾಗೆ ಪ್ರಮುಖ ಪಾತ್ರವನ್ನು ನೀಡಿದರು. ಈಗ ಪರಿಮಳಾ ಕಂಬೈನ್ಸ್‌ರವರ ಚೊಚ್ಚಲು

• ೨೦೪ ನೇ ಪುಟಕ್ಕೆ

← "ಹೊಸ ಚಿತ್ರಗಳನ್ನು ಸದಾ ನಿರೀಕ್ಷಿಸುತ್ತೇನೆ" ಪ್ರಮೀಳಾ ಜೋಷಾಯಿಯ ನಿರೀಕ್ಷೆ ಮತ್ತು ಆಕಾಂಕ್ಷೆ.

ಕನ್ನಡ ಚಿತ್ರರಂಗದಲ್ಲಿ ನಾಯಕಿಯರ ಅಭಾವ ನಾಲ್ಕಾರು ಮುಖಗಳನ್ನು ಬಿಟ್ಟರೆ ಬೇರೆ ಪ್ರತಿಭಾ ವಂತರೇ ಇಲ್ಲವೇನೊ ಎಂಬ ಅಸಮಾಧಾನ. ಇಲ್ಲಿಯ ಪರಿಸ್ಥಿತಿ ಕಂಡು ಭಾಷೆ ಬಾರದವರಿಗೆ ಬಣ್ಣ ಹಚ್ಚಿದ ಸಂದರ್ಭಗಳು ಉಂಟು. ಪರಭಾಷೆಯವರನ್ನು ಎರ ವಲು ತಂದ ಉದಾಹರಣೆಗಳೂ ಬಹಳ.

ನಮ್ಮಲ್ಲಿ ಪ್ರತಿಭೆಗೆ ಕೊರತೆಯೇನೂ ಇಲ್ಲ. ಅಂತಹ ಪ್ರತಿಭೆಗಳನ್ನು ಗುರುತಿಸಿ ಅವರಿಗೆ ಸರಿಯಾದ ಅವಕಾಶ ಕೊಟ್ಟು ಪ್ರೋತ್ಸಾಹಿಸುವ ಪ್ರಯತ್ನ ನಡೆ ಯುವದು ಮಾತ್ರ ತೀರ ಅಪರೂಪ.

ಸಿದ್ದಲಿಂಗಯ್ಯ ಪುಟ್ಟಣ್ಣ ಗಿರೀಶ್ ಕಾರ್ನಾಡ ಕಾರಂತರಂಥ ಕೈಬೆರಳೆಣಿಕೆಯಷ್ಟು ನಿರ್ದೇಶಕರ ಮಾತ್ರ ಆಗಾಗ ಇಂಥ ಯತ್ನ ನಡೆಸಿದ್ದುಂಟು. ಆದರ ಪ್ರತಿಭಾ ಶೋಧನೆ ಒಬ್ಬಿಬ್ಬರು ಮಾಡುವ ಕೆಲಸವಲ್ಲ ಒಂದೆರಡು ಸಲ ನಡೆಸಿ ನಿಲಿಸುವ ಕೆಲಸವೂ ಅಲ್ಲ ಅದು ನಿರಂತರವಾಗಿ ನಡೆಯಬೇಕಾದ ಕಾರ್ಯ.

ಇತ್ತೀಚಿನ ವರ್ಷಗಳಲ್ಲಿ ಬೆಳಕಿಗೆ ಬಂದ ಪದ್ಮಾ ಕುಮಟಾ ಶಾರದಾ, ರೇವತಿ, ಮಂಜುಳಾ ಅವ ಸಾಲಿಗೆ ಸೇರಬಹುದಾದಂಥ ಪ್ರತಿಭಾವಂತ ಕಲಾವಿದೆ ಪ್ರಮೀಳಾ ಜೋಷಾಯಿ.

ಈಕೆಯನ್ನು ಬರೀ ಪ್ರಮೀಳಾ ಎನ್ನುವವರೂ ಉಂಟು. ಮುಪ್ಪಾ ಎಂದು ಮನೆಯವರಿಟ್ಟ ಹೆಸರು



'ಯಶಸ್ಸಿನ ಮೆಟ್ಟಲಗಿಂತ ಅಭಿನಯ ಪ್ರದರ್ಶಿಸ ಮಾತ್ರ ಸಾಕು' ಎನ್ನುವ ಪ್ರಮೀಳಾ



'ಯಶಸ್ಸಿನ ಒಂದು ಮುಖ' ರಾಜಾ ಬೇಟಾ ಚಿತ್ರದಲ್ಲಿ ವಿದ್ಯಾ ಸಿನ್ಹಾ

# ಉತ್ಸಾಹದ ಚಿಲುಮೆ ವಿದ್ಯಾ ಸಿನ್ಹಾ

ಸಂದರ್ಶನ- ಪರಿಚಯ

ಲಿಯೋನಿ ಕಲ್ಲೂರ್

ವಿದ್ಯಾಸಿನ್ಹಾ: ೧೯೭೦ ರ ದಶಕದ ಕಲಾವಿದೆ. ಈಗಿನ ಚಿತ್ರೋದ್ಯಮಕ್ಕನುಸರಿಸಿ ಹೆಸರು ಮಾಡಿಕೊಂಡ ತಾರೆ. ರಾತ್ರಿಕಳೆದು ಬೆಳಗಾಗುವುದರಲ್ಲೇ ಪ್ರಸಿದ್ಧಿಗೆ ಬರುವ ತಾರಾಮಣಿಗಳಿಗೆ ಹೋಲಿಸಿದರೆ ವಿದ್ಯಾ ಸಿನ್ಹಾ ಳದು ತುಂಬ ಪ್ರಭಾವಶಾಲಿ ವ್ಯಕ್ತಿತ್ವ. ಮದುವೆ ಮಾಡಿಕೊಂಡರೆ ಚಿತ್ರೋದ್ಯಮದಲ್ಲಿ ಬೆಲೆ ಕಡಮೆಯಾಗುತ್ತದೆಂದು ಭಾವಿಸಿದ ನಟಿಯರಿಗೆ ಇವಳು ಆದರ್ಶ. ಮದುವೆಯಾದರೂ ಚಿತ್ರರಂಗದಲ್ಲಿ ಪ್ರಸಿದ್ಧಿ ಗಳಿಸಿದ್ದಾಳೆ. ಅಷ್ಟೇ ಅಲ್ಲ ದಿನದಿಂದ ದಿನಕ್ಕೆ ಹೆಚ್ಚೆಚ್ಚು ಜನಪ್ರಿಯತೆಯೂ ಅವಳನ್ನು ಹುಡುಕಿಕೊಂಡು ಬರುತ್ತಿದೆ.

ವಿದ್ಯಾ ಸಿನ್ಹಾ ಅಭಿನಯಿಸಿದ ರಜನೀಗಂಧಾ ಛೋಟಿಸಿಬಾತ್ ಚಿತ್ರಗಳು, ಭಾರತದುದ್ದಗಲಕ್ಕೂ ಜಯಭೇರಿ ಹೊಡೆದಿವೆ. ತನ್ನದೇ ಆದ ಪ್ರೇಕ್ಷಕ ವೃಂದವನ್ನು ಪಡೆದಿವೆ. ವಿದ್ಯಾ ಚಿತ್ರರಂಗದಲ್ಲಿ ಮಧ್ಯಮವರ್ಗದ ಯುವತಿಯನ್ನು ಪ್ರತಿನಿಧಿಸುವ ತಾರೆ. ಅವಳ ಚಲನಚಿತ್ರಗಳನ್ನು ಪ್ರತಿನಿಧಿಸುವಲ್ಲಿ ವಿದ್ಯಾಳದು ಎತ್ತಿದ ಕೈ. ಅಂತೆಯೇ ಅವಳಿಗೆ ಅಷ್ಟೊಂದು ಜನಪ್ರಿಯತೆ.

ವಿದ್ಯಾ ಸಿನ್ಹಾ ಚಿತ್ರರಂಗದಲ್ಲಿ ಮೊದಲು ಕಷ್ಟ ಉಂಡ ನಟಿ. ತಾರೆಯಾಗಬೇಕೆಂಬ ಕನಸನ್ನು ನನಸು ಮಾಡಿದವರು ಬಿಹಾರಿಯವರಾದರೂ ಅವಳಿಗೆ ಪ್ರಸಿದ್ಧಿ ಕೊಟ್ಟವರು ಬಸು ಚಟರ್ಜಿ. ಅದೊಂದು ದೊಡ್ಡ ಕಥೆ, ಅದು ವಿದ್ಯಾಸಿನ್ಹಾಳ ಕಷ್ಟದ ಕಥೆಯೂ ಹೌದು.

ವಿದ್ಯಾ ಸಿನ್ಹಾ ಆಗಿನ್ನೂ ಚಿತ್ರರಂಗಕ್ಕೆ ಹೊಸಹುಡುಗಿ. ಬರೀ ಮಾಡೆಲ್ಲುಗಳಿಗೆ ಪೋಜುಕೊಟ್ಟು "ಶಹಬ್ಬಾಷ್" ಎನ್ನಿಸಿಕೊಂಡಿದ್ದಳು. ೧೯೬೮ರಲ್ಲಿ ಗೋಲ್ಡ್ ಸ್ಪಾಟ್ ಕಂಪನಿ ಸಂಘಟಿಸಿದ ಸೌಂದರ್ಯಸ್ಪರ್ಧೆಯಲ್ಲಿ "ಮಿಸ್‌ಬಾಂಬೆ" ಯಾಗಿ ಜಯಗಳಿಸಿದ್ದಳು. ಅದೊಂದೇ ಆಧಾರದ ಮೇಲೆ ನಿರ್ಮಾಪಕ ಟಿ. ಎಂ. ಬಿಹಾರಿಯವರು ತಮ್ಮ 'ರಾಜಾಕಾಕಾ' ಚಿತ್ರಕ್ಕೆ ನಾಯಕಿ ಪಟ್ಟ ಕೊಟ್ಟಿದ್ದರು. ಬಿಹಾರಿಯವರ ಈ ಸಾಹಸವನ್ನು ಹಳಿದವರು ಬಹಳ. ಅಷ್ಟೇಕೆ ರಾಜೇಶ ಖನ್ನಾ ಕೂಡ, ಹೊಸ ಹುಡುಗಿ ವಿದ್ಯಾ ಸಿನ್ಹಾಳೊಂದಿಗೆ ನಟಿಸಿದರೆ ತನ್ನ ಯಶಸ್ಸು ಹಿಮ್ಮುಖವಾದೀತೆಂದು ಹೆದರಿ ಹಿಂಜರಿದ. ಹಿಡಿದ ಪಟ್ಟು ಬಿಡಲು ಬಿಹಾರಿ ಸಿದ್ಧರಿರಲಿಲ್ಲ. ಕಿರಣಕುಮಾರನನ್ನು ನಾಯಕ ಪಟ್ಟಕ್ಕೆ ಹಾಕಿಕೊಂಡು ಚಿತ್ರ ಮುಗಿಸಿದರು.

ಮುಂದಿನದ್ದು ಎಣಿಕೆಯಂತೇ ಆಯಿತು. ರಾಜಾಕಾಕಾ ಹೆಸರೂ ಗಳಿಸಲಿಲ್ಲ. ಹಣವನ್ನೂ ತರಲಿಲ್ಲ. ಒಂದು ಚಿತ್ರ ಮುಗ್ಗರಿಸಿದಾಗ ಅದರ ನಾಯಕಿಗುಂಟಾಗುವ ದೌರ್ಭಾಗ್ಯವೇ ವಿದ್ಯಾಳಿಗೊದಗಿತು. ಯಾವ ನಿರ್ಮಾಪಕ ನಿರ್ದೇಶಕನೂ, ಅವಳತ್ತ ನೋಡಲಿಲ್ಲ. ಪರಿಸ್ಥಿತಿ ಹೀಗಿರುವಾಗ ದಿಗ್ದರ್ಶಕ ಬಸು ಚಟರ್ಜಿಯವರು ತಮ್ಮ 'ರಜನೀಗಂಧಾ'ಕ್ಕಾಗಿ ವಿದ್ಯಾಳಿಂದ ಸಹಿ ಪಡೆದರು. ಬಸು ಚಟರ್ಜಿಯವರಿಗೂ ಅಪಶ್ರುತಿಗಳು ಕೇಳಿ ಬಂದವು. ಆದರೂ ಲೆಕ್ಕಿಸಲಿಲ್ಲ. ಅಮೋಲ ಪಾಲೇಕರನನ್ನು ವಿದ್ಯಾಳೊಂದಿಗೆ ಸೇರಿಸಿ ಚಿತ್ರ ಮುಗಿಸಿದರು.

ಅರ್ಥವಿಲ್ಲದ ಮತ್ತು ತಮಗೆ ಸಂಬಂಧಿಸಿರದ ಚಿತ್ರಗಳನ್ನೇ ನೋಡಿ ಬೇಸತ್ತಿದ್ದ ಪ್ರೇಕ್ಷಕ ವರ್ಗ, 'ರಜನೀಗಂಧಾ'ವನ್ನು ಮೆಚ್ಚಿಕೊಂಡಾಡಿತು. ಹೋದ ಹೋದಲ್ಲೆಲ್ಲ ತಿಂಗಳು ವರ್ಷಗಟ್ಟಲೇ ನಡೆದು ಅಮೋಲ ವಿದ್ಯಾರ ಸಹಜ ಅಭಿನಯವನ್ನು ನಿಜವಾದ ಅಭಿನಯವೆಂದು ಸಾರಿತು. ಇತ್ತೀಚೆಗೆ ಬಂದ 'ಛೋಟಿಸಿ ಬಾತ್' ಚಿತ್ರಕ್ಕೂ ಕೂಡ ಜನತೆ ಅದೇ ರೀತಿ ಪ್ರೋತ್ಸಾಹವಿತ್ತಿದೆ. ಅವೆರಡೂ ಚಿತ್ರ ಪ್ರೇಕ್ಷಕರ ಮನದಾಳದಲ್ಲಿ ಅದೆಷ್ಟು ಪ್ರಭಾವಿಯಾಗಿ ಕೆಳಿತಿದೆಯೆಂದರೆ.ಪ್ರತಿ ತರುಣ ವಿದ್ಯಾ ಸಿನ್ಹಾಳಲ್ಲಿ ತನ್ನ ಪ್ರೇಯಸಿಯನ್ನು ಹುಡುಕಿದರೆ, ಪ್ರತಿ ತರುಣಿ ವಿದ್ಯಾಳನ್ನೇ ತನ್ನ ಪ್ರತಿರೂಪವೆಂದು ಭಾವಿಸಿ ಆನಂದ ಪಟ್ಟವಳು. ಇಂತಹ ಅಭಿನಯ

ಸಾಮರ್ಥ್ಯವನ್ನು ಪಡೆದ ಕೆಲವೇ ತಾರೆಯರಲ್ಲೊಬ್ಬಳು ವಿದ್ಯಾ ಸಿನ್ಹಾ.

ಈ ಹೊಸತಾರೆಯನ್ನು ಕರ್ಮವೀರದ ದೀಪಾವಳಿ ಸಂಚಿಕೆಗೆ ಪರಿಚಯಿಸಬೇಕೆಂದು ಸಂಪಾದಕರ ಆಸೆ. ಅವರ ಆಸೆಯನ್ನು ನಾನು ಅವಳ ಕಾರ್ಯದರ್ಶಿ ಶ್ರೀಧರ್ ಪ್ರಸಾದ್‌ರಿಗೆ ತಿಳಿಸಿದಾಗ ಸಂತೋಷದಿಂದ ಒಪ್ಪಿ ಸಂದರ್ಶನದ ಏರ್ಪಾಡು ಮಾಡಿದರು.

ಮುಂಬಯಿಯ ಬಿ. ಆರ್. ಫಿಲ್ಮಂ ಡಬ್ಬಿಂಗ್ ಥಿಯೇಟರ್‌ದಲ್ಲಿ ನಮ್ಮ ಸಂದರ್ಶನ. ಅಲ್ಲಿ ವಿದ್ಯಾ "ಮುಕ್ತಿ" ಚಿತ್ರದ ಡಬ್ಬಿಂಗ್ ಕಾರ್ಯದಲ್ಲಿ ನಿರತಳಾಗಿದ್ದಳು. ಚಿತ್ರೀಕರಣದ ಮಧ್ಯೆ ಬಿಡುವು ಮಾಡಿಕೊಂಡು ವಿದ್ಯಾ ಸಂದರ್ಶನ ನೀಡಿದರು. ಸಂದರ್ಶನ ಸಮಯದಲ್ಲಿ ವಿದ್ಯಾ ನಗುನಗುತ್ತಲೇ ಉತ್ತರ ಕೊಟ್ಟಳು. ಅವಳು ನಿಗರ್ವಿ. ಕೀರ್ತಿಯ ಹಂಬಲವಿಲ್ಲ. ಈಗ ತನ್ನ ಕೈಯಲ್ಲಿ ಸುಮಾರು ೫೦ ಚಿತ್ರಗಳಿದ್ದರೂ, ದೊಡ್ಡ ನಟಿ ಎಂದು ಭಾವಿಸಿಲ್ಲ. ಅವಳಿಗೆ ಸುದ್ದಿಯ ಗೊಂದಲಬೇಡ. ಅಂತೆಯೇ ಪತ್ರಿಕೆಗಳು ಅವಳ ಬಗೆಗೆ ಯಾವಾಗಲೂ ಮೆಚ್ಚುಗೆಯ ಮಾತನ್ನೇ ಬರೆಯುತ್ತವೆ.

ನನ್ನ ಸಂದರ್ಶನದ ಮೊದಲನೆಯ ಪ್ರಶ್ನೆಗೆ ನೇರವಾಗಿ ಉತ್ತರ ಕೊಟ್ಟಳು ವಿದ್ಯಾ. ಅವಳು ಹೇಳಿದಂತೆ "ವಿದ್ಯಾಳ ಮನೆ ವಿವಿಧ ಭಾಷೆಯ ವಿವಿಧ ಸಂಸ್ಕೃತಿಗಳ ಸಂಗಮ. ತಂದೆ ಪ್ರತಾಪ ಸಿನ್ಹ ಮೂಲತಃ ಪಂಜಾಬ್‌ದವರು. ಈಗ ಮುಂಬೈಯಲ್ಲಿ ಚಿತ್ರ ವಿತರಕರು. ತಾಯಿ [illegible] ದ್ದರಿಂದ ತಾಯಿಯ ತವರಿನಲ್ಲಿಯೇ ಬೆಳೆಯುವ ಸಂದರ್ಭ. ಸೋದರ ಮಾವಂದಿರಿಬ್ಬರಲ್ಲಿ ಒಬ್ಬರೆ ಮಹಾರಾಷ್ಟ್ರದ ಹುಡುಗಿಯನ್ನು ಲಗ್ನವಾಗಿದ್ದರೆ, ಇನ್ನೊಬ್ಬರು ಗುಜರಾತೀ ಹುಡುಗಿಯನ್ನು ಮದುವೆಯಾಗಿದ್ದಾರೆ. ವಿದ್ಯಾಳ ತಂಗಿ ಗುಜರಾತಿ ಜೈನ ಯುವಕನನ್ನು ಲಗ್ನ ಮಾಡಿಕೊಂಡಿದ್ದಾಳೆ. ವಿದ್ಯಾ ಸಿನ್ಹ ಮದುವೆಯಾದದ್ದು ದಕ್ಷಿಣ ಭಾರತೀಯನನ್ನು. ಅವರ ಹೆಸರು ವೆಂಕಟ.

ವಿದ್ಯಾಳದು ಹುಟ್ಟಿನೊಂದಿಗೇ ಚಿತ್ರರಂಗದ ಸಂಪರ್ಕ. ವಿದ್ಯಾ ಸಿನ್ಹಾ ಹುಟ್ಟಿದಾಗ ಅವರಪ್ಪ ದೇವಾನಂದನಿಗೆ ಈ ಸಿಹಿ ಸುದ್ದಿಯನ್ನು ತಿಳಿಸಿದರಂತೆ. ದೇವ್ ಸಾಹೇಬ್ "ಹುಡುಗಿಯ ಹೆಸರೇನಿಡುತೀರಿ ?" ಎಂದು ಪ್ರಶ್ನಿಸಿದಾಗ ವಿದ್ಯಾರ ತಂದೆ "ವಿದ್ಯಾ" ಎಂದರಂತೆ. ದೇವಾನಂದ ತಮ್ಮ ಚಿತ್ರಕ್ಕೂ ಕೂಡ 'ವಿದ್ಯಾ' ಎಂದೇ ಹೆಸರಿಟ್ಟರಂತೆ.

ನಾನು ವಿದ್ಯಾ ಸಿನ್ಹಾಳಿಗೆ ವೈಯಕ್ತಿಕ ಪ್ರಶ್ನೆ ಕೇಳಿದೆ:

"ನೋಡಿ ವಿದ್ಯಾ ಅವರೆ, ಇದು ನಿಮ್ಮ ಖಾಸಗೀ ಜೀವನಕ್ಕೆ ಸಂಬಂಧಿಸಿದ ಪ್ರಶ್ನೆ ಕೇಳ್ತಾ ಇದೀನಿ! ನೀವು ಚಿತ್ರರಂಗದಲ್ಲಿ ಗಳಿಸಿದ ಯಶಸ್ಸಿನ ಬಗ್ಗೆ ನಿಮ್ಮ ಪತಿಗೆ ಏನೂ ಅನ್ನಿಸಿಲ್ಲವೆ? ಚಿತ್ರರಂಗದಲ್ಲಿ ನೀವು ಭಾಗವಹಿಸುವಾಗ ಅವರೂ ಬರ್‍ತಾರಾ? ಅಥವಾ ಮನೆಯಲ್ಲಿ ಮಕ್ಕಳನ್ನು ಸಂಭಾಳಿಸಿಕೊಂಡು ಇರ್‍ತಾರಾ?"

ನನ್ನ ಪ್ರಶ್ನೆಗೆ ವಿದ್ಯಾ ಬೇಸರ ಪಟ್ಟುಕೊಳ್ಳಬಹುದೆಂಬ ನಿರೀಕ್ಷೆ ಸುಳ್ಳಾಯಿತು. ನನ್ನ ಪ್ರಶ್ನೆಯನ್ನು ಅರ್ಥಮಾಡಿಕೊಂಡು ತಿಳಿಸಿಹೇಳುವ ರೀತಿಯಲ್ಲಿ ಉತ್ತರಕೊಟ್ಟಳು.

"ನೀವುಗಳು ಭಾವಿಸಿದಂತೆ, ನನ್ನ ಪತಿ ಅಷ್ಟು ಬ್ರೋಡ್‌ಮೈಂಡೆಡ್ ಅಲ್ಲ. ನಮ್ಮದು ಪ್ರೇಮವಿವಾಹ. ಒಬ್ಬರನ್ನೊಬ್ಬರು ಅರಿತುಕೊಂಡಿದ್ದೇವೆ. ಎಲ್ಲ ಹುಡುಗ ಹುಡುಗಿಯರಂತೆ ಮೊದಲ ನೋಟಕ್ಕೇ ಇಬ್ಬರೂ ಮದುವೆಗೆ ನಿರ್ಧರಿಸಿದವರಲ್ಲ. ಆರು ವರ್ಷಗಳವರೆಗೆ ಒಬ್ಬರನ್ನೊಬ್ಬರು ತಿಳಿದುಕೊಳ್ಳುವಲ್ಲಿ ಹೆಣಗಾಡಿದ್ದೇವೆ. ಅನಂತರ ಪರಸ್ಪರ ಬೇಡಿಕೆಗಳನ್ನು ಪೂರೈಸುವ ಭರವಸೆಯಿಂದಲೇ ಮದುವೆ ಮಾಡಿಕೊಂಡಿದ್ದೇವೆ. ನನಗೆ ನೀವೆಲ್ಲ ತಿಳಿದಂತೆ ಮಕ್ಕಳಾವೂ ಇಲ್ಲ. ಇನ್ನು ನೀವು ಮೋಜಿಗಾಗಿ ಕೇಳಿದಂತೆ ನನ್ನ ಪತಿ ನನ್ನ ಚಿತ್ರರಂಗದ ಪ್ರಚಾರದ ಬಗ್ಗೆ ಯಾವ ಮತ್ಸರವನ್ನೂ ಪಡುವುದಿಲ್ಲ. ಚಿತ್ರರಂಗದ ಗಲಾಟೆಯೂ ಅವರಿಗೆ ಬೇಕಿಲ್ಲ. "ರಜನೀಗಂಧಾ" ಸಿಲ್ವರ್ ಜ್ಯುಬಿಲಿಯನ್ನು ಆಚರಿಸಿದಾಗ ಮಾತ್ರ ನನ್ನೊಂದಿಗೆ ಬಂದಿದ್ದರು."

ವಿದ್ಯಾ ಸಿನ್ಹಾ ಚಿತ್ರರಂಗದ ಬಗ್ಗೆ ತುಂಬ ತಿಳಿದ ನಟಿ. ಅಂತೆಯೇ ಚಿತ್ರರಂಗದ ಆಗುಹೋಗುಗಳ ಬಗೆಗೆ ವಿಚಾರಾತ್ಮಕ ವಿಚಾರ ನೀಡುತ್ತಾಳೆ. ತೆರೆಯ ಮೇಲೆ ಚುಂಬನದ ಬಗೆಗೆ ವಿದ್ಯಾಳದು ವಿರೋಧಕರ ಉತ್ತರ. ನಮ್ಮ ಸಂಸ್ಕೃತಿ, ಸಂಪ್ರದಾಯದ ಬಗೆಗೆ ವಿದ್ಯಾ ಸಿನ್ಹಾಳಿಗೆ ಅಪಾರ ಗೌರವ. ಸಂಸ್ಕೃತಿಗೆ ಕಳಂಕ ತರುವ ಯಾವ ವಿಧವನ್ನೂ ಚಿತ್ರಗಳಲ್ಲಿ ಪ್ರತಿನಿಧಿಸಬಾರದೆಂಬುದು ವಿದ್ಯಾ ಸಿನ್ಹಾಳ ಅಭಿಪ್ರಾಯ.

ಹಾಗೆ ನೋಡಿದರೆ ವಿದ್ಯಾ ಸಿನ್ಹಾ ಹಳೆಯದನ್ನೇ ಪ್ರತಿನಿಧಿಸುವ ಮನೋಭಾವದವಳಲ್ಲ. "ಚಾಲೂ ಮೇರಾ ನಾಮ್" ದಂತಹ ಚಿತ್ರದಲಿ ಅಭಿನಯಿಸಿ



[illegible]
[illegible] ವಿದ್ಯಾ ಸಿನ್ಹಾ.

ಚಾಲೂ ಹುಡುಗಿ ಎನಿಸಿದ್ದಾಳೆ. ಆ ಬಗ್ಗೆ ಕೇಳಿದಾಗ ವಿದ್ಯಾ ಸಿನ್ಹಾ ಗಂಭೀರವಾಗಿ ಉತ್ತರ ಕೊಟ್ಟಳು. "ಕಲಾವಿದೆಗೆ ಪ್ರತಿಯೊಂದು ತರದ ಅಭಿನಯವೂ ಬೇಕು. ಆದರೆ ಚಾಲೂತನದ ಹೆಸರಿನಲ್ಲಿ ಅಂಗಾಂಗಗಳನ್ನು ತೋರಿಸಿ ಮೈ ಮಾರಿಕೊಳ್ಳುವ ವಿಧಾನ ಸಲ್ಲದು. ದುರ್ದೈವವಶಾತ್ ಅಂತಹ ಕಲಾವಿದೆಯರಿಗೆ ಸೆಕ್ಸಬಾಂಬ್, ಸೆಕ್ಸಿ ಮುಂತಾದ ಹೆಸರಿನಿಂದ ಗುರುತಿಸುತ್ತಾರೆ. ಸಿನಿಪ್ರಿಯರನ್ನು ತಣಿಸುವುದಕ್ಕೋಸ್ಕರ ಅಂಗಾಂಗಗಳನ್ನು ಮಾರಿಕೊಳ್ಳುವವಳು ತಾರೆಯೇ ಅಲ್ಲ" ಎಂಬುದು ವಿದ್ಯಾ ಸಿನ್ಹಾಳ ಅಭಿಪ್ರಾಯ. "ಚಾಲೂ ಮೇರಾ ನಾಮ್" ಚಿತ್ರದ ಅಭಿನಯ ಸ್ವತಃ ವಿದ್ಯಾಳಿಗೇ ತೃಪ್ತಿ ತಂದಿದೆಯಂತೆ. ಅಂತಹ ಚಿತ್ರಗಳಲ್ಲೂ ಜನತೆ ನನ್ನನ್ನು ಮೆಚ್ಚುತ್ತಾರೆ. ಅಂತೆಯೇ ನನ್ನ ಕೈಯಲ್ಲಿ ೫೦ ಕ್ಕೂ ಹೆಚ್ಚು ಚಿತ್ರಗಳಿವೆ ಎಂದು ವಿದ್ಯಾ ತನ್ನನ್ನು ಸಮರ್ಥಿಸಿಕೊಳ್ಳುತ್ತಾಳೆ.

ವಿದ್ಯಾ ಸಿನ್ಹಾಳ ಈ ಜನಪ್ರಿಯತೆ, ಯಶಸ್ಸು, ಕೇವಲ ಆಕಸ್ಮಿಕ ಎಂಬ ಅಪವಾದವೂ ಕೇಳಬರುತ್ತದೆ. ಆ ಕುರಿತು ಅವಳನ್ನು ಕೇಳಿದಾಗ ಅಷ್ಟೇ ಬಲವಾಗಿ ನಿರಾಕರಿಸಿದಳು. ನಾನು ಆಸ್ತಿಕಳು. ದೇವರಲ್ಲಿ ನಂಬುಗೆ ಇದೆ. ನನ್ನ ಯಶಸ್ಸಿಗೆ ಅದೃಷ್ಟ ಶಕ್ತಿಯೂ ಕಾರಣ. ದೇವರ ಮೇಲಿನ ಅಪಾರ ಭಕ್ತಿಯೇ ನನ್ನನ್ನು ಮುಂದೆ ತಂದಿದೆ. ದೇವರ ದಯೆ ಇಲ್ಲದಿದ್ದಲ್ಲಿ ನಾನು ಎಂದೋ ನಿರ್ನಾಮವಾಗಿ ಹೋಗುತ್ತಿದ್ದೆ ಎಂದು ವಿದ್ಯಾ ಸಿನ್ಹಾಳ ನೇರ ಉತ್ತರ.

ವಿದ್ಯಾಸಿನ್ಹಾ ಈಗ ಮೈಚಳಿ ಬಿಟ್ಟ ಕಲಾವಿದೆ ಮೊದ ಮೊದಲು ಅಂಜುಬುರುಕಿ ನಾಚಿಕೆಗುಳಿಯಾಗಿದ್ದ ವಿದ್ಯಾ ಈಗ ಬಂದವರೆದುರು ಮನಬಿಚ್ಚಿ ಮಾತನಾಡುತ್ತಾಳೆ. ತನ್ನ ಅಭಿಪ್ರಾಯವನ್ನು ನೇರವಾಗಿ ಹೇಳುತ್ತಾಳೆ. ಮಧ್ಯಮ ವರ್ಗದ ಯುವತಿಯ ಪಾತ್ರಕ್ಕೆ ಮಾತ್ರ ಲಾಯಕ್ಕೆಂದು ತೀರ್ಮಾನಿಸಿದ್ದರಿಂದಲೇ ವಿದ್ಯಾ ಚಾಲೂ ಮೇರಾ ನಾಮದಲ್ಲಿ ಅಭಿನಯಿಸಬೇಕಾಯಿತಂತೆ. ಆ ಕುರಿತು ನಾನು ಕೆದಕಿ ಕೇಳಿದಾಗ ವಿದ್ಯಾ ಸಿನ್ಹಾ ಸ್ಪಷ್ಟವಾಗಿ ಉತ್ತರಿಸಿದಳು. "ಇಂತಹ ಡಿಶುಂ ಡಿಶುಂ ಚಿತ್ರದಲ್ಲಿ ಅಭಿನಯಿಸಬೇಕಾದರೆ ನಾನು ತುಂಬ ಹೆದರಿದ್ದೆ. ಆದರೆ ನಾಯಕ ವಿನೋದ ಮೆಹ್ರಾ ಧೈರ್ಯ ತುಂಬಿದರು. ಅವರಿಗೂ ದೋ ಫೂಲ್‌ದಲ್ಲಿ ಮೆಹಮೂದ್‌ನೊಂದಿಗೆ ಅಭಿನಯಿಸಬೇಕಾದರೆ ಇದೇ ತರಹದ ಹೆದರಿಕೆ ಇತ್ತಂತೆ. ಒಟ್ಟಿನಲ್ಲಿ ವಿನೋದರ ಸ್ನೇಹಪರತೆಯಲ್ಲಿ ಚಿತ್ರ ಮುಗಿಸಿದೆ ಎನ್ನಿ"

ವಿದ್ಯಾ ಸಿನ್ಹಾರ ಹೆಸರು ಕೆಡಿಸುವ ಇನ್ನೊಂದು ಸುದ್ದಿಯ ಕುರಿತು ಪ್ರಶ್ನೆ ಮುಂದಿಟ್ಟೆ. "ವಿದ್ಯಾ ಅವರೆ, ನೀವು ರಾಜಕಪೂರರ "ಸತ್ಯಂ ಶಿವಂ ಸುಂದರಂ"ದಲ್ಲಿ ಅವಕಾಶ ಕಳೆದುಕೊಂಡದ್ದಕ್ಕೆ ಏನನ್ನಿಸುತ್ತದೆ?

ವಿದ್ಯಾ ಸ್ಪಷ್ಟೀಕರಿಸಿದರು. "ನಾನು ಅವಕಾಶ ಕಳೆದುಕೊಂಡಿಲ್ಲ. "ಮೇರಾ ಜೀವನ" ಚಿತ್ರದಲ್ಲಿ ಕಪೂರ ಸಾಹೇಬರಿಗೆ ತೃಪ್ತಿಯಾಗುವಂತೆ ಅಭಿನಯಿಸಿದ್ದೇನೆ. ಆದರೆ, ಯಾಕೋ ರಾಜ ಕಪೂರರು ತಮ್ಮ ಮನ ಬದಲಿಸಲು ಸಿದ್ಧರಿದ್ದಂತಿಲ್ಲ. ಹೋಗಲಿಬಿಡಿ. ಆ ವಿಷಯ ಕುರಿತು. ಚರ್ಚಿಸುವದು ಬೇಡ."

"ನಿಮ್ಮ ಮೆಚ್ಚಿನ ನಟ ಯಾರು?"

ನಗುನಗುತ್ತ ವಿದ್ಯಾ ಉತ್ತರಿಸಿದರು. "ಸಂಜೀವ ಕುಮಾರ. ನಾನು ಚಿಕ್ಕವಳಿದ್ದಾಗಿನಿಂದಲೂ ಅವರ ಚಿತ್ರಗಳನ್ನು ನೋಡುತ್ತಿದ್ದೆ. ಆ ಮೊದಲು ಮೀನಾ



ಶೋಕತಪ್ತೆಯೂ ಹೌದು. ನಿರಾಶೆ ದಣಿವು ಮಂಕಾದ ಸನ್ನಿವೇಶಗಳಲ್ಲೂ ವಿದ್ಯಾಸಿನ್ಹಾಳದು ಸಹಜ ಅಭಿನಯ. 'ಕರ್ಮ' ಚಿತ್ರದಲ್ಲಿ ಅಂತಹ ಪಾತ್ರವಿದೆ.

ಕುಮಾರಿಯ ಭಕ್ತಳಾಗಿದ್ದೆ. ಶಿಕಾರ್ ಚಿತ್ರ ನೋಡಿದ ಬಳಿಕ ನಾನು ಸಂಜೀವರ ಅಭಿನಯಕ್ಕೆ ಮಾರು ಹೋದೆ. ಈ ವರೆಗೆ ಬಿಡುಗಡೆಯಾದ ಅವರ ಎಲ್ಲ ಚಿತ್ರಗಳನ್ನು ನೋಡಿದ್ದೇನೆ."

ವಿದ್ಯಾ ಸಿನ್ಹಾಗೆ ತನ್ನ ಮೆಚ್ಚಿನ ನಟನೊಂದಿಗೆ ಅಭಿನಯಿಸುವ ಅವಕಾಶವೂ ಕೂಡಿ ಬಂದಿದೆ. ಈಗ ಮುಕ್ತಿ, ಪತಿಪತ್ನಿ ಮತ್ತು ತುಮ್ಹಾರೆ ಲಿಯೆ ಚಿತ್ರಗಳಲ್ಲಿ ಸಂಜೀವ ಕುಮಾರನೊಂದಿಗೆ ವಿದ್ಯಾ ಸಿನ್ಹಾ ನಟಿಸುತ್ತಿದ್ದಾಳೆ.

"ವಿದ್ಯಾ ಸಿನ್ಹಾ ಅವರೆ, ನೀವು ಎಂತಹ ಪಾತ್ರಗಳನ್ನು ಇಚ್ಛಿಸುತ್ತೀರಿ?"

"ಅಂದರೆ?" ವಿದ್ಯಾ ಪ್ರಶ್ನಿಸಿದರು. "ಪಾತ್ರಗಳೂ ಉತ್ತಮ ಕೆಟ್ಟ ಎಂದೂ ಉಂಟೆ?" ವಿದ್ಯಾರ ದೃಷ್ಟಿಯಲ್ಲಿ ಉತ್ತಮ ಕೆಟ್ಟ ಎಂದು ಚಿತ್ರಗಳ ವಿಂಗಡಣೆ ಅನುಚಿತ ಅಂತೆಯೇ ವಿದ್ಯಾ ಹೇಳುತ್ತಾಳೆ.

"ನೋಡಿ! 'ರಾಜಾಕಾಕಾ' ಚಿತ್ರದ ಕಥೆ ತುಂಬ ಉತ್ತಮವಿತ್ತು. ನನ್ನ ಅಭಿನಯ ಕೂಡ ಉತ್ತಮ ಮಟ್ಟದಿತ್ತು. ಆದರೆ ಚಿತ್ರ ಮಣ್ಣು ಮುಕ್ಕಿತು 'ರಜನೀಗಂಧಾ' ಅಷ್ಟು ಜಯಗಳಿಸೀತು ಎಂದು

# ತುಂಬಿದ ಗೃಹಗಳಿಗೆ ಪ್ರದರ್ಶಿಸಲ್ಪಡುತ್ತಿದೆ

**TAX FREE** ತೆರಿಗೆ ವಿನಾಯತಿ

## ಶ್ರೀಶಕ್ತಿ-ಹುಬ್ಬಳ್ಳಿ

## ಶ್ರೀನಿವಾಸ-ಧಾರವಾಡ ಅಮೀರ-ವಿಜಾಪುರ

ಹಾಗೂ ಇನ್ನಿತರ ಕೇಂದ್ರಗಳಲ್ಲಿ ಬಹು ಬೇಗನೆ ಬಿಡುಗಡೆ.

★ ಉನ್ನತ ಅಭಿನಯ,
ಸುಮಧುರ ಸಂಗೀತ,
ಹೃದಯಂಗಮ ಕಥೆ.

★ ಉತ್ತರ ಕರ್ನಾಟಕದ
ನವನಾಯಕ ನಟ
ಬಸಂತ ಕುಮಾರ ಪಾಟೀಲ
ನಟಿಸಿರುವ

ಹಾಗೂ:-

★ ಜಯಂತಿ ★ ಭವಾನಿ,
★ ಶಿವರಾಮು
★ ಅಶ್ವತ್ಥ,
★ ರಾಮ ಗೋಪಾಲ,
★ ಲೀಲಾವತಿ, ★ ಜಯಶ್ರೀ.





ಬಿಪಿ ಫಿಲಿಂಸ್ ರವರ

# ಮಾಂಗಲ್ಯ ಭಾಗ್ಯ

ವಿಜಯಾಸತ್ಯಂ

( ಬೀಪಿ ಫಿಲ್ಂಸ್ ಹುಬ್ಬಳ್ಳಿ )

ನಿರ್ಮಾಪಕ
ಶಶಿಧರ

ನಿರ್ದೇಶನ–ಚಿತ್ರಕಥೆ
ವಿಜಯಾಸತ್ಯಂ

ಸಂಗೀತ
ರಾಜನ್ - ನಾಗೇಂದ್ರ

ಮಧ್ಯಮವರ್ಗದ ಯುವತಿಯ ಆಶೋತ್ತರಗಳನ್ನು ಬಿಂಬಿಸುವಲ್ಲಿ
ವಿದ್ಯಾ ಸಿನ್ಹಾ ಎತ್ತಿದ ಕೈ. "ಮುಕ್ತಿ" ಚಿತ್ರದಲ್ಲೂ ಅಂತಹ ಪಾತ್ರವಿದೆ.

ಭಾವಿಸಿರಲಿಲ್ಲ. ಮಿತಿಮೀರಿದ ಯಶಸ್ಸನ್ನು ಗಳಿಸಿತು ಈ ದೃಷ್ಟಿಯಲ್ಲಿ ಯಾವ ಚಿತ್ರ ಉತ್ತಮ? ಯಾವುದು ಕೆಟ್ಟ ಎಂದು ಹೇಳಲು ಬರುವುದಿಲ್ಲ ?" ಈ ಕಾರಣಕ್ಕಾಗಿಯೇ ವಿದ್ಯಾ ಸಿನ್ಹಾ ಈಗ ಕೈಗೆ ಬಂದ ಚಿತ್ರಗಳಿಗೆ ಸಹಿಹಾಕಿ ಬಿಡುತ್ತಾಳೆ. ಕಥೆ ಕೇಳುವ ಗೋಜಿಗೆ ಹೋಗುವುದಿಲ್ಲ. ಬಿಡುವಿಲ್ಲದ ದುಡಿತವೂ ಇದಕ್ಕೆ ಇನ್ನೊಂದು ಕಾರಣವಾಗಿರಬಹುದು.

ವಿದ್ಯಾ ಈಗ ಗುಲ್ಜಾರರ "ಮೀರಾ" ಚಿತ್ರದಲ್ಲೂ ಅಭಿನಯಿಸುತ್ತಿದ್ದಾಳೆ. ದೊಡ್ಡದೊಡ್ಡ ನಾಯಕ ನಟರೊಂದಿಗೆ ಹಲವಾರು ಚಿತ್ರಗಳಲ್ಲಿ ಅಭಿನಯಿಸುವ ಅವಕಾಶ ಕೂಡಿಬಂದಿದೆ.

ವಿದ್ಯಾ ನಿಗರ್ವಿ. ಸ್ನೇಹಮಯಿ. ಹಚ್ಚಿಕೊಂಡರೆ ಆತ್ಮೀಯವಾಗಿ ಮಾತಾಡುತ್ತಾಳೆ. ಅಂತೆಯೇ ಸ್ನೇಹಿತರು ಬಹಳ. ಬಂಧುಬಳಗವೂ ಹೆಚ್ಚು. ಆದರೆ ವಿದ್ಯಾ ಸಿನ್ಹಾಳಿಗೆ ಕರ್ತವ್ಯ ಹೆಚ್ಚು. ಬಿಡುವಾದಾಗೊಮ್ಮೆ, ಸ್ನೇಹಿತರನ್ನು ಹುಡುಕಿಕೊಂಡು ಹೋಗುತ್ತಾಳೆ. ಈಗ ವಿದ್ಯಾಸಿನ್ಹಾ ಮುಕ್ತಿ ಮತ್ತು ಕರ್ಮ ಚಿತ್ರದ ಬಿಡುಗಡೆಗಾಗಿ ಕಾಯುತ್ತಿದ್ದಾಳಂತೆ. ರಜನಿಗಂಧಾ ಮತ್ತು ಛೋಟೀಸಿ ಬಾತ್ ದಂತೆ ಈ ಎರಡೂ ಚಿತ್ರಗಳು ಯಶಸ್ವಿಯಾಗುವುವೆಂದು ಅವಳ ತರ್ಕ. ಅವಳು ತರ್ಕಿಸಿದಂತೆಯೇ ಆಗಲಿ. ಚಿತ್ರಕ್ಕೂ ನಿಮಗೂ ಯಶಸ್ಸು [illegible] ಎಂದು ಹಾರೈಸಿ, ವಿದ್ಯಾ ಸಿನ್ಹಾಳಿಂದ ಬೀಳ್ಕೊಂಡೆ.



## ವಿದ್ಯಾಳ ನಂಬಿಕೆ

ವಿದ್ಯಾಸಿನ್ಹಾಳಿಗೆ ಪುನರ್ಜನ್ಮದಲ್ಲಿ ಅಸಾಧವಾದ ನಂಬಿಕೆ. ಸತ್ತ ವ್ಯಕ್ತಿ ಪುನರ್ಜನ್ಮ ಪಡೆದರೆ ಅವನನ್ನು ಗುರುತಿಸುವುದಕ್ಕಾಗಿ ಕಾದ ಎಣ್ಣೆಯನ್ನು ಹಣದ ಮೇಲೆ ಹಾಕುವುದನ್ನು ತನ್ನೂರಿನಲ್ಲಿ ಆಕೆ ನೋಡಿದ್ದಾಳಂತೆ. ನಾವು ಮಾಡಿದ ಪಾಪ ಕೃತ್ಯಗಳಿಗಾಗಿ ದೇವಲೋಕದಲ್ಲಿ ಶಿಕ್ಷೆಯಾಗುತ್ತದೆಂಬ ನಂಬಿಕೆಗೆ ವಿದ್ಯಾ ಸಿನ್ಹಾ ಬಲವಾಗಿ ಅಂಟಿಕೊಂಡಿದ್ದಾಳೆ. ಬೀಳುವ ಕನಸುಗಳ ಮೇಲೆ ಭವಿಷ್ಯ ರೂಪಗೊಳ್ಳುತ್ತದೆಂಬ ನಂಬಿಕೆಯಲ್ಲೂ ವಿದ್ಯಾಳಿಗೆ ವಿಶ್ವಾಸವಿದೆ. ತನ್ನ ಕನಸಿನಲ್ಲಿ ಈಗಲೂ ರೇಲ್ವೆ ಸ್ಟೇಶನ್ನು, ಸುಂದರ ಗುಡಿ ಮುಂತಾದವನ್ನು ವಿದ್ಯಾ ಕಾಣುತ್ತಿದ್ದಾಳಂತೆ. ಆ ಕನಸುಗಳ ಅರ್ಥ ಅವಳಿಗೇ ಗೊತ್ತಿಲ್ಲ. ಮುಂಬಯಿಯ ವರ್ಲಿ ಪೋಲೀಸ ಸ್ಟೇಶನ್ ಮತ್ತು ಆಸ್ಪತ್ರೆಯ ಬಳಿ ಹಾಯುವಾಗ ವಿದ್ಯಾಳಿಗೆ ಚಕ್ಕು ಅಡ್ಡ ಹೋಗುತ್ತಿದೆಯಂತೆ. ಆದನ್ನೂ ವಿದ್ಯಾ ಬಹಳ ಹಚ್ಚಿಕೊಂಡು ಭಯ ವಿಹ್ವಲಳಾಗಿದ್ದಾಳೆ.

## ಪ್ರಮೀಳಾ ಜೋಷಾಯ್

[೧೯೭ ನೇಯ ಪುಟದಿಂದ]

ಚಿತ್ರದಲ್ಲಿ ಮೊಟ್ಟ ಮೊದಲಬಾರಿ ಪ್ರಧಾನ ನಾಯಕಿಯಾಗಿ ಆಕೆ ಅಭಿನಯಿಸುತ್ತಿದ್ದು ಅಭಿನಯಕ್ಕೆ ಈ ಚಿತ್ರದಲ್ಲಿ ಒಳ್ಳೆಯ ಅವಕಾಶವಿದೆಯೆಂದು ಪ್ರಮೀಳಾ ಹೇಳಿದಳು.

ಪ್ರಮೀಳಾಗೆ ಶಾಲಾದಿನಗಳಿಂದಲೂ ಅಭಿನಯದ ಬಗ್ಗೆ ಅದಮ್ಯ ಆಸೆ. ದುಂಡು ಮೊಗದ ಬೊಗಸೆ ಕಂಗಳ ಈ ಚೆಲುವೆಯು ಈಗ ಎರಡು ವರ್ಷಗಳಿಂದ ಭರತ ನಾಟ್ಯವನ್ನು ಕಲಿಯುತ್ತಿದ್ದು ನಾಟ್ಯಾಭ್ಯಾಸದಿಂದ ಚಿತ್ರದಲ್ಲಿ ಭಾವಾಭಿವ್ಯಕ್ತಿಗೆ ಹೆಚ್ಚು ಅನುಕೂಲವಾಗುವದೆಂದು ಅವಳು ಹೇಳುತ್ತಾಳೆ.

ಬೆಂಗಳೂರಿನಲ್ಲಿ ಜನಿಸಿ ಇಲ್ಲೇ ಬೆಳೆದು, ನೆಲೆಯೂರಿ ನಿಂತಿರುವ ಪ್ರಮೀಳಾಳ ತಂದೆ ಇ. ಜೆ. ಸ್ಯಾಮ್ಯುಯಲ್ ರೇಲ್ವೆಯಲ್ಲಿ ಎಂಜಿನ್ ಡ್ರೈವರ್. ತಂದೆ ರೇಲ್ವೆಯಲ್ಲಿರುವದರಿಂದ ಸಹಜವಾಗಿಯೇ ಪ್ರಮೀಳಾ ಹತ್ತಾರು ಊರುಗಳನ್ನು ಸುತ್ತಿ ಅನುಭವ ಸಂಪಾದಿಸಿದ್ದಾಳೆ. ಈಕೆಗೆ ಇಬ್ಬರು ಅಕ್ಕಂದಿರು, ಮೂವರು ತಮ್ಮಂದಿರಿದ್ದು ಒಬ್ಬ ಅಕ್ಕ (ರಜನಿ) ಕೂಡ ಕೆಲವು ಚಿತ್ರಗಳಲ್ಲಿ ಅಭಿನಯಿಸಿದ್ದುಂಟು.

ಚಿತ್ರರಂಗದಲ್ಲಿ ಮುಂದೆ ಬರಬೇಕಾದರೆ ಪ್ರತಿಭೆ ಚೆಲುವು, ಅದೃಷ್ಟದ ಜೊತೆಗೇ ಇಲ್ಲಿನವರ ಬೆಂಬಲವೂ ಅತ್ಯವಶ್ಯ ಎಂದು ಪ್ರಮೀಳಾ ಹೇಳುತ್ತಾಳೆ. ನಾಲ್ಕು ವರ್ಷ ಸಣ್ಣ ಪುಟ್ಟ ಪಾತ್ರ ನಿರ್ವಹಿಸಿರುವ ಪ್ರಮೀಳಾಗೆ ನಾಯಕಿಯಾಗಿ ಭದ್ರವಾದ ಸ್ಥಾನಗಳಿಸುವ ಆಸೆ ಇನ್ನು ನಾನು ಚಿಕ್ಕಪುಟ್ಟ ಪಾತ್ರಗಳನ್ನು ಒಪ್ಪಿಕೊಳ್ಳುವದಿಲ್ಲ. ವರ್ಷಕ್ಕೆ ಒಂದೇ ಚಿತ್ರ ಬರಲಿ—ನಾಯಕಿಯಾಗಿಯೇ ಅಭಿನಯಿಸುತ್ತೇನೆ ಎಂದವಳು ದೃಢ ನಿರ್ಧಾರದ ಸ್ವರದಲ್ಲಿ ಹೇಳುತ್ತಾಳೆ.



# ಚಿತ್ರರಂಗದ ಸಂಗೀತ

# ಬೆಳೆದು ಬಂದ ದಾರಿ

ಡಾ ಬಾಪೂರಾವ
ನಾಡಗೌಡ

ಹಿಂದೊಮ್ಮೆ ಚಿತ್ರರಂಗ ಸಂಕ್ರಮಣಾವಸ್ಥೆಯಲ್ಲಿದ್ದಾಗ ಚಿತ್ರಗಳಲ್ಲಿ ಹಾಡಬೇಕಾದ ಸಂದರ್ಭದಲ್ಲೆಲ್ಲ ಪಾತ್ರಧಾರಿಗಳೇ ಹಾಡಬೇಕಾಗುತ್ತಿತ್ತು. ಸಂಗೀತಕ್ಕೆ ಪಕ್ಕವಾದ್ಯಗಳೂ ಅವಶ್ಯವೆನಿಸಿರಲಿಲ್ಲ. ಕಾಲಬದಲಾದಂತೆ ಚಲನಚಿತ್ರತಂತ್ರದಲ್ಲಿ ತೀವ್ರ ಬದಲಾವಣೆಗಳಾದವು. ಈ ಬದಲಾವಣೆಯಿಂದ ಹಿನ್ನೆಲೆ ಗಾಯಕರಿಗೆ ವಿಶೇಷ ಅವಕಾಶ ದೊರೆಯಿತು. ಪಕ್ಕವಾದ್ಯಗಳ ವಿಪುಲ ವೈವಿಧ್ಯಮಯ ಬಳಕೆಯೂ ಪ್ರಾರಂಭವಾಗಿ ಸಂಗೀತ. ಹಾಡು, ಚಿತ್ರರಂಗದ ಒಂದು ಅಂಗವಾಯಿತು.

ಮೊದಲಿಗೆ ಚಿತ್ರರಂಗದಲ್ಲಿ ಪ್ರವೇಶಿಸಿದ ನಟನಟಿಯರು ತಮ್ಮ ಪಾತ್ರಗಳಿಂದ ಜನರನ್ನು ಆಕರ್ಷಿಸಿದಷ್ಟು ಹಾಡುಗಳಿಂದ ಆಕರ್ಷಿಸಲಿಲ್ಲ. ಹಿಂದೀ ಚಿತ್ರರಂಗದಲಿ ದಿ॥ ಕುಂದನಲಾಲ ಸೈಗಲ ಅವರ ಪ್ರವೇಶ ಚಿತ್ರರಂಗದ ಸಂಗೀತದಲ್ಲಿ ಒಂದು ಹೊಸ ಘಟ್ಟವೆಂದೇ ಹೇಳಬಹುದು. ಆ ಹೊತ್ತಿಗಾಗಲೇ ಗುಲಾಮ ಹೈದರ, ಗುಲಾಮ ಅಹಮ್ಮದ, ನೌಶಾದ. ಹುಸ್ನಲಾಲ ಭಗತರಾಮ, ಚಿತಾಲಕರ ರಾಮಚಂದ್ರರಂಥ ಶ್ರೇಷ್ಠ ಸಂಗೀತ ನಿರ್ದೇಶಕರ ಪ್ರವೇಶವೂ ಆಯಿತು. ಇವರ ಜೊತೆ ಜೊತೆಯಲ್ಲಿಯೇ ದಿ. ಮುಕೇಶ. ಜಿ. ಎಂ. ದುರಾನಿ, ಮಹಮ್ಮದ ರಫಿ. ತಲತ ಮಹಮೂದ. ಅಮೀರಬಾಯಿ ಕರ್ನಾಟಕಿ, ಗೀತಾ ರಾಯ, (ಗೀತಾದತ್ತ) ಜೋಹರ ಬಾಯಿ ಅಂಬಾಲಾವಾಲಿ, ಕಾನನದೇವಿ, ಸುರೈಯ್ಯಾ (ಇವರಿಬ್ಬರೂ ನಟಿಯರೂ ಹೌದು.) ಲತಾ ಮಂಗೇಶಕರ ಮುಬಾರಕ ಬೇಗಮ್, ಆಶಾ ಭೋಸಲೆ. ನೂರಜಹಾನ (ಈಗ ಪಾಕಿಸ್ತಾನದಲ್ಲಿ) ಮುಂತಾದ ಹಿನ್ನೆಲೆಯ ಗಾಯಕರೂ ಚಿತ್ರ ಪ್ರಪಂಚಕ್ಕೆ ಹಿನ್ನೆಲೆಯ ಸಂಗೀತ ಗಾಯಕ ಗಾಯಕಿಯರಾಗಿ ಕಾಲಿಟ್ಟರು. ಶಕೀಲ ಬದಾಯುನಿ, ಸಾಹೀರ ಲುಧಿಯಾನ್ವಿ. ಪಿ. ಎಲ್. ಸಂತೋಷಿ. ಮಧುಕರ ರಾಜಸ್ತಾನಿ. ರಾಜಾ ಮೆಹಂದಿ ಅಲಿಖಾನ, ಪ್ರದೀಪ (ಗಾಯಕನು ಕೂಡ) ಕಮಲ ಅಮ್ರೋಹಿ, (ಲೇಖಕ, ನಿರ್ಮಾಪಕ, ದಿಗ್ದರ್ಶಕ) ಮುಂತಾದ ಕವಿಗಳೂ ಮುಂದೆ ಬಂದರು.

ಸಂಗೀತ ನಿರ್ದೇಶಕ ಶಂಕರ ಜೈಕಿಶನ ಜೋಡಿಯೊಂದಿಗೆ ಹಸ್ರತ್ ಜೈಪುರಿ ಕವಿಯೂ ಚಿತ್ರ ಜಗತ್ತಿನಲ್ಲಿ ಕಾಲಿರಿಸಿದರು. ಚಲನಚಿತ್ರದಲ್ಲಿ ಹೊಸತೇನನ್ನಾದರೂ ತೋರಿಸಬೇಕೆಂದು. ಚಿತ್ರ ನಿರ್ಮಾಪಕರು. ದಿಗ್ದರ್ಶಕರು, ಸಂಗೀತ ನಿರ್ದೇಶಕರು ಯೋಚಿಸುತ್ತಿದ್ದರೆ ಚಿತ್ರಪ್ರೇಮಿಗಳು ಏನಾದರೂ ಹೊಸತು ಸಿಕ್ಕೀತೆಂದು ತವಕಿಸುತ್ತಿದ್ದರು. ಚಲನ ಚಿತ್ರೋದ್ಯಮಿಗಳಿಗೆ ಹಣ ಸೆಳೆಯುವ ಹಂಚಿಕೆಯಿಂದ ಪ್ರೇಕ್ಷಕರ ಅಭಿರುಚಿಯೂ ಹೊಯ್ದಾಡತೊಡಗಿತು. ಇದೇ ಸಂದರ್ಭದಲ್ಲಿ



ಚಿತ್ರರಂಗ ಸಂಗೀತದ ಬದಲಾವಣೆಗೆ ಹೊಂದಿಕೊಳ್ಳುತ್ತ ಬಂದ ಗಾಯಕಿ ಲತಾ ಮಂಗೇಶಕರ್. ಇವರ ಶಾಸ್ತ್ರೀಯ ಸಂಗೀತವನ್ನಾಧರಿಸಿದ ಸಿನೇಮಾ ಹಾಡುಗಳು ಅತ್ಯಂತ ಜನಪ್ರಿಯವಾಗಿವೆ

ಪಾಶ್ಚಾತ್ಯ ಶೈಲಿಯ ನೃತ್ಯಗಳೊಂದಿಗೆ, ಪಾಶ್ಚಾತ್ಯ ಶೈಲಿಯ ಸಂಗೀತವನ್ನೂ ಚಿತ್ರರಂಗಕ್ಕೆ ಕೆಲವು ಸಂಗೀತ ನಿರ್ದೇಶಕರು ಅಳವಡಿಸಿದರು. ಸಮಾಧಿ, ದಾಸ್ತಾನ, ಮಿಸ್ಟರ ಎಕ್ಸ ಮುಂತಾದವುಗಳನ್ನು ಸ್ಮರಿಸಬಹುದು. ಹೀಗೆ ಕ್ರಮಶಃ ಒಂದೊಂದು ಚಿತ್ರದಲ್ಲಿಯೂ ಒಂದೊಂದು ಸಂದರ್ಭವನ್ನು ಎಳೆದು ತಂದು ಅಂಥ ನೃತ್ಯ ಸಂಗೀತವನ್ನು ಸಂಯೋಜಿಸಲಾಯಿತು. ಅದು ತೀರ ಇತ್ತೀಚಿನ, ಜ್ಯೂಲಿ, ಬಾಬ್ಬಿ, ಬಾರೂದ, ಚಿತ್ರಗಳ ವರೆಗೂ ಅವ್ಯಾಹತವಾಗಿ ಹರಿದು ಬಂದಿದೆ.

ಇಷ್ಟೆಲ್ಲ ಅನುಕರಣೆ ನಡೆದರೂ ಪಾಶ್ಚಿಮಾತ್ಯ ಶೈಲಿಯ ಹಾಡುಗಳು ಒಂದೊಂದು ಸೇರಿದರೂ ಮೂಲತಃ ಭಾರತೀಯ ಪರಂಪರಾಗತ ಶಾಸ್ತ್ರೀಯ ಸಂಗೀತವನ್ನು ನಮ್ಮ ಸಂಗೀತ ನಿರ್ದೇಶಕರು ಬಿಟ್ಟುಕೊಟ್ಟಿಲ್ಲವೆಂಬುದು ನಿರ್ವಿವಾದ.

ಕುಹೂ ಕುಹೂ ಬೋಲೆ ಕೋಯಲಿಯಾ (ಸ್ವರ್ಣ ಸುಂದರಿ ರಾಗ ಸೋಹನಿ ಆಧಾರಿತ) ಬೈರನ ನಿಂದ ನ ಆಯೀ (ಚಾಚಾ ಜಿಂದಾಬಾದ. ಮಿಶ್ರಕಾಫಿ ಆಧಾರಿತ) ಗೀತಾಗಾಯಾ ಪತ್ಥರೋನೆ (ಇದೇ ಹೆಸರಿನ ಚಿತ್ರ. ರಾಗ, ದುರ್ಗಾ ಆಧಾರಿತ) ಸಖೀರೆ ಮೋರೆ ಮನ ಉಲಝೆ ತನ ಡೋಲೆ (ಚಿತ್ರಲೇಖಾ, ರಾಗ ಝಿಂಝೋಟಿ) ಮಧುಬನಮೆ ರಾಧಿಕಾ ನಾಚೀರೆ (ಕೊಹಿನೂರ, ರಾಗ ಹಮೀರ.) ಮೇರಾಸಾಯಯಾ, ಹಾಗೂ ಕಭೀ ಕಭೀ, (ಶೀರ್ಷಿತ ಸಂಗೀತೆಗಳು, ರಾಗ– ಪಹಾಡಿ] ಮಾದಿಲ...ಆಶಿ ಕಾನಾ... (ಪಾಕೀಜಾ ರಾಗ ಯಮನ. ಆಧಾರಿತ) ಮನ ತಡಪತ ಹರಿದರಶನಕೋ ಆಜ. (ಬೈಜು ಬಾವರಾ, ರಾಗ ಮಾಲಕಂಸ) ಹೀಗೆ ಪ್ರತಿಯೊಂದು ಚಲನಚಿತ್ರದ ಬಗೆಗೂ ಹೇಳಬಹುದು.

ಅನಾರಕಲಿ, ಗುಂಜ ಉಠೀ ಶಹನಾಯಿ, ಬೈಜೂ ಬಾವರಾ. ಝನಕ ಝನಕ ಪಾಯಲ ಬಾಜೆ. ನವರಂಗ, ಚಿತ್ರಲೇಖಾದಂಥ ಇನ್ನೂ ಅನೇಕ ಚಿತ್ರಗಳ ಹಾಡುಗಳಿಂದ ವಿಶೇಷ ಜನಪ್ರಿಯವಾದುದನ್ನು ಗಮನಿಸಬಹುದು. ಇಲ್ಲಿ ಶತಮಾನದಷ್ಟು ಹಿಂದಿನ ಹಾಡುಗಳನ್ನು ಕೇಳುವಾಗ ಮೊದಲಿನಷ್ಟೇ ರಸಾನುಭವವಾಗಲು ಅವು ಶಾಸ್ತ್ರೀಯ ಸಂಗೀತ ಮೂಲದಿಂದ ರೂಪಗೊಂಡಿವೆಯೆಂಬುದೇ ಮುಖ್ಯ ಕಾರಣ. ರತನ ಅನಮೋಲಘಡಿ, ಢೋಲಕ, ಶಾನಸೇವ. ಮುಂತಾದ ಚಿತ್ರಗಳನ್ನು ಉದಾಹರಿಸಬಹುದು.

ಶೃಂಗಾರ ಸರಸ ಹಾಗೂ ವಿರಹ ಗೀತೆಗಳು ಸಾಮಾನ್ಯವಾಗಿ ಪ್ರತಿಯೊಂದು ಚಲನಚಿತ್ರದಲ್ಲಿಯೂ ಇದ್ದೇ ಇರುತ್ತವೆ. ಅದಕ್ಕಾಗಿ ಪ್ರತ್ಯೇಕ ವಿವರ ಬೇಕಾಗಿಲ್ಲ. ಹಿಂದಿನ "ಸೋಜಾ ರಾಜಕುಮಾರಿ" ಎಂಬ ಕುಂದನಲಾಲ ಸೈಗಲರು ಹಾಡಿದ ಲೋರಿಯನ್ನು ಹಿಡಿದು ಇಂದಿನವರೆಗೆ ಅಸಂಖ್ಯಾತ ಲೋರಿಗಳು ಬಂದಿವೆ. ಮಕ್ಕಳ ಮನೋರಂಜನೆಗಾಗಿಯೇ ರಚಿಸಿದ ಹಾಡುಗಳು ಮಕ್ಕಳನ್ನು ಬಹಳಷ್ಟು ಆಕರ್ಷಿಸಿವೆ. "ಮೋರಾ ಭಿ ಆಯಾ ಬಂದರ ಭಿ ಆಯಾ" ರಫಿಯವರು ಹಾಡಿದ, "ಅಬ ದಿಲ್ಲಿ ದೂರ ನಹಿ" ಚಿತ್ರದ ಗೀತೆಯನ್ನಾಗಲೀ, ಅಶೋಕ ಕುಮಾರ ಅವರು ಸ್ವತಃ ಹಾಡಿದ ರೇಲ ಚಲೀ ಎಂಬ ಆಶೀರ್ವಾದ ಚಿತ್ರದ ಹಾಡಾಗಲೀ ಅಶೋಕಕುಮಾರ ಅವರೇ ಹಾಡಿದ "ನಾವಚಲೀ ಮುನ್ನಿಕಿ, ನಾನೀಕಿ ನಾವಚಲಿ" ಹಾಡನ್ನಾಗಲೀ ಉದಾಹರಿಸಬಹುದು. ಚಿತ್ರಗಳ ಪ್ರಮಾಣ ಸಂಖ್ಯೆಯ ಬಗೆಗೆ ವಿಚಾರಿಸಿದರೆ ಈ ಹಾಡುಗಳ ಸಂಖ್ಯೆ ತೀರ ಕಡಿಮೆಯೇ ಎಂದು ಹೇಳಬೇಕು.

ಪೈಗಾಮ ಚಿತ್ರದಲ್ಲಿಯ "ಯಹೀ ಪೈಗಾಮ ಹೈ ಹಮಾರಾ" ನಯಾದೌರದಲ್ಲಿಯ "ಸಾಥಿ ಹಾಥ ಬಢಾನಾ" "ಝೂಟ ಮತ ಬೋಲೋ" ಮುಂತಾದ ಹಾಡುಗಳಲ್ಲಿ ಸಮಾಜಕ್ಕಾಗಿ ವಿಶೇಷ ಸಂದೇಶವಿರುವದನ್ನು ಗಮನಿಸಬಹುದು. ಛಲಕರಹೇ ಭೂಲೇ ಮಿತವಾ ಪ್ರೇಮರಸ ಪೀಲೆ (ರಾಗ ಬಾಗೇಶ್ರೀ ಗಾಯಕಿ ಆಶಾ ಭೋಸಲೆ, ಚಿತ್ರ ಮಾಯಾಮಚ್ಛಿಂದ್ರ) ಜಾಗದರ್ದ ಇಷ್ಕ ಜಾಗೆ (ರಾಗ ಬಾಗೇಶ್ರೀ, ಚಿತ್ರ ಅನಾರಕಲಿ. ಗಾಯಕ ಹೇಮಂತ ಕುಮಾರ)ಸಾವನ ಆಯೇ ನ ಆಯೇ (ಬೃಂದಾವನೀ ಮಿಶ್ರಿತ ಮಲ್ಹಾರ)

ಗರಜತ ಬರಸತ ಆಯೆ ಸಾವನರೇ (ಗೌಡ ಮಲ್ಹಾರ) ಹೀಗೆ ಅನೇಕ ನೃತ್ಯ ಗೀತೆಗಳು ಆವ್ರಪಾಲಿ ನವರಂಗ, ಪಾಕೀಜಾ, ಮುಂತಾದ ಚಿತ್ರಗಳಲ್ಲೂ ಬಂದು ಚಿತ್ರಪ್ರೇಮಿಗಳ ಮನಸ್ಸನ್ನು ಸೂರೆಗೊಂಡಿವೆ...

ನೃತ್ಯಗೀತಗಳನ್ನು ಜನಪ್ರಿಯಗೊಳಿಸಿದವರಲ್ಲಿ ಸಂಗೀತ ನಿರ್ದೇಶಕರಾದ ಸಿ. ರಾಮಚಂದ್ರ ನೌಶಾದರು, ಪ್ರಮುಖರು. ನಂತರ ಬಂದ ಎಲ್ಲ ಸಂಗೀತ ನಿರ್ದೇಶಕರು ಶಾಸ್ತ್ರೀಯ ನೃತ್ಯಗಳಿಗೆ ಶಾಸ್ತ್ರೀಯಸಂಗೀತ ಜೋಡಣೆಯನ್ನು ಸಮರ್ಥ ರೀತಿಯಲ್ಲಿ ಮಾಡಿ, ಯಶಸ್ವಿಯಾಗಿದ್ದಾರೆ.

ಭಜನೆ ಹಾಗೂ ಧುನ್‌ಗಳನ್ನು ಚಿತ್ರದಲ್ಲಿ ಸಮರ್ಪಕವಾಗಿ ತರಲಾಗಿದೆಯೆಂದು ಭಾವಿಸಿದರೆ ತಪ್ಪಾಗಲಾರದು. ಪ್ರಾರಂಭದಲ್ಲಿಯ ಆನಂದಮಠದ ಹೇಮಂತ ಕುಮಾರ ಗೀತಾ ರಾಯ ಹಾಡಿದ ಜಯ ಗೋವಿಂದ ಹರೇ. ಹಿಡಿದು, ಇತ್ತೀಚಿನ ಜೂಲಿಯಾ ತೂ ಶಾಮ ಮೇರಾ. ಕಾಂಚಾ ತೇರಾ ನಾಮದ ವರೆಗಿನ ಅನೇಕ ಭಜನೆಗಳನ್ನು ಹೆಸರಿಸಬಹುದು. ಈ ಎಲ್ಲ



ತನ್ನ ಇಂಪಾದ ಕಂಠದಿಂದ ಭಾರತದುದ್ದಗಲಕ್ಕೂ ಪರಿಚಿತಳಾದ ಗಾಯಕಿ ಆಶಾ ಭೋಸ್ಲೆ. ಪಕ್ಕದಲ್ಲಿದ್ದವರು ಆಕೆಯ ಮಗ ಹೊಸ ಸಂಗೀತ ಸಂಯೋಜಕ ಹೇಮಂತ ಭೋಸ್ಲೆ.



ಸಿ. ರಾಮಚಂದ್ರ



ಮಹ್ಮದ್ ರಫಿ



ಕಮಲ್ ಅಮ್ರೋಹಿ



ಎಸ್. ಡಿ. ಬರ್ಮನ್



ಹಸರತ್ ಜೈಪುರಿ



ಸುರಯ್ಯಾ

ಭಜನೆಗಳು ಎಲ್ಲ ಭಾವುಕ ಚಿತ್ರಪ್ರೇಮಿಗಳನ್ನೂ, ಚಿತ್ರ ನೋಡದಿರುವವರನ್ನೂ (ಚಿತ್ರ ನೋಡದಿರುವವರು ಅಪರೂಪ) ಕೂಡಿಯೇ ಆಕರ್ಷಿಸಿವೆ.

ಗಝಲ ಹಾಗೂ ಕವ್ವಾಲಿಗಳು ಹಿಂದಿನ ರಿಝೀನತ್, ಶಹನಾಯಿ, ಮೇರೆ ಮೆಹಬೂಬ, ಬರಸಾತಕಿ ರಾತ ಮುಂತಾದ ಚಿತ್ರಗಳಲ್ಲಿ ಅಲ್ಲದೇ ಇಂದಿನವರೆಗೂ ಸಾಕಷ್ಟು ಬಂದಿವೆ. ಮಹಮ್ಮದ್ ಬೇಗಮ್ ಆಶಾ ಭೋಸಲೆ, ರಫಿ. ಮನ್ನಾಡೆ, ಶಂಭೂಶಂಕರ ಮುಂತಾದ ವರು ಕವ್ವಾಲಿಗಳನ್ನು ಹಾಡಿದರೆ ಗಝಲ್‌ದಂತಹ ಗಂಭೀರ ಪ್ರಕಾರದ ಹಾಡುಗಳನ್ನು ಹಾಡುವಲ್ಲಿ ತಲತ ಮಹಮ್ಮೂದ ವಿಶೇಷವಾಗಿ ತಮ್ಮ ಪ್ರತಿಭೆಯನ್ನು ತೋರಿಸಿದರು.

ಸಾಮಾನ್ಯವಾಗಿ ಚಲನಚಿತ್ರ ಗೀತೆಗಳಲ್ಲಿ ಭಾವ ವಾಗಲೀ ಪ್ರಾಸವಾಗಲೀ ಇರುವದಿಲ್ಲ. ಸಂದರ್ಭ ಕ್ಕನುಗುಣವಾಗಿ ಮೂಡಿದ ಸಂಗೀತಕ್ಕೆ ಸಂದರ್ಭಕ್ಕನು ಗುಣವಾಗಿ ಕೇವಲ ಶಬ್ದಗಳನ್ನು ಜೋಡಿಸುತ್ತಾ ರೇನೋ ಎನ್ನುವಷ್ಟರ ಮಟ್ಟಿಗೆ ಹಾಡುಗಳು ಇರು ತ್ತವೆ. ಆದರೂ ಕೂಡ ಒಮ್ಮೊಮ್ಮೆ ಅಲ್ಲಲ್ಲಿ ಅತ್ಯಂತ ರಮ್ಯವಾದ ಭಾವಗೀತೆಗಳು ಮೂಡಿಬಂದಿವೆ. ಅವುಗಳಲ್ಲಿ ಕವಿಯ ಕಲ್ಪನೆ, ಭಾವಗೀತೆಯ ಭಾವನಾ ವಿಸ್ತಾರದ ಆಳ ಕೇಳುಗರನ್ನು ಮೈಮರೆಸಿ ಬಿಡುತ್ತದೆ.

ಪಂಛಿ ಬನೂ ಉಡತಿ ಫಿರೂ ಮಸ್ತ ಗಗನಮೆ (ಕವಿ ಹಸರತ ಜೈಪುರಿ) ಆಧಾ ಹೈ ಚಂದ್ರಮಾ ರಾತ ಆಧೀ (ಭರತವ್ಯಾಸ. ಸ್ತ್ರೀ) ಜಾನೆ ಓ ಕೈಸೆ ಲೋಗ ಥೆ ಜಿನಕೋ ಪ್ಯಾರಕೋ ಪ್ಯಾರ ಮಿಲಾ (ಶಕೀಲ ಬದಾಯಉನಿ. ಪ್ಯಾಸಾ) ಹೀಗೆ ಅನೇಕ ಹಾಡುಗಳನ್ನು ಕವಿ ಕಲ್ಪನೆಯ ವಿಶೇಷ ಪ್ರತಿಭೆಯನ್ನು ತೋರುವ ಹಾಡುಗಳನ್ನು ಹೆಸರಿಸಬಹುದು.

ಚಲನಚಿತ್ರದಲ್ಲಿ ಜನಪದ ಹಾಡುಗಳನ್ನು ವಿಶೇಷ ವಾಗಿ ಜನಪ್ರಿಯಗೊಳಿಸಿದ ಶ್ರೇಯಸ್ಸು ದಿ.ಸಚಿನ್‌ದೇವ ಬರ್ಮನ್ನರದು. ವಹಾಂ ಕೌನ ಹೆ ತೇರಾ, ಮಾ ತೇ ರಾ ಅಂಚಲ ಮೇ. ಮುಂತಾದ ಜನಪದ ಶೈಲಿಯ ಹಾಡುಗಳನ್ನು ಹೇಳಬಹುದು; ಈ ಹಾಡು ಗಳನ್ನು ಸ್ವತಃ ಹಾಡಿದರಲ್ಲದೇ ಬಂಧುರೇ, ಹೇಮಂತ ನಿಂದ ಹಾಡಿಸಿದರೆ, ಸಾವನಕಿ ಮಹೀನಾ ದಿ. ಮುಖೇಶ ಹಾಗೂ ಲತಾ ಮಂಗೇಶಕರ ಹಾಡಿದರು. ಬೇರೆ ಬೇರೆ ಪ್ರಾದೇಶಿಕ ಶೈಲಿಯ ಹಾಡುಗಳನು ಸಂಗೀತ ನಿರ್ದೇಶಕರು ಬಳಕೆಯಲ್ಲಿ ತಂದರು.

ರಾಜಕಪೂರರ ಬರಸಾತದಲ್ಲಿ ಹವಾಮೆ ಉಡತಾ ಜಾಯೆ ಮೇರೆ ಲಾಲ ದುಪ್ಪಟ್ಟಾ ಮಲಮೆಲಕಾ ಎಂಬ ಶಂಕರ ಜೈಕಿಶನರ ದಿಗ್ದರ್ಶನದಲ್ಲಿ ಲತಾ ಮಂಗೇಶಕರ ಹಾಡಿದ ಈ ಹಾಡು ಮೂಲವಾಗಿ



ನೌಶಾದ್



ತಲತ್ ಮಹಮ್ಮೂದ್



ಸಾಹಿರ್ ಲುಧಿಯಾನ್ವಿ



ಮನ್ನಾ ಡೇ

ಡೋಗ್ರೀ ಜಾನಪದ ಹಾಡಿನ ಧಾಟಿ ಎಂಬುದು ಬಹು ಜನರಿಗೆ ಗೊತ್ತಿಲ್ಲ. ಅನೇಕ ಸಂಗೀತ ದಿಗ್ದರ್ಶಕರು ಪಂಜಾಬಿ, (ಬಾಂಗ್ಲಾ) ಮರಾಠಿಯ ತಮಾಶಾ ಶೈಲಿಯ ಹಾಡುಗಳನ್ನೂ, ಬಂಗಾಳಿ, ಭೋಜಪುರಿ, ಹೀಗೆ ಸಾಕಷ್ಟು ಪ್ರಾದೇಶಿಕ ಶೈಲಿಯ ಹಾಡುಗಳನ್ನೂ ಚಿತ್ರಗಳಲ್ಲಿ ತಂದು ಜನಪ್ರಿಯಗೊಳಿಸಿದರು.

ನಮ್ಮ ಹಿಂದೀ ಸಂಗೀತ ನಿರ್ದೇಶಕರು. ಸಂಗೀತ ದಿಗ್ಗಜರೆನಿಸಿದ ಕಲಾವಿದರನ್ನು ಬಳಸಿಕೊಂಡಿಯೇ ಇಲ್ಲ ವೆಂಬುದು ದುರ್ದೈವದ ಸಂಗತಿ. ಬೈಜೂ ಬಾವರಾದಲ್ಲಿ ಉಸ್ತಾದ ಅಮೀರಖಾನರನ್ನೂ, ಗುಂಜ ಉಠಿ ಶಹನಾಯಿಗೆ, ಉಸ್ತಾದ ಬಿಸ್ಮಿಲ್ಲಾಖಾನರ ಶಹನಾಯಿಯನ್ನೇನೋ ಬಳಸಿಕೊಂಡ ಬಳಿಕ ಮುಂದೆ ಯಾರನ್ನೂ ಆಹ್ವಾನಿಸಲಿಲ್ಲ.

ಆಶಾದಲ್ಲಿಯ ಈನಾಮೀನಾಡಿಕಾ, ದಾಸ್ತಾನದಲ್ಲಿಯ ತರರೀ ಅರರೀ ಮಿಸ್ಟರ ಎಕ್ಸ ದಲ್ಲಿಯ ಲಾರಿಲಾಲಗಾಲದಿಂದ ಪ್ರಾರಂಭವಾಗಿ, ಭೂತಬಂಗ್ಲಾ, ಬಾಬಿ, ಶೋಲೆ, ಬಾರೂದದಲ್ಲಿಯ ಕೆಲವು ಪಾಶ್ಚಿಮಾತ್ಯ ಶೈಲಿಯ ಹಾಡುಗಳ ಅಬ್ಬರ ತಾತ್ಪೂರ್ತಿಕವಾದುದೆಂದೇ ಹೇಳಬೇಕು.

ಇಂದಿನ ಜನಪ್ರಿಯ ಸಂಗೀತ ನಿರ್ದೇಶಕರೆನಿಸಿದ ಲಕ್ಷ್ಮೀಕಾಂತ ಪ್ಯಾರೇಲಾಲ್, ಕಲ್ಯಾಣಜಿ, ಆನಂದಜಿ, ಮುಂತಾದವರೂ ಚಿತ್ರ ಸಂಗೀತಕ್ಕೆ ಗಣನೀಯ ಸೇವೆ ಸಲ್ಲಿಸಿದ್ದಾರೆಂಬುದನ್ನು ಮರೆಯುವಂತಿಲ್ಲ. ಶಾಸ್ತ್ರೀಯ ಸಂಗೀತವನ್ನೇ ವಿಶೇಷವಾಗಿ ಬಳಕೆಯಲ್ಲಿ ತಂದು ಜನ ಮೆಚ್ಚುಗೆಯನ್ನು ಪಡೆದವರಲ್ಲಿ ವಸಂತ ದೇಸಾಯಿ, ನೌಶಾದ ಮುಂತಾದ ಕೆಲವೇ ಜನರು ಮಾತ್ರ.

ಸೆನ್ಸಾರದ ಹೊಸ ನೀತಿಗೆ ಅನುಗುಣವಾಗಿ ಚಿತ್ರರಂಗದಲ್ಲಿ ತೀವ್ರ ಬದಲಾವಣೆಯಾಗಬೇಕಾಗಿದೆ. ನಗ್ನ, ಅರೆನಗ್ನ ಕ್ಯಾಬರೇ ವಿಚಾರಗಳನ್ನು ಬಿಟ್ಟುಕೊಟ್ಟು ಒಳ್ಳೆಯ ಕಥೆ ಶಾಸ್ತ್ರೀಯ ನೃತ್ಯಗಳು, ಶಾಸ್ತ್ರೀಯ ಸಂಗೀತವನ್ನು ಅಳವಡಿಸಲು ಚಿತ್ರ ತಯಾರಕರು ಯೋಚಿಸಬೇಕು. ಇದರಿಂದಲೇ ಚಿತ್ರಪ್ರೇಮಿಗಳಲ್ಲಿ ಹೊಸ ಅಭಿರುಚಿಯನ್ನು ಬೆಳೆಸಿ, ಅವರ ಆಕರ್ಷಣೆಯನ್ನು ಕಾಯ್ದುಕೊಂಡು ಹೋಗಬಹುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ: ಅಂಥ ಭೂಮಿಕೆಗೆ ಚಿತ್ರ ತಯಾರಕರೂ, ವಿತರಕರೂ ವೀಕ್ಷಕರೂ ಸಿದ್ಧರಾದಬೇಕು.

## "ಭೂಲ ನ ಪಾಯೇಂಗೆ ಹಮ್...."

ಹಿಂದೀ ಚಿತ್ರರಂಗಕ್ಕೆ "ಹಿನ್ನೆಲೆ ಗಾಯನ"ವನ್ನು ಪರಿಚಯಿಸಿ ಅದು ಬೆಳೆದು ಬಂದಂತೆಲ್ಲ ತಾನೂ ಬೆಳೆದು, ಉಚ್ಚ್ರಾಯ ಸ್ಥಿತಿಯಲ್ಲಿ ತಟ್ಟನೇ ಕಣ್ಮರೆಯಾಗಿ ಹೋದ ಮುಕೇಶ್ "..................ಜೀವನ್ ಭರ ಮೈ ಗೀತ ಸುನಾತಾ ಜಾವೂ" –ಎಂಬ ತಮ್ಮ ನುಡಿಯಂತೆಯೇ ನಡೆದ ವ್ಯಕ್ತಿ. ವಿಧಿ "ಆ ಅಬ ಲೌಟ ಚಲೇ......" ಎಂದಾಗ ಇಲ್ಲ ಅನ್ನದೇ ಹೋಗಿಬಿಟ್ಟರು. ನಮಗೆಲ್ಲ "ಮುಜಕೋ ಯಾರೋ ಮಾಫ್ ಕರನಾ" ಎಂದರು......

"ಆದದ್ದೆಲ್ಲಾ ಒಳಿತೇ ಆಯಿತು" ಎಂಬ ದಾಸವಾಣಿ ಮುಕೇಶ್ ಬಾಳಿಗೆ ಬಹುವಾಗಿ ಹೋಲಿತು. ನಾಯಕನಾಗಲು ದೆಹಲಿಯಿಂದ ಬಂದ ಕಾಯಸ್ಥ ಕುಟುಂಬದ ಮುಕೇಶ್‌ಚಂದ್ ರೆಘೋರಾವರ್‌ಚಂದ್ ಮಾಥೂರ್ ನಾಯಕನಾಗದಿದ್ದುದೇ ಒಳಿತಾಯಿತು. ಸ್ವರ್ಣಕಂಠದ ಗಾಯಕನಾಗಲು ಅವಕಾಶವಾಯಿತು. (ಮೂರು ಚಿತ್ರದಲ್ಲಿ ಅಭಿನಯಿಸಿದರೂ ಹೆಸರು ಗಳಿಸಲಿಲ್ಲ). "ದಿಲ್ ಜಲತಾ ಹೈ ತೋ ಜಲನೆ ದೇ" ಮುಕೇಶರನ್ನು ಗಾಯಕರೆಂದು ಪರಿಗಣಿಸಲು ಸಹಾಯಕವಾದ ಹಾಡು. ಆದರೆ ಅವರದು ಪ್ರವಾಹದಲ್ಲಿನ ಪಯಣ. ಒಮ್ಮೆ ಏಳು. ಒಮ್ಮೆ ಬೀಳು ಹೀಗೆ ಸಾಗಿತು ಅವರ ಬಾಳು. ("ಆಸೂ ಭರೀ ಹೈ ಏ ಜೀವನ್ ಕಿ ರಾಹೇಂ") "ಜಗ ಮೆ ರಹ ಜಾಯೆಂಗೆ ಪ್ಯಾರೆ ತೆರೆ ಬೋಲ್" ಎಂಬಂತೆಯೇ ಅವರದು ಸವಿವಹಾತು. ಶಾಸ್ತ್ರೀಯ ಸಂಗೀತ ಆಧಾರಿತ ಗೀತೆಗಳು "ಚಂದನ್ ಸಾ ಬದನ್" (ಸರಸ್ವತಿ ಚಂದ್ರ) "ಸಾರಂಗಾ ತೇರಿ ಯಾದಮೆ" (ಸಾರಂಗಾ). "ಸಾವನ್ ಕಾ ಮಹಿನಾ" (ಮಿಲನ್) ಜನಪ್ರಿಯವಾದವು.

ಮುಕೇಶ್ ಹಾಡಿನಲ್ಲಿ ಬಾಳ ವ್ಯಥೆಗಳು. ವಿರಹ ನೋವು. ಅನುತಾಪ, ಸಂತಾಪ, ತ್ಯಾಗ ಎಲ್ಲಾ ಅಭಿವ್ಯಕ್ತಗೊಳ್ಳುತ್ತಿದ್ದವು. ಅಂತೆಯೇ ಅವರ ಹಾಡು ಕೇಳಿದಾಗಲೆಲ್ಲ ಕೇಳುಗ ಅದನ್ನು ಅನುಭವಿಸುತ್ತಾನೆ. ಹತ್ತು ಸಾವಿರಕ್ಕೂ ಹೆಚ್ಚು ಹಾಡಿದ ಮುಕೇಶ್ ಕೊನೆವರೆಗೂ ಹಾಡಿದರು. ಅಮೇರಿಕೆಗೆ ಹೋಗುವ ದಿನ "ಸತ್ಯ ಶಿವಂ ಸುಂದರಂ"ಗಾಗಿ [illegible] ನರ್ಮಲ್ ಕೋಮಲ್ ಸ್ವರೊಂಕಿ ದೇವಿ... (ಕೊನೆ ಹಾಡು) ಗೀತದ ಧ್ವನಿಮುದ್ರಣಕ್ಕೆ ಸಹಕರಿಸಿ ಹೋಗಿ ಅಲ್ಲಿ ಹಾಡಿ [illegible] ತಣಿಸಿ ಡೆಟ್ರಾಯಿಟ್‌ನಲ್ಲಿ ಆಗಸ್ಟ್ ೨೭ರಂದು ಕೊನೆಯುಸಿರೆಳೆದರು. "ಮುಝೆ ಭೂಲ್ ಜಾನಾ" ಎಂದವರು ಹಾಡಿದ್ದರೂ ನಾವು [illegible] ವುದೆಂತು?

# ಕನ್ನಡ ಚಿತ್ರರಂಗದ ಏರುಪೇರು

ಚಿತ್ರವೀರ್ಯ

**ಕನ್ನಡ ಚಿತ್ರಗಳೆಂದರೆ ಮೂಗುಮುರಿಯುತ್ತಿದ್ದ ಕಾಲವೊಂದಿತ್ತು; ಆದರೆ ಇಂದು ಕನ್ನಡ ಚಿತ್ರಗಳತ್ತ ಪರಭಾಷಿಕರ ದೃಷ್ಟಿ ಹರಿದಿದೆ. ಕಲಾತ್ಮಕ ಪ್ರಯೋಗಾತ್ಮಕ ಹಾಗು ಹೊಸ ಅಲೆಯ ಚಿತ್ರಗಳು ಕನ್ನಡದ ಕೀರ್ತಿಪತಾಕೆಯನ್ನು ಎಲ್ಲೆಡೆ ಹಾರಿಸುವ ಸಾಧ್ಯತೆ ಇಲ್ಲದಿಲ್ಲ. ಅಷ್ಟೇಕೆ ಅಂತಾರಾಷ್ಟ್ರೀಯ ಮಟ್ಟದಲ್ಲೂ ಸ್ಪರ್ಧೆಗೆ ನಿಲ್ಲುವ ಸಾಧ್ಯತೆಗಳಿವೆ.**

 

ಕನ್ನಡ ಚಿತ್ರಗಳೆಂದರೆ ಬಹು ಕೆಟ್ಟ ಚಿತ್ರಗಳೆಂದು ಭಾವನೆ ತಾಳಿದ್ದ ಚಿತ್ರೋದ್ಯಮದಲ್ಲಿ ಈಗ ಅದೇ ಕನ್ನಡ ಚಿತ್ರಗಳೆಂದರೆ ಇಡೀ ಭಾರತೀಯ ಚಿತ್ರೋದ್ಯಮ ಕಣ್ತೆರೆದು ನೋಡುವ ಪರಿಸ್ಥಿತಿ ಬಂದಿರುವುದು ಕನ್ನಡಿಗರಿಗೆ ಹೆಮ್ಮೆಯ ವಿಷಯವೇ ಹೌದು. ಹದಿನೈದು-ಇಪ್ಪತ್ತು ವರುಷಗಳ ಹಿಂದೆ ತಮಿಳು ಮತ್ತು ಹಿಂದಿ ಚಿತ್ರಗಳು ಕರ್ನಾಟಕದಲ್ಲಿನ ಪ್ರೇಕ್ಷಕರ ಮತ್ತು ವ್ಯಾಪಾರಿಗಳ ಬ್ರೇನ್‌ವಾಶ್ ಮಾಡಿದ್ದವು. ಕನ್ನಡ ಚಿತ್ರಗಳು ಎರಡು ವಾರ, ನಾಲ್ಕು ವಾರ ನಡೆದರೇ ಹೆಚ್ಚು. ಆದರೆ ಹಿಂದಿ ಮತ್ತು ತಮಿಳು ಚಿತ್ರಗಳು ಹತ್ತು, ಹದಿನೈದು ವಾರಗಳವರೆಗೂ ನಡೆಯುತ್ತಿದ್ದವು. ತಮಿಳು, ತೆಲುಗು, ಹಿಂದಿ ಚಿತ್ರಗಳು ಮಾಡಿರುವ ಬ್ರೇನ್‌ವಾಶ್‌ನಿಂದಾಗಿ ಏಳೆಂಟು ಹಾಡುಗಳು, ನಾಲ್ಕೈದು ನೃತ್ಯಗಳು, ಹತ್ತಾರು ಫೈಟಿಂಗು ಇಲ್ಲದೇ ಇದ್ದರೆ ಕನ್ನಡಿಗರಿಗೆ ಚಿತ್ರಗಳು ರುಚಿಸುತ್ತಿರಲಿಲ್ಲ. ಹೀಗೆ ಕನ್ನಡ ಚಿತ್ರಗಳ ಮಟ್ಟ ಇಳಿದದ್ದು ಮಾತ್ರವಲ್ಲ ಜನರ ಅಭಿರುಚಿಯ ಮಟ್ಟವೂ ಅಷ್ಟೇ ಕೀಳು ಮಟ್ಟಕ್ಕೆ ಇಳಿದಿತ್ತು. ಇಂಥ ಕಲಸುಮೇಲೋಗರದ ನಡುವೆಯೂ ಉತ್ಕೃಷ್ಟ ಮಟ್ಟದ ಚಿತ್ರ ತಯಾರಿಸಲು ನಿರ್ದೇಶಕ ಪಟ್ಟಾಭಿರಾಮ ರೆಡ್ಡಿ ಧೈರ್ಯ ಮಾಡಿದ್ದು ಒಂದು ಸಾಹಸವೇ. ಡಾ। ಅನಂತಮೂರ್ತಿಯವರ 'ಸಂಸ್ಕಾರ'ದ ಕಥೆ, ಟಾಮ್ ಕೋವನರ ಛಾಯಾಗ್ರಹಣ, ಗಿರೀಶ್ ಕಾರ್ನಾಡ್ ಲಂಕೇಶ್ ಮೊದಲಾದ ಹವ್ಯಾಸಿ ನಾಟಕಕಾರರ ಅಭಿನಯ ಮುಂತಾದುವನ್ನೊಳಗೊಂಡ 'ಸಂಸ್ಕಾರ' ಚಿತ್ರ ಕನ್ನಡ ಚಿತ್ರರಂಗದಲ್ಲಿ ಶಿಲಾಶಾಸನವಾಯಿತು. ಈ ಪರಂಪರೆಯಲ್ಲಿ ಕಾರ್ನಾಡ್ ಮತ್ತು ಕಾರಂತರು 'ವಂಶವೃಕ್ಷ'ವನ್ನು ನಿರ್ದೇಶಿಸಿದರು. ಕಾರ್ನಾಡ್ ತನ್ನ ಸ್ವಂತ ಪ್ರತಿಭೆಯನ್ನು ಪರೀಕ್ಷಿಸಲು 'ಕಾಡು' ನಿರ್ದೇಶಿಸಿದರು. ಕಾರಂತರು ತನ್ನ ಸ್ವಂತ ಪ್ರತಿಭೆಯನ್ನು 'ಚೋಮನ ದುಡಿ' ಮೂಲಕ ಸ್ಫುಟಗೊಳಿಸಿದರು.

ಬಂಗಾಲಿ ಮತ್ತು ಮಲಯಾಳಂ ಚಿತ್ರಗಳು ಭಾರತೀಯ ಚಿತ್ರರಂಗದಲ್ಲಿ ಭದ್ರ ಸ್ಥಾನಗಳಿಸಿ



ಚೋಮನ ದುರ್ದೈವೀ ಜೀವನವನ್ನು ತೆರೆಗೆ ತಂದು, ಸ್ವರ್ಣಕಮಲ ಪಡೆಯುವಂತೆ ಮಾಡಿದ- ಬಿ. ವಿ. ಕಾರಂತ್



ಕಾರಂತ್ಯರ ಕಲ್ಪನೆಗೆ ಜೀವ ತುಂಬಿದ ಟಾಮ್. ವಾಸುದೇವರಾವ್



'ಚೋಮನ ದುಡಿ'ಯ ಬೆಳ್ಳಿಯ ಪಾತ್ರವನ್ನು ಸಜೀವಗೊಳಿಸಿದ ಪದ್ಮಾ ಕುಮುಟಾ



ಪ್ರಶಸ್ತಿ ವಿಜೇತ ಚಿತ್ರಗಳನ್ನು ತೆರೆಗಿತ್ತ
ದಿಗ್ದರ್ಶಕ- ಎನ್. ಲಕ್ಷ್ಮೀನಾರಾಯಣ

ದಂತೆಯೇ ಮೇಲೆ ಹೇಳಿದ ಕೆಲವು ಚಿತ್ರಗಳಿಂದಾಗಿ ಕನ್ನಡಕ್ಕೂ ಈಗ ಉನ್ನತ ಸ್ಥಾನ ದೊರಕಿದಂತಾಗಿದೆ. ಕಾರಂತ್, ಕಾರ್ನಾಡ್ ಪಟ್ಟಾಭಿರಾಮರೆಡ್ಡಿಯವರ ಜೊತೆ ಸ್ಪರ್ಧಿಸುವ ಛಲದಿಂದ ಅಥವಾ ತಾವೂ ಉತ್ಕೃಷ್ಟ ಚಿತ್ರ ತಯಾರಿಸಬೇಕೆಂಬ ಹಂಬಲದಿಂದ ನಂಜರಾಜೇ ಅರಸರು 'ಸಂಕಲ್ಪ'ವನ್ನೂ ಶಂಕ್ರಪ್ಪನವರು 'ಮಾಡಿ ಮಡಿದವರು' ಚಿತ್ರವನ್ನೂ ನಿರ್ದೇಶಿಸುವ ಅವಕಾಶಗಳಿಸಿದರು. ಪ್ರಸಾದ್ ಅವರು 'ಕಂಕಣ'ವನ್ನು ನಿರ್ದೇಶಿಸಿದರು. ಈ ಚಿತ್ರಗಳು ಕಮರ್ಶಿಯಲ್ ಚಿತ್ರಗಳಿಂದ ವಿಭಿನ್ನ ಹಾದಿಯಲ್ಲಿ ನಡೆದರೂ ಕರ್ನಾಟಕದ ಹೊರಗೆ ಹೆಚ್ಚಿಗೆ ಪ್ರಶಂಸೆಯನ್ನು ಗಳಿಸಲಿಲ್ಲ. ಇದ್ದುದರಲ್ಲಿ ಲಂಕೇಶರ ಈಚಿಗಿನ ಕೃತಿ 'ಪಲ್ಲವಿ' ಸುಮಾರಾಗಿ ಪ್ರಶಂಸೆ ಗಳಿಸಿದೆ.

ಈಗ ಪ್ರಯೋಗಾತ್ಮಕ ಎಂಬ ಹಣೆಪಟ್ಟಿ ತಗಲಿಸಿಕೊಂಡು ಕನ್ನಡದಲ್ಲಿ ಅನೇಕ ಚಿತ್ರಗಳು ತಯಾರಾಗುತ್ತಿವೆ. ಅವುಗಳ ಜಾಹೀರಾತು ನೋಡಿದರೇ ಅವುಗಳ ಪ್ರಯೋಗ ಹೇಗಿರಬಹುದೆಂಬುದು ಗೊತ್ತಾಗುತ್ತದೆ. ಆದೂ ಯಾವ ಬೂದಿಯೊಳಗೆ ಕೆಂಡವಿರುತ್ತೋ, ಯಾವ ಎಲೆಯ ಮರೆಯಲ್ಲಿ ಕಾಯಿ ಇರುತ್ತೋ ಪರಾಮರ್ಶಿಸದೆ ಹೇಳಲಿಕ್ಕಾಗದು.

ಪ್ರಾಮಾಣಿಕವಾಗಿ ಶುದ್ಧ ಚಿತ್ರ ತಯಾರಿಸುವವರಲ್ಲಿ ಎನ್. ಲಕ್ಷ್ಮೀನಾರಾಯಣರೂ ಹೆಸರು ಮಾಡಿದ್ದಾರೆ. ಇವರ ನಾಂದಿ, ಮುಕ್ತಿ, ಉಯ್ಯಾಲೆ ಮುಂತಾದ ಚಿತ್ರಗಳು ಯಾವ ವೈಶಿಷ್ಟ್ಯವನ್ನು ತೋರಿಸದೆ ಇದ್ದರೂ ಲಕ್ಷ್ಮೀನಾರಾಯಣರ ಅಭಿರುಚಿ ಒಳ್ಳೆಯ ಪ್ರೇಕ್ಷಕರ ಕಡೆಗೇ ಇದೆ ಎಂಬುದನ್ನು ಅವುಗಳು ತೋರಿಸಿವೆ. ಇವರು ನಿರ್ದೇಶಿಸಿದ ಚಿತ್ರಗಳಲ್ಲಿ 'ಅಬಚೂರಿನ ಪೋಸ್ಟಾಫೀಸು' ಶ್ರೇಷ್ಠವೆಂದು ಹೇಳಬಹುದು.

ಈ ವರ್ಷ ಚಿತ್ರ ಪ್ರದರ್ಶನವಾಗುವುದಕ್ಕೆ ಮೊದಲೇ ಬಹು ವಿವಾದಕ್ಕೆ ಈಡಾಗಿರುವ ಚಿತ್ರ 'ಕರಾವಳಿ'ಯ ಬಗ್ಗೆಯೂ ಒಳ್ಳೆಯ ಅಭಿಪ್ರಾಯಗಳು ಕೇಳಿ ಬಂದಿವೆ. ವಿಶುಕುಮಾರರು 'ಕರಾವಳಿ'ಯನ್ನು ಪತ್ರಕರ್ತರಿಗೆ ತೋರಿಸಿದಾಗ ಹಲವು ಪತ್ರಿಕೆಗಳು 'ಕರಾವಳಿ'ಯ ಬಗ್ಗೆ ಬರೆಯುತ್ತಾ ಈ ಚಿತ್ರ ಬಿಡುಗಡೆಯಾಗದಿದ್ದರೆ ಕನ್ನಡಕ್ಕೆ ಉತ್ತಮ ಕೃತಿಯೊಂದು ತಪ್ಪಿ ಹೋಗುತ್ತದೆ ಎಂದಿದ್ದಾರೆ.

ಹವ್ಯಾಸಿ ನಟ– ನಿರ್ದೇಶಕ ಸಿಂಹ ಅವರು ಪ್ರಥಮವಾಗಿ 'ಕಾಕನಕೋಟೆ'ಯನ್ನು ನಿರ್ದೇಶಿಸಿದ್ದಾರೆ. ಗಿರೀಶ್ ಕಾರ್ನಾಡ್ ನಟಿಸಿರುವ 'ಕನಕಾಂಬರ' ಚಿತ್ರದ ಬಗ್ಗೆಯೂ ಬಹಳ ಪ್ರಚಾರಗಳಿವೆ. ಇದು ಕ್ಷೀರಸಾಗರರ ಪ್ರಥಮ ನಿರ್ದೇಶನದ ಚಿತ್ರ.

ಕಮರ್ಶಿಯಲ್ ಕೂಪದಿಂದ ಮೇಲೆ ಬಂದು ಬುದ್ಧಿಜೀವಿಗಳನ್ನು ಕೂಡಿಸಿಕೊಂಡು ಜಿ. ವಿ. ಅಯ್ಯರ್ "ಹಂಸಗೀತೆ" ತಯಾರಿಸಿ ಹೆಸರು ಗಳಿಸಿದರೂ ಆರ್ಥಿಕವಾಗಿ ಬಹಳ ಸೋಲು ಅನುಭವಿಸಿದ್ದಾರೆ. ತಮ್ಮ ಗರಡಿಯಲ್ಲಿ ಈ ವರ್ಷ ನಾಲ್ಕೈದು ಹೊಸ ನಿರ್ದೇಶಕರನ್ನು ತಯಾರಿಸುತ್ತೇನೆ, ಅವರು ಒಂದೂವರೆ ಲಕ್ಷ ರೂಪಾಯಿಗಳಲ್ಲಿ ಕಲರ್ ಸಿನಿಮಾ ತಯಾರಿಸುತ್ತಾರೆ ಎಂದು ಜಿ. ವಿ. ಅಯ್ಯರ್ ಅಲ್ಲಲ್ಲಿ ಹೇಳಿಕೊಂಡು ಬರುತ್ತಿರುವಂತೆಯೇ ಪ್ರಸಾದ್ ನಿರ್ದೇಶನದಲ್ಲಿ "ಋಷ್ಯ ಶೃಂಗ" ತಯಾರಿಸಿದ್ದಾರೆ. ಇವರೆಲ್ಲರಿಗೂ ಚಿತ್ರ ನಿರ್ಮಿಸಲು ಅಥವಾ ನಿರ್ದೇಶಿಸಲು ಸರಕಾರ ಕೊಡುವ ಒಂದೂವರೆ ಲಕ್ಷ ರೂಪಾಯಿಯ ಸಬ್ಸಿಡಿ ಪ್ರೇರಣೆ ಎಂಬುದು ನಿಸ್ಸಂದೇಹ. ತಾವು ತಯಾರಿಸುತ್ತಿರುವ ಚಿತ್ರಗಳು ಆರ್ಥಿಕವಾಗಿ ಯಶಸ್ವಿಯಾಗದೆ ಇದ್ದರೂ ಸರಕಾರ ಕೊಡುವ ಸಬ್ಸಿಡಿ ಜೊತೆಗೆ ಒಂದೊಂದು ಪ್ರಶಸ್ತಿ ಬಂದರೆ ತಮ್ಮ ಹಣ ಹಿಂತಿರುಗಿ ಬಂದಂತೆಯೇ ಎಂದು ಹೊಸ ನಿರ್ಮಾಪಕರ ಭಾವನೆ. ಆದ್ದರಿಂದ ಕನ್ನಡ ಚಿತ್ರರಂಗದಲ್ಲಿ ಕಲಾತ್ಮಕ ಚಿತ್ರಗಳು ಬರುವುದಕ್ಕೆ ಸರಕಾರದ ಸಬ್ಸಿಡಿಯೇ ಪ್ರಮುಖ ಆಕರ್ಷಣೆ ಎಂದರೆ ತಪ್ಪಾಗುವುದಿಲ್ಲ. ಇದನ್ನು ರಾಜ್ಯ ಸರಕಾರವು ಗಣನೆಯಲ್ಲಿಟ್ಟುಕೊಂಡು ಹೊಸ ಸಂವೇದನೆಯ ಚಿತ್ರಗಳಿಗೆ ಖಾಯಂ ಮನರಂಜನಾ ತೆರಿಗೆ ವಿನಾಯತಿ ಮಾಡುವುದೂ ತುಂಬಾ ಪ್ರಯೋಜನವಾಗುತ್ತದೆ.

"ಗರಂಹವಾ" ಖ್ಯಾತಿಯ ಎಂ. ಎಸ್. ಸತ್ಯು ಅವರ "ಕನ್ನೇಶ್ವರ ರಾಮ" ಈ ವರ್ಷದ ಮತ್ತೊಂದು ವಿಶಿಷ್ಟ ಚಿತ್ರವಾಗಲಿದೆ. ಮೇಲೆ ಹೇಳಿದ ಹಲವು ಚಿತ್ರಗಳ ಹಿಂದಿನಿಂದ ಹೊಸ ನಿರ್ಮಾಪಕರು ನಿರ್ದೇಶಕರುಗಳ ಪಟ್ಟಿಯ ಬಾಲ ಬೆಳೆಯುತ್ತಿದೆ. ಮುಂಬಯಿಯ ಖ್ಯಾತ ನಟ ನಿರ್ದೇಶಕ ಸದಾನಂದ ಸುವರ್ಣರು ಅನಂತಮೂರ್ತಿಯವರ ಘಟಶ್ರಾದ್ಧವನ್ನು ತಯಾರಿಸುತ್ತಾರೆ. ಈ ಚಿತ್ರವನ್ನು ಗಿರೀಶ್ ಕಾಸರವಳ್ಳಿ ನಿರ್ದೇಶಿಸುತ್ತಾರೆ. ಪತ್ರಕರ್ತ ಶಿವರಂಜನ ಗುಲ್ವಾಡಿ ಮತ್ತು ಸಂತೋಷಕುಮಾರ ಗುಲ್ವಾಡಿ ಸೋದರರು "ಸತ್ತವರ ನೆರಳು" ನಾಟಕವನ್ನು ಸಿನಿಮಾ ಮಾಡುವ ಯೋಜನೆ ಹಾಕಿದ್ದಾರೆ. ಇದನ್ನು ಟಿ. ಎಸ್. ರಂಗಾ ನಿರ್ದೇಶಿಸುತ್ತಾರೆ. ಒಟ್ಟಿನಲ್ಲಿ ಮುಂದಿನ ವರ್ಷ ಕನ್ನಡ ಚಿತ್ರೋದ್ಯಮದಲ್ಲಿ ಹೊಸ ಅಲೆಯ ಪ್ರಯೋಗಾತ್ಮಕ ಅಥವಾ ಸೃಜನಾತ್ಮಕ ಪಟ್ಟಿಗಳಿರುವ ಚಿತ್ರಗಳು ಹಲವಾರು ಬರುತ್ತವೆ. ಇವುಗಳು ಕನ್ನಡದ ಸೀಮೆಯೊಳಗೆಯೇ ಪ್ರಶಸ್ತಿಗಾಗಿ ಮತ್ತು ಪ್ರತಿಷ್ಠೆಗಾಗಿ ಪೈಪೋಟಿ ನಡೆಸುವುದರಿಂದ ಅಖಿಲ ಭಾರತದ ಮಟ್ಟದಲ್ಲಿ ಮಾತ್ರವಲ್ಲ ಅಂತಾರಾಷ್ಟ್ರೀಯ ಮಟ್ಟದಲ್ಲೂ ಸ್ಪರ್ಧೆಗೆ ನಿಲ್ಲುವ ಸಾಧ್ಯತೆಗಳಿವೆ. ಕನ್ನಡದ ಕೀರ್ತಿ ಪತಾಕೆ ಶಾಶ್ವತವಾಗಿ ಹಾರುವ ಸಾಧ್ಯತೆ ಇದೆ.

ಆದರೆ ಈ ಚಿತ್ರಗಳ ವ್ಯಾಪಾರಕ್ಕೆ ಬೆನ್ನೆಲುಬಾಗಿ ನಿಲ್ಲುವವರು ಯಾರು ? ಈ ಚಿತ್ರಗಳಿಗೆ ಚಿತ್ರಮಂದಿರಗಳನ್ನು ಒದಗಿಸುವವರು ಯಾರು ? ಇಂಥ ಸಮಸ್ಯೆಗಳೂ ಉದ್ಭವಿಸದೆ ಇರುವದಿಲ್ಲ. "ಚೋಮನ ದುಡಿ" ಮತ್ತು "ಪಲ್ಲವಿ" ಚಿತ್ರಗಳು ಚಿತ್ರಮಂದಿರಗಳಿಗಾಗಿ ಪರದಾಡಿದ ಅನುಭವ ಪರಿಣಾಮವಾಗಿ ನಡೆದ ತಿಕ್ಕಾಟ ಇನ್ನು ಮುಂದಿನ ಹೊಸ ಅಲೆಯ ಚಿತ್ರಗಳಿಗೂ ಬಂದೇ ಬರುತ್ತದೆ. ಮತ್ತೊಂದು ಪ್ರಮುಖ ಸಮಸ್ಯೆ ಎಂದರೆ ಕಲಾತ್ಮಕ ಚಿತ್ರಗಳ ತಯಾರಕರು ಮತ್ತು ನಿರ್ದೇಶಕರು ಹಣದ ವ್ಯವಸ್ಥೆಗಾಗಿ ತುಂಬಾ ಪರದಾಡುತ್ತಿದ್ದಾರೆ. ಗಾಂಧೀನಗರದ ವಿಖ್ಯಾತ ನಿರ್ಮಾಪಕರು ಮತ್ತು ಚಿತ್ರ ವಿತರಕರು ಹೊಸ ಅಲೆಯ ಗುಂಪಿನವರನ್ನು ಪ್ರತ್ಯೇಕವಾಗಿಟ್ಟಿದ್ದಾರೆ. ಇದ್ದುದರಲ್ಲಿ ಶಾರದಾ ಮೂವೀಸ್‌ನ ಭಕ್ತ ವತ್ಸಲಂ "ಕನ್ನೇಶ್ವರ ರಾಮ" ತಯಾರಿಕೆ ಮೂಲಕವೂ ಬಿ. ಎಂ. ವೆಂಕಟೇಶ್ ಮತ್ತು ಚಂದೂಲಾಲ್ ಜೈನ್ ಅವರು "ತಬ್ಬಲಿಯ ನೀನಾದೆ ಮಗನೆ" ತಯಾರಿಕೆ ಮೂಲಕವೂ ಕಳ್ಳ ಕುಳ್ಳದ ಸಿ. ವಿ. ಎಲ್. ಶಾಸ್ತ್ರಿ ಅವರು "ದಾಟು" ನಿರ್ಮಾಣದ ಮೂಲಕವೂ ಪ್ರಗತಿಶೀಲ ಚಿತ್ರಗಳ ಮೇಲಿರುವ ತಮ್ಮ ಅಭಿರುಚಿಯನ್ನು ವ್ಯಕ್ತಪಡಿಸಿದ್ದಾರೆ. ಸೆನ್ಸಾರ್ ನೀತಿ ಬಿಗಿಯಾದಂತೆ ಕಲಾತ್ಮಕ ಚಿತ್ರಗಳತ್ತ ಪ್ರೇಕ್ಷಕರ ಒಲವು ಹೆಚ್ಚಾದಂತೆ ಕಮರ್ಶಿಯಲ್ ಕ್ಷೇತ್ರದ ಘಟಾನುಘಟಿಗಳು ಕ್ರಮೇಣ ಕಣ್ತೆರೆಯಬಹುದೆಂದು ನಿರೀಕ್ಷಿಸೋಣ.

ಕಲಾತ್ಮಕ ಚಿತ್ರಗಳ ನಿರ್ದೇಶಕರು ಉಳಿದುಕೊಳ್ಳುವಂತೆ ಕಲಾವಿದರು ಹೆಚ್ಚು ಉಳಿದುಕೊಂಡಂತಿಲ್ಲ. ಉದಾಹರಣೆಗೆ ಗಿರೀಶ್ ಕಾರ್ನಾಡರಿಗೆ ಶಾಮ ಬೆನಗಲ್‌ರು ಹಿಂದಿ ಚಿತ್ರರಂಗದಲ್ಲಿ ಅವಕಾಶ ಮಾಡಿಕೊಟ್ಟರೂ ಹಿಂದಿ ಚಿತ್ರರಂಗ ಕಾರ್ನಾಡರನ್ನು ನಟ



"ಸಂಕಲ್ಪ" ಚಿತ್ರದ ಮೂಲಕ ಯಶಸ್ಸು
ಪಡೆದ ನಂಜರಾಜೇ ಅರಸ್.

ನೆಂದು ಪರಿಗಣಿಸಲಿಲ್ಲ. ಅನಂತ ನಾಗ್‌ಗೆ ಕನ್ನಡದ ಮಸಾಲೆ ಚಿತ್ರಗಳಲ್ಲಿ ಅವಕಾಶ ಸಿಕ್ಕಿದರೂ 'ಬಯಲು ದಾರಿ'ಯ ಅನಂತರ ಕಮರ್ಶಿಯಲ್ ನಿರ್ಮಾಪಕರು ಅನಂತ್ ಕಡೆ ಕಣ್ಣು ಹಾಕಿಲ್ಲ. ಕಾರ್ನಾಡರು ಮತ್ತು ಅನಂತ ನಾಗ್ ಯಾವುದೇ ಚಿತ್ರಗಳಿಗೆ ಸುಲಭವಾಗಿ ಸಿಗುತ್ತಾರೆ ಎಂಬ ಮಾತು ಕನ್ನಡ ಚಿತ್ರರಂಗದಲ್ಲಿದೆ. ಆದರೆ ಯಾರೂ ಅವರ ಹತ್ತಿರ ಸುಳಿಯುವುದಿಲ್ಲ. "ಹಂಸ ಗೀತೆ"ಯ ರೇಖಾ ರಾವ್‌ಗೆ ಹಂಸಗೀತೆಯಲ್ಲಿ ಪ್ರತಿಭೆಗೆ ಅವಕಾಶ ಸಿಗಲಿಲ್ಲ. ಅವಳು ನಟಿಸಿದ ಹಿಂದಿ ಚಿತ್ರ "ಯಾಸ್ಮಿನ್" ಸೆನ್ಸಾರ್ ಬಂಧನದಲ್ಲಿ ಸಿಲುಕಿ ಚಿತ್ರ ಬಿಡುಗಡೆ ಯಾಗುವ ಸಂಭವವಿಲ್ಲ.



ಕನ್ನಡ ತ್ರರಂಗಕ ಹೂ ತಿರುವನ್ನಿತ್ತ ಗಿರೀಶ್ ಕಾರ್ನಾಡ್

"ಕಾಡು" ಮತ್ತು "ಬೂತಯ್ಯನ ಮಗ ಅಯ್ಯು" ಮೂಲಕ ಹೆಸರು ಗಳಿಸಿದ ಲೋಕೇಶ್ ಅವರು ಈಗ ಯಾವ ಹೊಸ ಚಿತ್ರಗಳಿಗೂ ಸಹಿ ಹಾಕಿದಂತಿಲ್ಲ.

ಕನ್ನಡ ಚಿತ್ರಗಳಿಗೆ ಅಂತಾರಾಷ್ಟ್ರೀಯ ಮಾರುಕಟ್ಟೆ ದೊರಕಿಸುವುದರಲ್ಲಿ ಕೆಲವರು ಪಾಲುಗೊಂಡರೆ ಕನ್ನಡ ಚಿತ್ರಗಳು ತುಸು ಚೇತರಿಸಿಕೊಳ್ಳುವಂತೆ ತಮ್ಮ ಪ್ರತಿಭೆಯನ್ನು ಬೀರಿದವರು ಪುಟ್ಟಣ್ಣ ಕಣಗಾಲ್. ಅವರ "ಗೆಜ್ಜೆ ಪೂಜೆ" "ಶರಪಂಜರ" ಮೊದಲಾದ ಚಿತ್ರಗಳನ್ನು ಪ್ರೇಕ್ಷಕರು ಮರೆಯುವ ಹಾಗೇ ಇಲ್ಲ. ಆದರೆ ಪುಟ್ಟಣ್ಣನವರ ಇತ್ತೀಚಿನ ಚಿತ್ರಗಳು ತುಂಬಾ ಕ ತಕತೆಯಿಂದ ಕೂಡಿ ಕಮರ್ಶಿಯಲ್ ರಂಗದಲ್ಲಿಯೂ ಏರು ಪೇರು ಉಂಟಾಗಿವೆ. ನಿರ್ಮಾಪಕರಿಗೆ ಮತ್ತು ವ್ಯಾಪಾರಿಗಳಿಗೆ ಪುಟ್ಟಣ್ಣನವರ ಮೇಲಿನ ಭರವಸೆಯೂ ಏರುಪೇರಾಗಿದೆ.

ಅಂತೂ ಕನ್ನಡ ಚಿತ್ರರಂಗದಲ್ಲಿ ಎಂತೆಂಥ ಏರು



"ಹಂಸಗೀತೆ" ಚಿತ್ರದ ಮೂಲಕ ಚಿತ್ರರಂಗ ಪ್ರವೇಶಿಸಿದ ರೇಖಾರಾವ್

ಪೇರು ಉಂಟಾಗುತ್ತವೆ ಎಂಬುದು ೧೯೭೭ರ ದೀಪಾವಳಿ ಹಬ್ಬದ ಒಳಗೆ ಖಚಿತವಾಗುತ್ತದೆ. ●



## THE BELGAUM DISTRICT CENTRAL CO-OPERATIVE BANK LTD., BELGAUM

Telegram: "DICENTBANK"

Telephone No. 22381 President
20145 Office
21992 S.I's Office

Head Office Address :
Poona-Bangalore Road, (N.H. 4), Belgaum

Branches: 62 Branches throughout Belgaum District

(Amount in lakhs)

### FINANCIAL POSITION AT A GLANCE AS ON 30TH JUNE 1976

| | |
|---|---|
| Authorised Share Capital | ...Rs. 175.00 |
| Paid-up Share Capital | ...Rs. 159.12 |
| Reserve and Other Funds | ...Rs. 86.16 |
| Deposits | ...Rs. 902.48 |
| Loans Outstanding | ...Rs. 1426.52 |
| Working Capital | ...Rs. 1769.22 |
| Net Profit for 1975-76 | ...Rs. 26.14 |

### RATES OF INTEREST ON VARIOUS DEPOSITS

1) Current- ½% p.a. 2) S. B. Deposits- 5½% p.a.
3) Thrift- 6% p.a. 4) Recurring D. 9% to 10½ p.a.
5) Bhagyajyoti Deposits- 8.50% to 17.50% p.a.

### RATES OF INTEREST ON FIXED DEPOSITS WITH EFFECT FROM 1-2-1976

1. Deposits for 15 days to 45 days ...3½% p.a.
2. Deposits for 46 days to 90 days ...4¼% p.a.
3. Deposits for 91 days and above but less than 6 months. ... 6% p.a.
4. Deposits for 6 months and above but less than 9 months. ...6½% p.a.
5. Deposits for 9 months and above but less than 1 year. ...7½% p.a.
6. Deposits for 1 year and above but upto and inclusive of 3 years. ...8½% p.a.
7. Deposits above 3 years but upto and inclusive of 5 years. ...9½% p.a.
8. Deposits above 5 years ...10½% p.a.
9. Reserve Fund Deposits from Co-operative Societies. ...10½% p.a.
10. Deposits of Special Bad Debt Reserve of Societies. ...10½% p.a.

NOTE: Interest of Fixed Deposits of Rs. 5,000/- and above, deposited for a period of one year and above, is paid monthly.
All types of deposits are accepted in every office of the Bank.
Individual loan facilities are now offered to the constituents.
Safe Deposit Lockers are available at: Belgaum Bazar, Bailhongal and Saundatti Branches.

For further particulars, please contact our nearest office

P. C. KHANAPURI, Manager — S. R. NALAWADE, Vice President — V. B. PATIL, President

'ನೋವಾ' ಬ್ರಿಲಿಯಂಟೈನ್ ನಿಮ್ಮ ವ್ಯಕ್ತಿತ್ವದ ಘನತೆಯನ್ನು ಉಜ್ವಲವಾಗಿಸುತ್ತದೆ ಈಗ ಸಹಸ್ರಾರು ಜನರು

## ನೋವ್ವಾ ಬ್ರಿಲಿಯಂಟೈನ್

ಉಪಯೋಗಿಸುತ್ತಾರೆ.

ನೋವ್ವಾ ಬ್ರಿಲಿಯಂಟೈನಿನಿಂದ ನಿಮ್ಮ ಕೇಶವು ಉತ್ತಮವಾಗಿ ಬಾಚಿದಂತೆ ಕಾಣುತ್ತದೆ ಹಾಗೂ ನಿಮ್ಮ ವ್ಯಕ್ತಿತ್ವಕ್ಕೆ ಪ್ರತಿಷ್ಠೆಯ ರೂಪಕೊಡುತ್ತದೆ, ಮೃದು ಮರ್ದನಕ್ಕಾಗಿ ನಿಮ್ಮ ದೇಹಕ್ಕೂ ಲೇಪಿಸಿಕೊಳ್ಳಬಹುದು.

**ದಿ ನೋವ್ವಾ ಬ್ರಿಲಿಯಂಟೈನ್**
ಲಾಲಬಹಾದ್ದೂರ ಶಾಸ್ತ್ರಿ ಮಾರ್ಗ
ಭಾಂಡೂಪ- ಮುಂಬಯಿ ೪೦೦ ೦೭೮




ನಮ್ಮೆಲ್ಲ ಗ್ರಾಹಕರಿಗೂ ಹಿತೈಷಿಗಳಿಗೂ
ದೀಪಾವಳಿಯ ಹಾರ್ದಿಕ ಶುಭಾಶಯಗಳು

## ಬಿ. ಸಿ. ಹರ್ಲಾಪೂರ

ಶುದ್ಧ ಕುಸುಬಿ ಎಣ್ಣೆ ತಯಾರಕರು
ಮತ್ತು ಫ್ಲೋರ್ ಮಿಲ್ಸ್.

ಶಿಂಪಿಗಲ್ಲಿ, ಹುಬ್ಬಳ್ಳಿ-೨೦. ಫೋನ್: 2918

ನಮ್ಮ ಸ್ವಂತ ಗಾಣದಲ್ಲಿ ತಯಾರು ಮಾಡಿದ ಸುವಾಸಿಕ ರುಚಿಕರವಾದ ಕುಸುಬಿ ಎಣ್ಣೆ ಸಿಗುತ್ತದೆ ಹಾಗೂ ಎಲ್ಲ ತರಹದ ಕಾಳುಗಳನ್ನು ಮತ್ತು ಅರಿಷಿಣ ಅಡಿಕೆ ಬೀಸಿ ಕೊಡುತ್ತೇವೆ. ದನಕರುಗಳಿಗೆ ಬೇಕಾಗುವ ತೊಗರಿ, ಹುರುಳಿ ಮತ್ತು ಚನ್ನಿ ತಯಾರಮಾಡಿ ಕೊಡುತ್ತೇವೆ.

ಒಮ್ಮೆ ಸಂದರ್ಶಿಸಿ ಖಾತ್ರಿ ಮಾಡಿಕೊಳ್ಳಿರಿ

Wishing You Happy Deepavali



# HANAGAL FARM AIDS.





**Dealers :-** **Escort and Ford Tractors**
**Agriculture Implements,**
**Rajdoot Motor Cycles, Scooters**
**and G. T. C. (Bobby) Bike**
**Suvega Mopeds.**





**VIDYANAGAR, HUBLI - 5800 21.**

**Phone : 4567** Grams : **ESCORTSALE.**

Office at :

**Mahadwar Road. BELGAUM.**





DEEPAVALI HEARTY GREETINGS and WITH THE BEST COMPLIMENTS FROM

## SUNANDA

### AGARABATTI FACTORY

D 14, Sayyaji Rao Road B, - MYSORE 570 001

Phone: 24357 Grams: 'SUNANDAFC'

**Manufacturers of Quality Agarbathies**

## SUNANDA

### AROMATIC INDUSTRIES

Mysore-K. R. S. Road, P. O. METAGALLI, MYSORE.

Phone 23191, 23146, 23286 Grams: 'PHENACOL'

**Manufacturers of Phenyl Ethyl Alcohol and other Aromatic Chemicais.**

## SUNANDA

### INDUSTRIAL CHEMICALS

Plot No. 3E. Industrial Estate, Yadavagiri. MYSORE-2.

**Manufacturers of Aluminium Chloride**

Phone: 23606 Grams: 'ALCHLORIDE'




This Deepawali Number of Karmaveer weekly owned by the KARNATAKA PATRIKA Privete Ltd, is printed by Bhomeshwar Das Kohli at the Samyukta Karnatak Press, Koppikar Road, Hubli and Published by him at the Samyukta Karnatak, Hubli-20 and 2. Residency Road, Bangalore-25.

